# ಮಹಿಳಾ ಚಿಂತನಾ ನೆಲೆಗಳಲ್ಲಿ ಎಂ.ಆರ್. ಲಕ್ಷಮ್ಮ

(ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ
ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು
ಎ.ಸಿ. ಮಂಜುಳ

ಮಾರ್ಗದರ್ಶಕರು
ಡಾ. ಎಸ್. ಶಿವರಾಮು, ಎಂ.ಎ., ಪಿಎಚ್.ಡಿ.
ಸಹಾಯಕ ಪ್ರಾಧ್ಯಾಪಕರು
ಇತಿಹಾಸ ವಿಭಾಗ
ಮಹಿಳಾ ಸರ್ಕಾರಿ ಕಾಲೇಜು (ಸ್ವಾಯತ್ತ)
ಮಂಡ್ಯ



ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
ಕರ್ನಾಟಕ ಸಂಘ (ರಿ) ಮಂಡ್ಯ
(ಕನ್ನಡ ವಿಶ್ವವಿದ್ಯಾಲಯ ಹಂಪಿಯ ಮಾನ್ಯತೆ ಪಡೆದಿದೆ)

೨೦೧೮

# ಮಹಿಳಾ ಚಿಂತನಾ ನೆಲೆಗಳಲ್ಲಿ ಎಂ.ಆರ್. ಲಕ್ಷಮ್ಮ

(ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ
ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)


ಸಂಶೋಧಕರು
**ಎ.ಸಿ. ಮಂಜುಳ**

ಮಾರ್ಗದರ್ಶಕರು
**ಡಾ. ಎಸ್. ಶಿವರಾಮು,** ಎಂ.ಎ., ಪಿಎಚ್.ಡಿ.
ಸಹಾಯಕ ಪ್ರಾಧ್ಯಾಪಕರು
ಇತಿಹಾಸ ವಿಭಾಗ
ಮಹಿಳಾ ಸರ್ಕಾರಿ ಕಾಲೇಜು (ಸ್ವಾಯತ್ತ)
ಮಂಡ್ಯ





ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
ಕರ್ನಾಟಕ ಸಂಘ (ರಿ) ಮಂಡ್ಯ
(ಕನ್ನಡ ವಿಶ್ವವಿದ್ಯಾಲಯ ಹಂಪಿಯ ಮಾನ್ಯತೆ ಪಡೆದಿದೆ)

೨೦೧೯

# ಮಾರ್ಗದರ್ಶಕರ ದೃಢೀಕರಣ ಪತ್ರ

ಮಂಜುಳ. ಎ.ಸಿ. ಇವರು ಕನ್ನಡ ವಿಶ್ವವಿದ್ಯಾನಿಲಯ, ಹಂಪಿಯ ಮಾನ್ಯತಾ ಕೇಂದ್ರವಾದ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ, ಕರ್ನಾಟಕ ಸಂಘ (ರಿ), ಮಂಡ್ಯ ಈ ಸಂಸ್ಥೆಯ ಮೂಲಕ ಮಹಿಳಾ ಚಿಂತನಾ ನೆಲೆಗಳಲ್ಲಿ ಎಂ.ಆರ್. ಲಕ್ಷಮ್ಮ ಎಂಬ ವಿಷಯವನ್ನು ಕುರಿತು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಂಶೋಧಕರಾಗಿ, ಸಂಶೋಧನೆ ನಡೆಸಿ ಈ ಪ್ರಬಂಧವನ್ನು ಸಿದ್ಧಪಡಿಸಿದ್ದಾರೆ. ಈ ಪ್ರಬಂಧವನ್ನು ಇಡಿಯಾಗಿ ಅಥವಾ ಬಿಡಿಯಾಗಿ ಈ ಮೊದಲು ಇವರು ಯಾವುದೇ ಪದವಿ ಅಥವಾ ಡಿಪ್ಲೊಮೊ ಪದವಿಗಾಗಿ ಬಳಸಿಕೊಂಡಿಲ್ಲ. ಈ ಅಭ್ಯರ್ಥಿ ನನ್ನೊಂದಿಗೆ ಐದು ವರ್ಷಗಳ ಕಾಲ ಸಂಶೋಧನೆಯ ಕೆಲಸ ಮಾಡಿದ್ದಾರೆಂದು, ಈ ಪ್ರಬಂಧವನ್ನು ಪಿಹೆಚ್.ಡಿ. ಪದವಿಗಾಗಿ ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಸಾದರ ಪಡಿಸಲು ನಾನು ಸಮ್ಮತಿಸುತ್ತೇನೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ : ಮಂಡ್ಯ
ದಿನಾಂಕ : 26.7.2019

ಮಾರ್ಗದರ್ಶಕರು

(ಡಾ. ಎಸ್. ಶಿವರಾಮು)
ಸಹಾಯಕ ಪ್ರಾಧ್ಯಾಪಕರು
ಇತಿಹಾಸ ವಿಭಾಗ
ಮಹಿಳಾ ಸರ್ಕಾರಿ ಕಾಲೇಜು (ಸ್ವಾಯತ್ತ)
ಮಂಡ್ಯ

Dr. S. SHIVARAMU M.A., Ph.D.
Assistant Professor
Dept. of History
Govt. College for Women
(Autonomous), Mandya-571 401.

# ಸಂಶೋಧಕರ ಪ್ರಮಾಣಪತ್ರ

ಮಹಿಳಾ ಚಿಂತನಾ ನೆಲೆಗಳಲ್ಲಿ ಎಂ.ಆರ್. ಲಕ್ಷಮ್ಮ ಎಂಬ ಶೀರ್ಷಿಕೆಯ ಈ ಪ್ರಬಂಧವನ್ನು ಚರಿತ್ರೆ ವಿಭಾಗದ ಪಿಹೆಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಮಾನ್ಯತಾ ಕೇಂದ್ರವಾದ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ, ಕರ್ನಾಟಕ ಸಂಘ (ರಿ), ಮಂಡ್ಯ, ಈ ಸಂಸ್ಥೆಯ ಮೂಲಕ ಡಾ. ಎಸ್. ಶಿವರಾಮು, ಸಹಾಯಕ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಮಹಿಳಾ ಸರ್ಕಾರಿ ಕಾಲೇಜು (ಸ್ವಾಯತ್ತ), ಮಂಡ್ಯ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಈ ಪ್ರಬಂಧವು ನನ್ನ ಸ್ವಂತ ಸಂಶೋಧನೆಯಾಗಿದೆ. ಇದನ್ನು ಸಂಪೂರ್ಣವಾಗಲೀ ಅಥವಾ ಭಾಗಶಃ ಆಗಲಿ ಯಾವುದೇ ವಿಶ್ವವಿದ್ಯಾಲಯದ ಪದವಿ ಅಥವಾ ಡಿಪ್ಲೊಮೋಗೆ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Manjula

ಸ್ಥಳ : ಮಂಡ್ಯ
ದಿನಾಂಕ : 26.7.19

(ಮಂಜುಳ ವಿ.ಸಿ.)
ಸಂಶೋಧನಾ ವಿದ್ಯಾರ್ಥಿನಿ
ಚರಿತ್ರೆ ವಿಭಾಗ

# ಪರಿವಿಡಿ

ಅಧ್ಯಾಯ : ಒಂದು 1–12

ಪ್ರಸ್ತಾವನೆ

೧.೧. ಅಧ್ಯಯನದ ಹಿನ್ನೆಲೆ, ಆಶಯ ಹಾಗೂ ಮಹತ್ವ
೧.೨. ಅಧ್ಯಯನದ ಉದ್ದೇಶಗಳು
೧.೩. ಅಧ್ಯಯನದ ಸಮೀಕ್ಷೆ
೧.೪. ಅಧ್ಯಯನ ವಿಷಯದ ವ್ಯಾಪ್ತಿ ಹಾಗೂ ಮಿತಿಗಳು
೧.೫. ಅಧ್ಯಯನದ ವಿಧಿ-ವಿಧಾನ
೧.೬. ಅಧ್ಯಯನದ ಸ್ವರೂಪ

ಅಧ್ಯಾಯ : ಎರಡು 13–22

ಎಂ.ಆರ್. ಲಕ್ಷಮ್ಮ : ಪರಿಚಯ ಮತ್ತು ಕಾರ್ಯಕ್ಷೇತ್ರ

೨.೧. ಬಾಲ್ಯಜೀವನ
೨.೨. ವಿದ್ಯಾಭ್ಯಾಸ ಮತ್ತು ವೈವಾಹಿಕ ಜೀವನ
೨.೩. ವೃತ್ತಿ ಜೀವನ
೨.೪. ಆಕಾಶವಾಣಿ ಮತ್ತು ಸಮಾಜಸೇವೆ
೨.೫. ವಯಸ್ಕರ ಶಿಕ್ಷಣ ಸಮಿತಿಯ ವಾರಪತ್ರಿಕೆ ಬೆಳಕುವಿನ ಸಂಪಾದಕಿಯಾಗಿ
೨.೬. ರಾಜಕೀಯ ಕ್ಷೇತ್ರ
೨.೭. ಶಿಕ್ಷಣ ಕ್ಷೇತ್ರ
೨.೮. ಪತ್ರಿಕೋದ್ಯಮ
೨.೯. ರಚನಾತ್ಮಕ ಕಾರ್ಯ ಮತ್ತು ಸಂಘಟನೆಗಳು

ಅಧ್ಯಾಯ : ಮೂರು 23–49

ಎಂ.ಆರ್. ಲಕ್ಷಮ್ಮ ಮತ್ತು ಪತ್ರಿಕೋದ್ಯಮ

೩.೧. ಕನ್ನಡ ಪತ್ರಿಕೋದ್ಯಮ.
೩.೨. ಮಹಿಳಾ ಪತ್ರಿಕೋದ್ಯಮ.
೩.೩. ಎಂ.ಆರ್. ಲಕ್ಷಮ್ಮನವರ ಸಾಹಿತ್ಯಸೇವೆ.
೩.೪. ಮೈಸೂರು ಸಂಸ್ಥಾನದಲ್ಲಿ ವಯಸ್ಕರ ಶಿಕ್ಷಣ ಬೆಳೆದುಬಂದ ಹಾದಿ.
೩.೫. ವಯಸ್ಕರ ಶಿಕ್ಷಣ ಸಮಿತಿಯಲ್ಲಿ ಎಂ.ಆರ್. ಲಕ್ಷಮ್ಮ ಅವರ ಪಾತ್ರ.
೩.೬. ಎಂ.ಆರ್. ಲಕ್ಷಮ್ಮ ಅವರ ಸಂಪಾದಕತ್ವದ ಬೆಳಕು ಪತ್ರಿಕೆಯ ಆಶಯ ಮತ್ತು ಸ್ವರೂಪ.
೩.೭. ಎಂ.ಆರ್. ಲಕ್ಷಮ್ಮ ಅವರ ಸಂಪಾದಕತ್ವದ ಬೆಳಕು ಪತ್ರಿಕೆ– ವಿನ್ಯಾಸ ಮತ್ತು ಒಳ ಪುಟಗಳು.

೩.೮. ಕುಂತೀದೇವಿ – ಕೃತಿ.
೩.೯. ಮಾರುತಿ – ಕೃತಿ.
೩.೧೦. ಎಂ.ಆರ್. ಲಕ್ಷಮ್ಮ ಅವರ ಸಂಪಾದಕತ್ವದ ಸೋದರಿ ವಾರಪತ್ರಿಕೆ.

**ಅಧ್ಯಾಯ : ನಾಲ್ಕು** 50–86

**ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಮತ್ತು ಏಕೀಕರಣ ಚಳವಳಿಯಲ್ಲಿ ಎಂ.ಆರ್.ಲಕ್ಷಮ್ಮ**

೪.೧. ಮೈಸೂರು ಜಿಲ್ಲಾ ಕಾಂಗ್ರೆಸ್ ಸಮಿತಿ ೧೯೨೧
೪.೨. ಮೈಸೂರು ಕಾಂಗ್ರೆಸ್ ಪಕ್ಷ ೧೯೩೮
೪.೩. ಮೈಸೂರು ಚಲೋ ಚಳವಳಿ ಅಥವಾ ಅರಮನೆ ಸತ್ಯಾಗ್ರಹ
೪.೪. ಚಲೋ ಮೈಸೂರು ಚಳವಳಿಯಲ್ಲಿ ಎಂ.ಆರ್.ಲಕ್ಷಮ್ಮನವರ ಪಾತ್ರ
೪.೫. ಎಂ.ಆರ್. ಲಕ್ಷಮ್ಮನವರ ಸೆರೆಮನೆ ದಿನಚರಿ
೪.೬. ಕರ್ನಾಟಕ ಏಕೀಕರಣ ಚಳವಳಿಯಲ್ಲಿ ಎಂ.ಆರ್.ಲಕ್ಷಮ್ಮ
೪.೭. ಬೆಳಕು ಪತ್ರಿಕೆಯಲ್ಲಿ ಪ್ರಕಟವಾದ ಲಕ್ಷಮ್ಮ ಅವರ ಏಕೀಕರಣ ಮತ್ತು ಕನ್ನಡ ನಾಡುನುಡಿಯ ಬಗೆಗಿನ ಚಿಂತನೆಗಳು
೪.೮. ಸೋದರಿ ಪತ್ರಿಕೆಯಲ್ಲಿ ಪ್ರಕಟಗೊಂಡ ಎಂ. ಆರ್. ಲಕ್ಷಮ್ಮ ಅವರ ಏಕೀಕರಣದ ಚಿಂತನೆಗಳು

**ಅಧ್ಯಾಯ : ಐದು** 87–111

**ರಾಜಕೀಯ ಕ್ಷೇತ್ರದಲ್ಲಿ ಎಂ.ಆರ್. ಲಕ್ಷಮ್ಮ**

೫.೧. ನ್ಯಾಯವಿಧಾಯಕ ಸಭೆಯ ಸದಸ್ಯೆಯಾಗಿಎಂ. ಆರ್. ಲಕ್ಷಮ್ಮ
೫.೨. ನ್ಯಾಯವಿಧಾಯಕ ಸಭೆಯ ಸದನದಲ್ಲಿ ಎಂ. ಆರ್. ಲಕ್ಷಮ್ಮನವರ ವಿಚಾರಧಾರೆಗಳು
೫.೩. ಮೈಸೂರು ಪುರಸಭಾ ಸದಸ್ಯರಾಗಿ ಎಂ. ಆರ್. ಲಕ್ಷಮ್ಮನವರ ಸೇವೆ
೫.೪. ಸ್ವಾತಂತ್ರ್ಯಾ ನಂತರದ ರಾಜಕೀಯದಲ್ಲಿ ಎಂ. ಆರ್. ಲಕ್ಷಮ್ಮ
೫.೫. ಸದನದಲ್ಲಿ ಎಂ.ಆರ್. ಲಕ್ಷಮ್ಮನವರ ಮಹಿಳಾಪರ ಚಿಂತನೆಗಳು
೫.೬. ಸದನದಲ್ಲಿ ಎಂ. ಆರ್. ಲಕ್ಷಮ್ಮನವರ ಸಮಾಜ ಸುಧಾರಣೆಯ ಚಿಂತನೆಗಳು
೫.೭. ಸದನದಲ್ಲಿ ಎಂ. ಆರ್. ಲಕ್ಷಮ್ಮ ಅವರ ಕೃಷಿ ಹಾಗೂ ರೈತಪರ ನಿಲುವುಗಳು
೫.೮. ಮಹಿಳಾ ಶಿಕ್ಷಣದ ಬಗೆಗಿನ ಎಂ. ಆರ್. ಲಕ್ಷಮ್ಮನವರ ಚಿಂತನೆಗಳು

೫.೯. ಸದನದಲ್ಲಿ ಹರಿಜನೋದ್ಧಾರ ಕಾರ್ಯಗಳ ಅನುಷ್ಠಾನದ ಬಗ್ಗೆ
ಎಂ. ಆರ್. ಲಕ್ಷಮ್ಮ ಅವರ ಚಿಂತನೆಗಳು
೫.೧೦. ಕರ್ನಾಟಕ ಏಕೀಕರಣ ಮತ್ತು ಗಡಿವಿವಾದದ ಬಗೆಗಿನ
ಎಂ.ಆರ್. ಲಕ್ಷಮ್ಮನವರ ನಿಲುವು
೫.೧೧. ಕೈಗಾರಿಕೋದ್ಯಮಗಳ ಬಗ್ಗೆ
ಎಂ.ಆರ್. ಲಕ್ಷಮ್ಮನವರ ನಿಲುವು
೫.೧೨. ಚರಿತ್ರೆ ಮತ್ತು ಸಂಸ್ಕೃತಿಯ ಬಗ್ಗೆ ಎಂ.ಆರ್. ಲಕ್ಷಮ್ಮನವರ ನಿಲುವು

**ಅಧ್ಯಾಯ : ಆರು** 112–125

**ಎಂ.ಆರ್. ಲಕ್ಷಮ್ಮ ಅವರ ರಚನಾತ್ಮಕ ಕಾರ್ಯಗಳು**

೬.೧. ಮಹಿಳಾ ಮಂಡಲಿಗಳ ಸ್ಥಾಪನೆ
೬.೨. ಮೈಸೂರು ರಾಜ್ಯದ ಸಮಾಜಕಲ್ಯಾಣ ಮಂಡಲಿಯ ಅಧ್ಯಕ್ಷೆಯಾಗಿ
ಎಂ. ಆರ್. ಲಕ್ಷಮ್ಮ
೬.೩. ಗ್ರಾಹಕರ ವೇದಿಕೆಯ ಕಾರ್ಯಾಧ್ಯಕ್ಷೆಯಾಗಿ ಎಂ. ಆರ್. ಲಕ್ಷಮ್ಮ
೬.೪. ಬಳಕೆದಾರ ಪತ್ರಿಕೆ
೬.೫. ಶಿಕ್ಷಣ ಕ್ಷೇತ್ರದಲ್ಲಿ ಎಂ. ಆರ್. ಲಕ್ಷಮ್ಮನವರ ಸೇವೆ
೬.೬. ಸಮಾಜಮುಖಿ ಸಂಘಟನೆಗಳಲ್ಲಿ ಎಂ. ಆರ್. ಲಕ್ಷಮ್ಮ ಅವರ ಪಾತ್ರ

**ಅಧ್ಯಾಯ : ಏಳು** 126–215

**ಎಂ.ಆರ್. ಲಕ್ಷಮ್ಮ ಅವರ ಚಿಂತನೆ ಮತ್ತು ವಿಚಾರಧಾರೆಗಳು**

೭.೧. ಬೆಳಕು ಮತ್ತು ಸೋದರಿ ವಾರ ಪತ್ರಿಕೆಯಲ್ಲಿ ಪ್ರಕಟಗೊಂಡ
ಎಂ.ಆರ್. ಲಕ್ಷಮ್ಮನವರ ಮಹಿಳಾಪರ ಚಿಂತನೆಗಳು ಮತ್ತು ಬರಹಗಳು
೭.೨. ಬೆಳಕು ಮತ್ತು ಸೋದರಿ ವಾರಪತ್ರಿಕೆಯಲ್ಲಿ ಬಿಂಬಿತಗೊಂಡ ಸಾಮಾಜಿಕ
ಸುಧಾರಣಾ ಚಿಂತನೆಗಳು.
೭.೩. ಎಂ.ಆರ್. ಲಕ್ಷಮ್ಮ ಅವರ ಸೋದರಿ ಪತ್ರಿಕೆಯ ಜನಪರ ನಿಲುವುಗಳು
ಹಾಗೂ ದೇಶೀಯ ಚಿಂತನೆಗಳು.
೭.೪. ಕೇಂದ್ರೀಯ ಸಮಾಜ ಕಲ್ಯಾಣ ಮಂಡಳಿಯ ಕಾರ್ಯಕಲಾಪಗಳ
ಲೇಖನಗಳು.
೭.೫. ಸೋದರಿಗೆ ಪತ್ರ ಶೀರ್ಷಿಕೆಯಡಿಯಲ್ಲಿ ಎಂ.ಆರ್. ಲಕ್ಷಮ್ಮನವರ
ಪ್ರವಾಸದ ಅನುಭವಗಳು.

೭.೬. ಎಂ.ಆರ್. ಲಕ್ಷಮ್ಮನವರ ಸಂಪಾದಕತ್ವದಲ್ಲಿ ಬೆಳಕು ಪತ್ರಿಕೆಯಲ್ಲಿ ಪ್ರಕಟವಾದ ವಯಸ್ಕರ ಶಿಕ್ಷಣದ ಸುದ್ಧಿ, ಚಿಂತನೆ ಮತ್ತು ವಿಚಾರಧಾರೆಗಳು.

೨.೭. ಬೆಳಕು ಪತ್ರಿಕೆಯಲ್ಲಿ ವ್ಯಕ್ತವಾದ ಎಂ.ಆರ್. ಲಕ್ಷಮ್ಮ ಅವರ ರಾಜಕೀಯ ಚಿಂತನೆಗಳು.

**ಅಧ್ಯಾಯ : ಎಂಟು** 216–225

**ಉಪಸಂಹಾರ**

ಅಧ್ಯಯನದ ಫಲಿತಗಳು

**ಆಕರಗಳು** 226–236

**ಛಾಯಾಚಿತ್ರಗಳು**

**ಅನುಬಂಧಗಳು**

# ಅಧ್ಯಾಯ : ಒಂದು

# ಪ್ರಸ್ತಾವನೆ

ಚರಿತ್ರೆಯ ಅಧ್ಯಯನ ಇಂದು ವಿಸ್ತೃತಗೊಂಡಿದ್ದು ಅದರ ಅರ್ಥ, ವ್ಯಾಪ್ತಿ ವಿಶಾಲವಾಗಿದೆ. ಸಮಾಜದಲ್ಲಿರುವ ಅನೇಕ ವ್ಯಕ್ತಿಗಳ ಜೀವನವನ್ನು ಚರಿತ್ರೆ ಒಳಗೊಂಡಿದ್ದು, ಜನಸಾಮಾನ್ಯರ ಬದುಕಿನ ಬಗ್ಗೆ ಮತ್ತು ಸಮಾಜದ ಬಗ್ಗೆ ತಿಳಿದುಕೊಳ್ಳುವ ಹಾಗೂ ದಾಖಲಿಸುವ ಅಗತ್ಯತೆ ಇದೆ. ವ್ಯಕ್ತಿಯು ಸಮಾಜದ ಅವಿಭಾಜ್ಯ ಅಂಗವಾಗಿದ್ದು, ಅಂತಹ ವ್ಯಕ್ತಿಗಳು ಹಲವಾರು ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ್ದು, ತಮ್ಮನ್ನು ಸಮಾಜಕ್ಕೆ ಅರ್ಪಿಸಿಕೊಂಡ ಹಲವು ಮಹನೀಯರನ್ನು ಕಾಣಬಹುದು. ಆ ಹಿನ್ನೆಲೆಯಲ್ಲಿ ತಮ್ಮ ಜೀವನವನ್ನು ಸಮಾಜ ಸುಧಾರಣೆ, ಶಿಕ್ಷಣಕ್ಷೇತ್ರ, ರಾಜಕೀಯರಂಗ, ಪತ್ರಿಕೋದ್ಯಮ ಮುಂತಾದ ಹತ್ತು ಹಲವಾರು ಕ್ಷೇತ್ರಗಳಲ್ಲಿ ತೊಡಗಿಸಿಕೊಂಡು ಗಣನೀಯ ಸೇವೆ ಸಲ್ಲಿಸಿದ ವ್ಯಕ್ತಿಯ ಬದುಕಿನ ಸಮಗ್ರ ವಿವರಣೆ ಮತ್ತು ವಿಶ್ಲೇಷಣೆಯ ಮೌಲ್ಯಮಾಪನವನ್ನು ಮಾಡಲು ಜೀವನಚರಿತ್ರೆಯ ಅಧ್ಯಯನದ ಅಗತ್ಯತೆ ಇದೆ. ಅಂತಹ ಅಪರೂಪದ ವ್ಯಕ್ತಿತ್ವವನ್ನು ಹೊಂದಿದವರು ಎಂ.ಆರ್. ಲಕ್ಷಮ್ಮ. ಅವರ ಕಾರ್ಯಕ್ಷೇತ್ರ ವಿಶಾಲವಾಗಿದ್ದು ಮಹಿಳೆಯರ, ಅಬಲೆಯರ, ದೀನದಲಿತರ ಶೋಚನೀಯ ಬದುಕನ್ನು ಹಸನಾಗಿಸಲು ಶಕ್ತಿಮೀರಿ ದುಡಿದು, ಅವರ ಉದ್ಧಾರಕ್ಕಾಗಿ ಹಗಲಿರುಳು ಶ್ರಮಿಸಿದ ಲಕ್ಷಮ್ಮ ಕನ್ನಡ ನಾಡು ಕಂಡ ಅಪರೂಪದ ಹಲವು ಪ್ರಥಮಗಳ ಸಾಧನೆಯ ಮಹಿಳೆಯಾಗಿದ್ದಾರೆ. ಮಹಿಳೆಯರಿಗಾಗಿ ಶ್ರಮಿಸಿದ ಇವರು ಸ್ತ್ರೀವಾದಿ ಚಿಂತಕಿಯಾಗಿದ್ದು, ಸ್ವಾತಂತ್ರ್ಯ ಪೂರ್ವದಲ್ಲಿಯೇ ಮಹಿಳಾಪರ ಕಾರ್ಯಗಳಲ್ಲಿ ತೊಡಗಿಸಿಕೊಂಡಿದ್ದರು.

ಮಹಿಳೆಯರ ಮುನ್ನಡೆಯಿಂದ ದೇಶದ ಪ್ರಗತಿ ಸಾಧ್ಯ ಎಂದು ಮನಗಂಡು ಮಹಿಳೆಯರ ಸಬಲೀಕರಣಕ್ಕೆ ತಮ್ಮ ಬದುಕನ್ನೇ ಮುಡಿಪಾಗಿಟ್ಟು ಅವರಿಗೆ ಸಾಂತ್ವನ ಹೇಳುತ್ತಾ, ಅವರಿಗೆ ಸ್ಫೂರ್ತಿಯ ಚಿಲುಮೆಯಾಗಿ ಅವರ ಬದುಕಿನ ಅಭ್ಯುದಯಕ್ಕಾಗಿ ನಿಸ್ವಾರ್ಥ ಸೇವಾ ಮನೋಭಾವದಿಂದ ದುಡಿದವರಲ್ಲಿ ಎಂ.ಆರ್. ಲಕ್ಷಮ್ಮನವರು ಒಬ್ಬರು. ತಮ್ಮ ಜೀವಿತದ ಕೊನೆಗಾಲದವರೆಗೂ ಕೂಡ ಸಮಾಜ ಸುಧಾರಣೆಗೆ ಶ್ರಮಿಸುತ್ತಿದ್ದ ಅವರ ಜೀವನ, ಹೋರಾಟ, ಸುಧಾರಣೆ ಹಾಗೂ ಚಿಂತನೆಗಳ ಬಗ್ಗೆ ತಿಳಿದುಕೊಳ್ಳುವುದು ಮತ್ತು ಚರಿತ್ರೆಯಲ್ಲಿ ದಾಖಲಿಸುವುದು ಸೂಕ್ತವೆನಿಸುತ್ತದೆ.

**೧.೧ ಅಧ್ಯಯನ ವಿಷಯದ ಹಿನ್ನೆಲೆ, ಆಶಯ ಹಾಗೂ ಮಹತ್ವ**

'ಮಹಾಪುರುಷರ ಜೀವನಚರಿತ್ರೆಯೇ ಇತಿಹಾಸ'ವೆಂದು ಥಾಮಸ್ ಕಾರ್ಲೈಲ್ ಹೇಳಿದ್ದಾರೆ. ವ್ಯಕ್ತಿ ಚರಿತ್ರೆಯನ್ನು ರಚಿಸುವಾಗ ಇತಿಹಾಸಕಾರ ಅರ್ನೆಸ್ಟ್ ಬರ್ನ್‌ಹಿಮ್‌ರವರ ಇತಿಹಾಸ ಕುರಿತ ವ್ಯಾಖ್ಯಾನ ಪ್ರಸ್ತುತವಾಗಿದ್ದು, ಅವರ ಪ್ರಕಾರ 'ಇತಿಹಾಸವು ಸಾಮಾಜಿಕ

ಜೀವಿಗಳಾದ ವ್ಯಕ್ತಿಯ ವೈಯಕ್ತಿಕ ಹಾಗೂ ಸಾಮೂಹಿಕ ಚಟುವಟಿಕೆಗಳಿಗೆ ಸಂಬಂಧಿಸಿದ ವಿಕಾಸವನ್ನು ಕುರಿತು, ಕಾಲ ದೇಶಗಳಿಂದ ನಿರ್ಧರಿಸಲ್ಪಟ್ಟ ವಾಸ್ತವಾಂಶಗಳನ್ನು ಅವುಗಳ ಮಾನಸಿಕ, ಭೌತಿಕ, ಕಾರ್ಯಕಾರಣ ಸಂಬಂಧದ ಸಂದರ್ಭದಲ್ಲಿ ಅನ್ವೇಷಿಸಿ ವಿವರಿಸುವ ವಿಜ್ಞಾನವಾಗಿದೆ'. ಈ ವ್ಯಾಖ್ಯಾನಗಳನ್ನು ಅನ್ವಯಿಸಿದಾಗ ಭಾರತದಲ್ಲಿ ಅನೇಕ ಮಹನೀಯರನ್ನು ಕಾಣಬಹುದು. ಮಾನವೀಯತೆ, ಸಹಾನುಭೂತಿ, ಪರಿಶ್ರಮ, ಪ್ರಾಮಾಣಿಕತೆಗಳು ಕ್ಷೀಣಿಸುತ್ತಿರುವ ವರ್ತಮಾನದ ಸಂದರ್ಭದಲ್ಲಿ ಈ ಎಲ್ಲಾ ಗುಣಗಳನ್ನು ಮೈಗೂಡಿಸಿಕೊಂಡು ನಿಸ್ವಾರ್ಥತೆಯಿಂದ ಸಾಮಾಜಿಕ ಸೇವೆಯಲ್ಲಿ ತೊಡಗಿಸಿಕೊಂಡ ವ್ಯಕ್ತಿಗಳ ಜೀವನದ ಮೌಲ್ಯಗಳ ಬಗ್ಗೆ, ಸಾಧನೆಗಳ ಬಗ್ಗೆ, ತತ್ವನಿಷ್ಠೆಗಳ ಬಗ್ಗೆ ದಾಖಲಿಸುವ ಕಾರ್ಯವನ್ನು ವ್ಯಕ್ತಿಚರಿತ್ರೆಯನ್ನು ರಚಿಸುವ ಮೂಲಕ ಮಾಡಬಹುದು.

ಭಾರತದ ಸ್ವಾತಂತ್ರ್ಯ ಚಳವಳಿಯಲ್ಲಿ ಪುರುಷರಷ್ಟೇ ಸರಿಸಮಾನರಾಗಿ ಅನೇಕ ಮಹಿಳೆಯರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದರು ಹಾಗೂ ಗಾಂಧೀಜಿಯವರ ಪ್ರಭಾವಕ್ಕೆ ಒಳಗಾಗಿ, ಸಮಾಜ ಸುಧಾರಣೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಮೈಸೂರು ಸಂಸ್ಥಾನದ ಮಹಿಳೆಯರು ಇದರಿಂದ ಹೊರತಾಗಿರಲಿಲ್ಲ. ಅಂತಹ ಮಹಿಳೆಯರಲ್ಲಿ ಸ್ವಾತಂತ್ರ್ಯ ಹೋರಾಟಗಾರ್ತಿ, ಸಮಾಜಸುಧಾರಕಿ, ಪತ್ರಿಕೋದ್ಯಮಿ, ಮಹಿಳಾಚಿಂತಕಿ ಹಾಗೂ ರಾಜಕಾರಣಿಯರಲ್ಲಿ ಲಕ್ಷಮ್ಮನವರು ಒಬ್ಬರು. ದೀನದಲಿತರ, ನಿರ್ಗತಿಕ ಹೆಣ್ಣುಮಕ್ಕಳ ಏಳಿಗೆಗಾಗಿ ದುಡಿದು, ತಮ್ಮ ಜೀವನದ ಕೊನೆಯವರೆಗೂ ಸಮಾಜ ಸೇವೆಯಲ್ಲಿ ತೊಡಗಿಸಿಕೊಂಡ ಅವರ ಜೀವನ ಮತ್ತು ಅವರ ಕಾರ್ಯಕ್ಷೇತ್ರಗಳ ಮೇಲೆ ಬೆಳಕು ಚೆಲ್ಲುವುದರಿಂದ ಈ ಸಂಶೋಧನೆಯು ಮಹತ್ವವೆನಿಸಿದೆ. ಮೈಸೂರು ಸಂಸ್ಥಾನದ ರಾಜಕೀಯ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಅಪಾರ ಸೇವೆ ಸಲ್ಲಿಸಿ ಇತಿಹಾಸದ ಪುಟಗಳಲ್ಲಿ ದಾಖಲಾಗದ ಲಕ್ಷಮ್ಮ ಅವರ ಬಗ್ಗೆ ದಾಖಲಿಸುವುದು ಅಗತ್ಯವಾಗಿದೆ. ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದ ಅನೇಕ ಮಹಿಳೆಯರು ನಂತರದ ಕಾಲದಲ್ಲಿ ದೇಶವನ್ನು ಕಟ್ಟುವ ಕಾರ್ಯದಲ್ಲಿ ತೊಡಗಿಸಿಕೊಂಡರು.

ಮೈಸೂರು ವಿಶ್ವವಿದ್ಯಾನಿಲಯದಿಂದ ಚಿನ್ನದ ಪದಕದೊಡನೆ ಸ್ನಾತಕೋತ್ತರ ಪದವಿಯನ್ನು ಪಡೆದ ಲಕ್ಷಮ್ಮ ಸಮಾಜಸೇವಕಿಯಾಗಿ ರೂಪುಗೊಂಡು, ಮೈಸೂರು ಮತ್ತು ಬೆಂಗಳೂರಿನಲ್ಲಿ ಅನೇಕ ಮಹಿಳಾ ಮಂಡಲಿಗಳನ್ನು, ಸಮಾಜ ಸೇವಾ ಸಂಸ್ಥೆಗಳನ್ನು ಸ್ಥಾಪನೆ ಮಾಡಿದರು. ಲಕ್ಷಮ್ಮ ಅವರು ಸಾಹಿತ್ಯಪ್ರಿಯೆಯಾಗಿದ್ದು, ಅನೇಕ ಪತ್ರಿಕೆಗಳಿಗೆ ಕವನಗಳನ್ನು ಮತ್ತು ಲೇಖನಗಳನ್ನು ಬರೆಯುತ್ತಿದ್ದರು. ಅವರು ರಚಿಸಿದ ಅನೇಕ ನಾಟಕಗಳು ಮೈಸೂರು ಆಕಾಶವಾಣಿಯಲ್ಲಿ ಅಲ್ಲದೆ ಹೈದರಾಬಾದ್ ಮತ್ತು ಮದ್ರಾಸಿನ ಆಕಾಶವಾಣಿಯ ಕನ್ನಡ ವಿಭಾಗದಲ್ಲಿ ಪ್ರಸಾರಗೊಂಡಿದ್ದವು. ಅವರ ಸಾಹಿತ್ಯಾಸಕ್ತಿ ಮತ್ತು ಸಮಾಜ ಸೇವೆ ಅವರನ್ನು

ವಯಸ್ಕರ ಶಿಕ್ಷಣ ಸಮಿತಿಯ ಪತ್ರಿಕೆ 'ಬೆಳಕು'ವಿನ ಸಂಪಾದಕಿಯಾಗುವಂತೆ ಮಾಡಿತು. ಅಕ್ಷರ ಕಲಿಸುವ ಜೊತೆಗೆ ಸಾಮಾಜಿಕ ಅರಿವು ಮೂಡಿಸುವ ಕಾರ್ಯವನ್ನು ಮಾಡಿದರು. ಮೂರು ವರ್ಷಗಳ ಕಾಲ 'ಬೆಳಕು' ಪತ್ರಿಕೆಯ ಸಂಪಾದಕಿಯಾಗಿ ಅಭಿವೃದ್ಧಿ ಮತ್ತು ಸುಧಾರಣೆ, ಮಹಿಳೆಯರ ಮತ್ತು ಮಕ್ಕಳ ಸರ್ವಾಂಗೀಣ ಅಭ್ಯುದಯಕ್ಕಾಗಿ ಮಾಡುತ್ತಿದ್ದ ಚಿಂತನೆಗಳು, ಸ್ವಾತಂತ್ರ್ಯ ಮತ್ತು ಏಕೀಕರಣದ ಪರವಾದ ಲೇಖನಗಳು 'ಬೆಳಕು' ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದವು. ವಯಸ್ಕರ ಶಿಕ್ಷಣ ಸಮಿತಿಯ ವಾರಪತ್ರಿಕೆ 'ಬೆಳಕು' ಸರ್ಕಾರಿ ಸಂಸ್ಥೆಯ ಪತ್ರಿಕೆಯಾಗಿದ್ದು, ೧೯೪೩ರಲ್ಲಿ ಪ್ರಾರಂಭವಾದ 'ಬೆಳಕು' ಪತ್ರಿಕೆ ೨೦೦೧ರಲ್ಲಿ ತನ್ನ ಪ್ರಸಾರವನ್ನು ನಿಲ್ಲಿಸುವವರೆಗೂ ಇದರ ಏಕೈಕ ಮಹಿಳಾ ಸಂಪಾದಕಿಯಾಗಿದ್ದ ಹೆಮ್ಮೆ ಲಕ್ಷಮ್ಮನವರದಾಗಿದೆ. ಆಕಸ್ಮಿಕವಾಗಿ ಒಲ್ಲದ ಮನಸ್ಸಿನಿಂದ ರಾಜಕೀಯ ಕ್ಷೇತ್ರಕ್ಕೆ ಕಾಲಿಟ್ಟ ಅವರು ನ್ಯಾಯವಿಧಾಯಕ ಸಭಾ ಸದಸ್ಯರಾಗಿ, ಪುರಸಭಾ ಸದಸ್ಯರಾಗಿ, ಹದಿನೆಂಟು ವರ್ಷಗಳ ಕಾಲ ವಿಧಾನಪರಿಷತ್ತಿನ ಸದಸ್ಯರಾಗಿ ರಾಜಕೀಯರಂಗದಲ್ಲಿ ಒಬ್ಬ ತತ್ವನಿಷ್ಠ ರಾಜಕಾರಣಿಯಾಗಿ ಗುರುತಿಸಿಕೊಂಡಿದ್ದರು. ಹಣ ಮತ್ತು ಅಧಿಕಾರಕ್ಕೆ ಆಸೆಪಡದೆ, ರೈತರು, ಮಹಿಳೆಯರು, ಕುಶಲಕರ್ಮಿಗಳು, ಮಕ್ಕಳು ಮತ್ತು ಜನಸಾಮಾನ್ಯರ ಅಭಿವೃದ್ಧಿಗಾಗಿ ಶ್ರಮಿಸಿದರು. ನ್ಯಾಯವಿಧಾಯಕ ಸಭೆಯ ಸದಸ್ಯರಾಗಿ, ವಿಧಾನಪರಿಷತ್ತಿನ ಸದಸ್ಯರಾಗಿ ಅವರು ಮಾಡಿದ ಭಾಷಣಗಳು ಮತ್ತು ಚರ್ಚೆಗಳನ್ನು ಅಧ್ಯಯನ ಮಾಡಿದಾಗ ಅವರ ಚಿಂತನೆಗಳು ಮಹಿಳಾಪರವಾಗಿದ್ದು, ಸಮಾಜಮುಖಿಯಾಗಿದ್ದು, ಅವರ ಸಾಮಾಜಿಕ ಕಳಕಳಿಯನ್ನು ಎತ್ತಿಹಿಡಿಯುತ್ತದೆ. ೧೯೫೪ರಲ್ಲಿ ಸಮಾಜಕಲ್ಯಾಣ ಇಲಾಖೆಯ ಮೊದಲ ಅಧ್ಯಕ್ಷರಾಗಿ ಸಾಮಾಜಿಕ ಅಭಿವೃದ್ಧಿಯಲ್ಲಿ ತೊಡಗಿದರು.

೧೯೪೫ರಲ್ಲಿ ನ್ಯಾಯವಿಧಾಯಕ ಸಭೆಯ ಸದಸ್ಯರಾಗಿ ರಾಜಕೀಯರಂಗಕ್ಕೆ ಕಾಲಿಟ್ಟ ಲಕ್ಷಮ್ಮ ಅವರು ಮೈಸೂರಿನ ಅರಸರು ಹೊಂದಿದ್ದಂತಹ ಪ್ರಜಾಪ್ರಭುತ್ವ ವಿರೋಧಿ ಮನೋಭಾವವನ್ನು ಖಂಡಿಸಿದರು. ಮೈಸೂರು ಚಲೋ ಚಳವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಸೆರೆಮನೆವಾಸವನ್ನು ಅನುಭವಿಸಿದರು. ಅವರು ಸೆರೆಮನೆಯಲ್ಲಿ ರಚಿಸಿದ 'ತುರಂಗವಾಸ ಅನುಭವ' ಎಂಬ 'ಸೆರೆಮನೆ ದಿನಚರಿ' ಒಂದು ಪ್ರಮುಖ ಐತಿಹಾಸಿಕ ದಾಖಲೆಯಾಗಿದ್ದು, ದಿನಚರಿಯಲ್ಲಿ ಅಂದಿನ ಘಟನೆಗಳ ಚಿತ್ರಣವನ್ನು, ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದ ಪ್ರಮುಖ ವ್ಯಕ್ತಿಗಳ ಬಗ್ಗೆ ದಾಖಲಿಸಿದ್ದಾರೆ. ಸ್ವಾತಂತ್ರ್ಯ ಚಳವಳಿಯಲ್ಲಿ ಅಲ್ಲದೆ ಏಕೀಕರಣ ಚಳವಳಿಯಲ್ಲಿ ಭಾಗವಹಿಸಿದ ಲಕ್ಷಮ್ಮ ಅವರು ಬೆಳಕು ಪತ್ರಿಕೆಯ ಸಂಪಾದಕಿಯಾಗಿದ್ದಾಗಲೇ ಏಕೀಕರಣದ ಪರವಾದ ಲೇಖನಗಳನ್ನು ಪ್ರಕಟಿಸುತ್ತಿದ್ದರು. ತಮ್ಮ ಸಂಪಾದಕತ್ವದ 'ಸೋದರಿ' ಪತ್ರಿಕೆಯಲ್ಲಿ ಏಕೀಕರಣ ಪರವಾದ ಚಿಂತನೆಗಳನ್ನು ಹೋರಾಟದ ರೂಪುರೇಷೆಗಳನ್ನು ಕುರಿತ ಲೇಖನಗಳನ್ನು ಪ್ರಕಟಿಸುತ್ತಿದ್ದರು.

ವಿಧಾನಪರಿಷತ್ತಿನ ಅವರ ಚರ್ಚೆಗಳಲ್ಲಿ, ಭಾಷಣಗಳಲ್ಲಿ ಏಕೀಕರಣ ಪರವಾದ ನಿಲುವುಗಳು ವ್ಯಕ್ತವಾಗಿದ್ದು, ಅಖಂಡ ಕರ್ನಾಟಕದ ಪ್ರತಿಪಾದಕರಾಗಿದ್ದರು. ಪುರುಷಪ್ರಧಾನ ಸಮಾಜದಲ್ಲಿ ಪತ್ರಿಕೋದ್ಯಮ ಕ್ಷೇತ್ರಕ್ಕೆ ಕಾಲಿಟ್ಟು ಮಹಿಳಾ ಪತ್ರಿಕೋದ್ಯಮದ ಇತಿಹಾಸದಲ್ಲಿ ತಮ್ಮ ಛಾಪನ್ನು ಮೂಡಿಸಿದವರು ಎಂ.ಆರ್. ಲಕ್ಷಮ್ಮ. ಮಹಿಳೆಯರ ಸಮಸ್ಯೆಗಳನ್ನು ಗುರುತಿಸಿ ಅವುಗಳನ್ನು ನಿವಾರಿಸುವ ನಿಟ್ಟಿನಲ್ಲಿ ಮಹಿಳಾ ವಿಮೋಚನೆಯನ್ನು ಗುರಿಯಾಗಿಸಿಕೊಂಡು 'ಸೋದರಿ' ಪತ್ರಿಕೆಯನ್ನು ಹುಟ್ಟುಹಾಕಿದರು. ೧೯೫೦ ರಲ್ಲಿ ಪ್ರಕಟಿಸಲ್ಪಟ್ಟ 'ಸೋದರಿ' ಪತ್ರಿಕೆ ವೈವಿಧ್ಯಮಯ ಲೇಖನಗಳನ್ನು, ಕಥೆಗಳನ್ನು, ಕವನಗಳನ್ನು ಮತ್ತು ಮಹಿಳಾ ಪರ ಚಿಂತನೆಗಳ ಪುಟಗಳನ್ನು ಒಳಗೊಂಡಿದ್ದು ಮೂರರಿಂದ ನಾಲ್ಕು ಸಾವಿರ ಪ್ರತಿಗಳು ಮಾರಾಟವಾಗುತ್ತಿದ್ದು ಕರ್ನಾಟಕವಷ್ಟೆ ಅಲ್ಲದೆ ಹೊರ ರಾಜ್ಯಗಳಿಗೂ ಪತ್ರಿಕೆ ರವಾನೆಯಾಗುತ್ತಿತ್ತು. ಪತ್ರಿಕೋದ್ಯಮ ಕ್ಷೇತ್ರಕ್ಕೆ ಕಾಲಿಟ್ಟು ಸೋದರಿಯನ್ನು ಯಶಸ್ವಿಯಾಗಿ ನಡೆಸಿದ ಎಂ.ಆರ್. ಲಕ್ಷಮ್ಮ ಮಹಿಳೆಯರ ಹಕ್ಕುಬಾಧ್ಯತೆಗಳನ್ನು ವಿವರಿಸಲೂ, ರಚನಾತ್ಮಕ ದೃಷ್ಟಿಯಿಂದ ಅದನ್ನು ಸಾಧಿಸುವುದಕ್ಕಾಗಿ, ಮಹಿಳೆಯರ ಭಾವನೆಯನ್ನು ಭಾಷೆಯ ರೂಪದಲ್ಲಿ ಹೊರಹಾಕಿ ಜಗತ್ತಿನ ಮುಂದಿರಿಸುವ ಕಾರ್ಯಕ್ಕಾಗಿ ಸೋದರಿಯನ್ನು ಪ್ರಾರಂಭಿಸಲಾಯಿತೆಂದು ಹೇಳಿದ್ದಾರೆ.

ಲಕ್ಷಮ್ಮನವರು ಮೂಲತಃ ಸಮಾಜಸೇವಕಿಯಾಗಿದ್ದು, ಹಲವಾರು ಮಹಿಳಾ ಮಂಡಲಿಗಳ ಸ್ಥಾಪನೆ ಮಾಡಿ ಮಹಿಳೆಯರ ಅಭಿವೃದ್ಧಿಗೆ ಶ್ರಮಿಸಿದ್ದಾರೆ. ಅದರೊಂದಿಗೆ ಹಲವಾರು ಸಂಘಟನೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದು ರಚನಾತ್ಮಕ ಕಾರ್ಯಗಳಲ್ಲಿ ಭಾಗವಹಿಸಿದ್ದರು. ಗ್ರಾಹಕರ ವೇದಿಕೆಯ ಕಾರ್ಯಾಧ್ಯಕ್ಷೆಯಾಗಿ ಗ್ರಾಹಕರಿಗೆ ಜಾಗೃತಿ ಮೂಡಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದು, ನಾಗರಿಕಸೇವೆಗಳ ಬಗ್ಗೆ ಕಳಕಳಿಯನ್ನು ಹೊಂದಿದ್ದರು. ಕರ್ನಾಟಕ ಮದ್ಯಪಾನಸಂಯಮ ಮಂಡಳಿಯ ಪ್ರಥಮ ಅಧ್ಯಕ್ಷೆಯಾಗಿ ಮದ್ಯಪಾನದಿಂದ ಆಗುವ ಅನಾಹುತಗಳ ಬಗ್ಗೆ ಅರಿವು ಮೂಡಿಸುವ ಕಾರ್ಯವನ್ನು ಕೈಗೊಂಡರು. ಮೈಸೂರು ಸಂಸ್ಥಾನದ ಮಕ್ಕಳ ಅಭಿವೃದ್ಧಿ ಸಮಿತಿಯ ಸ್ಥಾಪಕ ಸದಸ್ಯರಾಗಿ, ಕೇಂದ್ರ ಹೆಣ್ಣುಮಕ್ಕಳ ಶಿಕ್ಷಣ ಮಂಡಳಿಯಲ್ಲಿ ಸದಸ್ಯೆಯಾಗಿ ಸೇವೆ ಸಲ್ಲಿಸಿದರು. ಲಕ್ಷಮ್ಮನವರು ವಿವಿಧ ಸಂಘಸಂಸ್ಥೆಗಳ ಸದಸ್ಯರಾಗಿದ್ದು ಜನಸಾಮಾನ್ಯರಿಗೆ ನ್ಯಾಯಯುತವಾದ ಹಕ್ಕುಗಳನ್ನು ಒದಗಿಸಿಕೊಡಲು ಶ್ರಮಿಸಿದರು. ಅವರ ಸಾಮಾಜಿಕ ಕಳಕಳಿ, ನಾಗರಿಕಪ್ರಜ್ಞೆ, ಸಮಾಜಮುಖಿ ಚಿಂತನೆ, ಮಹಿಳಾಪರ ಚಿಂತನೆಗಳು ಮತ್ತು ಹೋರಾಟದ ಮನೋಭಾವವನ್ನು ಅರಿಯಲು ಮತ್ತು ಅವರ ಹಾದಿಯನ್ನು ಅನುಸರಿಸಲು ಅವರ ಜೀವನ ಚರಿತ್ರೆಯ ಅಧ್ಯಯನದಲ್ಲಿ ಅವಶ್ಯಕವಾಗಿದೆ. ಅವರ ಸಾಮಾಜಿಕ ಮತ್ತು ಮಹಿಳಾ ಚಿಂತನೆಗಳು ಇಂದಿಗೂ ಪ್ರಸ್ತುತವಾಗಿದ್ದು ಅವುಗಳನ್ನು ಈ ಸಂಶೋಧನೆಯಲ್ಲಿ ದಾಖಲಿಸಿದ್ದು ಮುಂದಿನ ಪೀಳಿಗೆಯ ಯುವಜನಾಂಗ ಅವರ ಚಿಂತನೆ ಮತ್ತು ಹೋರಾಟದ ಪ್ರಜ್ಞೆಯನ್ನು ಬೆಳೆಸಿಕೊಳ್ಳಲು ಸಹಕಾರಿಯಾಗಿದೆ.

## ೧.೨ ಅಧ್ಯಯನದ ಉದ್ದೇಶಗಳು

- ಮೇಲ್ವರ್ಗ ಹಾಗೂ ಅಂಗ್ರಪಂಕ್ತಿಯ ನಾಯಕರ ಹೋರಾಟಗಳನ್ನು ಮಾತ್ರ ಚರಿತ್ರೆಯಲ್ಲಿ ದಾಖಲಿಸಿದ್ದು, ಅಲಕ್ಷಿತ ಸಮುದಾಯವಾದ ಮಹಿಳೆಯರ ಬಗ್ಗೆ ಸ್ಥಳೀಯ ಚರಿತ್ರೆಯಲ್ಲಿ ದಾಖಲಿಸುವ ಹಿನ್ನೆಲೆಯಲ್ಲಿ ಈ ಅಧ್ಯಯನ ಕೈಗೊಳ್ಳಲಾಗಿದೆ.
- ಸ್ಥಳೀಯ ಚರಿತ್ರೆಯ ಅಧ್ಯಯನದ ಹಿನ್ನೆಲೆಯಲ್ಲಿ ಅವಲೋಕಿಸಿ ಎಂ.ಆರ್. ಲಕ್ಷಮ್ಮನವರ ಮಹಿಳಾ ಚಿಂತನೆಗಳನ್ನು ಸ್ತ್ರೀವಾದಿ ನೆಲೆಗಟ್ಟಿನಲ್ಲಿ ನೋಡುವ ದೃಷ್ಟಿಯಿಂದ ಈ ಸಂಶೋಧನೆಯನ್ನು ಕೈಗೊಳ್ಳಲಾಗಿದೆ.
- ಗಾಂಧೀಜಿಯವರ ಪ್ರಭಾವಕ್ಕೆ ಒಳಗಾಗಿ ಸಮಾಜ ಸುಧಾರಣೆಯಲ್ಲಿ ತಮ್ಮನ್ನು ತೊಡಗಿಸಿಕೊಂಡ ಲಕ್ಷಮ್ಮನವರ ಕಾರ್ಯಕ್ಷೇತ್ರದ ಬಗ್ಗೆ ಚರ್ಚೆ ನಡೆಸಲಾಗಿದೆ.
- ಸ್ವಾತಂತ್ರ್ಯ ಚಳವಳಿ ಮತ್ತು ಏಕೀಕರಣ ಚಳವಳಿಯಲ್ಲಿ ಲಕ್ಷಮ್ಮನವರ ಪಾತ್ರ – ಅವರು ರಚಿಸಿರುವ ಸೆರೆಮನೆ ದಿನಚರಿಯಲ್ಲಿನ ಅಂಶಗಳ ಆಧಾರದ ಮೇಲೆ ವಿಶ್ಲೇಷಿಸಲಾಗಿದೆ.
- ಮಹಿಳಾ ಪತ್ರಿಕೋದ್ಯಮದ ಇತಿಹಾಸದಲ್ಲಿ ಲಕ್ಷಮ್ಮನವರ ಹೆಜ್ಜೆ ಗುರುತುಗಳು. ವಯಸ್ಕರ ಶಿಕ್ಷಣ ಸಮಿತಿಯ ಪತ್ರಿಕೆ 'ಬೆಳಕು'ವಿನ ಏಕೈಕ ಮಹಿಳಾ ಸಂಪಾದಕಿಯಾಗಿ ಮತ್ತು ಮಹಿಳೆಯರ ಅಭ್ಯುದಯಕ್ಕಾಗಿ ಪ್ರಾರಂಭಿಸಿದ 'ಸೋದರಿ' ಪತ್ರಿಕೆಯ ಸಂಪಾದಕಿಯಾಗಿ, ಪ್ರಕಾಶಕಿಯಾಗಿ, ಮುದ್ರಕಿಯಾಗಿ ಅವರ ಕಾರ್ಯವನ್ನು ಅವಲೋಕಿಸುವ ಹಾಗೂ ಪತ್ರಿಕೆಯಲ್ಲಿ ವ್ಯಕ್ತವಾಗಿರುವ ಸ್ತ್ರೀವಾದಿ ಚಿಂತನೆಗಳ ಬಗ್ಗೆ ಅವಲೋಕಿಸಲಾಗಿದೆ.
- ಮೈಸೂರು ರಾಜ್ಯದ ಸಮಾಜ ಕಲ್ಯಾಣ ಮಂಡಲಿಯ ಪ್ರಥಮ ಅಧ್ಯಕ್ಷೆಯಾಗಿ ಅವರು ಕೈಗೊಂಡಿರುವ ಕಾರ್ಯಗಳು.
- ನ್ಯಾಯವಿಧಾಯಕ ಸಭೆಯ ಸದಸ್ಯರಾಗಿ ರಾಜಕೀಯರಂಗಕ್ಕೆ ಪ್ರವೇಶಿಸಿ ಹದಿನೆಂಟು ವರ್ಷಗಳ ಕಾಲ ವಿಧಾನಪರಿಷತ್ತಿನ ಸದಸ್ಯರಾಗಿ ರಾಜಕೀಯರಂಗದಲ್ಲಿ ಕಾರ್ಯ ನಿರ್ವಹಿಸಿದ ಲಕ್ಷಮ್ಮ ಅವರ ರಾಜಕೀಯ ಚಿಂತನೆಗಳು, ಭಾಷಣಗಳು, ಚರ್ಚೆಗಳಲ್ಲಿ ಅವರ ಚಿಂತನೆಗಳು.
- ಕರ್ನಾಟಕ ಪಾನಸಂಯಮ ಮಂಡಳಿಯ ಪ್ರಥಮ ಅಧ್ಯಕ್ಷೆಯಾಗಿ ಕಾರ್ಯ ನಿರ್ವಹಿಸುವಾಗ ಗಾಂಧೀಜಿಯವರ ಪ್ರಭಾವ.
- ಅನೇಕ ವರ್ಷಗಳ ಕಾಲ ರಾಜಕೀಯರಂಗದಲ್ಲಿದ್ದರೂ ಅಧಿಕಾರದ ಹಂಬಲವಿಲ್ಲದ ತತ್ವನಿಷ್ಠ ರಾಜಕಾರಣವನ್ನು ಹಾಗೂ ಸಮಾಜಮುಖಿ ಚಿಂತನೆಗಳು ಲಕ್ಷಮ್ಮ ಅವರ ವ್ಯಕ್ತಿತ್ವದಲ್ಲಿತ್ತು ಎಂಬುದನ್ನು ಈ ಸಂಶೋಧನೆಯಲ್ಲಿ ತಿಳಿಸಿಕೊಡಲಾಗಿದೆ.

- ಎಂ.ಆರ್. ಲಕ್ಷಮ್ಮನವರಿಗೆ ಸಂಬಂಧಿಸಿದ ಸಮಗ್ರ ಅಧ್ಯಯನದ ಕುರಿತಾಗಿ ಯಾವ ಕೃತಿಗಳು ಪ್ರಕಟಗೊಂಡಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಪ್ರಾಥಮಿಕ ಮತ್ತು ಆನುಷಂಗಿಕ ಆಧಾರಗಳೊಂದಿಗೆ ಅವರ ವ್ಯಕ್ತಿತ್ವ ಮತ್ತು ಚಿಂತನೆಗಳನ್ನು ಸಮಗ್ರವಾಗಿ ಕಟ್ಟಿಕೊಡುವ ಉದ್ದೇಶವನ್ನು ಈ ಸಂಶೋಧನೆಯು ಒಳಗೊಂಡಿದೆ.

**೧.೩. ಅಧ್ಯಯನದ ಸಮೀಕ್ಷೆ**

ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಇದುವರೆಗೂ ಪ್ರಕಟಗೊಂಡ ಕೃತಿಗಳಲ್ಲಿ ಲಭ್ಯವಿರುವ ಆಧಾರಗಳ ಮೂಲಕ ಮಹಿಳಾ ಚಿಂತನಾ ನೆಲೆಗಳಲ್ಲಿ ಲಕ್ಷಮ್ಮನವರ ಹೋರಾಟಗಳು ಹಾಗೂ ಚಿಂತನೆಗಳು ಅವರ ಕಾರ್ಯಕ್ಷೇತ್ರವನ್ನು ಸಂಶೋಧನಾ ಹಿನ್ನೆಲೆಯಲ್ಲಿ ವಿಶ್ಲೇಷಿಸುವ ಅಗತ್ಯತೆ ಇದೆ. ವಯಸ್ಕರ ಶಿಕ್ಷಣ ಸಮಿತಿಯ ಪತ್ರಿಕೆ 'ಬೆಳಕು'ವಿನಲ್ಲಿ ಸಂಪಾದಕಿಯಾಗಿದ್ದ, ಲಕ್ಷಮ್ಮ ಅವರ ವಿಚಾರಧಾರೆ ಮತ್ತು ಚಿಂತನೆಗಳನ್ನು ಪತ್ರಿಕೆ ಒಳಗೊಂಡಿದ್ದು ೧೯೪೫ ರಿಂದ ೧೯೪೭ರವರೆಗಿನ 'ಬೆಳಕು' ಪತ್ರಿಕೆ ಸಂಚಿಕೆಗಳು ಪೂರಕವಾದ ಮಾಹಿತಿಯನ್ನು ಒದಗಿಸುತ್ತವೆ. ವಯಸ್ಕರ ಶಿಕ್ಷಣ ಪುಸ್ತಕ ಮಾಲೆಯಲ್ಲಿ ಪ್ರಕಟಗೊಂಡಿರುವ ಲಕ್ಷಮ್ಮ ಅವರು ರಚಿಸಿದ 'ಮಾರುತಿ' ೧೯೪೩ ರಲ್ಲಿ ಮತ್ತು 'ಕುಂತೀದೇವಿ' ೧೯೪೪ ರಲ್ಲಿ ಪ್ರಕಟವಾದ ಸಣ್ಣ ಕಥೆಗಳಾಗಿದ್ದು, ಲಕ್ಷಮ್ಮನವರ ಸಾಹಿತ್ಯಾಸಕ್ತಿಯನ್ನು ತಿಳಿಸುವುದರ ಜೊತೆಗೆ ಮಹಿಳೆಯರ ಬಗ್ಗೆ ಮತ್ತು ಕೆಳವರ್ಗದ ಜನತೆಯ ಬಗ್ಗೆ ಅವರ ದೃಷ್ಟಿಕೋನವನ್ನು, ಕಾಳಜಿಯನ್ನು ಬಿಂಬಿಸುತ್ತವೆ. ಎಂ.ಆರ್. ಲಕ್ಷಮ್ಮ ಅವರ 'ಸೋದರಿ' ಪತ್ರಿಕೆಯ ೧೯೫೦ ರಿಂದ ೧೯೫೭ ರವರೆಗಿನ ೮೫ ಸಂಚಿಕೆಗಳು ಲಭ್ಯವಿದ್ದು ಅವುಗಳಲ್ಲಿ ಅವರ ಮಹಿಳಾಪರವಾದ ಚಿಂತನೆಗಳು, ಸಮಾಜಮುಖಿ ಚಿಂತನೆಗಳು ಮತ್ತು ಪ್ರಗತಿಪರ ಚಿಂತನೆಗಳ ಬಗ್ಗೆ ವಿವರಗಳು ಉಪಯುಕ್ತವೆನಿಸುತ್ತವೆ. ರಾಜ್ಯ ಸಮಾಜ ಕಲ್ಯಾಣ ಮಂಡಲಿಯ ಸ್ಥಾಪನೆ ಬಗ್ಗೆ ಮಹಿಳೆಯರ ಬಗ್ಗೆ ಅಧ್ಯಯನ ಮಾಡಲು ಲಕ್ಷಮ್ಮ ಅವರು ಅಮೆರಿಕಾ ಮತ್ತು ಯೂರೋಪ್‌ಖಂಡದ ಅನೇಕ ದೇಶಗಳಿಗೆ ಭೇಟಿಕೊಟ್ಟ ಬಗ್ಗೆ ಮಾಹಿತಿಗಳು ದೊರೆಯುತ್ತವೆ. **ವಾಸುದೇವಮೂರ್ತಿ ಆರ್.** ಅವರ ಸಂಪಾದಕತ್ವದಲ್ಲಿ ಹೊರಬಂದಿರುವ **'ಗಾಂಧೀ ಚಿಂತನ ಪ್ರೊ॥ ಬಿ.ಆರ್.ಪಿ'.** ಎಂಬ ಅಭಿನಂದನಾ ಗ್ರಂಥ ಬಿ.ಆರ್. ಪ್ರಾಣೇಶರಾಯರ ಬಗ್ಗೆ ತಿಳಿಸುವ ಕೃತಿಯಾಗಿದ್ದು, ಲಕ್ಷಮ್ಮನವರ ಸಂಬಂಧಿಕರಾಗಿರುವ ಬಿ.ಆರ್. ಪ್ರಾಣೇಶರಾಯರು ಲಕ್ಷಮ್ಮ ಅವರ ಬಗ್ಗೆ ಮಾಹಿತಿ ನೀಡಿದ್ದಾರೆ. **ಅರ್ಜುನಪುರಿ ಅಪ್ಪಾಜಿಗೌಡ** ೧೯೯೫ ರಲ್ಲಿ ರಚಿಸಿರುವ **'ನಂಜನಗೂಡು ತಿರುಮಲಾಂಬ – ಒಂದು ಅಧ್ಯಯನ'** ಕೃತಿಯು ಕನ್ನಡದ ಮೊದಲ ಮಹಿಳಾ ಪತ್ರಿಕೋದ್ಯಮಿ ನಂಜನಗೂಡು ತಿರುಮಲಾಂಬ ಅವರ ಬದುಕು ಬರಹಗಳನ್ನು ಒಳಗೊಂಡಿದ್ದು, ಕನ್ನಡದಲ್ಲಿ ಮಹಿಳಾ ಪತ್ರಿಕೋದ್ಯಮದ ಬೆಳವಣಿಗೆ ಬಗ್ಗೆ ತಿಳಿದುಕೊಳ್ಳಲು ಈ ಕೃತಿಯು ಸಹಕಾರಿಯಾಗಿದೆ.

ಎಂ. ಜಮುನಾರವರು ರಚಿಸಿ ೧೯೯೯ ರಲ್ಲಿ ಪ್ರಕಟಗೊಂಡಿರುವ **'ಸ್ವಾತಂತ್ರ್ಯ ಚಳವಳಿಯಲ್ಲಿ ಮಹಿಳೆಯರು'** ಕೃತಿಯು ಮಹಿಳೆಯರು ಸ್ವಾತಂತ್ರ್ಯ ಚಳುವಳಿಯಲ್ಲಿ ವಹಿಸಿದ ಪಾತ್ರದ ಬಗ್ಗೆ ಮಾಹಿತಿಯನ್ನು ಒಳಗೊಂಡಿದೆ. **ಷೇಕ್ಅಲಿ. ಬಿ.** ಇವರ ಸಂಪಾದಕತ್ವದಲ್ಲಿ ಪ್ರಕಟಿಸಲ್ಪಟ್ಟಿರುವ **'ಕರ್ನಾಟಕ ಚರಿತ್ರೆ'** ಸಂಪುಟ ೭ ರಲ್ಲಿ ಎಂ. **ಜಮುನಾ** ರವರು ರಚಿಸಿದ **ಸ್ವಾತಂತ್ರ್ಯ ಚಳವಳಿಯಲ್ಲಿ ಮಹಿಳೆಯರ ಪಾತ್ರ** ಲೇಖನ ಪ್ರಕಟಿತಗೊಂಡಿದ್ದು ಮಹಿಳೆಯರು ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದ ಬಗ್ಗೆ ಮಾಹಿತಿ ಒಳಗೊಂಡಿದೆ. **ದೇ. ಜವರೇಗೌಡರ** ಸಂಪಾದಕತ್ವದಲ್ಲಿ ಪ್ರಕಟವಾಗಿರುವ ವಯಸ್ಕರ ಶಿಕ್ಷಣ ಸಮಿತಿಯ **'ಪುಸ್ತಕ ಪ್ರಪಂಚದ ಸುವರ್ಣ ಸಂಚಿಕೆ'** ೨೦೦೦ ರಲ್ಲಿ ಪ್ರಕಟವಾಗಿದ್ದು, ವಯಸ್ಕರ ಶಿಕ್ಷಣದ ಪ್ರಾರಂಭ ಬೆಳಕು ಪತ್ರಿಕೆ ಮತ್ತು ಪುಸ್ತಕ ಪ್ರಪಂಚದ ಉಗಮ ಮತ್ತು ಬೆಳವಣಿಗೆ ವಯಸ್ಕರ ಶಿಕ್ಷಣದಲ್ಲಿ ಇನ್ನಿತರ ಚಟುವಟಿಕೆಗಳು ಬೆಳಕುವಿನ ಸಂಪಾದಕರ ಬಗ್ಗೆ ಮಾಹಿತಿಯನ್ನು ಒಳಗೊಂಡಿದ್ದು, ಲಕ್ಷಮ್ಮನವರ ಬಗ್ಗೆ ಉಲ್ಲೇಖವನ್ನು ಕಾಣಬಹುದು. **ತುಕಾರಾಮ್ ಎಸ್.** ಸಂಪಾದಕತ್ವದಲ್ಲಿ ಪ್ರಕಟಗೊಂಡಿರುವ **'ಸಾಕ್ಷರ ದಾರಿಯ ಸಾವಿರ ಹೆಜ್ಜೆ'** ಕೃತಿಯಲ್ಲಿ ವಯಸ್ಕರ ಶಿಕ್ಷಣದ ಉಗಮದ ಬಗ್ಗೆ ಬೆಳಕು ಚೆಲ್ಲುತ್ತದೆ. **ನಾಗಲಕ್ಷ್ಮಿ** ನಂ. ರಚಿಸಿರುವ **'ಕನ್ನಡ ಪತ್ರಿಕಾಲೋಕದ ಧೀಮಂತರು ಭಾಗ – ೮'** ಕೃತಿಯು ೨೦೦೦ ರಲ್ಲಿ ಪ್ರಕಟಗೊಂಡಿದ್ದು, ಅದರಲ್ಲಿ ಲಕ್ಷಮ್ಮನವರು ಸೋದರಿ ಪತ್ರಿಕೆಯನ್ನು ಪ್ರಾರಂಭಿಸಿದ ಬಗ್ಗೆ ಅದರ ನಿರ್ವಹಣೆ ಮಹಿಳೆಯರನ್ನು ಕುರಿತ ಕೆಲವು ಲೇಖನಗಳ ಬಗ್ಗೆ ಉಲ್ಲೇಖವಿದ್ದು ಅವರ ಒಟ್ಟು ಪತ್ರಿಕೋದ್ಯಮದ ಕಾರ್ಯಕ್ಷೇತ್ರದ ಬಗ್ಗೆ ದಾಖಲಾಗದಿರುವುದು ಕಂಡುಬರುತ್ತದೆ. **ಶಶಿಕಲಾ ಎಸ್.ಡಿ.** ಬರೆದಿರುವ **'ಕನ್ನಡ ಪತ್ರಿಕೋದ್ಯಮ ಕಂಡ ಮಹಿಳೆ ಆರ್. ಕಲ್ಯಾಣಮ್ಮ'** ಎಂಬ ಕೃತಿಯು ೨೦೦೧ ರಲ್ಲಿ ಪ್ರಕಟಗೊಂಡಿದ್ದು, ಇದು ಕನ್ನಡ ಮಹಿಳಾ ಪತ್ರಿಕೋದ್ಯಮ ಬೆಳದುಬಂದ ಹಾದಿ ಲಕ್ಷಮ್ಮನವರಿಗಿಂತಲೂ ಮೊದಲು ಸರಸ್ವತಿ ಪತ್ರಿಕೆಯನ್ನು ಪ್ರಾರಂಭಿಸಿದ ಕಲ್ಯಾಣಮ್ಮನವರ ಬಗ್ಗೆ ತಿಳಿಸುವ ಸಂಶೋಧನಾತ್ಮಕ ಕೃತಿಯಾಗಿದ್ದು, ಲಕ್ಷಮ್ಮನವರ ಬರಹಗಳನ್ನು ಆರ್. ಕಲ್ಯಾಣಮ್ಮನವರ ಬರಹಗಳನ್ನು ತೌಲನಿಕ ಅಧ್ಯಯನಕ್ಕೆ ಒಳಪಡಿಸಲು ಸಹಕಾರಿಯಾದ ಕೃತಿಯಾಗಿದೆ. ಎನ್. ಸರಸ್ವತಿ ಅವರು ಬರೆದಿರುವ ೨೦೦೮ ರಲ್ಲಿ ಪ್ರಕಟಗೊಂಡಿರುವ **'ಸ್ವಾತಂತ್ರ್ಯ ಹೋರಾಟದಲ್ಲಿ ಮೈಸೂರು ಸಂಸ್ಥಾನದ ಮಹಿಳೆಯರ ಪಾತ್ರ'** ಎಂಬ ಕೃತಿಯಲ್ಲಿ ಸ್ವಾತಂತ್ರ್ಯ ಹೋರಾಟದಲ್ಲಿ ಮಹಿಳೆಯರ ಪಾತ್ರವನ್ನು ಚಿತ್ರಿಸಿದ್ದು, ಲಕ್ಷಮ್ಮನವರ ಬಗ್ಗೆ ಉಲ್ಲೇಖವಿದೆ.

ಸ್ವಾತಂತ್ರ್ಯ ಚಳವಳಿಯಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆಗೆ ಉತ್ತೇಜಿಸಿದ ಅಂಶಗಳು ಸ್ವಾತಂತ್ರ್ಯ ಹೋರಾಟಗಾರ್ತಿಯರ ಬದುಕಿನ ಚಿತ್ರಣದ ಮೇಲೆ ಬೆಳಕು ಚೆಲ್ಲುವ ಕೃತಿಯಾಗಿದ್ದು, ಸ್ವಾತಂತ್ರ್ಯ ಚಳವಳಿಯಲ್ಲಿ ಮಹಿಳೆಯರ ಪಾತ್ರವನ್ನು ಸಂಪೂರ್ಣವಾಗಿ ಕಟ್ಟಿಕೊಡಲಾಗಿಲ್ಲ ಮತ್ತು ಸ್ವಾತಂತ್ರ್ಯ ಹೋರಾಟಗಾರ್ತಿಯರ ಪಾತ್ರವನ್ನು ವಿವಿಧ ಆಯಾಮಗಳಲ್ಲಿ ವೀಕ್ಷಿಸಲಾಗಿಲ್ಲ. **ವೆಂಕಟೇಶ್ ಟಿ.** ರವರು ರಚಿಸಿದ **'ಕನ್ನಡದಲ್ಲಿ ನವಸಾಕ್ಷರ ಸಾಹಿತ್ಯ – ಒಂದು**

ಅಧ್ಯಯನ' ಕೃತಿಯು ೨೦೦೧ ರಲ್ಲಿ ಪ್ರಕಟಗೊಂಡಿದ್ದು ವಯಸ್ಕರ ಶಿಕ್ಷಣ ಪುಸ್ತಕ ಮಾಲೆಯಲ್ಲಿ ನವಸಾಕ್ಷರರಿಗೆ ರಚಿಸಲ್ಪಟ್ಟ ಸಾಹಿತ್ಯಗಳ ಬಗ್ಗೆ ಮಾಹಿತಿಯನ್ನು ಒಳಗೊಂಡ ಸಂಶೋಧನಾ ಕೃತಿಯಾಗಿದ್ದು, ಲಕ್ಷ್ಮಮ್ಮನವರು ರಚಿಸಿದ 'ಮಾರುತಿ' ಮತ್ತು 'ಕುಂತೀದೇವಿ' ಪುಸ್ತಕಗಳ ಕಥಾಸಾರಾಂಶದ ಬಗ್ಗೆ ಉಲ್ಲೇಖಿಸಲಾಗಿದೆ. ನವಸಾಕ್ಷರರಿಗೆ ರಚಿಸಲ್ಪಟ್ಟ ವಿವಿಧ ಬಗೆಯ ಸಾಹಿತ್ಯಗಳ ಬಗ್ಗೆ ವಿವರಣೆಯನ್ನು ಒಳಗೊಂಡಿರುತ್ತದೆ. **ರಾಕೇಶ್ ಹೆಚ್.ಎಸ್.** ಇವರು ರಚಿಸಿರುವ **'ಮೈಸೂರು ಚಲೋ ಚಳವಳಿ'** ಸಂಶೋಧನಾ ಕೃತಿಯು ೨೦೧೧ ರಲ್ಲಿ ಪ್ರಕಟಗೊಂಡಿದ್ದು, ಮೈಸೂರು ಸಂಸ್ಥಾನದಲ್ಲಿ ನಡೆದ ಹೋರಾಟದ ಬಗ್ಗೆ ಮಾಹಿತಿಯನ್ನು ಒಳಗೊಂಡಿದೆ. ಆದರೆ ಮಹಿಳೆಯರು ಮಾಡಿದ ಹೋರಾಟವನ್ನು ಸಮಗ್ರವಾಗಿ ಕೃತಿಯಲ್ಲಿ ಚರ್ಚಿಸಿರುವುದಿಲ್ಲ. **ಸುರೇಶ್‌ಕುಮಾರ್ ಎಸ್.** ಅವರ ಸಂಪಾದಕತ್ವದಲ್ಲಿ ಪ್ರಕಟಗೊಂಡಿರುವ **'ಕರ್ನಾಟಕ ವಿಧಾನಸಭೆ (೧೯೫೨-೨೦೧೨) ೬೦ನೇ ವಾರ್ಷಿಕೋತ್ಸವದ ಸ್ಮರಣ ಸಂಚಿಕೆ'**ಯು ೨೦೧೨ರಲ್ಲಿ ಪ್ರಕಟಗೊಂಡಿದ್ದು, ಲಕ್ಷ್ಮಮ್ಮನವರು ಕಾಂಗ್ರೆಸ್ ಪಕ್ಷಕ್ಕೆ ಸದಸ್ಯರಾದ ಸನ್ನಿವೇಶ, ೧೯೪೫ರಲ್ಲಿ ನ್ಯಾಯವಿಧಾಯಕ ಸಭೆಗೆ ಚುನಾಯಿತರಾದ ಬಗ್ಗೆ, ಸಭೆಯ ಕಾರ್ಯಕಲಾಪಗಳಲ್ಲಿ ಭಾಗವಹಿಸಿದ ಅನುಭವ ಲೇಖನ ಈ ಕೃತಿಯಲ್ಲಿ ಪ್ರಕಟವಾಗಿದೆ. **ಸುರೇಶ್ ಮೂನ** ರಚಿಸಿರುವ **'ಬೆಂಗಳೂರು ನಗರ ನಿರ್ಮಾಪಕರು'** ಕೃತಿಯು ೨೦೧೨ ರಲ್ಲಿ ಪ್ರಕಟಗೊಂಡಿದ್ದು, ಎಂ.ಆರ್. ಲಕ್ಷ್ಮಮ್ಮ ಅವರ ಜೀವನ ಮತ್ತು ಕಾರ್ಯಕ್ಷೇತ್ರದ ಬಗ್ಗೆ ಬೆಳಕು ಚೆಲ್ಲುವ ಲೇಖನ ಪ್ರಕಟವಾಗಿದ್ದು ಅವರ ಬಗ್ಗೆ ಪ್ರಾಥಮಿಕ ಮಾಹಿತಿಯನ್ನು ತಿಳಿಸುವ ಕೃತಿಯಾಗಿದೆ.

ವಿಭಾಗೀಯ ಪತ್ರಾಗಾರ ಕಛೇರಿ, ಮೈಸೂರು ಇಲ್ಲಿ ಲಭ್ಯವಿರುವ **'ದಿ ಅಡ್ಮಿನಿಸ್ಟ್ರೇಶನ್ ರಿಪೋರ್ಟ್ ಆನ್ ಪಬ್ಲಿಕ್ ಇನ್‌ಸ್ಟ್ರಕ್ಷನ್' (೧೮೮೯ ರಿಂದ ೧೯೨೯ ರವರೆಗೆ)** ವರದಿಯನ್ನು ಹಾಗೂ **'ದಿ ಪ್ರೊಸಿಡಿಂಗ್ಸ್ ಆಫ್ ದಿ ಗೌರ್ನಮೆಂಟ್ ಆಫ್ ಹಿಸ್ ಹೈನೆಸ್ ದಿ ಮಹಾರಾಜ ಆಫ್ ಮೈಸೂರು' (೧೯೧೭ ಹಾಗೂ ೧೯೨೦)** ಅನ್ನು ಪರಾಮರ್ಶಿಸಿ ಮೈಸೂರು ಸಂಸ್ಥಾನದಲ್ಲಿ ವಯಸ್ಕರ ಶಿಕ್ಷಣ ಬೆಳೆದು ಬಂದ ಹಾದಿಯನ್ನು ಸಂಶೋಧನೆಯಲ್ಲಿ ಬಳಸಿಕೊಳ್ಳಲಾಗಿದೆ. ಹಾಗೆಯೇ **'ದಿ ಮೈಸೂರು ಅಡ್ಮಿನಿಸ್ಟ್ರೇಶನ್ ರಿಪೋರ್ಟ್' (೧೯೦೨ ರಿಂದ ೧೯೪೭ರವರೆಗೆ)** ಪರಾಮರ್ಶಿಸಿ ವಯಸ್ಕರ ಶಿಕ್ಷಣದಲ್ಲಿ ಶಿಕ್ಷಿತರಾದ ವಿದ್ಯಾರ್ಥಿಗಳ ಬಗೆಗಿನ ಅಂಕಿಅಂಶಗಳ ಬಗ್ಗೆ ವಿವರಣೆಯನ್ನು ಒಳಗೊಂಡಿದೆ. ಪತ್ರಾಗಾರ ಕಛೇರಿ, ಬೆಂಗಳೂರು ಇಲ್ಲಿ **'ಮೈಸೂರು ಲೆಜಿಸ್ಲೇಟಿವ್ ಕೌನ್ಸಿಲ್ ಡಿಬೇಟ್ಸ್' (೧೯೫೨ರಿಂದ ೧೯೫೮, ೧೯೫೮ ರಿಂದ ೧೯೬೪ ಹಾಗೂ ೧೯೬೪ ರಿಂದ ೧೯೭೦ ರವರೆಗೆ)** ಅನ್ನು ಪರಾಮರ್ಶಿಸಲಾಗಿದ್ದು ಅವರು ಶಾಸನಸಭೆಯ ಸದಸ್ಯೆಯಾಗಿ ಅವರ ಕಾರ್ಯಗಳ ಬಗೆಗಿನ ವಿಚಾರಗಳು ಈ ದಾಖಲೆಗಳಲ್ಲಿ ಲಭ್ಯವಿದ್ದು, ಅವುಗಳು ಸಂಶೋಧನೆಗೆ ಮೂಲ ಆಕರಗಳಾಗಿದ್ದು, ಸಂಶೋಧನೆಯಲ್ಲಿ ಲಕ್ಷ್ಮಮ್ಮ ಅವರ ರಾಜಕೀಯ ವಿಚಾರಗಳ ಬಗ್ಗೆ ಸಮಗ್ರವಾದ ಮಾಹಿತಿಯನ್ನು ಬಳಸಿಕೊಳ್ಳಲಾಗಿದ್ದು, ಅವುಗಳು

ಎಂ.ಆರ್. ಲಕ್ಷಮ್ಮ ಓರ್ವ ಪ್ರಬುದ್ಧ ರಾಜಕಾರಣಿ ಎಂಬುದನ್ನು ಸಾಬೀತುಪಡಿಸುತ್ತವೆ. ಇಷ್ಟೇ ಅಲ್ಲದೆ ಸಂಶೋಧನೆಗೆ ಪೂರಕವಾಗಿ ಮಹಿಳಾ ಚಿಂತನೆಗೆ ಸಂಬಂಧಿಸಿದ, ಸ್ತ್ರೀವಾದದ ಬಗೆಗಿನ ಲೇಖನಗಳನ್ನು ಒಳಗೊಂಡ ಅನೇಕ ಪೂರಕ ಸಾಹಿತ್ಯಾಧಾರಗಳನ್ನು ಪರಾಮರ್ಶಿಸಿ ಸಂಶೋಧನೆಯಲ್ಲಿ ಅಳವಡಿಸಿಕೊಳ್ಳಲಾಗಿದೆ.

### ೧.೪ ಅಧ್ಯಯನ ವಿಷಯದ ವ್ಯಾಪ್ತಿ ಹಾಗೂ ಮಿತಿಗಳು

ಎಂ.ಆರ್. ಲಕ್ಷಮ್ಮನವರ ಬಾಲ್ಯಜೀವನ, ವಿದ್ಯಾಭ್ಯಾಸ, ವೈವಾಹಿಕಜೀವನ, ಪ್ರಾರಂಭದ ವೃತ್ತಿಜೀವನ, ಸಮಾಜಸುಧಾರಕಿಯಾಗಿ ಅವರು ರೂಪುಗೊಂಡಿದ್ದು ಹಾಗೂ ವಯಸ್ಕರ ಶಿಕ್ಷಣ ಸಮಿತಿಯ 'ಬೆಳಕು' ಪತ್ರಿಕೆಯ ಸಂಪಾದಕಿಯಾಗಿ, ರಾಜಕಾರಣಿಯಾಗಿ, ಸಮಾಜ ಸುಧಾರಕಿಯಾಗಿ ಅವರು ನಿರ್ವಹಿಸಿದ ಕಾರ್ಯಗಳ ವಿಶ್ಲೇಷಣೆಯೊಂದಿಗೆ ಅವರು ಇಹಲೋಕ ತ್ಯಜಿಸುವವರೆಗೆ ಸಂಶೋಧನಾ ವ್ಯಾಪ್ತಿಯನ್ನು ಅಳವಡಿಸಿಕೊಳ್ಳಲಾಗಿದೆ. ಅವರ ಕಾರ್ಯಕ್ಷೇತ್ರಗಳ ಬಗ್ಗೆ ಅಧ್ಯಯನ ಮಾಡಲಾಗಿದ್ದು, ವಿವರವಾದ ಮಾಹಿತಿಯನ್ನು ಚಿಂತನೆಯನ್ನು ಈ ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ.

### ೧.೫ ಅಧ್ಯಯನದ ವಿಧಿ–ವಿಧಾನ

ಎಂ.ಆರ್. ಲಕ್ಷಮ್ಮನವರ ವ್ಯಕ್ತಿ ಚರಿತ್ರೆಯ ಸಂಶೋಧನಾ ವಿಷಯವನ್ನು ಇತಿಹಾಸ ಸಂಶೋಧನಾ ಮಾರ್ಗದ ಚೌಕಟ್ಟಿಗೆ ಒಳಪಡಿಸಲಾಗಿದೆ. ಈ ಅಧ್ಯಯನದಲ್ಲಿ ಚಾರಿತ್ರಿಕ ಸಂಶೋಧನಾ ವಿಧಾನಗಳನ್ನು ಅಳವಡಿಸಿಕೊಳ್ಳಲಾಗಿದ್ದು, ಅಧ್ಯಯನ ವಿಷಯಕ್ಕೆ ಸಂಬಂಧಿಸಿದ ದಾಖಲೆಗಳನ್ನು ಪರಾಮರ್ಶಿಸಿ, ಮಾಹಿತಿ ಸಂಗ್ರಹಿಸಿ ಅವುಗಳನ್ನು ಕಾಲಾನುಕ್ರಮಕ್ಕನು–ಗುಣವಾಗಿ ಜೋಡಿಸಿ ವಿಮರ್ಶಿಸಿ, ವಿಶ್ಲೇಷಣಾ ಮಾರ್ಗದಲ್ಲಿ ನಿರೂಪಿಸಲಾಗಿದೆ. ಬಾಹ್ಯ ಮತ್ತು ಆಂತರಿಕ ವಿಮರ್ಶಾತ್ಮಕ ತತ್ವಗಳನ್ನು ಅಳವಡಿಸಿಕೊಂಡು ಅಧ್ಯಯನ ಮಾಡಲಾಗಿದೆ. ಸಮಕಾಲೀನ ಪತ್ರಿಕೋದ್ಯಮಿಗಳ ಬಗ್ಗೆ, ರಾಜಕಾರಣಿಗಳ ಬಗ್ಗೆ, ಸಮಾಜಸುಧಾರಕರ ಬಗ್ಗೆ, ಪೂರಕವಾಗಿ ಅಧ್ಯಯನ ಮಾಡಿ ತೌಲನಿಕ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಲಕ್ಷಮ್ಮ ಅವರ ಸಮಗ್ರ ವ್ಯಕ್ತಿತ್ವವನ್ನು ಕಟ್ಟಿಕೊಡಲು ಪ್ರಾಥಮಿಕ ಮತ್ತು ಆನುಷಂಗಿಕ ಆಧಾರಗಳ ಜೊತೆಗೆ ಪೂರಕ ಸಾಹಿತ್ಯ ಆಧಾರಗಳನ್ನು ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ. ಮೈಸೂರಿನ ವಿಭಾಗೀಯ ಪತ್ರಾಗಾರ ಇಲಾಖೆಯಲ್ಲಿ ಲಕ್ಷಮ್ಮನವರ ಸ್ವವಿವರ, ಸೆರೆಮನೆ ದಿನಚರಿ, ನ್ಯಾಯವಿಧಾಯಕ ಸಭೆಯ ನಡಾವಳಿಗಳು, ವಯಸ್ಕರ ಶಿಕ್ಷಣಕ್ಕೆ ಸಂಬಂಧಿಸಿದಂತೆ ಮೈಸೂರು ಆಡಳಿತಾತ್ಮಕ ವರದಿಗಳು, ಪಬ್ಲಿಕ್ ಇನ್‌ಸ್ಟ್ರಕ್ಷನ್ ವರದಿಗಳು, ಮಹಾರಾಜರ ಆದೇಶಗಳು, ಸಾಧ್ವಿ ಪತ್ರಿಕೆಗಳನ್ನು ಸಂಗ್ರಹಿಸಿ ಪರಾಮರ್ಶಿಸಲಾಗಿದೆ. ವಯಸ್ಕರ ಶಿಕ್ಷಣ ಸಮಿತಿಗೆ ಭೇಟಿ ನೀಡಿ ಲಕ್ಷಮ್ಮನವರ ಸಂಪಾದಕತ್ವದಲ್ಲಿನ ಬೆಳಕು ಪತ್ರಿಕೆ (೧೯೪೫ ರಿಂದ ೧೯೪೭ರ ವರೆಗೆ)ಯನ್ನು ಪರಾಮರ್ಶಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಬೆಂಗಳೂರಿನಲ್ಲಿರುವ ವಿಧಾನಸೌಧದ

ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯಿಂದ ವಿಧಾನ ಪರಿಷತ್ತಿನಲ್ಲಿ ಲಕ್ಷಮ್ಮ ಅವರು ಮಾಡಿದ ಭಾಷಣಗಳು, ಚರ್ಚೆಗಳ ನಡಾವಳಿಗಳು, ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕರ್ನಾಟಕ ಏಕೀಕರಣಕ್ಕೆ ಸಂಬಂಧಿಸಿದ ದಾಖಲೆಗಳನ್ನು ಬಳಸಿಕೊಳ್ಳಲಾಗಿದೆ. ಸೋದರಿ ಪತ್ರಿಕೆಯ ಸಂಚಿಕೆಗಳನ್ನು (೧೯೫೦ ರಿಂದ ೧೯೫೭ರವರೆಗೆ) ಮತ್ತು ಛಾಯಾಚಿತ್ರಗಳನ್ನು ಅಧ್ಯಯನದಲ್ಲಿ ಪ್ರಾಥಮಿಕ ಆಕರವಾಗಿ ಬಳಸಿಕೊಳ್ಳಲಾಗಿದೆ. ಗ್ರಾಹಕರ ಮಂಡಳಿಗೆ ಭೇಟಿ ನೀಡಿ "ಬಳಕೆದಾರ" ಪತ್ರಿಕೆಯನ್ನು ಸಂಗ್ರಹಿಸಲಾಗಿದೆ. ಮೈಸೂರು ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರಿಂದ ಮೈಸೂರು ಚಲೋ ಚಳವಳಿಯ ಬಗ್ಗೆ ಮಾಹಿತಿ ಪಡೆಯಲಾಗಿದೆ. ಮೈಸೂರು ವಿಶ್ವವಿದ್ಯಾಲಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಇಲ್ಲಿನ ಗ್ರಂಥಾಲಯಗಳಲ್ಲಿ ಮಹಿಳಾ ಅಧ್ಯಯನಕ್ಕೆ ಸಂಬಂಧಿಸಿದ ಕೃತಿಗಳನ್ನು ಪರಾಮರ್ಶಿಸಲಾಗಿದೆ. ರಾಜ್ಯ ಸಂಪನ್ಮೂಲ ಕೇಂದ್ರ ಮೈಸೂರು ಇಲ್ಲಿ ವಯಸ್ಕರ ಶಿಕ್ಷಣಕ್ಕೆ ಸಂಬಂಧಪಟ್ಟ ಮಾಹಿತಿಯನ್ನು ಹಾಗೂ 'ಬೆಳಕು' ಪತ್ರಿಕೆಯ ಬಗ್ಗೆ ಮಾಹಿತಿ ಪಡೆಯಲಾಗಿದೆ. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ, ಕರ್ನಾಟಕ ಸಂಘ, ಮಂಡ್ಯ ಇಲ್ಲಿನ ಗ್ರಂಥಾಲಯದಲ್ಲಿ ಪೂರಕ ಸಾಹಿತ್ಯಾಧಾರಗಳನ್ನು ಪರಿಶೀಲಿಸಲಾಗಿದೆ. ಸಂಗ್ರಹಿಸಿರುವ ಮಾಹಿತಿಗಳನ್ನು ವಿಶ್ಲೇಷಿಸಿ, ಹೊಗಳಿಕೆ ಮತ್ತು ತೆಗಳಿಕೆಗಳೆರಡನ್ನು ಸತ್ಯದ ಒರೆಗಲ್ಲಿಗೆ ಹಚ್ಚಿ ಸತ್ಯಾಂಶವನ್ನು ಪರಾಮರ್ಶಿಸಲಾಗಿದೆ. ಲಕ್ಷಮ್ಮ ಅವರ ಮಹಿಳಾಪರ ಚಿಂತನೆಗಳನ್ನು, ಸಮಾಜಮುಖಿ ವಿಚಾರಧಾರೆಗಳನ್ನು, ಪ್ರಗತಿಪರ ಚಿಂತನೆಗಳನ್ನು ಈ ಸಂಶೋಧನೆಯಲ್ಲಿ ದಾಖಲಿಸಲಾಗಿದೆ.

### ೧.೬ ಅಧ್ಯಯನದ ಸ್ವರೂಪ

ಅಧ್ಯಯನ ದೃಷ್ಟಿಯಿಂದ ಸಂಶೋಧನಾ ಮಹಾಪ್ರಬಂಧವನ್ನು ೮ ಅಧ್ಯಾಯಗಳಾಗಿ ವರ್ಗೀಕರಣ ಮಾಡಲಾಗಿದೆ.

**ಅಧ್ಯಾಯ ಒಂದು, ಪ್ರಸ್ತಾವನೆ ರೂಪದಲ್ಲಿದ್ದು,** ಅಧ್ಯಯನದ ಉದ್ದೇಶಗಳನ್ನು ವಿವರಿಸಲಾಗಿದೆ. ತರುವಾಯ ಅಧ್ಯಯನದ ವ್ಯಾಪ್ತಿ, ಅಧ್ಯಯನದಲ್ಲಿ ಅನುಸರಿಸಿರುವ ಸಂಶೋಧನಾ ವಿಧಾನ ಹಾಗೂ ಮಹತ್ವವನ್ನು ವಿಶ್ಲೇಷಿಸಲಾಗಿದೆ. ನಂತರ ಅಧ್ಯಯನದ ಸಮೀಕ್ಷೆಯ ವಿವರಣೆ ನೀಡಲಾಗಿದೆ.

**ಅಧ್ಯಾಯ ಎರಡು, ಎಂ.ಆರ್. ಲಕ್ಷಮ್ಮ : ಪರಿಚಯ ಮತ್ತು ಕಾರ್ಯಕ್ಷೇತ್ರ :** ಈ ಅಧ್ಯಾಯದಲ್ಲಿ ಲಕ್ಷಮ್ಮ ಅವರ ಬಾಲ್ಯ, ವಿದ್ಯಾಭ್ಯಾಸ ಮತ್ತು ವೈವಾಹಿಕ ಜೀವನ, ವೃತ್ತಿ ಜೀವನದ ಬಗ್ಗೆ, ಅವರು ಯಾವ ಯಾವ ಕಾರ್ಯಕ್ಷೇತ್ರದಲ್ಲಿ ತೊಡಗಿಕೊಂಡಿದ್ದರೆಂಬುದರ ಸಂಕ್ಷಿಪ್ತ ವಿವರಣೆಯನ್ನು ನೀಡಲಾಗಿದೆ.

**ಅಧ್ಯಾಯ ಮೂರು, ಎಂ.ಆರ್. ಲಕ್ಷಮ್ಮ ಮತ್ತು ಪತ್ರಿಕೋದ್ಯಮ :** ಈ ಅಧ್ಯಾಯದಲ್ಲಿ ಎಂ.ಆರ್. ಲಕ್ಷಮ್ಮ ವಯಸ್ಕರ ಶಿಕ್ಷಣ ಸಮಿತಿಯ ವಾರಪತ್ರಿಕೆ 'ಬೆಳಕು' ವಿನ ಸಂಪಾದಕಿಯಾಗಿ ಮೂರು

ವರ್ಷಗಳ ಕಾಲ ಕಾರ್ಯನಿರ್ವಹಿಸಿದ ಬಗ್ಗೆ ಮತ್ತು ಮಹಿಳೆಯರ ಅಭ್ಯುದಯಕ್ಕಾಗಿ ಅವರು ಹೊರಡಿಸಿದ 'ಸೋದರಿ' ಪತ್ರಿಕೆಯ ಬಗ್ಗೆ ವಿವರವಾಗಿ ತಿಳಿಸಲಾಗಿದೆ.

**ಅಧ್ಯಾಯ ನಾಲ್ಕು, ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಮತ್ತು ಏಕೀಕರಣ ಚಳವಳಿಯಲ್ಲಿ ಎಂ.ಆರ್. ಲಕ್ಷಮ್ಮ** : ಈ ಅಧ್ಯಾಯದಲ್ಲಿ ಮೈಸೂರು ಕಾಂಗ್ರೆಸ್ ಪಕ್ಷದ ಉದಯ, ಎಂ.ಆರ್. ಲಕ್ಷಮ್ಮನವರ ಆಕಸ್ಮಿಕ ರಾಜಕೀಯ ರಂಗದ ಪ್ರವೇಶ, ಮೈಸೂರು ಚಲೋ ಚಳವಳಿಯಲ್ಲಿ ಭಾಗವಹಿಸಿ ಸೆರೆಮನೆ ವಾಸಿಯಾದ ಅವರು ಸೆರೆಮನೆಯಲ್ಲಿ ಬರೆದ ದಿನಚರಿಯ ಬಗ್ಗೆ ವಿವರಿಸಲಾಗಿದೆ. ಎಂ.ಆರ್. ಲಕ್ಷಮ್ಮ ಅವರು ಕರ್ನಾಟಕ ಏಕೀಕರಣ ಚಳವಳಿಯಲ್ಲಿ ಭಾಗವಹಿಸಿದ್ದ ಬಗ್ಗೆ ಸ್ವಾತಂತ್ರ್ಯ ಪೂರ್ವದಲ್ಲಿಯೇ ಏಕೀಕರಣ ಪರವಾದ ನಿಲುವುಗಳನ್ನು ಬೆಳಕು ಪತ್ರಿಕೆಯಲ್ಲಿ ವ್ಯಕ್ತಪಡಿಸಿದ ರೀತಿ, ಸೋದರಿ ಪತ್ರಿಕೆಯಲ್ಲಿರುವ ಏಕೀಕರಣದ ಚಿಂತನೆಗಳನ್ನು ವಿಶ್ಲೇಷಿಸಲಾಗಿದೆ.

**ಅಧ್ಯಾಯ ಐದು, ರಾಜಕೀಯ ಕ್ಷೇತ್ರದಲ್ಲಿ ಎಂ.ಆರ್. ಲಕ್ಷಮ್ಮ**: ಈ ಅಧ್ಯಾಯದಲ್ಲಿ ನ್ಯಾಯವಿಧಾಯಕ ಸಭೆಯ ಸದಸ್ಯೆಯಾಗಿ ಅವರು ವ್ಯಕ್ತಪಡಿಸಿದ ಅಭಿಪ್ರಾಯಗಳು ಮತ್ತು ಚಿಂತನೆಗಳನ್ನು ವಿವರಿಸಲಾಗಿದೆ. ಪುರಸಭಾ ಸದಸ್ಯರಾಗಿ ಕಾರ್ಯನಿರ್ವಹಿಸಿದ ಲಕ್ಷಮ್ಮ ಹದಿನೆಂಟು ವರ್ಷಗಳ ವಿಧಾನ ಪರಿಷತ್ತಿನ ಸದಸ್ಯರಾಗಿ ಕಾರ್ಯನಿರ್ವಹಿಸಿದ ಅವರು ಸಮಾಜ ಸುಧಾರಣೆ, ಮಹಿಳಾ ಅಭಿವೃದ್ಧಿ ಮುಂತಾದ ವಿಷಯಗಳ ಬಗ್ಗೆ ವ್ಯಕ್ತಪಡಿಸಿದ ನಿಲುವುಗಳು, ಚಿಂತನೆಗಳು ಮತ್ತು ವಿಚಾರಧಾರೆಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಅಧ್ಯಾಯ ಆರು, ಎಂ.ಆರ್. ಲಕ್ಷಮ್ಮ ಅವರ ರಚನಾತ್ಮಕ ಕಾರ್ಯಗಳು** : ಈ ಅಧ್ಯಾಯದಲ್ಲಿ ಲಕ್ಷಮ್ಮ ಅವರು ಸ್ಥಾಪಿಸಿದ ಮಹಿಳಾ ಮಂಡಲಿಗಳ ಬಗ್ಗೆ ಅದರ ಮೂಲಕ ಅವರು ಸಮಾಜ ಸುಧಾರಣೆಯಲ್ಲಿ ತೊಡಗಿಕೊಂಡ ಬಗ್ಗೆ, ಮೈಸೂರು ರಾಜ್ಯದ ಸಮಾಜ ಕಲ್ಯಾಣ ಮಂಡಲಿಯ ಅಧ್ಯಕ್ಷೆಯಾಗಿ ಎಂ.ಆರ್. ಲಕ್ಷಮ್ಮ ಕಾರ್ಯನಿರ್ವಹಿಸಿದ ರೀತಿ ಇತರ ಸಂಘಟನೆಗಳಲ್ಲಿ ತೊಡಗಿಸಿಕೊಂಡ ಬಗ್ಗೆ ವಿವರಣೆ ನೀಡಲಾಗಿದೆ. ಗಾಂಧೀಜಿಯವರ ಪ್ರಭಾವಕ್ಕೆ ಒಳಗಾಗಿ ರಚನಾತ್ಮಕ ಕಾರ್ಯಗಳನ್ನು ಕೈಗೊಂಡ ಬಗ್ಗೆ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಅಧ್ಯಾಯ ಏಳು, ಎಂ.ಆರ್. ಲಕ್ಷಮ್ಮ ಅವರ ಚಿಂತನೆ ಮತ್ತು ವಿಚಾರಧಾರೆಗಳು** : ಈ ಅಧ್ಯಾಯದಲ್ಲಿ 'ಬೆಳಕು' ಮತ್ತು 'ಸೋದರಿ' ಪತ್ರಿಕೆಯಲ್ಲಿ ಪ್ರಕಟವಾದ ಮಹಿಳಾಪರ ಚಿಂತನೆ, ಸಮಾಜಮುಖಿ ಚಿಂತನೆ, ಪ್ರಗತಿಪರ ವಿಚಾರಧಾರೆಗಳನ್ನು ವಿಶ್ಲೇಷಿಸಲಾಗಿದೆ.

**ಅಧ್ಯಾಯ ಎಂಟು, ಉಪಸಂಹಾರ** : ಈ ಅಧ್ಯಾಯದಲ್ಲಿ ಪ್ರಸ್ತುತ ಪ್ರೌಢ ಪ್ರಬಂಧದ ಉಪಸಂಹಾರ ಹಾಗೂ ಫಲಿತಗಳ ವಿವರಣೆಗಳನ್ನು ನೀಡಲಾಗಿದೆ. ಕೊನೆಯದಾಗಿ ಗ್ರಂಥಸೂಚಿಗಳನ್ನು ಛಾಯಾಚಿತ್ರಗಳನ್ನು ಅನುಬಂಧಗಳನ್ನು ಅಳವಡಿಸಲಾಗಿದೆ.

ಇದುವರೆಗೆ ಎಂ.ಆರ್. ಲಕ್ಷಮ್ಮ ಅವರ ಕಾರ್ಯಕ್ಷೇತ್ರದ ಮೇಲೆ ಬೆಳಕನ್ನು ಚೆಲ್ಲುವ ಮತ್ತು ವ್ಯಕ್ತಿತ್ವವನ್ನು ದಾಖಲಿಸುವ ಯಾವುದೇ ಸ್ವತಂತ್ರ ಕೃತಿ ರಚನೆಯಾಗಿಲ್ಲದಿರುವುದು ಕಂಡುಬರುತ್ತದೆ. ಈ ಉದ್ದೇಶದಿಂದ ಲಕ್ಷಮ್ಮ ಅವರ ವ್ಯಕ್ತಿತ್ವ ಮತ್ತು ಚಿಂತನೆಗಳನ್ನು ದಾಖಲಿಸುವ ನಿಟ್ಟಿನಲ್ಲಿ ಅನೇಕ ಕೃತಿಗಳನ್ನು ಜೊತೆಗೆ ಸ್ವಾತಂತ್ರ್ಯ ಚಳವಳಿ, ಏಕೀಕರಣ ಚಳವಳಿ ಕುರಿತಾಗಿ ಪ್ರಕಟವಾದ ಕೃತಿಗಳನ್ನು, ಲೇಖನಗಳನ್ನು, ಅಪ್ರಕಟಿತ ದಾಖಲೆಗಳನ್ನು ಗಮನಿಸಲಾಗಿದೆ. ಆದರೆ ಅವುಗಳಲ್ಲಿ ಅಂಗ್ರಪಂಕ್ತಿ ನಾಯಕರ ಕುರಿತು ದಾಖಲಾಗಿದ್ದು, ಎಂ.ಆರ್.ಲಕ್ಷಮ್ಮನವರನ್ನು ಕುರಿತು, ಅವರ ಚಿಂತನೆಗಳನ್ನು, ವಿಚಾರಧಾರೆಗಳನ್ನು ಸಂಪೂರ್ಣ ವ್ಯಕ್ತಿತ್ವದ ಬಗ್ಗೆ ಉಲ್ಲೇಖಿಸಿರುವುದಿಲ್ಲ. ಆದ್ದರಿಂದ ಆನುಷಂಗಿಕ ಆಕರಗಳೊಂದಿಗೆ ಪ್ರಾಥಮಿಕ ಆಕರಗಳನ್ನು ಆಧಾರವಾಗಿಟ್ಟುಕೊಂಡು ಅವರ ವ್ಯಕ್ತಿತ್ವವನ್ನು ಅನಾವರಣಗೊಳಿಸಿ ಅವರ ಚಿಂತನೆಗಳ ಬಗ್ಗೆ ಸಮಗ್ರ ಚಿತ್ರಣವನ್ನು ಮಹಿಳಾ ಚಿಂತನಾ ನೆಲೆಗಳಲ್ಲಿ ಎಂ.ಆರ್. ಲಕ್ಷಮ್ಮ ಎನ್ನುವ ಶೀರ್ಷಿಕೆಯ ಅಡಿಯಲ್ಲಿ ದಾಖಲಿಸಲಾಗಿದೆ. ಈ ಪ್ರಬಂಧದಲ್ಲಿ ಅವರ ಕಾರ್ಯಕ್ಷೇತ್ರ ವ್ಯಕ್ತಿತ್ವ ಚಿಂತನೆಗಳು ಹಾಗೂ ಅವರ ವಿಚಾರಧಾರೆಗಳ ಬಗ್ಗೆ ಬೆಳಕು ಚೆಲ್ಲುವ ಪ್ರಾಮಾಣಿಕ ಪ್ರಯತ್ನವನ್ನು ಸಂಶೋಧನಾ ಹಿನ್ನೆಲೆಯಲ್ಲಿ ಮಾಡಲಾಗಿದೆ.

# ಅಧ್ಯಾಯ : ಎರಡು

# ಎಂ.ಆರ್. ಲಕ್ಷಮ್ಮ : ಪರಿಚಯ ಮತ್ತು ಕಾರ್ಯಕ್ಷೇತ್ರ

ಬಹುಮುಖ ವ್ಯಕ್ತಿತ್ವವುಳ್ಳ ಎಂ.ಆರ್. ಲಕ್ಷಮ್ಮ ಮಾಡದ ಕೆಲಸವಿಲ್ಲ. ಈ ಮಾತು ಕೇವಲ ಹೊಗಳಿಕೆಯ ಮಾತಲ್ಲ. ಹೆಣ್ಣೆಂದರೆ ಮನೆಯ ನಾಲ್ಕು ಗೋಡೆಯ ನಡುವೆ ಮನೆ, ಮದುವೆ, ಮಕ್ಕಳು ಎಂಬ ಬಂಧನದಲ್ಲಿ ಸಿಲುಕಿ ತನ್ನ ಜೀವನದ ಸಾರ್ಥಕತೆಯನ್ನು ಕಂಡುಕೊಳ್ಳುವ ಸಾಮಾಜಿಕ ವಾತಾವರಣದಲ್ಲಿ ಜನಿಸಿದ ಲಕ್ಷಮ್ಮ ತಮ್ಮ ವ್ಯಕ್ತಿತ್ವವನ್ನು ವಿಶಿಷ್ಟ ರೀತಿಯಲ್ಲಿ ರೂಪಿಸಿಕೊಂಡಿದ್ದಲ್ಲದೆ ಅದರ ಛಾಪನ್ನು ಇಡೀ ಮಹಿಳಾ ಸಮುದಾಯದ ಮೇಲೆ ಮೂಡಿಸಲು ನಡೆಸಿದ ಪ್ರಯತ್ನಗಳು, ಮಾರ್ಗಗಳು ಎಂದಿಗೂ ಅನುಕರಣೀಯ. ಅವರ ದಿಟ್ಟತನ, ಆತ್ಮವಿಶ್ವಾಸ, ಗುರಿಸಾಧನೆಯ ಛಲ, ಪ್ರಯತ್ನ, ಪಡೆದ ಯಶಸ್ಸು, ಎಲ್ಲರನ್ನು ಬೆರಗುಗೊಳಿಸುವಂಥದ್ದು. ಹೆಣ್ಣು ಅಬಲೆಯಲ್ಲ. ಆಕೆಯೂ ಶಕ್ತಳು. ಆಕೆಯೂ ಸಾಹಿತ್ಯ, ಶಿಕ್ಷಣ, ಪತ್ರಿಕೋದ್ಯಮ, ರಾಜಕಾರಣ, ಸಮಾಜಸೇವೆ, ಚಳವಳಿ ಮುಂತಾದ ಅನೇಕ ಕ್ಷೇತ್ರಗಳಲ್ಲಿ ಭಾಗವಹಿಸಿ ಅವುಗಳನ್ನು ದಕ್ಷತೆಯಿಂದ ನಿರ್ವಹಿಸಿ ಅಧಿಕಾರದ ಚುಕ್ಕಾಣಿ ಹಿಡಿದು ಯೋಗ್ಯ ಸೇವೆ ಸಲ್ಲಿಸಬಲ್ಲಳು ಎಂಬುದನ್ನು ತಮ್ಮ ಬದುಕಿನಲ್ಲಿ ತೋರಿಸಿಕೊಟ್ಟವರು ಲಕ್ಷಮ್ಮ.

### ೨.೧. ಬಾಲ್ಯ ಜೀವನ

ಎಂ.ಆರ್. ಲಕ್ಷಮ್ಮ ಅವರ ಪೂರ್ವಿಕರು ಮೂಲತಃ ದಾವಣಗೆರೆ ಜಿಲ್ಲೆಯ ನರಗನಹಳ್ಳಿಯವರಾಗಿದ್ದು, ೧೯೧೩ರ ಮಾರ್ಚ್ ೨೪ ರಂದು ಅವರ ತಾಯಿ ಪದ್ಮಾವತಮ್ಮನವರ ತವರುಮನೆಯಾದ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಐಯ್ಯಗಾರ್ಲಪಳ್ಳಿಯಲ್ಲಿ ಜನಿಸಿದರು. ತಂದೆ ರಾಮರಾವ್ ಮೈಸೂರಿನ ಪುರಾತತ್ವ ಇಲಾಖೆಯಲ್ಲಿ ಉಪನಿರ್ದೇಶಕರು ಹಾಗೂ ಸಂಶೋಧಕರಾಗಿದ್ದರು[೧]. ತಾಯಿ ಪದ್ಮಾವತಮ್ಮ ಗೃಹಿಣಿ ಆಗಿದ್ದರು. ಎಂ.ಆರ್. ಲಕ್ಷಮ್ಮನವರ ಒಡಹುಟ್ಟಿದವರು ಇಬ್ಬರು ಕಿರಿಯ ಸಹೋದರಿಯರು ಹಾಗೂ ಒಬ್ಬ ಕಿರಿಯ ಸಹೋದರ. ಸಹೋದರಿಯರಾದ ಎಂ.ಆರ್. ನಾಗರತ್ನಮ್ಮ, ಎಂ.ಆರ್. ಸೇತುಸಾವಿತ್ರಿ ಹಾಗೂ ಎಂ.ಆರ್. ಅನಂತರಾವ್‌ರವರಿಗೆ ಪ್ರೀತಿಯ ಅಕ್ಕನಾಗಿ ಸಂಪ್ರದಾಯಸ್ಥ ಕುಟುಂಬದಲ್ಲಿ ಜನಿಸಿದ್ದರೂ ಅವರ ತಂದೆಯ ವೈಚಾರಿಕ ಮನೋಭಾವ ಮತ್ತು ಮೈಸೂರು ಸಂಸ್ಥಾನದಲ್ಲಿನ ಚಳವಳಿಗಳು ಮತ್ತು ಬದಲಾವಣೆ ಲಕ್ಷಮ್ಮನವರು ಬಹುಮುಖ ಪ್ರತಿಭೆಯ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಸಾಧ್ಯವಾಯಿತು.

### ೨.೨. ವಿದ್ಯಾಭ್ಯಾಸ ಮತ್ತು ವೈವಾಹಿಕ ಜೀವನ

ಎಂ.ಆರ್. ಲಕ್ಷಮ್ಮನವರು ತಮ್ಮ ವಿದ್ಯಾಭ್ಯಾಸವನ್ನು ಮೈಸೂರಿನಲ್ಲಿ ಪ್ರಾರಂಭಿಸಿದರು. ಪ್ರಾಥಮಿಕ ವಿದ್ಯಾಭ್ಯಾಸವನ್ನು ಮುಗಿಸಿ ಮಾಧ್ಯಮಿಕ ಮೂರನೇ ವರ್ಷದಲ್ಲಿ ವಿದ್ಯಾಭ್ಯಾಸ

ಮಾಡುತ್ತಿರುವಾಗಲೇ ಅವರ ತಂದೆ ಆಗಿನ ಕಾಲದ ಸಂಪ್ರದಾಯದಂತೆ ಲಕ್ಷಮ್ಮನವರಿಗೆ ವಿವಾಹ ಮಾಡುವ ನಿರ್ಧಾರ ಮಾಡಿದರು. ಕೇವಲ ಹನ್ನೊಂದು ವರ್ಷ ವಯಸ್ಸಿನ ಲಕ್ಷಮ್ಮನವರು ವೃತ್ತಿಯಲ್ಲಿ ಇಂಜಿನಿಯರ್ ಆಗಿದ್ದ ಮೈಸೂರಿನ ಎಂ. ನಾರಾಯಣಮೂರ್ತಿ ಅವರೊಡನೆ ಸಪ್ತಪದಿ ತುಳಿದರು. ಲಕ್ಷಮ್ಮನವರಿಗೆ ವಿವಾಹದ ನಂತರವೂ, ಅವರ ತಂದೆಯವರು ಆಕೆಯ ಶಿಕ್ಷಣದ ಬಗೆಗೆ ಕಾಳಜಿ ಹೊಂದಿದ್ದರು. ಇದಕ್ಕೆ ಪೂರಕವಾಗಿ ಲಕ್ಷಮ್ಮನವರ ಪತಿ ಎಂ. ನಾರಾಯಣಮೂರ್ತಿಯವರ ಸಂಪೂರ್ಣ ಸಹಕಾರ, ಉತ್ತೇಜನ ಎಲ್ಲಕ್ಕಿಂತ ಹೆಚ್ಚಾಗಿ ಸ್ವತಃ ಲಕ್ಷಮ್ಮನವರಿಗೆ ಕಲಿಯುವುದರಲ್ಲಿ ಶ್ರದ್ಧೆ ಇದ್ದು ಮುಂದೆ ಉನ್ನತ ಶಿಕ್ಷಣ ಪಡೆಯಲು ಸಾಧ್ಯವಾಯಿತು.

"ಪ್ರತಿಯೊಬ್ಬ ಯಶಸ್ವಿ ಪುರುಷನ ಹಿಂದೆ ಒಬ್ಬ ಮಹಿಳೆ ಇರುತ್ತಾಳೆ" ಎಂಬ ಮಾತು ಎಷ್ಟು ಸತ್ಯವೋ ಹಾಗೆಯೇ ಪ್ರತಿಯೊಬ್ಬ ಯಶಸ್ವಿ ಮಹಿಳೆಯ ಹಿಂದೆ ಒಬ್ಬ ಪುರುಷನೂ ಕೂಡ ಇರುತ್ತಾನೆ ಎಂಬುದು ಅಷ್ಟೇ ಸತ್ಯ. ಲಕ್ಷಮ್ಮನವರ ಪತಿ ಎಂ. ನಾರಾಯಣಮೂರ್ತಿಯವರು ತಮ್ಮ ಪತ್ನಿಗೆ ವಿದ್ಯೆಯಲ್ಲಿ ಇದ್ದ ಆಸಕ್ತಿಯನ್ನು ಗಮನಿಸಿ ಮುಂದೆ ಓದಲು ಪ್ರೋತ್ಸಾಹಿಸಿದರು. ಬುದ್ಧಿವಂತೆ ಆಗಿದ್ದ ಲಕ್ಷಮ್ಮ ಶ್ರದ್ಧೆಯಿಂದ ತಮ್ಮ ಓದನ್ನು ಮುಂದುವರಿಸಿ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಮುಂದೆ ಮೆಟ್ರಿಕ್ ಶಿಕ್ಷಣವನ್ನು ಪೂರೈಸಿದ ಹೆಣ್ಣುಮಕ್ಕಳಲ್ಲಿ ಹೆಚ್ಚಿನ ವಿದ್ಯಾಭ್ಯಾಸ ಮಾಡುತ್ತಿದ್ದವರ ಸಂಖ್ಯೆ ಅತಿ ವಿರಳವಾಗಿದ್ದು, ಅವರ ತಂದೆ ಹಲವಾರು ಜನರ ಸಲಹೆಯನ್ನು ಪಡೆದು ತಮ್ಮ ಮಗಳನ್ನು ಕಾಲೇಜು ಶಿಕ್ಷಣಕ್ಕೆ ಸೇರಿಸಿದರು. ಮೈಸೂರಿನ ಮಹಾರಾಣಿ ಕಾಲೇಜಿಗೆ ಇಂಟರ್‌ಮೀಡಿಯೇಟ್‌ಗೆ ಸೇರಿ ಕಾಲೇಜು ಶಿಕ್ಷಣವನ್ನು ಮುಂದುವರಿಸಿದ ಲಕ್ಷಮ್ಮ ಇಂಟರ್‌ಮೀಡಿಯೇಟ್‌ನ ಕಲಾವಿಭಾಗದಲ್ಲಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಮೊದಲ ರ್‍ಯಾಂಕ್ ಪಡೆದರು.[೨] ಕಾಲೇಜು ಶಿಕ್ಷಣಕ್ಕೆ ಸೇರುವ ವಿದ್ಯಾರ್ಥಿನಿಯರಿಗೆ ಮೈಸೂರು ಮಹಾರಾಜರು ಪೆಟ್ಟಿಗೆಗಾಡಿಯ ವ್ಯವಸ್ಥೆಯನ್ನು ಮಾಡಿದ್ದು, ಲಕ್ಷಮ್ಮನವರು ಎತ್ತುಗಳಿಂದ ಎಳೆಯಲ್ಪಡುತ್ತಿದ್ದ ಪೆಟ್ಟಿಗೆಗಾಡಿಯಲ್ಲಿ ಕಾಲೇಜಿಗೆ ಹೋಗುತ್ತಿದ್ದರು.[೩] ತಮ್ಮ ಪದವಿ ಶಿಕ್ಷಣವನ್ನು ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಪೂರೈಸಿದರು. ಅಂತಿಮ ಪದವಿ ಪರೀಕ್ಷೆಯ ಅವಧಿಯಲ್ಲಿ ಲಕ್ಷಮ್ಮನವರು ೨೦ ದಿನಗಳ ಮಗುವಿನ ತಾಯಿಯಾಗಿದ್ದು, ಬಾಣಂತಿ ಆಗಿದ್ದರೂ ಕೂಡ ಪರೀಕ್ಷೆಯನ್ನು ಬರೆದಿದ್ದರು. ಇದು ಅವರ ಆತ್ಮವಿಶ್ವಾಸ, ವಿದ್ಯೆ ಬಗ್ಗೆ ಅವರಿಗಿದ್ದ ಆಸಕ್ತಿ, ಹಿಡಿದ ಗುರಿಯನ್ನು ಸಾಧಿಸುವ ಛಲವನ್ನು ತೋರಿಸುತ್ತದೆ ಹಾಗೂ ಇದೇ ಬದ್ಧತೆಯನ್ನು ಜೀವನದ ಉದ್ದಕ್ಕೂ ಪಾಲಿಸಿದರು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇತಿಹಾಸ ಮತ್ತು ಪುರಾತತ್ವಶಾಸ್ತ್ರ ವಿಭಾಗದ ವಿದ್ಯಾರ್ಥಿನಿಯಾಗಿ ಸೇರಿಕೊಂಡು, ತಮ್ಮ ಸ್ನಾತಕೋತ್ತರ ಪದವಿಯನ್ನು ಪಡೆಯುವಲ್ಲಿ ಸಫಲರಾದರು.[೪] ಎಂ.ಎ. ಪದವಿಯನ್ನು ಪ್ರಥಮ ದರ್ಜೆಯೊಡನೆ ಚಿನ್ನದ ಪದಕದೊಂದಿಗೆ ಪಡೆದದ್ದು ಒಂದು ಮಹಾನ್

ಸಾಧನೆಯೇ ಸರಿ. ಸಾಧಿಸುವ ಛಲ ಉಳ್ಳವರಿಗೆ ಯಾವುದೇ ಅಡೆತಡೆಗಳಿದ್ದರೂ ಅದನ್ನು ಸಾಧಿಸುತ್ತಾರೆಂಬುದಕ್ಕೆ ಇದು ಒಂದು ನಿದರ್ಶನವಾಗಿದೆ.

**೨.೩ ವೃತ್ತಿಜೀವನ**

ಎಂ.ಆರ್. ಲಕ್ಷಮ್ಮನವರು ಏಕಕಾಲದಲ್ಲಿಯೇ ಹಲವಾರು ಕ್ಷೇತ್ರಗಳಲ್ಲಿ ಕಾರ್ಯ ನಿರ್ವಹಿಸಿ ಅವರ ಬಹುಮುಖ ಪ್ರತಿಭೆಯನ್ನು ಅನಾವರಣಗೊಳಿಸಿದ ರೀತಿ ಅಚ್ಚರಿ ಪಡುವಂತಹದ್ದು. ಇಂಗ್ಲಿಷ್‌ನ ಗಾದೆ "ಎಲ್ಲ ಕ್ಷೇತ್ರವನ್ನು ತಿಳಿದಿರು. ಆದರೆ ಒಂದು ಕ್ಷೇತ್ರದಲ್ಲಿ ಪರಿಣಿತನಾಗು" ಎಂಬುದು ಲಕ್ಷಮ್ಮನವರ ವಿಷಯದಲ್ಲಿ ಸುಳ್ಳಾಗಿದೆ. ಹಲವಾರು ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಅದರಲ್ಲಿ ಪರಿಣಿತಿಯನ್ನು ಹೊಂದಿದ್ದು ತಮ್ಮ ಸೇವಾಕ್ಷೇತ್ರದ ವ್ಯಾಪ್ತಿಯನ್ನು ವಿಶಾಲವಾಗಿ ವಿಸ್ತರಿಸಿಕೊಂಡ ಲಕ್ಷಮ್ಮ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದಾಗಲೇ ಸಾಹಿತ್ಯ, ಜಾನಪದ, ಸಮಾಜಸೇವೆಗಳಲ್ಲಿ ತಮ್ಮನ್ನು ತೊಡಗಿಸಿ ಕೊಂಡಿದ್ದರು. ಸಾಧ್ವಿ ಪತ್ರಿಕೆ ಮತ್ತು ಪ್ರಬುದ್ಧ ಕರ್ನಾಟಕಕ್ಕೆ ಕವನಗಳನ್ನು, ಲೇಖನಗಳನ್ನು ಕಳುಹಿಸುತ್ತಿದ್ದು ಅವುಗಳು ಪ್ರಕಟವಾಗಿದ್ದವು. ಹಾಗೆಯೇ ಇತಿಹಾಸ ವಿದ್ಯಾರ್ಥಿನಿಯಾಗಿದ್ದ ಅವರು ಜಾನಪದ ಕ್ಷೇತ್ರದ ಕಡೆಗೆ ಒಲವನ್ನಿಟ್ಟುಕೊಂಡಿದ್ದರು. ಜಾನಪದ ಕಥೆಗಳನ್ನು ಸಂಗ್ರಹಿಸುವುದು ಲಕ್ಷಮ್ಮನವರ ಹವ್ಯಾಸವಾಗಿತ್ತು.

ಇತಿಹಾಸ ಮತ್ತು ಪುರಾತತ್ವಶಾಸ್ತ್ರದ ವಿದ್ಯಾರ್ಥಿನಿಯಾಗಿದ್ದ ಇವರು ಓದು ಮುಗಿದ ನಂತರ ಕೆಲಸಕ್ಕೆ ಸೇರಲು ಪ್ರಯತ್ನಿಸಿದರು. ವಿಶ್ವವಿದ್ಯಾನಿಲಯದ ಪುರಾತತ್ವ ವಿಭಾಗದಲ್ಲಿ ಕೆಲಸಕ್ಕೆ ಸೇರುವ ಇಚ್ಛೆಯನ್ನು ವ್ಯಕ್ತಪಡಿಸಿದಾಗ **"ಮಹಿಳೆಯಾಗಿದ್ದರಿಂದ ವಿಶ್ವವಿದ್ಯಾನಿಲಯದ ಬಾಗಿಲು ನಿಮಗೆ ಮುಚ್ಚಿವೆ"** ಎಂಬ ಮಾತನ್ನು ವಿಭಾಗದ ಪ್ರೊಫೆಸರ್ ಆಗಿದ್ದ ವಿ.ಎಲ್. ಡಿಸೋಜಾರವರು ಹೇಳಿದ್ದಾಗಿ ತಮ್ಮ ಸ್ವವಿವರದಲ್ಲಿ ದಾಖಲಿಸಿರುವ ಲಕ್ಷಮ್ಮನವರು ತಮ್ಮ ಆಸಕ್ತಿಯನ್ನು ಸಾಹಿತ್ಯ ಮತ್ತು ಸಮಾಜ ಕ್ಷೇತ್ರದತ್ತ ಹರಿಸಿದರು. ಉನ್ನತ ವರ್ಗದಲ್ಲಿ ಜನಿಸಿದ್ದರೂ ಮಹಿಳೆಯಾಗಿದ್ದ ಕಾರಣ ಉದ್ಯೋಗವಕಾಶಗಳು ದೊರೆಯದೆ ಅವರು ತಮ್ಮನ್ನು ಮಹಿಳೆಯರ ಏಳಿಗೆಗೆ ಶ್ರಮಿಸಲು ತಮ್ಮನ್ನು ಮೀಸಲಾಗಿಟ್ಟರು. ಒಂದು ವೇಳೆ ಅವರು ವಿಶ್ವವಿದ್ಯಾನಿಲಯಕ್ಕೆ ಕೆಲಸಕ್ಕೆ ಸೇರಿದ್ದರೆ ಅವರ ಸೇವೆ ಶಿಕ್ಷಣ ಕ್ಷೇತ್ರಕ್ಕೆ ಮಾತ್ರ ಮೀಸಲಾಗಿರುತ್ತಿತ್ತು. ಅವರು ಒಬ್ಬ ರಾಜಕಾರಣಿಯಾಗಿ, ಪತ್ರಿಕೋದ್ಯಮಿಯಾಗಿ, ಸಮಾಜ ಸೇವಕಿಯಾಗಿ, ಸ್ತ್ರೀ-ಸುಧಾರಕಿಯಾಗಿ ತಮ್ಮನ್ನು ಅನಾವರಣಗೊಳಿಸಿಕೊಳ್ಳಲು ಸಾಧ್ಯ ಆಗುತ್ತಿರಲಿಲ್ಲ.

ಹಿಂದಿನ ಕಾಲದಲ್ಲಿ ಹೆಣ್ಣುಮಕ್ಕಳನ್ನು ಉನ್ನತ ಶಿಕ್ಷಣಕ್ಕೆ ಕಳುಹಿಸುವುದೇ ಕಷ್ಟವಾಗಿದ್ದ ಹಾಗೂ ಅವರಿಗೆ ಸ್ವಾತಂತ್ರ್ಯ ನೀಡಿ ಸಾರ್ವಜನಿಕ ಸೇವೆಗೆ ಕಳುಹಿಸುವುದಂತೂ ದೂರದ ಮಾತಾಗಿದ್ದ ಕಾಲದಲ್ಲಿ ಸಂಪ್ರದಾಯಸ್ಥ ಮನೆತನದಲ್ಲಿ ಜನಿಸಿದ್ದರೂ, ಲಕ್ಷಮ್ಮ ಅವರ ತಂದೆಯವರು ಮಗಳಿಗೆ ಬೆಂಬಲ ನೀಡುವುದರೊಂದಿಗೆ **"ಕೆಲಸಕ್ಕೆ ಸೇರಿ ಹಣ**

ಸಂಪಾದಿಸುವುದಕ್ಕಿಂತ ನೀನೊಬ್ಬ ಸಮಾಜಸೇವಕಿಯಾಗಬೇಕೆಂಬುದು ನನ್ನಾಸೆ ಮಗಳೇ" ಎಂದು ತಿಳಿಸಿ ಲಕ್ಷಮ್ಮನವರ ಸಮಾಜಸೇವೆಗೆ ಅಡಿಪಾಯವನ್ನು ಹಾಕಿದರು ಮತ್ತು ಅವರನ್ನು ಅಣಿಗೊಳಿಸಿ, ಬೆಳೆಸಿ, ಪೋಷಿಸಿದವರು ಅವರ ಪತಿ ವಿಶಾಲ ಹೃದಯದ ನಾರಾಯಣಮೂರ್ತಿಯವರು.[೫]

### ೨.೪. ಆಕಾಶವಾಣಿ ಮತ್ತು ಸಮಾಜಸೇವೆ

ಎಂ.ಆರ್. ಲಕ್ಷಮ್ಮನವರು ತಮ್ಮ ವಿದ್ಯಾಭ್ಯಾಸ ಮುಗಿದ ನಂತರ ಮೈಸೂರಿನ ಆಕಾಶವಾಣಿಯಲ್ಲಿ ಕೆಲಸಕ್ಕೆ ಸೇರಿಕೊಂಡು ವಿವಿಧ ವಿಭಾಗಗಳಲ್ಲಿ ಕೆಲಸ ಮಾಡಲು ತಮ್ಮನ್ನು ತೊಡಗಿಸಿಕೊಂಡರು. ಸಾಹಿತ್ಯಪ್ರಿಯೆಯಾಗಿದ್ದ ಲಕ್ಷಮ್ಮನವರ ಸಾಹಿತ್ಯಾಸಕ್ತಿ ಹವ್ಯಾಸವಾಗಿ, ಆಕಾಶವಾಣಿಯಲ್ಲಿ ಅನಾವರಣಗೊಂಡಿತು. ಲಕ್ಷಮ್ಮನವರು ರಚಿಸಿದ ಅನೇಕ ನಾಟಕಗಳು ಮೈಸೂರು ಆಕಾಶವಾಣಿಯಲ್ಲಿ ಅಲ್ಲದೇ ಹೈದ್ರಾಬಾದ್ ಮತ್ತು ಮದ್ರಾಸಿನ ಆಕಾಶವಾಣಿಯ ಕನ್ನಡ ವಿಭಾಗದಲ್ಲಿ ಪ್ರಸಾರಗೊಂಡವು.[೬] **"ಕೊಂತಮ್ಮನ ಪದಗಳು"** ಎಂಬ ಜಾನಪದ ಗೀತೆಗಳನ್ನು ಸಂಗ್ರಹಿಸಿ ಅವುಗಳನ್ನು ಪ್ರಕಟಿಸಿ ಅವುಗಳ ಮೇಲೆ ವಿಮರ್ಶೆಯನ್ನು ಬರೆದಿದ್ದಾರೆ. ಜನಸಾಮಾನ್ಯರ ಜೀವನವನ್ನು ಅರಿಯಲು ಸಹಾಯಕವಾಗುವ ಜಾನಪದ ಕ್ಷೇತ್ರವನ್ನು ಇತಿಹಾಸದ ದೃಷ್ಟಿಕೋನದಿಂದ ನೋಡಿ ವಿಮರ್ಶೆಯನ್ನು ರಚಿಸಿದ್ದಾರೆ.

ಲಕ್ಷಮ್ಮನವರಿಗಿದ್ದ ಜಾಣ್ಮೆ, ಮಾತುಗಾರಿಕೆ, ಸೇವಾಮನೋಭಾವ, ಸಾಮಾಜಿಕಪ್ರಜ್ಞೆ, ವಿದ್ಯೆ ಇವೆಲ್ಲದರ ಜೊತೆಗೆ ಅವರ ಹಸನ್ಮುಖ ಮತ್ತು ಸದಾ ಪುಟಿಯುವ ಉತ್ಸಾಹ ಅವರು ಸಮಾಜಸೇವಾ ಕ್ಷೇತ್ರದಲ್ಲಿ ತೊಡಗಿಕೊಳ್ಳಲು ಸಹಕಾರಿಯಾಯಿತು. ಹಲವಾರು ಮಹಿಳಾ ಮಂಡಲಿಗಳನ್ನು ಸ್ಥಾಪಿಸಿದರು. ವನಿತಾಸದನ, ಭಗಿನಿಸೇವಾ ಸಮಾಜ ಮುಂತಾದ ಮಹಿಳಾ ಸಮಾಜಗಳಲ್ಲಿ ಸದಸ್ಯೆಯಾಗಿ, ಅಧ್ಯಕ್ಷೆಯಾಗಿ ಕಾರ್ಯ ನಿರ್ವಹಿಸಿ ಮಹಿಳೆಯರ ಸ್ಥಿತಿಗತಿ ಸುಧಾರಿಸಲು ಅವರನ್ನು ಸಬಲೀಕರಣಗೊಳಿಸಲು ಯತ್ನಿಸಿ ಸಾಫಲ್ಯರಾಗಿದ್ದಾರೆ.

### ೨.೫. ವಯಸ್ಕರ ಶಿಕ್ಷಣ ಸಮಿತಿಯ ವಾರಪತ್ರಿಕೆ ಬೆಳಕುವಿನ ಸಂಪಾದಕಿಯಾಗಿ

ಮೈಸೂರು ಸಂಸ್ಥಾನದಲ್ಲಿ ಶಾಲಾ ಶಿಕ್ಷಣದಿಂದ ವಂಚಿತರಾಗಿರುವ ಅವಿದ್ಯಾವಂತ ಜನರಿಗಾಗಿ ವಯಸ್ಕರ ಶಿಕ್ಷಣ ಪ್ರಾರಂಭವಾಯಿತು. ೧೮೬೮ರಲ್ಲಿ ಹೋಬಳಿ ಶಾಲೆ ಯೋಜನೆಯಲ್ಲಿ ವಯಸ್ಕರ ಶಿಕ್ಷಣದ ಪ್ರಸ್ತಾಪವಿದ್ದು, ಹಗಲಿನ ಅವಧಿಯಲ್ಲಿ ಶಾಲೆಗೆ ಬಂದು ಶಿಕ್ಷಣ ಪಡೆಯಲಾಗದವರಿಗೆ ರಾತ್ರಿ ಶಾಲೆಗಳನ್ನು ಪ್ರಾರಂಭಿಸಲಾಗಿತ್ತು. ೧೮೮೭ರ ಜನವರಿ ತಿಂಗಳಲ್ಲಿ ರಾತ್ರಿ ಶಾಲೆ ಆರಂಭವಾಗುವುದರೊಂದಿಗೆ ಅಧಿಕೃತವಾಗಿ ವಯಸ್ಕರ ಶಿಕ್ಷಣ ಪ್ರಾರಂಭವಾಯಿತು.[೭] ಎಂ. ಶಾಮರಾವ್ ಎಂಬುವರು ಮಹಾರಾಜ ಕಾಲೇಜಿನ ಶಿಕ್ಷಕರು ಇಬ್ಬರು ಮುಸ್ಲಿಂ ವಿದ್ಯಾರ್ಥಿಗಳಿಂದ ರಾತ್ರಿ ಶಾಲೆಯನ್ನು ಪ್ರಾರಂಭಿಸಿದರು. ನಂತರದ ಕಾಲದಲ್ಲಿ

ಮೈಸೂರು ಸರ್ಕಾರವು ಸಹಾಯಧನವನ್ನು ಮಂಜೂರು ಮಾಡಿತು. ೧೯೧೨ರ ನಂತರ ಮೈಸೂರು ಸಂಸ್ಥಾನದಲ್ಲಿ ಶಿಕ್ಷಣದ ಕ್ರಾಂತಿ ಉಂಟಾಯಿತು. ನಂತರದ ದಶಕದಲ್ಲಿ ವಯಸ್ಕರ ಶಿಕ್ಷಣ ಶಾಲೆ ಕ್ಷೀಣಿಸತೊಡಗಿದವು. ಸರ್ಕಾರ ಹೆಚ್ಚಿನ ಪ್ರೋತ್ಸಾಹವನ್ನು ನೀಡಿದ್ದರೂ ವಯಸ್ಕರ ಶಿಕ್ಷಣದ ಪ್ರಮಾಣದಲ್ಲಿ ಇಳಿಕೆ ಉಂಟಾದಾಗ ಮೈಸೂರು ಸರ್ಕಾರದಲ್ಲಿದ್ದ ಕೆಲವು ಉನ್ನತ ಅಧಿಕಾರಿಗಳು ಖಾಸಗಿ ವ್ಯಕ್ತಿಗಳು ಅಕ್ಷರ ಪ್ರಚಾರ ಕಾರ್ಯಕ್ಕೆ ಬೆಂಬಲ ನೀಡಿದರು. ೧೯೪೦ರ ನಂತರದ ಕಾಲದಲ್ಲಿ ಮೈಸೂರು ಸಂಸ್ಥಾನದಲ್ಲಿ ವಯಸ್ಕರ ಶಿಕ್ಷಣ ದೊಡ್ಡ ಇತಿಹಾಸವನ್ನು ನಿರ್ಮಿಸಿತು. ೧೯೪೦ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ವಿದ್ಯಾರ್ಥಿ ಸಂಘದವರು ಮೈಸೂರು ನಗರದ ವಿವಿಧ ಭಾಗಗಳಲ್ಲಿ ಸಾಕ್ಷರತಾ ತರಗತಿಗಳನ್ನು ತೆರೆಯಲು ನಿರ್ಧರಿಸಿದರು. ಹೀಗೆ ವಿಶ್ವವಿದ್ಯಾನಿಲಯದ ಮೇಲ್ವಿಚಾರಣೆಯಲ್ಲಿ ಸಾಕ್ಷರತಾ ಕೆಲಸವನ್ನು ನೆರವೇರಿಸಲು **"ಮೈಸೂರು ನಗರ ಅಕ್ಷರ ಪ್ರಚಾರ ಸಮಿತಿ"**ಯನ್ನು ಸ್ಥಾಪಿಸಿ ವಿಶ್ವವಿದ್ಯಾನಿಲಯದ ಉಪಕುಲಪತಿಗಳೇ ಅಧ್ಯಕ್ಷರಾದರು. ಮೈಸೂರು ಸಂಸ್ಥಾನದ ಅಕ್ಷರ ಪ್ರಚಾರ ಸಮಿತಿಯು ಹೊಸದಾಗಿ ಅಕ್ಷರ ಕಲಿತವರಿಗಾಗಿ ದಿನಾಂಕ ೦೭.೧೧.೧೯೪೨ರ ಶನಿವಾರ **"ಬೆಳಕು"** ಪತ್ರಿಕೆಯನ್ನು ಪ್ರಕಟಿಸಿತು.[೮]

ಲಕ್ಷಮ್ಮನವರು ಪದವಿ ವ್ಯಾಸಂಗ ಮಾಡುತ್ತಿದ್ದಾಗಲೇ ವಿದ್ಯಾರ್ಥಿನಿ ಸ್ವಯಂ ಸೇವಕಿಯಾಗಿ ನಾ. ಕಸ್ತೂರಿ ಮತ್ತಿತರರೊಂದಿಗೆ ಸೇರಿ ಪ್ರೊ. ಈಗಲ್ಟನ್‌ರವರ ನೇತೃತ್ವದಲ್ಲಿ ಮೈಸೂರಿನ ಕೂರ್ಗಳ್ಳಿಯಲ್ಲಿ ಅನಕ್ಷರಸ್ಥರಿಗೆ ಅಕ್ಷರ ಕಲಿಸುವ ಕಾರ್ಯಕ್ರಮದ ಮೂಲಕ ಶಿಕ್ಷಣದ ಅರಿವನ್ನು ಮೂಡಿಸಲು ಪ್ರಾರಂಭಿಸಿದರು. ಲಕ್ಷಮ್ಮನವರ ಸಮಾಜಸೇವಾಸಕ್ತಿ ಇವರನ್ನು ವಯಸ್ಕರ ಶಿಕ್ಷಣ ಸಮಿತಿಯ ಕೆಲಸದಲ್ಲಿ ತೊಡಗಿಕೊಳ್ಳುವಂತೆ ಮಾಡಿತು. ನ. ಭದ್ರಯ್ಯ, ಎಸ್.ಬಿ. ಶ್ರೀನಿವಾಸರಾವ್, ಟಿ. ಕೃಷ್ಣಮೂರ್ತಿ ಮುಂತಾದವರೊಂದಿಗೆ ಕಾರ್ಯ ನಿರ್ವಹಿಸಿದ ಲಕ್ಷಮ್ಮನವರಿಗೆ ಒಂದು ಸದಾವಕಾಶ ಒಲಿದು ಬಂದಿತು. ಇವರು ಆಕಾಶವಾಣಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವಾಗ ಅನೇಕ ನಾಟಕಗಳನ್ನು ಹಾಗೂ ಪತ್ರಿಕೆಗಳಿಗೆ ಲೇಖನಗಳನ್ನು ಬರೆಯುತ್ತಿದ್ದು ಇವರ ಸಮಾಜ ಸೇವೆ ಮತ್ತು ಇವರಿಗಿದ್ದ ಸಾಹಿತ್ಯದ ಪ್ರತಿಭೆಯನ್ನು ಅರಿತು ವಯಸ್ಕರ ಶಿಕ್ಷಣ ಸಮಿತಿಯ ಪದಾಧಿಕಾರಿಗಳು **"ಬೆಳಕು"** ವಾರ ಪತ್ರಿಕೆಯ ಸಂಪಾದಕಿಯಾಗುವ ಹೊಣೆಗಾರಿಕೆಯನ್ನು ನೀಡಿದರು.[೯] ಇದರಿಂದ ಬರುವ ಆರ್ಥಿಕ ಲಾಭಕ್ಕಿಂತ ಸಾಹಿತ್ಯದ ಆಸಕ್ತಿ ಮತ್ತು ಸಮಾಜಸೇವಾಸಕ್ತರಾದ ಲಕ್ಷಮ್ಮನವರು ಸಂಪಾದಕಿಯಾಗಲು ಒಪ್ಪಿಕೊಂಡರು.

ಹೆಣ್ಣುಮಕ್ಕಳಿಗೆ ಪತ್ರಿಕೋದ್ಯಮ ದೂರದ ಬೆಟ್ಟವಾಗಿದ್ದ ಕಾಲದಲ್ಲಿ ಸತತವಾಗಿ ಮೂರು ವರ್ಷಗಳ ಕಾಲ **'ಬೆಳಕು'** ವಾರಪತ್ರಿಕೆಯ ಸಂಪಾದಕಿಯಾಗಿ ಕಾರ್ಯನಿರ್ವಹಿಸಿದರು. ಈ ಮೊದಲೇ ಲಕ್ಷಮ್ಮನವರು **'ಕುಂತಿದೇವಿ'** ಮತ್ತು **'ಮಾರುತಿ'** ಎಂಬ ಎರಡು ಸಣ್ಣ ಕಥೆಗಳನ್ನು

ಬರೆದಿದ್ದು, ಅವುಗಳನ್ನು ಮೈಸೂರು ಸಂಸ್ಥಾನದ ಅಕ್ಷರ ಪ್ರಚಾರ ಸಮಿತಿಯು ವಯಸ್ಕರ ಶಿಕ್ಷಣದ ಪುಸ್ತಕಮಾಲೆಗೆ ಈ ಎರಡು ಪುಸ್ತಕಗಳನ್ನು ಅಂಗೀಕರಿಸಿದ್ದರು. ಹೊಸದಾಗಿ ಅಕ್ಷರವನ್ನು ಕಲಿಯುವವರಿಗೆ ಚಿಕ್ಕ ಚೊಕ್ಕ ಮತ್ತು ಸರಳ ವಾಕ್ಯಗಳಲ್ಲಿ ವಿಚಾರಗಳನ್ನು ತಿಳಿಸುವ, ಅರಿವಿನ ಜ್ಞಾನವನ್ನು ಮೂಡಿಸುವ ಕೆಲಸವನ್ನು ಲಕ್ಷಮ್ಮನವರು ಮಾಡಿದರು. **"ಎಲ್ಲ ದಾನಕ್ಕಿಂತ ಶ್ರೇಷ್ಠವಾದದ್ದು ವಿದ್ಯಾದಾನ"** ಎಂಬುದನ್ನು ಅರಿತು **'ಬೆಳಕು'** ಪತ್ರಿಕೆಯ ಸಂಪಾದಕಿಯಾಗಿ ಅಕ್ಷರ ಜ್ಞಾನವನ್ನು ನೀಡುವುದರಲ್ಲಿ ಮಗ್ನರಾದ ಇವರ ಕಾರ್ಯ ಎಲ್ಲರಿಂದ ಮೆಚ್ಚುಗೆಯನ್ನು ಗಳಿಸಿತು.

### ೨.೬. ರಾಜಕೀಯ ಕ್ಷೇತ್ರ

ಸಮಾಜಸೇವೆ, ಸಾಹಿತ್ಯಸೇವೆ ಮಾಡಿಕೊಂಡಿದ್ದ ಎಂ.ಆರ್. ಲಕ್ಷಮ್ಮನವರು ಆಕಸ್ಮಿಕವಾಗಿ ರಾಜಕೀಯ ರಂಗಕ್ಕೆ ಅಡಿ ಇಟ್ಟರು. ೧೯೪೫ ರಲ್ಲಿ ಮೈಸೂರು ನಗರ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದ ಸಾಹುಕಾರ್ ಚನ್ನಯ್ಯನವರು ಮತ್ತು ಮೈಸೂರು ಪುರಸಭೆಯ ಸದಸ್ಯರು ಮತ್ತು ಕಾಂಗ್ರೆಸ್ ನಾಯಕರಾಗಿದ್ದ ಲಕ್ಷಮ್ಮನವರ ಸಮಾಜ ಸೇವೆಯನ್ನು ಗಮನಿಸಿ ರಾಜಕೀಯ ಕ್ಷೇತ್ರಕ್ಕೆ ಬರುವಂತೆ ಒತ್ತಾಯಿಸಿದರು. ೧೯೪೫ರಲ್ಲಿ ಕಾಂಗ್ರೆಸ್ ಪಕ್ಷದ ಸದಸ್ಯತ್ವವನ್ನು ಪಡೆದುಕೊಂಡ ಲಕ್ಷಮ್ಮನವರು ರಾಜಕಾರಣಕ್ಕೆ ಒಲ್ಲದ ಮನಸ್ಸಿನಿಂದಲೇ ಕಾಲಿಟ್ಟರೂ ಅವರು ಸಲ್ಲಿಸಿದ ಸೇವೆ ಗಣನೀಯವಾದದ್ದು.

೧೯೪೫ರಲ್ಲಿ ಪ್ರಜಾಪ್ರತಿನಿಧಿ ಸಭೆಯ ಮೇಲ್ಮನೆಯಾದ ನ್ಯಾಯವಿಧಾಯಕ ಸಭೆಗೆ ಮೈಸೂರು ಮಹಿಳಾ ಕ್ಷೇತ್ರದಿಂದ ಚುನಾವಣೆ ನಡೆಯಿತು. ಈ ಚುನಾವಣೆಗೆ ನಿಲ್ಲುವ ಮೂಲಕ ರಾಜಕೀಯ ರಂಗವನ್ನು ಪ್ರವೇಶಿಸಿದ ಲಕ್ಷಮ್ಮನವರು ಅವಿರೋಧವಾಗಿ ನ್ಯಾಯವಿಧಾಯಕ ಸಭೆಗೆ ಆಯ್ಕೆಯಾದರು. ೧೯೪೬ರಲ್ಲಿ ಮೈಸೂರು ಪುರಸಭೆಗೆ ಆಯ್ಕೆಯಾಗಿ ಮೂರು ವರ್ಷಗಳ ಕಾಲ ಪುರಸಭಾ ಸದಸ್ಯರಾಗಿ ಸೇವೆ ಸಲ್ಲಿಸಿದರು. ಒಂದು ವರ್ಷದ ಅವಧಿಗೆ ಪುರಸಭೆಯ ಉಪಾಧ್ಯಕ್ಷೆಯಾಗಿ ಸೇವೆ ಸಲ್ಲಿಸಿದರು.[೧೦] ರಾಜಕೀಯ ರಂಗದ ಪ್ರವೇಶದ ನಂತರ ದೇಶ ಸೇವೆಗೆ ತಮ್ಮನ್ನು ಮುಡಿಪಾಗಿಟ್ಟು ಲಕ್ಷಮ್ಮನವರು ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದರು. ಮೈಸೂರು ಸಂಸ್ಥಾನದಲ್ಲಿ ನಡೆದ ಜವಾಬ್ದಾರಿ ಸರ್ಕಾರದ ಹೋರಾಟದಲ್ಲಿ ಭಾಗವಹಿಸಿ ೧೯೪೭ ಸೆಪ್ಟೆಂಬರ್ ೪ ರಂದು ರಾತ್ರಿ ೧೦.೩೦ ಗಂಟೆಗೆ ಬಂಧಿಸಲ್ಪಟ್ಟರು.[೧೧] ಮೂವತ್ತಮೂರು ದಿನಗಳ ಕಾರಾಗೃಹವಾಸವನ್ನು ಅನುಭವಿಸಿದರು. ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿ ಸೆರೆವಾಸ ಅನುಭವಿಸಿ ಹೊರ ಬಂದ ಲಕ್ಷಮ್ಮನವರ ನ್ಯಾಯವಿಧಾಯಕ ಸಭೆಯ ಸದಸ್ಯತ್ವ ರದ್ದುಗೊಳಿಸಲ್ಪಟ್ಟಿತು. ಲಕ್ಷಮ್ಮನವರು ೧೯೪೯ ರಿಂದ ೧೯೫೨ ರವರೆಗೆ ಮಹಿಳಾ ಅಭಿವೃದ್ಧಿಗೆ ಸಂಬಂಧಪಟ್ಟ ಅನೇಕ ಕಾರ್ಯಗಳನ್ನು ಕೈಗೊಳ್ಳುವುದರ ಮೂಲಕ ತಮ್ಮನ್ನು ಸಮಾಜಸೇವೆಯಲ್ಲಿ ತೊಡಗಿಸಿಕೊಂಡರು.

ಸ್ವಾತಂತ್ರ್ಯಾನಂತರ ೧೯೫೨ರಲ್ಲಿ ವಿಧಾನಪರಿಷತ್ ಸದಸ್ಯರಾಗಿ ಆಯ್ಕೆಯಾಗುವ ಮೂಲಕ ರಾಜಕೀಯ ರಂಗಕ್ಕೆ ಮರುಪ್ರವೇಶಿಸಿದರು. ೧೯೫೮ ಮತ್ತು ೧೯೬೪ ರಲ್ಲಿ ಪದವೀಧರ ಕ್ಷೇತ್ರದಿಂದ ಚುನಾವಣೆಯಲ್ಲಿ ಬಹುಮತವನ್ನು ಗಳಿಸಿ ವಿಧಾನಪರಿಷತ್ತಿನ ಸದಸ್ಯೆಯಾಗಿ ಆಯ್ಕೆಯಾದರು. ವಿಧಾನಪರಿಷತ್ತಿನ ಉಪ ಸಭಾಧ್ಯಕ್ಷೆಯಾಗಿ ಲಕ್ಷಮ್ಮನವರು ೧೯೬೨ ರಿಂದ ೬೪ರವರೆಗೆ ಎರಡು ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಈ ವೇಳೆಯಲ್ಲಿ ಅನೇಕ ಸಮಿತಿಗಳಲ್ಲಿ ಸದಸ್ಯರಾಗಿ ಸೇವೆ ಸಲ್ಲಿಸಿದರು. ಸತತವಾಗಿ ೧೮ ವರ್ಷಗಳ ಕಾಲ ವಿಧಾನ ಪರಿಷತ್ತಿನ ಸದಸ್ಯರಾಗಿದ್ದು, ಪ್ರಜಾಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು.

### ೨.೭. ಶಿಕ್ಷಣ ಕ್ಷೇತ್ರ

ಎಂ.ಆರ್. ಲಕ್ಷಮ್ಮನವರು ಪದವಿಯನ್ನು ಪೂರೈಸಿದ ನಂತರ ಸಮಾಜಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಹಾಗೆಯೇ ರಾಜಕೀಯ ಕ್ಷೇತ್ರಕ್ಕೂ ಕಾಲಿಟ್ಟರು. ಆದರೆ ಅವರಿಗೆ ಶೈಕ್ಷಣಿಕ ರಂಗದಲ್ಲಿ ಅನೇಕ ಶೈಕ್ಷಣಿಕ ಸುಧಾರಣೆಗೆ ಕಾರಣಕರ್ತರಾಗಿದ್ದಾರೆ. ೧೯೪೫ ರಲ್ಲಿ ನ್ಯಾಯವಿಧಾಯಕ ಸಭೆಯಿಂದ ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್ ಸದಸ್ಯರಾಗಿ ಆಯ್ಕೆಯಾಗಿ ೨ ವರ್ಷಗಳ ಕಾಲ ಸೇವೆ ಸಲ್ಲಿಸಿದರು. ೧೯೫೨ರಲ್ಲಿ ಲಕ್ಷಮ್ಮನವರ ಪತಿ ನಾರಾಯಣಮೂರ್ತಿಯವರು ಬೆಂಗಳೂರಿನ ಹೆಚ್.ಎ.ಎಲ್. ಕಾರ್ಖಾನೆಯಲ್ಲಿ ಕೆಲಸ ನಿರ್ವಹಿಸಲು ಮೈಸೂರಿನಿಂದ ನಿಯೋಜನೆಗೊಂಡಿದ್ದರು. ನಂತರ ಲಕ್ಷಮ್ಮನವರ ಕಾರ್ಯಕ್ಷೇತ್ರ ಮೈಸೂರಿನಿಂದ ಬೆಂಗಳೂರಿಗೆ ವರ್ಗಾಯಿಸಲ್ಪಟ್ಟಿತು. ಬೋಧನಾ ವೃತ್ತಿಯಲ್ಲಿ ಆಸಕ್ತಿಯನ್ನು ಇಟ್ಟುಕೊಂಡಿದ್ದ ಲಕ್ಷಮ್ಮನವರು ಬೆಂಗಳೂರು ನಗರದ ಪ್ರತಿಷ್ಠಿತ ವಿದ್ಯಾಸಂಸ್ಥೆಯಾದ ಆಚಾರ್ಯ ಪಾಠಶಾಲೆ ಮತ್ತು ಬಿ.ಎಂ.ಎಸ್ ಕಾಲೇಜುಗಳಲ್ಲಿ ಉಪನ್ಯಾಸಕಿಯಾಗಿ ಸೇವೆ ಸಲ್ಲಿಸಿದರು.

ಆಚಾರ್ಯ ಪಾಠಶಾಲೆಯ ಸಂಜೆ ಕಾಲೇಜಿನ ಪ್ರಾಂಶುಪಾಲರಾಗಿ ೪ ವರ್ಷಗಳ ಕಾಲ ಸೇವೆ ಸಲ್ಲಿಸಿದ ಲಕ್ಷಮ್ಮನವರು ವಿಶ್ವವಿದ್ಯಾನಿಲಯದ ವಿವಿಧ ವಿಭಾಗಗಳಲ್ಲಿ ಸೇವೆ ಸಲ್ಲಿಸಿದ್ದಾರೆ. ಬೆಂಗಳೂರು ವಿಶ್ವವಿದ್ಯಾನಿಲಯದ ಶೈಕ್ಷಣಿಕ ಸಮಿತಿಯ ಸದಸ್ಯೆಯಾಗಿ ೪ ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಬೆಂಗಳೂರು ವಿಶ್ವವಿದ್ಯಾನಿಲಯದ ಪದನಿಮಿತ್ತ ಉಪನ್ಯಾಸಕರ ಸಮಿತಿಯ ಅಧ್ಯಕ್ಷರಾಗಿ ೨ ವರ್ಷಗಳ ಕಾಲ ಕಾರ್ಯ ನಿರ್ವಹಿಸಿದರು. ಬೆಂಗಳೂರು ವಿಶ್ವವಿದ್ಯಾನಿಲಯದ ಇತಿಹಾಸ ವಿಭಾಗದ ಮುಖ್ಯ ಪರೀಕ್ಷಾಧಿಕಾರಿಯಾಗಿ ಕಾರ್ಯ ನಿರ್ವಹಿಸಿದರು. ಬೆಂಗಳೂರು ವಿಶ್ವವಿದ್ಯಾನಿಲಯದ ಅಧ್ಯಾಪಕರ ಸಂಘದ ಕಾರ್ಯಕಾರಿ ಸಮಿತಿಯ ಸದಸ್ಯೆಯಾಗಿ ಸೇವೆ ಸಲ್ಲಿಸಿದರು. ಆಚಾರ್ಯ ಪಾಠಶಾಲೆಯಲ್ಲಿ ಪ್ರಾಂಶುಪಾಲರಾಗಿದ್ದಾಗ ಕಲಾವಿಭಾಗದ ವಿಷಯಗಳನ್ನು ಕನ್ನಡ ಮಾಧ್ಯಮದಲ್ಲಿ ಬೋಧಿಸಲು ಪ್ರಾರಂಭಿಸಿದರು.

ಲಕ್ಷಮ್ಮನವರು ಇತಿಹಾಸದ ವಿದ್ಯಾರ್ಥಿನಿಯಾಗಿದ್ದರಿಂದ ಶಾಸನಗಳನ್ನು ಸಂಶೋಧಿಸಿ ಇತಿಹಾಸಕ್ಕೆ ಕೊಡುಗೆಯಾಗಿ ನೀಡಿದ್ದಾರೆ. ಲಕ್ಷಮ್ಮ ಅವರ ಪತಿಯವರು ಹಾಸನ ಜಿಲ್ಲೆಯ ಹಗರೆಯಲ್ಲಿ ಎಂಜಿನಿಯರ್ ಆಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಅಲ್ಲಿ ಸುತ್ತಮುತ್ತಲಿನ ಸ್ಥಳಗಳಲ್ಲಿ ೧೯ ಶಾಸನಗಳನ್ನು ಪತ್ತೆಹಚ್ಚಿ ಅವುಗಳನ್ನು ಪುರಾತತ್ವ ಇಲಾಖೆಗೆ ಹಸ್ತಾಂತರಿಸಿದರು. ಅವುಗಳು ಗಂಗ ವಂಶದ ರಾಜ ಶ್ರೀಪುರುಷನಿಗೆ ಸಂಬಂಧಪಟ್ಟಿದ್ದು. ಅವುಗಳು ೯ನೇ ಶತಮಾನದ ಕಾಲಕ್ಕೆ ಸಂಬಂಧಪಟ್ಟವೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೧೨]

## ೨.೮. ಪತ್ರಿಕೋದ್ಯಮ

ಲಕ್ಷಮ್ಮನವರು ಸಮಾಜಸೇವೆ, ರಾಜಕೀಯ ಕ್ಷೇತ್ರ, ಶೈಕ್ಷಣಿಕ ರಂಗದಲ್ಲಿ ಮಾತ್ರವಲ್ಲ ಪತ್ರಿಕೋದ್ಯಮದಲ್ಲೂ ತಮ್ಮದೇ ಆದ ಛಾಪು ಮೂಡಿಸಿದ್ದಾರೆ. ಸಾಹಿತ್ಯಪ್ರಿಯೆಯಾಗಿದ್ದ ಇವರು ಈ ಮೊದಲೇ ಅನೇಕ ನಾಟಕಗಳನ್ನು, ಸಣ್ಣ ಕಥೆಗಳನ್ನು, ಲೇಖನಗಳನ್ನು ಬರೆದಿದ್ದ ಅವರು ವಯಸ್ಕರ ಶಿಕ್ಷಣ ಸಮಿತಿಯ ಪತ್ರಿಕೆಯಾದ **'ಬೆಳಕು'** ಪತ್ರಿಕೆಯ ಸಂಪಾದಕಿಯಾಗಿ ಕಾರ್ಯ ನಿರ್ವಹಿಸಿದ್ದರು. ಮಹಿಳೆಯರಿಗಾಗಿ ಪತ್ರಿಕೆಯನ್ನು ಸ್ಥಾಪಿಸಲು ನಿರ್ಧರಿಸಿದ ಲಕ್ಷಮ್ಮನವರು **'ಸೋದರಿ'** ಎಂಬ ವಾರಪತ್ರಿಕೆಯನ್ನು ೧೯೫೦ರಲ್ಲಿ ಪ್ರಾರಂಭಿಸಿದರು.[೧೩] ಸಂಪಾದಕಿಯಾಗಿ, ಪ್ರಕಾಶಕರಾಗಿ, ಎಲ್ಲ ಜವಾಬ್ದಾರಿಯನ್ನು ತಮ್ಮ ಹೆಗಲ ಮೇಲೆ ಹೊತ್ತುಕೊಂಡ ಲಕ್ಷಮ್ಮ ಇವರು ಜನಸಂಖ್ಯೆಯಲ್ಲಿ ಶೇಕಡಾ ೫೦ ರಷ್ಟಿರುವ ಮಹಿಳೆಯರ ಅಭಿವೃದ್ಧಿ ಮಹಿಳೆಯರ ಸಂಘಟನೆ ಮತ್ತು ಮಹಿಳೆಯರ ಸಾಧನೆ ಬಗ್ಗೆ ತಿಳಿಸಲು, ಮಹಿಳೆಯರು ರಾಜಕೀಯ ರಂಗದಲ್ಲಿ ಸಲ್ಲಿಸಬೇಕಾದ ಸೇವೆ ಮುಂತಾದ ಗಂಭೀರವಾದ ಲೇಖನಗಳನ್ನು **'ಸೋದರಿ'** ಪತ್ರಿಕೆಯಲ್ಲಿ ಪ್ರಕಟಿಸುತ್ತಿದ್ದರು.

ಹರಿತವಾದ ಲೇಖನಗಳು ಚಿಂತನಾರ್ಹವಾದ ವಿಷಯಗಳು, ದೇಶ ವಿದೇಶಗಳ ಸುದ್ದಿ ಸಮಾಚಾರಗಳನ್ನು ಒಳಗೊಂಡ **'ಸೋದರಿ'** ಪತ್ರಿಕೆ ೫ ವರ್ಷಗಳ ಕಾಲ ವಾರಪತ್ರಿಕೆಯಾಗಿ ಪ್ರಕಟವಾಗುತ್ತಿತ್ತು. ನಂತರ ಕಾರ್ಯಭಾರ ಒತ್ತಡದಿಂದ ಮಾಸಪತ್ರಿಕೆಯಾಗಿ ಬದಲಾಯಿಸಲಾಯಿತು. ಸತತವಾಗಿ ೮ ವರ್ಷಗಳ ಕಾಲ ಪ್ರಕಟವಾದ **'ಸೋದರಿ'**ಯ ಕಾರ್ಯನಿರ್ವಹಣೆ ಸಾಧ್ಯವಾಗದೆ ಅದರ ಪ್ರಕಟಣೆಯನ್ನು ನಿಲ್ಲಿಸಬೇಕಾಯಿತು. ಇಂತಹ ಉತ್ತಮ ಪತ್ರಿಕೆಯನ್ನು ಅನಿವಾರ್ಯ ಕಾರಣದಿಂದ ನಿಲ್ಲಿಸಲಾಗಿದ್ದರೂ ಲಕ್ಷಮ್ಮನವರ ಸಾಹಿತ್ಯಾಸಕ್ತಿಯೇನೂ ಕಡಿಮೆಯಾಗಲಿಲ್ಲ. ಅನೇಕ ಪತ್ರಿಕೆಗಳಿಗೆ ಲೇಖನಗಳನ್ನು ಸಣ್ಣ ಕಥೆಗಳನ್ನು ಬರೆಯುತ್ತಿದ್ದರು. ಹೀಗೆ ಬಹುಮುಖ ಪ್ರತಿಭೆಯ ಲಕ್ಷಮ್ಮನವರು ವಿವಿಧ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು.

## ೨.೯. ರಚನಾತ್ಮಕ ಕಾರ್ಯ ಹಾಗೂ ಸಂಘಟನೆಗಳು

ಎಂ.ಆರ್. ಲಕ್ಷಮ್ಮನವರು ೧೯೭೪ರಲ್ಲಿ ಬಿ.ಎನ್. ಗುಪ್ತಾರವರ ಅಧ್ಯಕ್ಷತೆಯಲ್ಲಿ ಪ್ರಾರಂಭಿಸಿದ ಕರ್ನಾಟಕ ರಾಜ್ಯ ಗ್ರಾಹಕರ ವೇದಿಕೆಯ ಕಾರ್ಯಾಧ್ಯಕ್ಷೆಯಾಗಿ ಕಾರ್ಯ ನಿರ್ವಹಿಸಿದರು. ನಾಗರಿಕ ಸೇವೆಗಳ ಬಗ್ಗೆ ಕಳಕಳಿ ಇದ್ದ ಲಕ್ಷಮ್ಮನವರು ಗ್ರಾಹಕರಿಗೆ ಜಾಗೃತಿ ಮೂಡಿಸುವಲ್ಲಿ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಮಹಿಳಾ ಮಂಡಳಿಗಳಲ್ಲಿ, ಕೊಳಗೇರಿ ಪ್ರದೇಶಗಳಲ್ಲಿ, ಶಾಲಾ ಕಾಲೇಜುಗಳಲ್ಲಿ ಉಪನ್ಯಾಸ ಕಾರ್ಯಕ್ರಮವನ್ನು ಏರ್ಪಡಿಸಿದರು. ತೂಕ ಮತ್ತು ಅಳತೆ, ಆಹಾರ ಕಲಬೆರಕೆ, ಸಾರಿಗೆ ಸಂಪರ್ಕ, ಹಕ್ಕು ಮತ್ತು ಜವಾಬ್ದಾರಿ, ಬ್ಯಾಂಕುಗಳಲ್ಲಿ ಹಣ ನಿರ್ವಹಣೆ, ವಿದ್ಯುಚ್ಛಕ್ತಿಯ ಬಳಕೆ ಮತ್ತು ಉಳಿತಾಯ, ಅಡುಗೆ ಅನಿಲ ಬಳಕೆ ಬಗ್ಗೆ ವಿಶೇಷ ಉಪನ್ಯಾಸ ಕಾರ್ಯಕ್ರಮಗಳನ್ನು ಜನಸಾಮಾನ್ಯರಿಗೆ ತಿಳಿಸುವ, ಅರಿವು ಮೂಡಿಸುವ ಕೆಲಸವನ್ನು ಲಕ್ಷಮ್ಮನವರು ಮಾಡುತ್ತಿದ್ದರು.[೧೪]

ಲಕ್ಷಮ್ಮನವರು ಕರ್ನಾಟಕ ಪಾನಸಂಯಮ ಮಂಡಳಿಯ ಪ್ರಥಮ ಅಧ್ಯಕ್ಷೆಯಾಗಿ ಪಾನವ್ಯಸನಗಳಿಂದ ಆಗುವ ಅನಾಹುತಗಳ ಬಗ್ಗೆ ಜನರಿಗೆ ಅರಿವು ಮೂಡಿಸಲು ಶ್ರಮಿಸಿದರು. ಪಾನನಿರೋಧವನ್ನು ಜಾರಿಗೆ ತರುವ ಬಗ್ಗೆ ಅವರು ವಿಧಾನಪರಿಷತ್ತಿನ ಸದಸ್ಯೆಯಾಗಿದ್ದಾಗಲೇ ಸರ್ಕಾರದ ಮೇಲೆ ಒತ್ತಡವನ್ನು ತಂದಿದ್ದರು.

ಲಕ್ಷಮ್ಮ ಕೇಂದ್ರ ಗ್ರಂಥಾಲಯ ಸಮಿತಿಯ ಸದಸ್ಯೆಯಾಗಿ ಮೂರು ವರ್ಷಗಳು ಕಾರ್ಯ ನಿರ್ವಹಿಸಿದರು. ಮಿಥಿಕ್ ಸೊಸೈಟಿಯ ಉಪಾಧ್ಯಕ್ಷರಾಗಿ ೨ ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಭಾರತೀಯ ವಿದ್ಯಾಭವನದ ರಾಜ್ಯ ಶಾಖೆಯ ಕಾರ್ಯಕಾರಿ ಸಮಿತಿಯ ಸದಸ್ಯೆಯಾಗಿ ಕಾರ್ಯ ನಿರ್ವಹಿಸಿದರು. ರಾಜ್ಯ ಹೆಣ್ಣುಮಕ್ಕಳ ಗೈಡ್ ಸಂಸ್ಥೆಯ ರಾಜ್ಯ ಕಮಿಷನರ್ ಆಗಿ ಮೂರು ಅವಧಿಗಳ ಕಾಲ ಸೇವೆ ಸಲ್ಲಿಸಿದ್ದಾರೆ. ಮೊದಲ ಅವಧಿಯಲ್ಲಿ ಚುನಾಯಿತರಾದ ಲಕ್ಷಮ್ಮನವರು ಎರಡನೇ ಬಾರಿಗೆ ಅವಿರೋಧವಾಗಿ ಆಯ್ಕೆಯಾದರು. ಅವರ ಕಾರ್ಯದಕ್ಷತೆ ಅವರನ್ನು ಮೂರನೇ ಬಾರಿಗೆ ನಾಮ ನಿರ್ದೇಶನ ಮಾಡುವಲ್ಲಿ ಸಫಲವಾಯಿತು. ಕೇಂದ್ರ ಸ್ಕೌಟ್ ಮತ್ತು ಗೈಡ್ ಸಂಸ್ಥೆಯ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಚುನಾಯಿತರಾದರು. ಮೈಸೂರು ರಾಜ್ಯದ ಯುವ ಜನಸೇವಾ ಮಂಡಳಿಯ ಸದಸ್ಯರಾಗಿ ೨ ವರ್ಷಗಳ ಕಾಲ ಕಾರ್ಯ ನಿರ್ವಹಿಸಿದರು. ೧೯೭೦ರ ನಂತರ ರಾಜಕೀಯ ರಂಗದಿಂದ ನಿವೃತ್ತರಾಗಿ ಸಮಾಜಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು ತಮ್ಮ ಜೀವಿತದ ಕೊನೆಯ ಕ್ಷಣದವರೆಗೂ ಅಂದರೆ ೧೯೮೮ಳ ಜೂನ್ ೭ ರಂದು ರಚನಾತ್ಮಕ ಕಾರ್ಯಕರ್ತರಾಗಿ, ಸಮಾಜಮುಖಿ ಚಿಂತಕರಾಗಿ ಸೇವೆ ಸಲ್ಲಿಸಿದ್ದಾರೆ.

**ಅಡಿ ಟಿಪ್ಪಣಿಗಳು**

೧) ಸಂದರ್ಶನ ಸಂಶೋಧಕರಿಂದ, ಶ್ರೀ ಮಾಧವ ಎನ್. ಮೂರ್ಚಿಂಗ್ (ಎಂ.ಆರ್. ಲಕ್ಷಮ್ಮ ಅವರ ಮಗ) ದಿನಾಂಕ ೧೨.೦೫.೨೦೧೩.

೨) ಎಂ.ಆರ್. ಲಕ್ಷಮ್ಮನವರ ವ್ಯಕ್ತಿ ವಿವರ, ವಿಭಾಗೀಯ ಪತ್ರಾಗಾರ ಕಛೇರಿ, ಮೈಸೂರು, ಪು.೧.

೩) ಸುರೇಶ್‌ಕುಮಾರ್ ಎಸ್. (ಪ್ರಸಂ.) ಕರ್ನಾಟಕ ವಿಧಾನಸಭೆ ೬೦ನೇ ವಾರ್ಷಿಕೋತ್ಸವ ಸಮಾರಂಭ ಸ್ಮರಣೆ ಸಂಚಿಕೆ, ಬೆಂಗಳೂರು, ೨೦೧೨, ಪು.೩೨.

೪) ಸುರೇಶ್‌ಮೂನ, ಬೆಂಗಳೂರು ನಗರ ನಿರ್ಮಾಪಕರು, ಭಾಗ. ೨, ಪು.೧೭೧.

೫) ಎಂ.ಆರ್. ಲಕ್ಷಮ್ಮನವರ ಸ್ವವಿವರ, ವಿಭಾಗೀಯ ಪತ್ರಾಗಾರ ಕಛೇರಿ, ಮೈಸೂರು, ಪು.೭.

೬) ಅದೇ, ಪು.೧.

೭) ಅಡ್ಮಿನಿಸ್ಟ್ರೇಷನ್ ರಿಪೋರ್ಟ್ ಆನ್ ಪಬ್ಲಿಕ್ ಇನ್‌ಸ್ಟ್ರಕ್ಷನ್, ೧೮೮೯-೯೦, ಪು.೫೭.

೮) ಬೆಳಕು ಪತ್ರಿಕೆ ದಿನಾಂಕ ೦೭.೧೧.೧೯೪೨.

೯) ಎಂ.ಆರ್. ಲಕ್ಷಮ್ಮನವರ ಸ್ವವಿವರ, ಪೂವೋಕ್ತ, ಪು.೨.

೧೦) ಅದೇ, ಪು.೭

೧೧) ಎಂ.ಆರ್. ಲಕ್ಷಮ್ಮ, ತುರಂಗವಾಸ ಅನುಭವ (ಸೆರೆಮನೆ ದಿನಚರಿ), ವಿಭಾಗೀಯ ಪತ್ರಾಗಾರ ಕಛೇರಿ, ಮೈಸೂರು, ಪು.೧.

೧೨) ಎಂ.ಆರ್. ಲಕ್ಷಮ್ಮನವರ ಸ್ವವಿವರ, ಪೂರ್ವೋಕ್ತ, ಪು.೧.

೧೩) ಅದೇ, ಪು.೪.

೧೪) ಅದೇ, ಪು.೪.

# ಅಧ್ಯಾಯ : ಮೂರು

# ಎಂ.ಆರ್. ಲಕ್ಷಮ್ಮ ಮತ್ತು ಪತ್ರಿಕೋದ್ಯಮ

ಪತ್ರಿಕೋದ್ಯಮವೆಂದರೆ ಅದೊಂದು ಪವಿತ್ರಕಾರ್ಯ. ಜನಸೇವೆಯ ಕ್ಷೇತ್ರವೆಂದೇ ತಿಳಿದು ಅದರಲ್ಲಿ ಅನೇಕ ಮಹನೀಯರು ತೊಡಗಿಕೊಂಡರು. ಸ್ವಾತಂತ್ರ್ಯಪೂರ್ವದಲ್ಲಿ ಪತ್ರಿಕೋದ್ಯಮಕ್ಕೆ ಪ್ರವೇಶಿಸಿದ್ದವರು ಪತ್ರಿಕೆಯನ್ನು ಒಂದು ಮಾಧ್ಯಮವನ್ನಾಗಿ ಬಳಸಿಕೊಂಡಿದ್ದರು. ಸ್ವಾತಂತ್ರ್ಯ ಚಳವಳಿಯ ಜೊತೆಜೊತೆಗೆ ಪತ್ರಿಕೋದ್ಯಮ, ಗ್ರಾಮಗಳ ಪುನರುತ್ಥಾನ, ರಾಷ್ಟ್ರೀಯ ಶಿಕ್ಷಣ, ಅಸ್ಪೃಶ್ಯತಾ ನಿವಾರಣೆ, ಸಾಮಾಜಿಕ ಸುಧಾರಣೆ, ಸ್ತ್ರೀಯರ ಶಿಕ್ಷಣ ಮತ್ತು ಅಭಿವೃದ್ಧಿ ಚಟುವಟಿಕೆಗಳು ನಡೆದವು. ಅಂತಹ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡವರಲ್ಲಿ ಲಕ್ಷಮ್ಮನವರು ಒಬ್ಬರು.

## ೩.೧. ಕನ್ನಡ ಪತ್ರಿಕೋದ್ಯಮ

ಕನ್ನಡ ಪತ್ರಿಕೋದ್ಯಮ ಕ್ರೈಸ್ತಮಿಷನರಿಗಳಿಂದ ಪ್ರಾರಂಭಿಸಲ್ಪಟ್ಟು ಪ್ರಾರಂಭಿಕ ಹಂತಗಳಲ್ಲಿ ಧರ್ಮಪ್ರಚಾರವನ್ನೇ ಮುಖ್ಯ ಉದ್ದೇಶವನ್ನಾಗಿ ಇಟ್ಟುಕೊಂಡಿದ್ದ ಪತ್ರಿಕೆಗಳು ಅನಂತರ ಕನ್ನಡ ನಾಡು – ನುಡಿಯ ಏಳಿಗೆಯನ್ನು, ಸ್ವಾತಂತ್ರ್ಯ ಹೋರಾಟವನ್ನು ಮುಖ್ಯ ಉದ್ದೇಶವನ್ನಾಗಿ ಇಟ್ಟುಕೊಂಡು ಮುನ್ನಡೆದವು. ಕನ್ನಡದ ಬಹುತೇಕ ಪತ್ರಿಕೆಗಳು ಕನ್ನಡ ನವೋದಯ ಬೆಳವಣಿಗೆಯ ಕಾಲದಲ್ಲಿ ಊರ್ಜಿತಗೊಂಡು ಜನರಲ್ಲಿ ರಾಷ್ಟ್ರೀಯಪ್ರಜ್ಞೆ ಮತ್ತು ಸಾಮಾಜಿಕ ಹೊಣೆಗಾರಿಕೆಯನ್ನು ಬಿಂಬಿಸುವ ಮಹತ್ಕಾರ್ಯದಲ್ಲಿ ಛಲದಿಂದ ಹೋರಾಡಿದವು. ದ್ವಿತೀಯ ಮಹಾಯುದ್ಧದ ನಂತರದಿಂದ ಈವರೆಗಿನ ಅವಧಿಯಲ್ಲಿ ಕನ್ನಡ ಪತ್ರಿಕೋದ್ಯಮದಲ್ಲಿ ಸಾಕಷ್ಟು ಬೆಳವಣಿಗೆಯಾಗಿದೆ.

೧೮೧೨ ರಲ್ಲಿ ಧರ್ಮಪ್ರಚಾರದ ಕಾರಣಕ್ಕೆ **'ಕನ್ನಡ ಸಮಾಚಾರ'** ಎಂಬ ಪ್ರಥಮ ಕನ್ನಡ ಪತ್ರಿಕೆಯನ್ನು ಜರ್ಮನ್ ಪಾದ್ರಿಗಳು ಪ್ರಕಟಿಸಿದರು. ೧೮೪೨ ರಲ್ಲಿ ಮಂಗಳೂರಿನ **'ಬಾಸೆಲ್ ಮಿಷನ್'** ಆ ಪತ್ರಿಕೆಯನ್ನು ಅದೇ ಹೆಸರಿನಲ್ಲಿ ಮುಂದುವರೆಸಿದರೂ ಕಾಲಾನಂತರದಲ್ಲಿ ಆ ಹೆಸರನ್ನು **ಮಂಗಳೂರು ಸಮಾಚಾರ, ಕನ್ನಡ ಸುವಾರ್ತಿಕ, ಕರ್ನಾಟಕ ಪತ್ರಿಕೆ, ಬಾಲಪತ್ರ, ಸತ್ಯದೀಪಿಕೆ ಮತ್ತು ಕ್ರೈಸ್ತಸಭಾಪತ್ರ** ಎಂದು ಕ್ರಮವಾಗಿ ಬದಲಾಯಿಸಲಾಯಿತು. ಕನ್ನಡ ಪತ್ರಿಕೆಗಳು ಧರ್ಮಪ್ರಸಾರಕ್ಕಿಂತ ಹೆಚ್ಚಾಗಿ ರಾಷ್ಟ್ರದ ನಾಡುನುಡಿಯ ಹಿತರಕ್ಷಣೆಯನ್ನು ಮುಖ್ಯ ಉದ್ದೇಶವನ್ನಾಗಿಟ್ಟುಕೊಂಡವು. ೧೮೬೫ ರಲ್ಲಿ **'ಕರ್ನಾಟಕ ಪ್ರಕಾಶಿಕಾ'** ಪತ್ರಿಕೆ ಪ್ರಕಟವಾಯಿತು. ೧೮೯೪ ರಲ್ಲಿ **'ದೇಶಾಭಿಮಾನಿ'**, ೧೮೮೭ ರಲ್ಲಿ **'ವೃತ್ತಾಂತ ಪತ್ರಿಕೆ'** ಪ್ರಾರಂಭವಾಯಿತು. ಕನ್ನಡ ಪತ್ರಿಕೋದ್ಯಮದ ಪಿತಾಮಹರಾದ ಎಂ. ವೆಂಕಟಕೃಷ್ಣಯ್ಯನವರು ೧೮೮೫ ರಲ್ಲಿ **'ವೃತ್ತಾಂತ ಚಿಂತಾಮಣಿ'** ಪತ್ರಿಕೆಯನ್ನು ಪ್ರಾರಂಭಿಸಿ, ತಮ್ಮ ಹರಿತವಾದ ಲೇಖನಿಯಿಂದ ಜನತೆಯನ್ನು

ಹಾಗೂ ಸರ್ಕಾರವನ್ನು ಬಡಿದೆಬ್ಬಿಸಿದರು. ಹಿತಬೋಧಿನಿ, ಸಾಧ್ವಿ, ಸಂಪದಭ್ಯುದಯ, ವೇದಾಂತಚಿಂತಾಮಣಿ ಮೈಸೂರು ಪೇಟ್ರಿಯಟ್, ಪೌರಸಾಮಾಜಿಕ ಪತ್ರಿಕೆ, ನೇಚರ್ ಕ್ಯೂರ್, ಮೈಸೂರು ಹೆರಾಲ್ಡ್ ಮುಂತಾದ ಕನ್ನಡ – ಇಂಗ್ಲಿಷ್ ಭಾಷಾಪತ್ರಿಕೆಗಳನ್ನು ಹೊರತಂದರು.

ಕರ್ನಾಟಕದ ಪತ್ರಿಕೋದ್ಯಮದ ಪ್ರಾರಂಭಿಕ ಕೆಲವು ವರ್ಷಗಳ ಕಾಲ, ಮೈಸೂರು ಸಂಸ್ಥಾನದಲ್ಲಿ ಅನೇಕ ಖಾಸಗಿ ಪ್ರಮುಖರು ಹಾಗೂ ಸರ್ಕಾರಿ ನಿವೃತ್ತ ಅಧಿಕಾರಿಗಳು ಕೆಲವು ಕಾಲ ಹಲವಾರು ಪತ್ರಿಕೆಗಳನ್ನು ಹೊರತಂದರು. ಇವರಲ್ಲಿ ಕೆಲವರು ನಿರ್ಭಯವಾಗಿ ಸರ್ಕಾರವನ್ನು ಟೀಕಿಸಿ ಬರೆದರಲ್ಲದೇ, ಸಂಸ್ಥಾನದ ದೈನಂದಿನ ಆಗುಹೋಗುಗಳು, ಜನತೆಗೆ ಅರಿವಾಗುವಂತೆ ಮಾಡಿ, ಜನಾಭಿಪ್ರಾಯ ರೂಪಿಸುವುದರಲ್ಲಿ ಪತ್ರಿಕಾ ಮಾಧ್ಯಮವನ್ನು ಸಮರ್ಥವಾಗಿ ಬಳಸಿಕೊಂಡರು. ಮುಂದೆ ಕನ್ನಡ ನಡೆಗನ್ನಡಿ, ಸಮಾಚಾರ ಸಂಗ್ರಹ, ಸುಮತಿ, ಕರ್ನಾಟಕ, ವಿಶ್ವಕರ್ನಾಟಕ, ತಾಯಿನಾಡು, ಜನವಾಣಿ, ಪ್ರಜಾಮತ, ಕರ್ಮವೀರ, ಸಂಯುಕ್ತ ಕರ್ನಾಟಕ, ವಾಗ್ಭೂಷಣ, ಅವಕಾಶತೋಷಿಣಿ, ಸೂರ್ಯೋದಯ ಪ್ರಕಾಶಿಕ, ಸನ್ಮಾರ್ಗದರ್ಶಿನಿ, ಒಕ್ಕಲಿಗರ ಪತ್ರಿಕೆ, ರಾಷ್ಟ್ರಬಂಧು, ನವಯುಗ, ಕಂಠೀರವ, ಜಯಕರ್ನಾಟಕ, ಕರ್ಮವೀರ, ಸರಸ್ವತಿ, ಸೋದರಿ, ಮುಂತಾದ ದಿನಪತ್ರಿಕೆ, ವಾರಪತ್ರಿಕೆ, ಮಾಸಪತ್ರಿಕೆಗಳು ಪ್ರಕಟವಾದವು. ಸಾಹಿತ್ಯ ಪತ್ರಿಕೆಗಳೇ ಪ್ರತ್ಯೇಕ ಪ್ರಕಾರವಾಗಿ ಪ್ರಕಟವಾದವು. ಕತೆಗಾರ, ಕಥಾಂಜಲಿ, ಕೊರವಂಜಿ, ಜನಪ್ರಗತಿ, ಪ್ರೇಮ ಜೀವನ, ಆನಂದಚಂದ್ರಿಕೆ, ಇತ್ಯಾದಿಗಳು ಪ್ರಮುಖವಾಗಿದ್ದವು.

ಇಂತಹ ಪ್ರವಾಹದೋಪಾದಿಯಲ್ಲಿ ಬೆಳೆದ ಪತ್ರಿಕೋದ್ಯಮದಲ್ಲಿ ೧೯೫೦ ರಲ್ಲಿ ಪ್ರಕಟಣೆ ಪ್ರಾರಂಭಿಸಿದ ಎಂ.ಆರ್. ಲಕ್ಷ್ಮಮ್ಮನವರ 'ಸೋದರಿ' ಪತ್ರಿಕೆ ಹಲವು ಧ್ಯೇಯಗಳ ಹಿನ್ನೆಲೆಯಲ್ಲಿ ಬೆಳೆದು ವಿಶಿಷ್ಟತೆಯನ್ನು ಸಾಧಿಸಿದೆ ಎಂಬುದು ಇಲ್ಲಿ ಗಮನಾರ್ಹ ಅಂಶ.

**೩.೨. ಮಹಿಳಾ ಪತ್ರಿಕೋದ್ಯಮ**

೧೯ನೇ ಶತಮಾನದ ಮಹಿಳೆಯರ ಏಳಿಗೆ ಮತ್ತು ಕಲ್ಯಾಣವೆಂದರೆ ಅವರಿಗೆ ಶಿಕ್ಷಣ ನೀಡುವುದಷ್ಟೇ ಆಗಿತ್ತು. ಆದರೆ ೨೦ನೇ ಶತಮಾನದಲ್ಲಿ ಮಹಿಳಾ ಸಬಲೀಕರಣವೆಂದರೆ ಶಿಕ್ಷಣದ ಜೊತೆಗೆ ಉದ್ಯೋಗ, ಸಮಾಜಸೇವೆ, ಪತ್ರಿಕೋದ್ಯಮ, ರಾಜಕೀಯ ಕ್ಷೇತ್ರದಲ್ಲಿ ಮಹಿಳೆಯರು ತೊಡಗಿಸಿಕೊಳ್ಳುವಿಕೆಯಾಗಿತ್ತು. ಹಾಗೆಯೇ ತಮ್ಮನ್ನು ಕನ್ನಡ ಪತ್ರಿಕೋದ್ಯಮದಲ್ಲಿ ತೊಡಗಿಸಿಕೊಂಡ ಮಹಿಳೆಯರ ಪಾತ್ರವೂ ಹಿರಿದು. ಅನೇಕ ಪತ್ರಿಕೆಗಳು ಪ್ರಕಟವಾಗುತ್ತಿದ್ದರು ಯಾವ ಪತ್ರಿಕೆಯಲ್ಲೂ ಮಹಿಳೆಯರಿಗೆ ವಿಶೇಷ ಪ್ರಾತಿನಿಧ್ಯವಿರಲಿಲ್ಲ. ಬಹುತೇಕ ಪತ್ರಿಕೆಗಳ ಸಂಪಾದಕರೆಲ್ಲರೂ ಪುರುಷರೇ ಆಗಿದ್ದರು. ಇದನ್ನು ಗಮನಿಸಿದ ನಂಜನಗೂಡು ತಿರುಮಲಾಂಬಾ ಆರ್ಯನಾರಿಯರ ಅಭ್ಯುದಯಕ್ಕಾಗಿ 'ಕರ್ನಾಟಕ ನಂದಿನಿ' ಎಂಬ ಮಾಸ ಪತ್ರಿಕೆಯನ್ನು ೧೯೧೬ ರ ಅಕ್ಟೋಬರ್‌ನಲ್ಲಿ ಹೊರತಂದರು.[೧] 'ಕರ್ನಾಟಕ ನಂದಿನಿ' ಹಣದ ಅಡಚಣೆಯಿಂದ ಅಕ್ಟೋಬರ್ ೧೯೨೦ ರಲ್ಲಿ ನಿಂತುಹೋದ ಮೇಲೆ, ಕ್ರಿ.ಶ. ೧೯೨೨ ಜುಲೈನಲ್ಲಿ

'ಸನ್ಮಾರ್ಗದರ್ಶಿ' ಎಂಬ ಮಾಸಪತ್ರಿಕೆಯನ್ನು ವಿದ್ಯಾರ್ಥಿಗಳಿಗಾಗಿ ಹೊರತಂದರು. ಆ ಪತ್ರಿಕೆಯು ಕೂಡ ಹಣದ ಮುಗ್ಗಟ್ಟಿನಿಂದ ೧೯೨೬ ರಲ್ಲಿ ನಿಂತು ಹೋಯಿತು. ಆನಂತರ ಇವರಿಂದ ಸ್ಫೂರ್ತಿಗೊಂಡ ಆರ್. ಕಲ್ಯಾಣಮ್ಮನವರು ೧೯೧೭ ರಲ್ಲಿ 'ಸರಸ್ವತಿ' ಮಾಸಪತ್ರಿಕೆಯನ್ನು ಪ್ರಾರಂಭಿಸಿದರು. ಸರಸ್ವತಿ ಪತ್ರಿಕೆಯು ೧೯೧೭ ರಿಂದ ೧೯೬೩ರ ಮಧ್ಯಂತರದವರೆಗೆ ಸುಮಾರು ೪೫ ವರ್ಷಗಳವರೆಗೆ ನಡೆಯಿತು.[೨] ೧೯೩೦ ರಲ್ಲಿ ದ್ವಾರಕಾಬಾಯಿಯವರು 'ಚಿತ್ರಾ' ಪತ್ರಿಕೆಯನ್ನು, ೧೯೫೦ ರಲ್ಲಿ ಕೆ. ವಾರಿಜಾದೇವಿ ಮತ್ತು ಬಿ. ಮೋಹಿನೀದೇವಿಯವರ 'ಸುವಾಸಿನಿ', ೧೯೫೦ ರಲ್ಲಿ ಸರೋಜಿನಿ ಮಹಿಷಿಯವರ 'ವೀರಮಾತೆ', ೧೯೫೨ ರಲ್ಲಿ ಸರಸ್ವತಿಬಾಯಿ ರಾಜವಾಡೆಯವರ 'ಸುಪ್ರಭಾತ', ೧೯೫೫ ರಲ್ಲಿ ಬಿಕವಾಲ್‌ರ 'ಮಹಿಳಾ ಜ್ಯೋತಿ' ೧೯೫೦ ರಲ್ಲಿನ ಕಾವೇರಿಬಾಯಿಯವರ 'ಶಕ್ತಿ' ಮೊದಲಾದ ಪತ್ರಿಕೆಗಳು ಪ್ರಮುಖವಾದವು. ಇವುಗಳು ಮಹಿಳೆಯರನ್ನು ಉದ್ದೇಶವಾಗಿಟ್ಟುಕೊಂಡು ಮಹಿಳೆಯರೇ ನಡೆಸಲ್ಪಟ್ಟ ಪತ್ರಿಕೆಗಳಾಗಿವೆ. ಆ ಸಾಲಿನಲ್ಲಿ ನಿಲ್ಲಬಲ್ಲ ಮಹಿಳಾ ಪತ್ರಿಕೋದ್ಯಮಿ ಎಂ.ಆರ್. ಲಕ್ಷಮ್ಮನವರು. ಅವರು ೧೯೫೦ ರಲ್ಲಿ 'ಸೋದರಿ' ವಾರಪತ್ರಿಕೆಯನ್ನು ಪ್ರಾರಂಭಿಸಿದರು.

### ೩.೩. ಎಂ.ಆರ್. ಲಕ್ಷಮ್ಮನವರ ಸಾಹಿತ್ಯಸೇವೆ

ಎಂ.ಆರ್. ಲಕ್ಷಮ್ಮನವರು ಸಮಾಜಸೇವೆ, ಸಮಾಜಸುಧಾರಣೆ, ರಾಜಕೀಯ ಎಂದು ನಾನಾ ಕ್ಷೇತ್ರಗಳಲ್ಲಿ ಬಿಡುವಿಲ್ಲದೆ ತಮ್ಮನ್ನು ತೊಡಗಿಸಿಕೊಳ್ಳುವುದರ ಜೊತೆಗೆ ಅವರು ತಮ್ಮ ಚಟುವಟಿಕೆಗಳ ಒಂದು ಭಾಗವಾಗಿ ಪತ್ರಿಕೋದ್ಯಮವನ್ನು ಆರಿಸಿಕೊಂಡರು. ಅವರು ಪತ್ರಿಕೋದ್ಯಮರಂಗಕ್ಕೆ ಬರಲು ಅವರ ಸಾಹಿತ್ಯಾಸಕ್ತಿಯ ಜೊತೆಗೆ ಸಂಪ್ರದಾಯಸ್ಥ ಕುಟುಂಬದಲ್ಲಿ ಜನಿಸಿದರೂ ಅವರ ವೈಚಾರಿಕ ಮನೋಭಾವ ಕೂಡ ಕಾರಣವಾಗಿದೆ. ಅವರು ತಮ್ಮ ಕಾಲೇಜಿನ ದಿನಗಳಲ್ಲಿ ಅನೇಕ ಲೇಖನಗಳನ್ನು, ಕಥೆ, ಕವನಗಳನ್ನು ಬರೆಯುತ್ತಿದ್ದರು. ಅವುಗಳು ಅಂದಿನ ಪ್ರಮುಖ ಪತ್ರಿಕೆಗಳಾದ ಸಾಧ್ವಿ, ಪ್ರಬುದ್ಧ ಕರ್ನಾಟಕ ಇನ್ನಿತರ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದವು. ಲಕ್ಷಮ್ಮನವರ ಸಾಹಿತ್ಯಸೇವೆ ಸಣ್ಣದಾಗಿ ಆರಂಭವಾಗಿದ್ದು ನಂತರದ ಕಾಲದಲ್ಲಿ 'ಸೋದರಿ' ಎಂಬ ವಾರಪತ್ರಿಕೆಯ ಸಂಪಾದಕಿಯಾಗಿ, ಮುದ್ರಕಿಯಾಗಿ ಪ್ರಕಾಶಕಿಯಾಗುವವರೆಗೂ ಅವರ ಪತ್ರಿಕೋದ್ಯಮದ ಪಯಣ ಮುಂದುವರೆಯಿತು.

ಎಂ.ಆರ್. ಲಕ್ಷಮ್ಮನವರು "ಕೊಂತಮ್ಮನ ಪದಗಳು" ಎನ್ನುವ ಜಾನಪದ ಸಾಹಿತ್ಯವನ್ನು ಸಂಗ್ರಹ ಮಾಡಿ ಅದನ್ನು ಪ್ರಕಟಿಸಿದರು.[೩] ಜನಸಾಮಾನ್ಯರ ಜೀವನವನ್ನು ಬಿಂಬಿಸುವ ಜಾನಪದ ಗೀತೆಗಳ ಮೇಲೆ ವಿಮರ್ಶೆಯನ್ನು ಬರೆದಿದ್ದಾರೆ. ಇತಿಹಾಸ ವಿದ್ಯಾರ್ಥಿನಿಯಾಗಿದ್ದ ಲಕ್ಷಮ್ಮನವರು ನಲವತ್ತರ ದಶಕದಲ್ಲಿಯೇ ಇತಿಹಾಸ ಆಧಾರಗಳಲ್ಲಿ ಒಂದಾದ ಮೌಖಿಕ ಆಧಾರವಾದ ಜಾನಪದ ಸಾಹಿತ್ಯವನ್ನು ಸಂಗ್ರಹಣೆ ಮಾಡಿ ಅದರ ಮೇಲೆ ವಿಮರ್ಶೆಯನ್ನು ಬರೆದಿರುವುದು ಅವರ ಜ್ಞಾನಕ್ಕೆ ಹಿಡಿದ ಕನ್ನಡಿಯಾಗಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ಏಕಾಂಕ

ನಾಟಕದ ಸ್ಪರ್ಧೆಯಲ್ಲಿ ಭಾಗವಹಿಸಿದ ಲಕ್ಷಮ್ಮನವರು ಬಹುಮಾನವನ್ನು ಪಡೆದರು. ಹಾಗೆಯೇ ಎಸ್.ಎಸ್. ವೆಂಕೋಜಿರಾವ್ ಪ್ರತಿಷ್ಠಾನ ನೀಡುವ ವರ್ಷದ ಯುವ ಸಾಹಿತಿ ಪ್ರಶಸ್ತಿಗೆ ಕೂಡ ಭಾಜನರಾಗಿದ್ದರು. ಇವೆಲ್ಲವೂ ಅವರ ಒಲವು ಸಾಹಿತ್ಯದ ಕಡೆಗೆ ಹರಿಯಲು ಸಹಕಾರಿಯಾಯಿತು. ಶಿಕ್ಷಣ ಮುಗಿದೊಡನೆ ಇವರ ಹಲವು ವಿಚಾರಧಾರೆಗಳು ಮೈಸೂರು, ಮದ್ರಾಸ್ ಮತ್ತು ಹೈದರಾಬಾದಿನ ಆಕಾಶವಾಣಿಯ ಕನ್ನಡ ವಿಭಾಗಗಳಲ್ಲಿ ಪ್ರಸಾರಗೊಂಡವು.[೪] ಲಕ್ಷಮ್ಮನವರು ರಚಿಸಿದ ಸದಭಿರುಚಿಯ ನಾಟಕಗಳನ್ನು ವಿದ್ಯಾರ್ಥಿಗಳು ಅಭಿನಯಿಸುತ್ತಿದ್ದರು. ಮಹಾಜನ ಹೈಸ್ಕೂಲಿನ ಪೋಷಕರ ದಿನಾಚರಣೆ ಸಂದರ್ಭದಲ್ಲಿ ಹಳೆಯ ವಿದ್ಯಾರ್ಥಿಗಳು ಲಕ್ಷಮ್ಮನವರಿಂದ ರಚಿಸಲ್ಪಟ್ಟ 'ಗ್ರಹಚಾರ ಬಿಡುಗಡೆ' ಎಂಬ ನಾಟಕವನ್ನು ಅಭಿನಯಿಸಿದರು.[೫] ಲಕ್ಷಮ್ಮನವರು ಕಾಲೇಜು ವ್ಯಾಸಂಗ ಮಾಡುತ್ತಿದ್ದಾಗಲೇ ಅನಕ್ಷರಸ್ಥರಿಗೆ ಅಕ್ಷರ ಕಲಿಸುವ ಹಂಬಲವನ್ನಿಟ್ಟುಕೊಂಡಿದ್ದು ಪ್ರೊ. ಈಗಲ್ಟನ್ ನೇತೃತ್ವದಲ್ಲಿ ನಾ. ಕಸ್ತೂರಿ ಮುಂತಾದವರೊಡನೆ ಸೇರಿ ಮೈಸೂರಿನ ಕೂರ್ಗಳ್ಳಿಯಲ್ಲಿ ಹಳ್ಳಿಯ ಅವಿದ್ಯಾವಂತರಿಗೆ ಅಕ್ಷರ ಕಲಿಸುವ ಕಾರ್ಯದಲ್ಲಿ ತೊಡಗಿಸಿಕೊಂಡರು. ನಂತರ ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯಲ್ಲಿ ಸದಸ್ಯೆಯಾಗಿದ್ದುಕೊಂಡು ಅಕ್ಷರಪ್ರಚಾರ ಕಾರ್ಯದಲ್ಲಿನ ಅವರ ಪ್ರತಿಭೆಯನ್ನು ಅರಿತು ವಯಸ್ಕರ ಶಿಕ್ಷಣ ಸಮಿತಿಯ ವಾರಪತ್ರಿಕೆ 'ಬೆಳಕು' ಪತ್ರಿಕೆಯ ಪ್ರಥಮ ಸಂಪಾದಕಿಯಾಗುವ ಹೊಣೆಗಾರಿಕೆಯನ್ನು ವಹಿಸಿಕೊಂಡರು. ಹೆಣ್ಣುಮಕ್ಕಳಿಗೆ ಪತ್ರಿಕೋದ್ಯಮ ದೂರವಾಗಿದ್ದ ಕಾಲದಲ್ಲಿ ಸತತವಾಗಿ ಮೂರು ವರ್ಷಗಳ ಕಾಲ 'ಬೆಳಕು' ವಾರಪತ್ರಿಕೆಯ ಸಂಪಾದಕಿಯಾಗಿ ಕಾರ್ಯ ನಿರ್ವಹಿಸಿದರು. ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ ಶಿಕ್ಷಣವನ್ನು ಅನಕ್ಷರಸ್ಥರಿಗೆ ನೀಡಿದ ಮೇಲೆ, ಅದನ್ನು ಮುಂದುವರಿಸಿಕೊಂಡು ಹೋಗಲು ವಯಸ್ಕರ ಶಿಕ್ಷಣದ ಪುಸ್ತಕಮಾಲೆಯ ಅಡಿಯಲ್ಲಿ ಸಣ್ಣ ಸಣ್ಣ ಕಥೆಗಳಿಂದ ಕೂಡಿದ ಪುಸ್ತಕಗಳು ಪ್ರಕಟವಾಗಿದ್ದು ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಪುಸ್ತಕ ಮಾಲೆಯಲ್ಲಿ ಎಂ.ಆರ್. ಲಕ್ಷಮ್ಮನವರ ಎರಡು ಪುಸ್ತಕಗಳು ಅಂಗೀಕರಿಸಲ್ಪಟ್ಟಿದ್ದವು. 'ಕುಂತೀದೇವಿ' ಮತ್ತು 'ಮಾರುತಿ' ಎಂಬ ಪುಸ್ತಕಗಳು ಸಣ್ಣ ಕಥೆಗಳ ಪುಸ್ತಕಗಳಾಗಿದ್ದು ವಯಸ್ಕರ ಶಿಕ್ಷಣ ಸಮಿತಿಯ ಪುಸ್ತಕಮಾಲೆಯಲ್ಲಿ ಸೇರಿಸಲ್ಪಟ್ಟಿದ್ದವು.

### ೩.೪. ಮೈಸೂರು ಸಂಸ್ಥಾನದಲ್ಲಿ ವಯಸ್ಕರ ಶಿಕ್ಷಣ ಬೆಳೆದುಬಂದ ಹಾದಿ

ಶಿಕ್ಷಣ ಮನುಷ್ಯನಿಗೆ ಅತ್ಯವಶ್ಯಕವಾದುದು ಹಾಗೂ ಆತನಲ್ಲಿ ಸಂಸ್ಕಾರವನ್ನು, ಆಲೋಚಿಸುವ ಶಕ್ತಿಯನ್ನು ಹಾಗೂ ಪರಿವರ್ತನೆಯನ್ನು ತರಬಲ್ಲದು. ಶಿಕ್ಷಣವು ಸಾಮಾಜಿಕ ಬದಲಾವಣೆಗೆ ಕಾರಣವಾಗಿ ಸಮಾಜವನ್ನು ಸುಸ್ಥಿರವಾಗಿಡಬಲ್ಲದು. ಹತ್ತೊಂಬತ್ತು ಮತ್ತು ಇಪ್ಪತ್ತನೇ ಶತಮಾನದಲ್ಲಿ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ, ಸ್ವಾತಂತ್ರ್ಯ ಚಳವಳಿಗಳಂತೆ ಶೈಕ್ಷಣಿಕ ಚಳವಳಿಯೂ ಮೈಸೂರು ಸಂಸ್ಥಾನದಲ್ಲಿ ನಡೆಯಿತು. ಅಂತಹ ನಿಶ್ಯಬ್ದವಾದ ಕ್ರಾಂತಿಯನ್ನು ಮಾಡಿದವರು ನಾಲ್ವಡಿ ಕೃಷ್ಣರಾಜ ಒಡೆಯರು. ಅವರು ಸಮಾಜದ ಎಲ್ಲ

ವರ್ಗಗಳಿಗೂ ಶಿಕ್ಷಣ ದೊರಕುವಂತೆ ಮಾಡಿ ಆ ಮೂಲಕ ಮಾದರಿ ಸಂಸ್ಥಾನವಾಗುವ ಕಡೆಗೆ ಮೊದಲ ಹೆಜ್ಜೆಯನ್ನು ಇಟ್ಟು ಮುನ್ನಡೆಸಿದರು. ಶಾಲಾ ಶಿಕ್ಷಣದಿಂದ ವಂಚಿತರಾಗಿರುವ ಅವಿದ್ಯಾವಂತ ಜನರ ಹಾಗೂ ನಿರ್ದಿಷ್ಟವಾದ ಗುರಿಯಿಲ್ಲದ ಶಿಕ್ಷಣವನ್ನು ಪಡೆದಿರುವ ಅರೆಅಕ್ಷರಸ್ಥ ವಯಸ್ಕರಿಗೆ ಪ್ರಾರಂಭವಾದುದೇ ವಯಸ್ಕರ ಶಿಕ್ಷಣ. ವಯಸ್ಕರ ಶಿಕ್ಷಣದ ಅರ್ಥ ಸಾಕ್ಷರತೆಗೆ ಮಾತ್ರ ಸೀಮಿತವಾಗದೇ ವಿಶಾಲವಾದ ವ್ಯಾಪ್ತಿಯನ್ನು ಹೊಂದಿದೆ.

ಮೈಸೂರು ಸಂಸ್ಥಾನದಲ್ಲಿ ೧೮೮೭ ಜನವರಿ ತಿಂಗಳಲ್ಲಿ ರಾತ್ರಿ ಶಾಲೆ ಆರಂಭವಾಗುವುದರೊಂದಿಗೆ ವಯಸ್ಕರ ಶಿಕ್ಷಣ ಪ್ರಾರಂಭವಾಯಿತು.[೬] ಇಬ್ಬರು ಮುಸ್ಲಿಂ ವಿದ್ಯಾರ್ಥಿಗಳಿಂದ ಪ್ರಾರಂಭವಾದ ರಾತ್ರಿ ಶಾಲೆಯ ನೇತೃತ್ವವನ್ನು ಎಂ. ಶಾಮರಾವ್ ಅವರು ವಹಿಸಿಕೊಂಡು ಮಹಾರಾಜ ಕಾಲೇಜಿನಲ್ಲಿ ಸಹಾಯಕ ಶಿಕ್ಷಕರಾಗಿದ್ದ ಇವರು ಪ್ರಾರಂಭಿಸಿದ ವಯಸ್ಕರ ಶಿಕ್ಷಣ ೧೮೯೦ ರ ಮಾರ್ಚ್ ವೇಳೆಗೆ ೧೦೯ ವಿದ್ಯಾರ್ಥಿಗಳು ಸೇರಿಕೊಂಡಿದ್ದು ನಾಲ್ಕು ತರಗತಿಗಳಲ್ಲಿ ಶಿಕ್ಷಣ ನಡೆಯುತ್ತಿತ್ತು. ಅವರಿಗೆ ಅಕ್ಷರಜ್ಞಾನದ ಜೊತೆಗೆ ಕರಕುಶಲ ಚಟುವಟಿಕೆಗಳನ್ನೂ ಹೇಳಿಕೊಡಲಾಗುತ್ತಿತ್ತು. ೭೬ ಜನ ವಿದ್ಯಾರ್ಥಿಗಳು ಪ್ರತಿದಿನ ಹಾಜರಿರುತ್ತಿದ್ದರು. ೪ ಜನ ಶಿಕ್ಷಕರಿದ್ದು ಮುಖ್ಯ ಶಿಕ್ಷಕರು ಎಫ್.ಎ. ಪರೀಕ್ಷೆಯನ್ನು ಪಾಸುಮಾಡಿದ್ದರು. ಮೈಸೂರು ಸಂಸ್ಥಾನದಲ್ಲಿ ಶೇಕಡ ೧೮% ರಷ್ಟು ಮುಸ್ಲಿಂರ ಜನಸಂಖ್ಯೆ ಇದ್ದು, ರಾತ್ರಿಶಾಲೆಯಲ್ಲಿ ಹೆಚ್ಚಿನವರು ಮುಸ್ಲಿಂ ವಿದ್ಯಾರ್ಥಿಗಳಿದ್ದು ಸ್ವಚ್ಛತೆಯ ಪಾಠವನ್ನು ಹೇಳಿಕೊಡಲಾಗುತ್ತಿತ್ತು. ೧೮೮೯ ಜುಲೈ ತಿಂಗಳಿನಲ್ಲಿ ಮೈಸೂರು ಸರ್ಕಾರವು ತಿಂಗಳಿಗೆ ಇಪ್ಪತ್ತು ರೂಪಾಯಿಗಳ ಸಹಾಯಧನವನ್ನು ಮಂಜೂರು ಮಾಡಿತು. ಒಂದು ತಿಂಗಳಿಗೆ ಒಂದು ಆಣೆಯ ವಿದ್ಯಾರ್ಥಿ ಶುಲ್ಕವನ್ನು ವಿದ್ಯಾರ್ಥಿಗಳಿಂದ ಸಂಗ್ರಹಿಸಲಾಗುತ್ತಿತ್ತು. ೧೮೮೯ ರಲ್ಲಿ ಮೇಲುಕೋಟೆಯಲ್ಲಿ ರಾತ್ರಿಶಾಲೆಯನ್ನು ಅಲ್ಲಿನ ಹೋಬಳಿ ಶಾಲೆಯ ಮುಖ್ಯೋಪಾಧ್ಯಾಯರು ಪ್ರಾರಂಭಿಸಿದರು. ತಮ್ಮ ಸ್ವಂತ ಖರ್ಚಿನಲ್ಲಿ ಶಾಲೆಯನ್ನು ನಡೆಸತೊಡಗಿದ ಮುಖ್ಯ ಶಿಕ್ಷಕರು ಹಾಗೂ ಇಬ್ಬರು ಸಹ ಶಿಕ್ಷಕರು ಮೂರು ಗಂಟೆಗಳ ಕಾಲ ಪಾಠಪ್ರವಚನಗಳಲ್ಲಿ ತೊಡಗಿಸಿಕೊಂಡಿದ್ದರು. ನೇಕಾರರು ಮತ್ತು ರೈತರೇ ಹೆಚ್ಚಾಗಿ ವಯಸ್ಕರ ಶಿಕ್ಷಣ ತರಗತಿಗೆ ಬರುತ್ತಿದ್ದು, ಅವರಿಂದ ಯಾವುದೇ ಶುಲ್ಕವನ್ನು ಪಡೆಯದೇ ಶಿಕ್ಷಣವನ್ನು ನೀಡುತ್ತಿದ್ದರು. ಶಾಲೆಯ ಮೇಲ್ವಿಚಾರಣೆಗೆ ಒಂದು ಸಮಿತಿಯನ್ನು ನೇಮಕ ಮಾಡಿಕೊಂಡಿದ್ದು, ಸರ್ಕಾರವು ಒಂದು ತಿಂಗಳಿಗೆ ಹದಿನೈದು ರೂಪಾಯಿಯನ್ನು ಮಂಜೂರು ಮಾಡಿತು. ೧೮೯೧ರ ಜನಗಣತಿ ಪ್ರಕಾರ, ಮೈಸೂರು ರಾಜ್ಯದಲ್ಲಿ ಅನಕ್ಷರಸ್ಥರ ಪ್ರಮಾಣ ಶೇಕಡ ೮೭.೮% ರಷ್ಟಿತ್ತು.[೭] ೧೮೯೩ ರಲ್ಲಿ ವೆಸ್ಲಿಯನ್ ಮಿಷನ್ನಿನ ವತಿಯಿಂದ ತ್ಯಾಮಗೊಂಡ್ಲುವಿನಲ್ಲಿ ರಾತ್ರಿಶಾಲೆ ಪ್ರಾರಂಭವಾಯಿತು. ಅದು ಪಂಚಮರಿಗಾಗಿ ಪ್ರಾರಂಭವಾದ ಶಾಲೆಯಾಗಿದ್ದು, ಒಂದು ಶಾಲೆ ಹರಿಜನರ ಬಲಗೈ ವರ್ಗದವರಿಗೆ, ಇನ್ನೊಂದು ಹರಿಜನರ ಎಡಗೈ ವರ್ಗದವರಿಗೆ ಪ್ರಾರಂಭವಾಯಿತು. ೩೦ ಜನ ವಿದ್ಯಾರ್ಥಿಗಳು ದಾಖಲಾಗಿದ್ದು, ಅದರಲ್ಲಿ ೮ ಜನರು ಓದಲು

ಬರೆಯಲು ಕಲಿತಿದ್ದು, ಸರಳವಾದ ಲೆಕ್ಕಗಳನ್ನು ಕೂಡ ಮಾಡುತ್ತಿದ್ದರು.[೮] ಸರ್ಕಾರದ ವತಿಯಿಂದ ಕೂಡ ಹರಿಜನರ ಎಡಗೈ ವರ್ಗಕ್ಕೆ ಒಂದು ಶಾಲೆಯನ್ನು ಪ್ರಾರಂಭಿಸಲಾಯಿತು. ಈ ಶಾಲೆಯಲ್ಲಿ ಹೆಣ್ಣುಮಕ್ಕಳು ಹಾಗೂ ಗಂಡುಮಕ್ಕಳು ಒಟ್ಟಿಗೆ ಕಲಿಯುತ್ತಿದ್ದು, ೩೮ ಜನ ವಿದ್ಯಾರ್ಥಿಗಳು ದಾಖಲಾಗಿದ್ದರು.

೧೯೧೨ರ ಮೈಸೂರು ಸಂಸ್ಥಾನದಲ್ಲಿ ಶಿಕ್ಷಣದ ಕ್ರಾಂತಿ ಉಂಟಾಯಿತು. ಕಡ್ಡಾಯ ಮತ್ತು ಉಚಿತ ಶಿಕ್ಷಣ, ಕನ್ನಡ ಭಾಷೆಯ ಬೆಳವಣಿಗೆಗಾಗಿ ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆ, ಉನ್ನತ ಶಿಕ್ಷಣಕ್ಕಾಗಿ ವಿಶ್ವವಿದ್ಯಾನಿಲಯದ ಸ್ಥಾಪನೆಗಳಿಂದಾಗಿ ಶಿಕ್ಷಣದ ಮಹತ್ವವನ್ನು ಅರಿಯುವಲ್ಲಿ ಜನಸಾಮಾನ್ಯರು ಕೂಡ ಕೈಜೋಡಿಸಿದರು. ನಾಲ್ವಡಿ ಕೃಷ್ಣರಾಜ ಒಡೆಯರ್‌ರವರ ಔದಾರ್ಯತೆ ಮತ್ತು ದಿವಾನರಾಗಿದ್ದ ಸರ್ ಎಂ. ವಿಶ್ವೇಶ್ವರಯ್ಯನವರ ದೂರದೃಷ್ಟಿಯ ಫಲವಾಗಿ ಮೈಸೂರು ಸಂಸ್ಥಾನದಲ್ಲಿ ಕಡ್ಡಾಯ ಮತ್ತು ಉಚಿತ ಶಿಕ್ಷಣದ ಜೊತೆಗೆ ವಯಸ್ಕರ ಶಿಕ್ಷಣಕ್ಕೂ ಪ್ರೋತ್ಸಾಹ ಕೊಟ್ಟರು. ರಾತ್ರಿಶಾಲೆಗಳೆಂದು ಕರೆಯಲ್ಪಡುತ್ತಿದ್ದ, ಶಿಕ್ಷಣ ವ್ಯವಸ್ಥೆಗೆ ವಯಸ್ಕರ ಶಿಕ್ಷಣವೆಂದು ನಾಮಕರಣ ಮಾಡಲಾಯಿತು. ಕಲಿಕೆಯ ಜೊತೆಗೆ ಕೆಲಸವನ್ನು ಸೇರಿಸಿ ಸಾಮಾನ್ಯ ಶಿಕ್ಷಣಕ್ಕೆ ಕ್ರಿಯಾತ್ಮಕವಾದ ಸ್ವರೂಪವನ್ನು ನೀಡಿದವರು ಸರ್ ಎಂ. ವಿಶ್ವೇಶ್ವರಯ್ಯನವರು. ೧೯೧೨ರಲ್ಲಿ ಅನಕ್ಷರತೆಯ ನಿರ್ಮೂಲನೆಗೆ ಭಾರತದಲ್ಲಿಯೇ ಪ್ರಥಮ ಬಾರಿಗೆ ೭,೦೦೦ ವಯಸ್ಕರ ಶಿಕ್ಷಣ ಕೇಂದ್ರಗಳನ್ನು ಮತ್ತು ಸಾವಿರಾರು ಪುಸ್ತಕ ಭಂಡಾರಗಳನ್ನು ಆರಂಭಿಸಲಾಯಿತು. ಸರ್ಕಾರದ ಶಾಲೆಗಳಲ್ಲಿಯೇ ರಾತ್ರಿ ವೇಳೆ ವಯಸ್ಕರಿಗೆ ಶಿಕ್ಷಣ ನೀಡಲು ಆರಂಭಿಸಿ, ಪ್ರಾಥಮಿಕ ಶಿಕ್ಷಕರೇ ವಯಸ್ಕರಿಗೆ ಬೋಧಿಸತೊಡಗಿದರು. ಮಕ್ಕಳ ಪುಸ್ತಕಗಳನ್ನೇ ಬಳಸಿಕೊಂಡು ಶಿಕ್ಷಣ ನೀಡುತ್ತಿದ್ದು, ಕಲಿಕೆಯ ವಿಧಾನದಲ್ಲಿ ಯಾವುದೇ ಬದಲಾವಣೆ ಇಲ್ಲದೆ ಮಕ್ಕಳಿಗೆ ಕಲಿಸುವ ರೀತಿಯಲ್ಲಿ ಕಲಿಸಲಾಗುತ್ತಿತ್ತು. ವಯಸ್ಕರಿಗೆ ಬೋಧಿಸುತ್ತಿದ್ದ ಶಿಕ್ಷಕರಿಗೆ ಬೇರೆ ಯಾವುದೇ ತರಬೇತಿ ಇರಲಿಲ್ಲ.

ನಾಲ್ವಡಿ ಕೃಷ್ಣರಾಜ ಒಡೆಯರು ಮೈಸೂರು ವಿಶ್ವವಿದ್ಯಾಲಯದ ಘಟಿಕೋತ್ಸವದಲ್ಲಿ ಮಾಡಿದ ಭಾಷಣದಲ್ಲಿ "ಈ ವಿಶ್ವವಿದ್ಯಾನಿಲಯವು ಸ್ಥಾಪನೆಯಾಗಿರುವುದು ಹೆಚ್ಚಿನ ಸಂಖ್ಯೆಯಲ್ಲಿರುವ ಅದೃಷ್ಟಹೀನರಿಗೆ ವಿನಹ ಕಡಿಮೆ ಪ್ರಮಾಣದ ಭಾಗ್ಯವಂತರಿಗಲ್ಲ. ಶಿಕ್ಷಕವರ್ಗದವರು ಸಾಮಾನ್ಯ ಜನರ ಮಟ್ಟಕ್ಕೆ ಇಳಿದು ತಮ್ಮ ವಿದ್ಯೆ ಮತ್ತು ಜ್ಞಾನವನ್ನು ಅವರೊಡನೆ ಹಂಚಿಕೊಳ್ಳಬೇಕು" ಎಂದು ತಿಳಿಸಿದರು.[೯] ಕನ್ನಡ ಸಾಹಿತ್ಯ ಹಾಗೂ ಸಂಸ್ಕೃತಿಯನ್ನು ಕುರಿತು ಸರಳವಾದ ಚಿಕ್ಕ ಪುಸ್ತಕಗಳ ಮೂಲಕ ಶಿಕ್ಷಣವನ್ನು ಪ್ರಚಾರ ಮಾಡಬೇಕೆಂದು ಸೂಚಿಸಿ ವಯಸ್ಕರ ಶಿಕ್ಷಣದ ಚಳವಳಿಗೆ ಅಡಿಪಾಯ ಹಾಕಿದರು. ವಯಸ್ಕರ ಶಿಕ್ಷಣದ ಮಹತ್ವದ ಬಗ್ಗೆ ಸರ್ ಎಂ. ವಿಶ್ವೇಶ್ವರಯ್ಯನವರು ಮಾತನಾಡುತ್ತಾ "ಮೊದಲನೆಯದಾಗಿ ತಮ್ಮ ತಮ್ಮ ಹಳ್ಳಿಗಳನ್ನು ಉದ್ಧಾರ ಮಾಡಿಕೊಳ್ಳುವ ಆಸೆ ಆಕಾಂಕ್ಷೆಗಳು ಸಹಕಾರ ಮನೋಭಾವ ಮೂಡಿ ಬರಬೇಕು.

ವಯಸ್ಕರಿಗೆ ಓದು ಬರಹ ಕಲಿಸುವ ವ್ಯವಸ್ಥೆ ಇರಬೇಕು. ಪ್ರತಿ ಹಳ್ಳಿಯಲ್ಲಿಯೂ ವೃತ್ತಿ ಕಸುಬುದಾರರಾದ ಕಮ್ಮಾರ, ಬಡಗಿ, ಚಮ್ಮಾರ ಇರಬೇಕು. ಗಾಡಿಯ ಚಕ್ರ ಹಳ್ಳಿಯಲ್ಲಿಯೇ ತಯಾರಾಗಬೇಕು, ಪಾತ್ರೆ ರಿಪೇರಿ ಆಗಬೇಕು, ಪಾದರಕ್ಷೆಗಳು ಅಲ್ಲಿಯೇ ಸಿದ್ಧವಾಗಬೇಕು. ಪ್ರತಿಯೊಂದು ಸಂಸಾರವು ಯಾವುದಾದರೊಂದು ಉಪ ಕಸುಬನ್ನು ಅನುಸರಿಸುವಂತಿರಬೇಕು. ೨೫೦ ಪ್ರಜಾಸಂಖ್ಯೆಗೆ ಒಂದು ಗೃಹ ಕೈಗಾರಿಕೆಯಿರಬೇಕು. ಪ್ರತಿ ಕುಟುಂಬವು ಎರಡು ವರ್ಷಗಳಿಗೆ ಸಾಲುವಷ್ಟು ಧಾನ್ಯಗಳನ್ನು ಸಂಗ್ರಹಿಸಿ ಇಟ್ಟುಕೊಳ್ಳಬೇಕು. ಪ್ರತಿ ಗ್ರಾಮವು ಉತ್ತಮವಾದ ಎರಡು ಕನ್ನಡ ಪತ್ರಿಕೆಗಳನ್ನು ತರಿಸಿಕೊಂಡು ಪ್ರಪಂಚದ ಆಗುಹೋಗುಗಳನ್ನು ಪರಿಚಯಮಾಡಿಕೊಳ್ಳಬೇಕು. ಪ್ರತಿ ಗ್ರಾಮವು ವರ್ಷಾಂತ್ಯದಲ್ಲಿ ಜನನ-ಮರಣ ಸಂಖ್ಯೆ, ಜಾನುವಾರು ಸಂಖ್ಯೆ ಗಣತಿ ಕೈಗೊಂಡು ಯಶಸ್ವಿಯಾಗಿ ನಡೆಸಿದ ಅಭಿವೃದ್ಧಿ ಕೆಲಸಗಳ ಬಗ್ಗೆ ವರದಿ ಸಲ್ಲಿಸಬೇಕು. ಇದಕ್ಕಾಗಿ ಪರಿಸರ ಬದಲಾವಣೆಯಾಗಬೇಕು. ಗ್ರಾಮ ಸಮಿತಿಗಳು ಕೃಷಿ ಅಭಿವೃದ್ಧಿ ಉಪಸಮಿತಿಗಳನ್ನು ರಚಿಸಿಕೊಳ್ಳಬೇಕು. ದೇಶವಿದೇಶಗಳಲ್ಲಿ ಹೇಗೆ ಆಧುನಿಕ ವೈಜ್ಞಾನಿಕ ವಿಧಾನಗಳಿಂದ ಬೇಸಾಯ ಮಾಡಲಾಗುತ್ತಿತ್ತು ಎಂಬುದನ್ನು ರೈತರಿಗೆ ತಿಳಿಯಪಡಿಸಬೇಕು. ಅವರ ನಂಬಿಕೆ ಗಳಿಸಿಕೊಳ್ಳಲು ಅವರ ಸ್ವಂತ ಜಮೀನಿನಲ್ಲಿ ಪ್ರಯೋಗಗಳು ಮತ್ತು ಪ್ರಾತ್ಯಕ್ಷಿಕೆಗಳನ್ನು ನಡೆಸಬೇಕು. ಸಭೆ ಸಮ್ಮೇಳನಗಳನ್ನು ಏರ್ಪಡಿಸಬೇಕು. ಸಾಧ್ಯವಾದ ಎಲ್ಲಾ ಮಾಧ್ಯಮಗಳನ್ನು ಬಳಸಿಕೊಂಡು, ಅವರ ದೃಷ್ಟಿಯನ್ನು ವಿಶಾಲಗೊಳಿಸಬೇಕು. ಆದುದರಿಂದ ರಾಜ್ಯದಲ್ಲಿ ಸಾಕ್ಷರತಾ ಚಳವಳಿ ಮತ್ತು ಪುಸ್ತಕಭಂಡಾರವನ್ನು ಆರಂಭಿಸಲಾಗಿದೆ. ಇದರಲ್ಲಿ ಪ್ರತಿಯೊಬ್ಬರು ಭಾಗಿಗಳಾಗಿ ಈ ಕಾರ್ಯವನ್ನು ಯಶಸ್ವಿಗೊಳಿಸಬೇಕು" ಎಂದು ಜನತೆಯಲ್ಲಿ ಮನವಿ ಮಾಡುತ್ತಾ ಸಮಗ್ರ ಗ್ರಾಮೀಣಾಭಿವೃದ್ಧಿಯಲ್ಲಿ ವಯಸ್ಕರ ಶಿಕ್ಷಣದ ಪಾತ್ರದ ಬಗ್ಗೆ ತಿಳಿಸಿದರು.[೧೦]

೧೯೧೯ರ ಸೆಪ್ಟೆಂಬರ್ ೨೮ ರಂದು ಬೆಳಗ್ಗೆ ೮ ಗಂಟೆಗೆ ರಿಂಗ್‌ವುಡ್‌ನಲ್ಲಿರುವ ವಯಸ್ಕರ ಶಿಕ್ಷಣ ಶಾಲೆಯಲ್ಲಿ ವಿಶೇಷವಾದ ಶಿಕ್ಷಣ ಸಮಿತಿ ಸಭೆ ಸೇರಿ ಸಭೆಯಲ್ಲಿ ವಯಸ್ಕರ ಶಿಕ್ಷಣ ಶಾಲೆಯಲ್ಲಿ ಶಿಕ್ಷಣ ಪಡೆಯುವವರಿಗೆ ಸೂಕ್ತವಾದ ಪಠ್ಯಪುಸ್ತಕಗಳನ್ನು ರಚಿಸುವುದರ ಬಗ್ಗೆ ಚರ್ಚಿಸಲಾಯಿತು. ರಾಜಕಾರ್ಯಪ್ರಜಾಸಕ್ತ ರಾವ್‌ಬಹದ್ದೂರ್, ಎಂ. ಶಾಮರಾವ್, ಸಿ.ಎಸ್. ಬಾಲಸುಂದರಂ ಅಯ್ಯರ್, ಎಂ. ರಾಮಸ್ವಾಮಯ್ಯ, ಕೆ. ಶ್ರೀನರಸಿಂಹಯ್ಯ ಹಾಗೂ ಬೆಂಗಳೂರಿನ ವಯಸ್ಕರ ಶಿಕ್ಷಣ ಶಾಲೆಯ ಶಿಕ್ಷಕರಾದ ಎಂ. ಸಿಂಗ್ರಾಚಾರ್ ಮತ್ತು ಶ್ರೀ ಸುಬ್ರಮಣ್ಯ ಶಾಸ್ತ್ರಿಗಳು ಸಮಿತಿಯ ಸದಸ್ಯರಾಗಿದ್ದು, ಪಠ್ಯಪುಸ್ತಕಗಳ ಬಗ್ಗೆ ಚರ್ಚಿಸಿದರು. ಈ ಸಮಿತಿಯಲ್ಲಿದ್ದ ರೆವೆರೆಂಡ್ ಟಾಮ್‌ಲಿನ್‌ಸನ್ ಗೈರುಹಾಜರಾಗಿದ್ದರು. ಈ ಸಮಿತಿಯು ಮಾಡಿದ ಶಿಫಾರಸುಗಳನ್ನು ಆದೇಶ ಸಂಖ್ಯೆ ೧೨೯ ದಿನಾಂಕ ೧೧.೦೫.೧೯೧೭ ರಲ್ಲಿ ಶಿಕ್ಷಣ ಇಲಾಖೆಯ ಮುಖ್ಯಸ್ಥರು ಅಂಗೀಕರಿಸಿದರು. ಅವುಗಳಲ್ಲಿ ಪ್ರಮುಖವಾದುದು.

೧) ವಯಸ್ಕರ ಶಿಕ್ಷಣದ ಗುರಿಯನ್ನು ತಲುಪಲು ಕನಿಷ್ಠ ಎರಡು ಹಂತದಲ್ಲಿ ಸೂಕ್ತವಾದ ಪಠ್ಯಪುಸ್ತಕಗಳನ್ನು ರಚಿಸುವುದು.

೨) ವಯಸ್ಕರ ಶಿಕ್ಷಣದಲ್ಲಿ ಪ್ರಾಥಮಿಕ ಹಂತ ಒಂದು ವರ್ಷದ ಅವಧಿಯಾಗಿದ್ದು, ನಂತರ ಮುಂದುವರಿಕೆ ಕಲಿಕೆಯಾಗಿ ೨ನೇ ವರ್ಷವು ವಯಸ್ಕರ ಶಿಕ್ಷಣ ಶಾಲೆಯಲ್ಲಿ ಕಲಿಯಬೇಕಾಗಿರುತ್ತದೆ. ಓದುವುದು, ಬರೆಯುವುದು ಮತ್ತು ಅಂಕಗಣಿತವನ್ನು ಪ್ರಾಥಮಿಕ ಹಂತದಲ್ಲಿ ಕಲಿಸಬೇಕು. ಹಾಗೆಯೇ ಇತಿಹಾಸ, ಭೂಗೋಳಶಾಸ್ತ್ರ, ಪೌರನೀತಿಗಳನ್ನು ಎರಡನೇ ವರ್ಷದಲ್ಲಿ ಬೋಧಿಸತಕ್ಕದ್ದು.

೩) ಮೊದಲ ಆರು ತಿಂಗಳಲ್ಲಿ ಬಾಲಬೋಧೆ ಭಾಗ ೧ ಪುಸ್ತಕವನ್ನು ಬೋಧಿಸಿ ಮುಂದಿನ ೬ ತಿಂಗಳಲ್ಲಿ ವಿಶೇಷವಾಗಿ ಓದಲು ಪಠ್ಯಪುಸ್ತಕಗಳನ್ನು ಬಳಸತಕ್ಕದ್ದು. ಈ ಪುಸ್ತಕಗಳಲ್ಲಿ ನೂರು ಅಧ್ಯಾಯಗಳ ಗದ್ಯಭಾಗವಿದ್ದು, ಆರೋಗ್ಯ ರಕ್ಷಣೆ, ಆರೋಗ್ಯ ವಿಜ್ಞಾನ, ಪ್ರಾಥಮಿಕ ವಿಜ್ಞಾನ, ಇತಿಹಾಸ, ಭೂಗೋಳಶಾಸ್ತ್ರ ಕಥೆಗಳು ಇವುಗಳನ್ನು ಒಳಗೊಂಡಿರುತ್ತದೆ. ಅದರ ಜೊತೆಗೆ ಇಪ್ಪತ್ತು ಸರಳವಾದ ಪದ್ಯಭಾಗವಿದ್ದು ಗದ್ಯ ಮತ್ತು ಪದ್ಯ ಎರಡು ಸೇರಿ ೧೫೦ ಪುಟಗಳನ್ನು ಒಳಗೊಂಡಿರಬೇಕು. ಈ ಪಠ್ಯಕ್ರಮಗಳು ಸರಳ ಉದಾಹರಣೆಗಳನ್ನು ಒಳಗೊಂಡಿದ್ದು, ಸುಲಲಿತವಾಗಿ ಶಿಕ್ಷಕರು ಓದಿ ಹೇಳಬೇಕು. ಇದರ ಜೊತೆಗೆ ದಿನಪತ್ರಿಕೆಗಳ ಸುದ್ದಿಸಮಾಚಾರಗಳನ್ನು ಓದುವುದು, ಕೂಡುವ, ಕಳೆಯುವ, ಗುಣಿಸುವ, ಭಾಗಿಸುವ ಗಣಿತದ ಸಮಸ್ಯೆಗಳನ್ನು ಸರಳವಾಗಿ ಹೇಳಿಕೊಡುವುದು, ಇದರ ಜೊತೆಗೆ ನಾಣ್ಯಗಳ ಬಗ್ಗೆ, ತೂಕ ಮತ್ತು ಅಳತೆಗಳ ಬಗ್ಗೆ, ಹಣಕಾಸಿನ ವ್ಯವಹಾರಗಳ ಬಗ್ಗೆ ಎಕರೆ, ಗುಂಟೆ ಮುಂತಾದ ವಿಷಯಗಳ ಬಗ್ಗೆ ಪ್ರಾಥಮಿಕ ತರಗತಿಗಳಲ್ಲಿ ಬೋಧಿಸುವುದು, ಅಕ್ಷರಗಳನ್ನು ನಕಲು ಮಾಡುವುದು, ಉಕ್ತಲೇಖನಗಳನ್ನು ನೀಡುವ ಮೂಲಕ ಎರಡನೇ ಭಾಗದಲ್ಲಿ ಬೋಧಿಸುವುದು.

೪) ದ್ವಿತೀಯ ವರ್ಷದಲ್ಲಿ ಕಲಿಕೆಯ ಮುಂದುವರೆದ ಭಾಗದಲ್ಲಿ ಪ್ರಾಥಮಿಕ ಹಂತದ ಪುಸ್ತಕಗಳನ್ನು ಓದುವುದರ ಜೊತೆಗೆ ಸರಳ ಉದಾಹರಣೆಗಳಿಂದ ಕೂಡಿದ ೧೨೦ ಅಧ್ಯಾಯಗಳ ಗದ್ಯಭಾಗ ಹಾಗೂ ೧೦೦ ಸರಳ ಪದ್ಯಗಳನ್ನು ಕಲಿಯಬೇಕಾಗಿರುತ್ತದೆ. ರಾಮಾಯಣ, ಮಹಾಭಾರತ, ಜೈಮಿನಿಭಾರತ ಮುಂತಾದ ಪುಸ್ತಕಗಳಿಂದ ವಯಸ್ಕರಿಗೆ ಅರ್ಥವಾಗುವ ರೀತಿಯಲ್ಲಿ ಬೋಧಿಸುವುದು, ದಿನಪತ್ರಿಕೆಗಳನ್ನು ತರಗತಿಯಲ್ಲಿ ಕಡ್ಡಾಯವಾಗಿ ಓದುವುದು, ಪಠ್ಯವನ್ನು ನಕಲು ಮಾಡುವುದು, ಉಕ್ತಲೇಖನ ಬರೆಯುವುದು, ಪುಸ್ತಕಗಳನ್ನು ಓದುವುದರ ಜೊತೆಗೆ ಇತಿಹಾಸ, ಭೂಗೋಳಶಾಸ್ತ್ರ, ಪೌರನೀತಿಗಳನ್ನು ಬೋಧಿಸುವುದು, ಪತ್ರಗಳನ್ನು ಬರೆಯುವುದು, ಅರ್ಜಿಗಳನ್ನು ಬರೆಯುವುದನ್ನು ಕಲಿಯುವುದು, ಕರಾರುಪತ್ರಗಳನ್ನು ಬರೆಯುವುದನ್ನು ಕಲಿಯುವುದು ಇತ್ಯಾದಿಗಳನ್ನು ಕಲಿಯಬೇಕಾಗಿರುತ್ತದೆ.

೫) ಪಠ್ಯಪುಸ್ತಕಗಳನ್ನು ಮೊದಲ ಓದುಗ, ದ್ವಿತೀಯ ಓದುಗ, ತೃತೀಯ ಓದುಗ, ಇತಿಹಾಸ, ಭೂಗೋಳಶಾಸ್ತ್ರ, ಪೌರನೀತಿಯ ಮೊದಲ ಪಠ್ಯಗಳು ಹಾಗೂ ದ್ವಿತೀಯ ಹಂತದ ಪುಸ್ತಕಗಳನ್ನಾಗಿ ೫ ಹಂತದಲ್ಲಿ ವಿಭಾಗಿಸಲಾಗಿತ್ತು.

೬) ಶಿಕ್ಷಣ ತಜ್ಞರ ಮೂಲಕ ಸೂಕ್ತವಾದ ಪಠ್ಯಪುಸ್ತಕಗಳನ್ನು ಸಿದ್ಧಪಡಿಸುವುದರ ಜೊತೆಗೆ ಅವರಿಗೆ ಸೂಕ್ತ ಗೌರವಧನವನ್ನು ನೀಡುವುದು.

ಈ ಮೇಲಿನ ೬ ಅಂಶಗಳನ್ನು ಸಮಿತಿಯು ಶಿಫಾರಸ್ಸು ಮಾಡಿದ್ದು, ಅವುಗಳನ್ನು ಆದೇಶ ಸಂಖ್ಯೆ ಇ೪೪೭-೯-ಇಜಟಿ-೧೫೦-೧೯-೪ ದಿನಾಂಕ ೦೨.೧೦.೧೯೨೦ ರಲ್ಲಿ ಸರ್ಕಾರದ ಆದೇಶ ಹೊರಡಿಸಲಾಯಿತು. ಪಠ್ಯಪುಸ್ತಕಗಳ ಬೆಲೆ ೨೫೦ ರೂ.ಗಳನ್ನು ಮೀರಬಾರದು ಎಂಬ ಅಂಶಗಳೊಂದಿಗೆ ಶಿಕ್ಷಣ ಇಲಾಖೆಯ ಕಾರ್ಯದರ್ಶಿಗಳಾದ ಪಿ.ಜಿ. ಡಿಸೋಜರವರು ಆದೇಶವನ್ನು ಹೊರಡಿಸಿದರು.[೧೧] ಈ ಹೊಸ ಪಠ್ಯಪುಸ್ತಕಗಳನ್ನು ದಿನಾಂಕ ೦೧.೦೭.೧೯೧೭ ರಿಂದ ಜಾರಿಗೆ ತರಲಾಗಿತ್ತು. ವಾರದಲ್ಲಿ ೬ ದಿನಗಳು ವಯಸ್ಕರ ಶಿಕ್ಷಣ ಶಾಲೆಗಳು ಕಾರ್ಯ ನಿರ್ವಹಿಸತಕ್ಕದ್ದು ಹಾಗೂ ಪ್ರತಿದಿನ ಎರಡು ಗಂಟೆಗಳಲ್ಲಿ ೩ ಅವಧಿಯ ತರಗತಿಗಳನ್ನು ನಡೆಸಲು ಸೂಚಿಸಲಾಯಿತು. ಇದಲ್ಲದೆ ವಯಸ್ಕರ ಶಿಕ್ಷಣ ಶಾಲೆಗಳಲ್ಲಿ ಬೋಧಿಸುವ ಶಿಕ್ಷಕರಿಗೆ ಕೆಲವು ನಿಯಮಗಳನ್ನು ಮತ್ತು ಸೂಚನೆಗಳನ್ನು ನೀಡಲಾಗಿದ್ದು, ಸರಳವಾಗಿ ಸೂಕ್ತ ಉದಾಹರಣೆಗಳೊಂದಿಗೆ ಬೋಧಿಸಲು ಆದೇಶವನ್ನು ಹೊರಡಿಸಲಾಗಿತ್ತು.[೧೨]

ದಿವಾನರಾಗಿದ್ದ ಸರ್ ಎಂ. ವಿಶ್ವೇಶ್ವರಯ್ಯನವರು ಆನಂತರದ ದಶಕದಲ್ಲಿ ವಯಸ್ಕರ ಶಿಕ್ಷಣ ಶಾಲೆಗಳು ಕ್ಷೀಣಿಸತೊಡಗಿದವು. ಕ್ರಮೇಣ ವಯಸ್ಕರ ಶಿಕ್ಷಣ ಶಾಲೆಗಳ ಸಂಖ್ಯೆ ಕ್ಷೀಣಿಸತೊಡಗಿ ಕೇವಲ ೪೫೯ ಶಾಲೆಗಳು ಮಾತ್ರ ನಡೆಯುತ್ತಿದ್ದು, ಅದರಲ್ಲಿ ೧೦,೬೩೧ ವಿದ್ಯಾರ್ಥಿಗಳು ಕಲಿಯುತ್ತಿದ್ದರು. ದೀರ್ಘಕಾಲದವರೆಗೆ ತರಗತಿಗಳಲ್ಲಿ ಕಲಿಯಲು ಅಸಾಧ್ಯವಾದುದರಿಂದ ಅತಿ ಶೀಘ್ರದಲ್ಲಿ "ಡೇನಿಯಲ್ ವಿಧಾನ"ದಿಂದ ಕಲಿಯುವ ವಿಧಾನವನ್ನು ಪರಿಚಯಿಸಲಾಯಿತು. ಸರ್ಕಾರವು ಕೂಡ ಅನುದಾನವನ್ನು ನೀಡಿ ವಯಸ್ಕರ ಶಿಕ್ಷಣ ಶಾಲೆಗಳು ೫೩೪ಕ್ಕೆ ಏರಿಕೆಯಾಗಿ ೧೨,೧೩೫ ವಿದ್ಯಾರ್ಥಿಗಳು ಕಲಿಯುವಂತಾದರು.[೧೩]

ಸರ್ಕಾರದ ಪ್ರೋತ್ಸಾಹ ಮತ್ತು ಶೀಘ್ರ ಕಲಿಯುವ ವಿಧಾನದಿಂದ ೧೯೨೭ ರಲ್ಲಿ ೫೨೮ ವಯಸ್ಕರ ಶಿಕ್ಷಣ ಶಾಲೆಗಳು ಇದ್ದು ೧೧,೭೬೦ ವಿದ್ಯಾರ್ಥಿಗಳು ಕಲಿಯುತ್ತಿದ್ದರು. ಓದುವುದು ಬರೆಯುವುದನ್ನು ಮೂರು ತಿಂಗಳ ಒಳಗೆ ಕಲಿಯುವಂತಾಯಿತು. ಇದಲ್ಲದೆ ಸರ್ಕಾರವು ಬೆಂಗಳೂರಿನ ಕೇಂದ್ರ ಕಾರಾಗೃಹದಲ್ಲಿ ಹಾಗೂ ಬೆಂಗಳೂರಿನ ಸಿದ್ಧಾಪುರದಲ್ಲಿ ಅನಕ್ಷರಸ್ಥ ಜೈಲುವಾಸಿಗಳಿಗೆ ಅಕ್ಷರ ಕಲಿಸಲು ಯೋಜನೆಯನ್ನು ಹಾಕಿತು. ಈ ಯೋಜನೆಯನ್ನು ರಾಜ್ಯದ ಇತರ ಜೈಲುಗಳಲ್ಲಿ ವಿಸ್ತರಿಸಲು ಯೋಜಿಸಲಾಯಿತು[೧೪]. ವಯಸ್ಕರ ಶಿಕ್ಷಣ ಶಾಲೆಗಳ ಸಂಖ್ಯೆ

ಕಡಿಮೆಯಾಗತೊಡಗಿದವು. ಬೆಂಗಳೂರಿನ ಕೇಂದ್ರ ಕಾರಾಗೃಹದಲ್ಲಿ ವಯಸ್ಕರ ಶಿಕ್ಷಣ ಶಾಲೆಗಳ ಕಾರ್ಯವನ್ನು ಮುಂದುವರಿಸಿಕೊಂಡು ಬರಲಾಯಿತು.[೧೫] ೧೯೨೯ ರಲ್ಲಿ ೩೬೮ ವಯಸ್ಕರ ಶಿಕ್ಷಣ ಶಾಲೆಗಳಿದ್ದವು. ಅದರಲ್ಲಿ ೭,೮೯೮ ಜನರು ಕಲಿಯುತ್ತಿದ್ದು ಬೆಂಗಳೂರಿನ ಕಾರಾಗೃಹದಲ್ಲಿನ ಪ್ರಯೋಗವನ್ನು ಮಲೆನಾಡಿನ ಭಾಗದಲ್ಲಿ ಪ್ರಾರಂಭಿಸಲಾಯಿತು. ವಯಸ್ಕರ ಶಿಕ್ಷಣ ಶಾಲೆಗಳ ಇಳಿಕೆಯಿಂದ ಮೈಸೂರು ಸಂಸ್ಥಾನದ ಸಾಕ್ಷರತೆಯ ಸಮಿತಿ ಇನ್ನೂ ಹೆಚ್ಚಿನ ಕೆಲಸ ನಿರ್ವಹಿಸಲು ಸರ್ಕಾರ ೨೦,೦೦೦/- ರೂಪಾಯಿಗಳನ್ನು ಮಂಜೂರು ಮಾಡಿತು. ಆದುದರಿಂದ ೧೯೩೭ ರಲ್ಲಿ ೮೨ ವಯಸ್ಕರ ಶಿಕ್ಷಣ ಶಾಲೆಗಳು ನಡೆಯುತ್ತಿದ್ದು, ೧,೯೩೬ ವಿದ್ಯಾರ್ಥಿಗಳು ಕಲಿಯುವಂತಾದರು. ಸರ್ಕಾರವು ವಯಸ್ಕರ ಶಿಕ್ಷಣದ ಕಡೆಗೆ ಹೆಚ್ಚಿನ ಗಮನ ನೀಡಿತು.[೧೬]

ವಯಸ್ಕರು ಕಲಿಯಲು ಸಾಧ್ಯವೇ? ಅವನಿಗೆ ಕಲಿಯುವ ಸಾಮರ್ಥ್ಯವೆಷ್ಟು? ಇತ್ಯಾದಿ ವಿಷಯಗಳು ವಾದವಿವಾದಗಳಿಗೆ ಕಾರಣವಾಗಿ ಮೈಸೂರು ನಗರದಲ್ಲಿ ಪ್ರಾಯೋಗಿಕ ತರಗತಿಗಳು ಏರ್ಪಟ್ಟು ಆರು ತಿಂಗಳ ಅವಧಿಯಲ್ಲಿ ವಯಸ್ಕರು ಅಕ್ಷರಜ್ಞಾನವನ್ನು ಪಡೆದುಕೊಳ್ಳಲು ಸಾಧ್ಯ ಎಂಬ ವಿಷಯ ಸ್ಥಿರಪಟ್ಟಿತು. ಮೈಸೂರು ಸರ್ಕಾರದಲ್ಲಿದ್ದ ಕೆಲವು ಉನ್ನತಾಧಿಕಾರಿಗಳು, ಖಾಸಗಿ ವ್ಯಕ್ತಿಗಳು ಅಕ್ಷರಪ್ರಚಾರಕಾರ್ಯಕ್ಕೆ ಬೆಂಬಲ ನೀಡಿದರು. ವಯಸ್ಕರ ಶಿಕ್ಷಣ ಶಾಲೆಗಳಿಗೆ ಯಮುನಾಚಾರ್ಯರು, ಜೆ.ಬಿ. ಮಲ್ಲಾರಾಧ್ಯ, ದೇವುಡು ನರಸಿಂಹಾಚಾರ್ಯರು, ಜಿ.ಆರ್. ರಂಗಸ್ವಾಮಿ, ಕೆ.ಎಸ್. ಆಚಾರ್ಯ, ಎಸ್.ವಿ. ಶ್ರೀನಿವಾಸರಾವ್ ಹಾಗೂ ಟಿ. ಕೃಷ್ಣಮೂರ್ತಿ ಮುಂತಾದವರು ಪ್ರೋತ್ಸಾಹ ನೀಡಿದರು. ಹೀಗೆ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ವಯಸ್ಕರ ಶಿಕ್ಷಣದ ಅಡಿಪಾಯ ಗಟ್ಟಿಯಾಗಿ ಬೇರೂರಿತು. ಆನಂತರ ೧೯೪೦ರ ನಂತರದ ವಯಸ್ಕರ ಶಿಕ್ಷಣ ಮೈಸೂರು ಸಂಸ್ಥಾನದಲ್ಲಿ ಒಂದು ದೊಡ್ಡ ಕ್ರಾಂತಿಯನ್ನು ಹುಟ್ಟುಹಾಕಿ ಇತಿಹಾಸ ನಿರ್ಮಿಸಿತು.

೧೯೪೦ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ವಿದ್ಯಾರ್ಥಿಸಂಘದವರು ಮೈಸೂರು ನಗರದ ವಿವಿಧ ಭಾಗಗಳಲ್ಲಿ ಸಾಕ್ಷರತಾ ತರಗತಿಗಳನ್ನು ತೆರೆಯಲು ನಿರ್ಧರಿಸಿದರು. ಅಕ್ಷರ ಪ್ರಚಾರಕ್ಕಾಗಿ ಸ್ವಯಂಸೇವಕರನ್ನು ಆಹ್ವಾನಿಸಿದಾಗ ಆರುನೂರಕ್ಕೂ ಹೆಚ್ಚು ಸ್ವಯಂಸೇವಕರು ಮುಂದೆ ಬಂದರು. ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿದ್ದ ಎನ್.ಎಸ್. ಸುಬ್ಬರಾಯರು ಸ್ವಯಂಸೇವಕರಿಗೆ ತರಬೇತಿ ಶಿಬಿರಗಳನ್ನು ಏರ್ಪಡಿಸಿ ಅವರಿಗೆ ವಯಸ್ಕರ ಮನಶ್ಶಾಸ್ತ್ರ, ತರಗತಿಗಳ ನಿರ್ವಹಣೆ ಮತ್ತು ಅವರಿಗೆ ಅಕ್ಷರ ಕಲಿಸುವ ವಿಧಾನಗಳ ಬಗ್ಗೆ ಮಾರ್ಗದರ್ಶನ ನೀಡಿದರು. ಸ್ವಯಂಸೇವಕರ ಸೇವಾಮನೋಭಾವ ಜವಾಬ್ದಾರಿಗಳ ಕುರಿತು ಭಾಷಣ ಮಾಡಿದರು. ಮೈಸೂರು ನಗರದ ಅನೇಕ ಬಡಾವಣೆಗಳಲ್ಲಿ ತರಗತಿಗಳು ಆರಂಭವಾದವು. ಮೈಸೂರು ವಿಶ್ವವಿದ್ಯಾನಿಲಯದ ಈ ಮಹತ್ಕಾರ್ಯಕ್ಕೆ ಪುರಸಭೆಯು ತನ್ನ ಸಹಾಯಹಸ್ತ ನೀಡಿ

ಕೈಜೋಡಿಸಿತು. ನಗರದಲ್ಲಿರುವ ರಾಮಮಂದಿರಗಳು, ಗರಡಿಗಳು ಅಂಜುಮಾನ್‌ಗಳಲ್ಲಿ ಅಕ್ಷರ ಕಲಿಸುವ ಕಾಯಕ ಆರಂಭವಾಯಿತು. ಮೊದಲ ಮೂರು ತಿಂಗಳ ಅವಧಿಯಲ್ಲಿ ಸ್ವಯಂಸೇವಕರು ಉಚಿತವಾಗಿ ಕೆಲಸ ನಿರ್ವಹಿಸಿದರೂ ಅನಂತರ ತಿಂಗಳಿಗೆ ೫ ರೂಪಾಯಿಯಂತೆ ಸ್ವಯಂಸೇವಕರಿಗೆ ಸಂಭಾವನೆ ಕೊಡಲಾಯಿತು. ೪೭೦ ವಯಸ್ಕರು ವಯಸ್ಕರ ಶಿಕ್ಷಣ ಶಾಲೆಗೆ ದಾಖಲಾದರು. ಅವರಲ್ಲಿ ೧೯೭ ಮಂದಿ ಪರೀಕ್ಷೆಯಲ್ಲಿ ತೇರ್ಗಡೆಯಾದರು.[೧೭]

ಮೈಸೂರು ವಿಶ್ವವಿದ್ಯಾನಿಲಯದ ವಿದ್ಯಾರ್ಥಿಸಂಘದ ಕಾರ್ಯಕ್ಕೆ ಶ್ಲಾಘಿಸಿದ ಮೈಸೂರು ವಿಶ್ವವಿದ್ಯಾನಿಲಯ ಅಕ್ಷರಪ್ರಚಾರ ಕೆಲಸಕ್ಕೆ ೩೦೦ ರೂಪಾಯಿ ಅನುದಾನ ನೀಡಿ ಪ್ರೋತ್ಸಾಹಿಸಿತು ಹಾಗೂ ವಿಶ್ವವಿದ್ಯಾನಿಲಯದ ಸ್ವಯಂಸೇವಕರ ಕೆಲಸವನ್ನು ಮೆಚ್ಚಿಕೊಂಡು ಗ್ರಾಮಾಂತರಪ್ರದೇಶಗಳಲ್ಲಿ ಸಾಕ್ಷರತಾಕಾರ್ಯವನ್ನು ವಿಸ್ತರಿಸಲು ಒಂದು ಸಾವಿರ ರೂಪಾಯಿಗಳ ಧನಸಹಾಯವನ್ನು ಮಾಡಿತು. ಹಲವು ಜಿಲ್ಲಾ ಬೋರ್ಡುಗಳು, ಗ್ರಾಮ ಪಂಚಾಯಿತಿಗಳು ವಯಸ್ಕರ ಶಾಲೆಗಳನ್ನು ತೆರೆಯಲು ಆಸಕ್ತರಾದರು. ಭದ್ರಾವತಿಯ ಕಬ್ಬಿಣ ಕಾರ್ಖಾನೆಯ ಕಾರ್ಮಿಕ ಅಧಿಕಾರಿಯು ಕೂಡ ಅಕ್ಷರಪ್ರಚಾರ ತರಗತಿಗಳನ್ನು ನಡೆಸಲು ಸ್ವಯಂಸೇವಕರ ನೆರವನ್ನು ಕೋರಿದರು. ಹೀಗೆ ವಿಶ್ವವಿದ್ಯಾನಿಲಯದ ಮೇಲ್ವಿಚಾರಣೆಯಲ್ಲಿ ಸಾಕ್ಷರತಾ ಕೆಲಸವನ್ನು ನೆರವೇರಿಸಲು **"ಮೈಸೂರು ನಗರ ಅಕ್ಷರಪ್ರಚಾರ ಸಮಿತಿ"**ಯನ್ನು ಸ್ಥಾಪಿಸಿ ವಿಶ್ವವಿದ್ಯಾನಿಲಯದ ಉಪಕುಲಪತಿಗಳೇ ಅಧ್ಯಕ್ಷರಾದರು. ಇಡೀ ಮೈಸೂರು ಸಂಸ್ಥಾನಕ್ಕೆ ಅನ್ವಯಿಸುವ ಒಂದು ಯೋಜನೆಯನ್ನು ಸಿದ್ಧಪಡಿಸಿ ಸರ್ಕಾರಕ್ಕೆ ಕಳುಹಿಸಿಕೊಟ್ಟಿತು. ಸರ್ಕಾರವು ಈ ಪ್ರಸ್ತಾವನೆಯನ್ನು ಅಂಗೀಕರಿಸಿತು.

೧೯೪೧ರಲ್ಲಿ ಮೈಸೂರು ಸಂಸ್ಥಾನದ ಸರ್ಕಾರವು ಕೆಲವು ಕಾರ್ಯಕರ್ತರನ್ನು ಹಾಗೂ ಉತ್ಸಾಹಿ ಶಾಸಕರನ್ನು ಒಳಗೊಂಡ ಒಂದು ಖಾಸಗಿ ಸಂಸ್ಥೆಯನ್ನು ಸ್ಥಾಪಿಸಲಾಯಿತು. ಆ ಖಾಸಗಿ ಸಮಿತಿಯೇ **"ಮೈಸೂರು ಸಂಸ್ಥಾನದ ಅಕ್ಷರಪ್ರಚಾರ ಸಮಿತಿ"**. ಈ ಸಮಿತಿಯ ಮೊದಲ ಅಧ್ಯಕ್ಷರು ಮೈಸೂರು ವಿಶ್ವವಿದ್ಯಾನಿಲಯದ ಆಂಗ್ಲಭಾಷಾ ಪ್ರಾಧ್ಯಾಪಕರು. ಕನ್ನಡದ ಪ್ರಸಿದ್ಧ ಸಾಹಿತಿಗಳಾದ ಬಿ.ಎಂ. ಶ್ರೀಕಂಠಯ್ಯನವರಾದರೆ, ಉಪಾಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದವರು ಮತ್ತೊಬ್ಬ ಆಂಗ್ಲಭಾಷಾ ಪ್ರಾಧ್ಯಾಪಕರಾಗಿದ್ದ ಡಬ್ಲ್ಯೂ.ಜಿ. ಈಗಲ್‌ಟನ್‌ರವರು. ಇವರ ಜೊತೆಗೆ ಸರ್ಕಾರ ತನ್ನ ಪ್ರತಿನಿಧಿಗಳಾಗಿ ನ. ಭದ್ರಯ್ಯ, ಸಾಹುಕಾರ್ ಚೆನ್ನಯ್ಯ, ಟಿ. ಮರಿಯಪ್ಪ ಮುಂತಾದವರನ್ನು ನೇಮಿಸುವುದರ ಜೊತೆಗೆ ೫,೦೦೦ ರೂ.ಗಳ ಧನಸಹಾಯವನ್ನು ನೀಡಿತು.

ಶಿಕ್ಷಕರ ಅನುಭವದ ಆಧಾರದ ಮೇಲೆ ಸಮಿತಿ ವಯಸ್ಕರಿಗಾಗಿ ಒಂದು ಪಠ್ಯಪುಸ್ತಕವನ್ನು ಸಿದ್ಧಪಡಿಸಿತು. ಒಬ್ಬ ವಯಸ್ಕನನ್ನು ಅಕ್ಷರಸ್ಥನನ್ನಾಗಿ ಮಾಡಲು ೧೦೮ ಗಂಟೆಗಳ ಅವಧಿ ಬೇಕಾಗಿದ್ದು ಪತ್ರವ್ಯವಹಾರ ನಡೆಸುವುದು ಮತ್ತು ಪತ್ರಿಕೆಗಳನ್ನು ಓದಿ

ಅರ್ಥಮಾಡಿಕೊಳ್ಳುವುದು ಕನಿಷ್ಠವಾದ ಜ್ಞಾನವೆಂದು ನಿರ್ಣಯಿಸಲಾಯಿತು. ಒಬ್ಬ ವಯಸ್ಕನಿಗೆ ಅಕ್ಷರಸ್ಥನಾಗಲು ತಗಲುವ ವೆಚ್ಚ ಐದು ರೂ.ಗಳು ಮಾತ್ರವಾಗಿದ್ದು, ಮೈಸೂರು ಸಂಸ್ಥಾನದ ಅಕ್ಷರಪ್ರಚಾರ ಸಮಿತಿ ಮುಂದಿನ ಹದಿನೈದು ವರ್ಷಗಳ ಯೋಜನೆಯನ್ನು ಸಿದ್ಧಪಡಿಸಿ ಅದನ್ನು ಮುಂದಿನ ಮೂರು ಹಂತಗಳಲ್ಲಿ ಜಾರಿಗೆ ತರಲು ತೀರ್ಮಾನಿಸಿ **"ಮೈಸೂರು ಫಲ್ ಬಿ ಲಿಟರೇಟ್"** ಎಂಬ ಕಿರುಹೊತ್ತಿಗೆಯಲ್ಲಿ ಪ್ರಕಟಿಸಿತು. ಮೈಸೂರು ಸಂಸ್ಥಾನದ ಅಕ್ಷರಪ್ರಚಾರ ಸಮಿತಿಯು ಹೊಸದಾಗಿ ಅಕ್ಷರ ಕಲಿತವರಿಗಾಗಿ ೭.೧೧.೧೯೪೨ ರಂದು ಶನಿವಾರ **ಬೆಳಕು** ಎಂಬ ಪತ್ರಿಕೆಯನ್ನು ಪ್ರಕಟಿಸಿತು. ಅಂದು ದೀಪಾವಳಿಯಾಗಿದ್ದು **"ಅಜ್ಞಾನವೇ ಕತ್ತಲು ಜ್ಞಾನವೇ ಬೆಳಕು"** ಎಂಬ ಧ್ಯೇಯವಾಕ್ಯವನ್ನು ಹೊಂದಿದ್ದ **'ಬೆಳಕು'**ವಿನ ಮೊದಲ ಸಂಪಾದಕರು ಎಸ್.ವಿ. ಶ್ರೀನಿವಾಸರಾಯರಾಗಿದ್ದರು.

೧೯೪೩ ರಲ್ಲಿ ಸರ್ಕಾರ ಗ್ರಾಮಾಭಿವೃದ್ಧಿ ಯೋಜನೆಯನ್ನು ಜಾರಿಗೆ ತಂದಾಗ ಅದರಲ್ಲಿ ಅಕ್ಷರಕಲಿಕೆಯು ಸೇರಿಸಲ್ಪಟ್ಟು ಅಕ್ಷರಪ್ರಚಾರ ಸಮಿತಿಯ ಕಾರ್ಯಕ್ಕಾಗಿ ಸರ್ಕಾರದಿಂದ ವಿಶೇಷವಾಗಿ ೮೦,೦೦೦/- ರೂ.ಗಳು ಮಂಜೂರಾಯಿತು. ಗ್ರಾಮಾಭಿವೃದ್ಧಿ ಯೋಜನೆಯಲ್ಲಿ ಕೆಲವು ಆಯ್ದ ಹೋಬಳಿಗಳಲ್ಲಿ ಸಾಕ್ಷರತಾ ಶಾಲೆಗಳನ್ನು ಪ್ರಾರಂಭಿಸಲಾಯಿತು. ಸರ್ಕಾರ ಎಂದಿನಂತೆ ೨೦,೦೦೦/- ರೂಪಾಯಿಗಳ ಸಹಾಯಧನವನ್ನು ಕೊಡುತ್ತಿದ್ದು, ೧೧೩೩ ತರಗತಿಗಳು, ೩೧೮ ಗ್ರಂಥಾಲಯಗಳು ಪ್ರಾರಂಭವಾದವು. ೧೯೪೪ ರಲ್ಲಿ ರಾಜ್ಯದ ಅಕ್ಷರಪ್ರಚಾರ ಸಮಿತಿಯು ಒಟ್ಟು ೨೯೭೮ ಸಾಕ್ಷರತಾ ತರಗತಿಗಳಲ್ಲಿ ೨೯,೨೫೦ ವಯಸ್ಕರರನ್ನು ಸಾಕ್ಷರರನ್ನಾಗಿಸಿತು. ೪೨೫ ಗ್ರಂಥಾಲಯಗಳು ಮತ್ತು ೬೩ ಮಹಿಳಾ ಸಮಾಜಗಳು ಪ್ರಾರಂಭವಾದವು. ಸರ್ಕಾರ ನೀಡುತ್ತಿದ್ದ ಸಹಾಯಧನ ರೂ.೨೦,೦೦೦/- ದಿಂದ ೩೦,೦೦೦/-ಕ್ಕೆ ಏರಿತು. ಸರ್ಕಾರವು ವಿಶೇಷ ಸಹಾಯಧನವಾಗಿ ೧,೪೪,೦೦೦/- ರೂ.ಗಳನ್ನು ಅಕ್ಷರಪ್ರಚಾರ ಸಮಿತಿಗೆ ನೀಡಿತು. ಗ್ರಾಮಗಳಲ್ಲಿ ಅಕ್ಷರಪ್ರಚಾರಕಾರ್ಯ ಭರದಿಂದ ಸಾಗುತ್ತಿದ್ದು, ಮುಂದಿನ ೫ ವರ್ಷಗಳಲ್ಲಿ ೪ ಲಕ್ಷ ವಯಸ್ಕರನ್ನು ಸಾಕ್ಷರರನ್ನಾಗಿ ಮಾಡುವ ಗುರಿಯನ್ನು ಹೊಂದಿತು.[೧೮]

೧೯೪೫ ರಲ್ಲಿ ಮೈಸೂರು ಸಂಸ್ಥಾನದ ಅಕ್ಷರಪ್ರಚಾರ ಸಮಿತಿ **"ವಯಸ್ಕರ ಶಿಕ್ಷಣ ಸಮಿತಿ"** ಆಗಿ ಪರಿವರ್ತಿತವಾಯಿತು ಮತ್ತು ತನ್ನ ಕಾರ್ಯಯೋಜನೆಯನ್ನು ವಿಸ್ತರಿಸಿಕೊಂಡು ಸಾಕ್ಷರತಾ ಕಾರ್ಯಕ್ರಮ, ಪುಸ್ತಕ ಭಂಡಾರ ಮತ್ತು ಪುಸ್ತಕಗಳ ಪ್ರಕಟಣೆ, ಗ್ರಾಮಕಲೆಗಳ ಪುನರುಜ್ಜೀವನ, ವಿದ್ಯಾಪೀಠಗಳ ಸ್ಥಾಪನೆ, ಸಂಶೋಧನೆ, ಸಾಹಿತ್ಯ ರಚನೆ, ಮುಂತಾದವುಗಳನ್ನು ಒಳಗೊಂಡಿತ್ತು. ೧೯೪೬ ಮೇ ತಿಂಗಳಲ್ಲಿ **"ಪುಸ್ತಕ ಪ್ರಪಂಚ"** ಎಂಬ ಮಾಸಪತ್ರಿಕೆಯನ್ನು ವಿದ್ಯಾವಂತರಿಗಾಗಿ ಪ್ರಕಟಿಸಲಾಯಿತು. ೬೪ ಪುಟಗಳನ್ನು ಹೊಂದಿದ್ದ ಕ್ರೌನ್ ಅಷ್ಟದಳದ ಆಕಾರದಲ್ಲಿ ರೀಡರ್ಸ್ ಡೈಜೆಸ್ಟ್ ಮಾದರಿಯಲ್ಲಿದ್ದ ಪುಸ್ತಕಪ್ರಪಂಚದಲ್ಲಿನ

ಹೆಚ್ಚಿನ ಲೇಖನಗಳು "ರೀಡರ್ಸ್ ಡೈಜೆಸ್ಟ್" ಮತ್ತು ಹಿಂದಿ ಪತ್ರಿಕೆಯಾದ "ನವನೀತಾ"ನಲ್ಲಿನ ಅನುವಾದಿತ ಲೇಖನಗಳಾಗಿದ್ದು ಅನೇಕ ಗಣ್ಯರು ಇದರ ಲೇಖಕರಾಗಿದ್ದರು. ೧೯೪೫ ರಲ್ಲಿ ಮೈಸೂರು ಸಂಸ್ಥಾನದ ಅಕ್ಷರಪ್ರಚಾರ ಸಮಿತಿ "ವಯಸ್ಕರ ಶಿಕ್ಷಣ ಸಮಿತಿ"ಯಾಗಿ ಪರಿವರ್ತನೆಯಾದ ಸಂದರ್ಭದಲ್ಲಿ 'ಬೆಳಕು' ಪತ್ರಿಕೆಯ ಸಾರಥ್ಯವನ್ನು ವಹಿಸಿಕೊಂಡವರು ಎಂ.ಆರ್. ಲಕ್ಷಮ್ಮರವರು.

**೩.೫. ವಯಸ್ಕರ ಶಿಕ್ಷಣ ಸಮಿತಿಯಲ್ಲಿ ಎಂ.ಆರ್. ಲಕ್ಷಮ್ಮ ಅವರ ಪಾತ್ರ**

ಎಂ.ಆರ್. ಲಕ್ಷಮ್ಮನವರು ಕಾಲೇಜು ವ್ಯಾಸಂಗ ಮಾಡುತ್ತಿದ್ದಾಗಲೇ ಅನಕ್ಷರಸ್ಥರಿಗೆ ಅಕ್ಷರ ಕಲಿಸುವ ಹಂಬಲವನ್ನಿಟ್ಟುಕೊಂಡಿದ್ದು, "ಮೈಸೂರು ಸಂಸ್ಥಾನದ ಅಕ್ಷರಪ್ರಚಾರ ಸಮಿತಿ"ಯ ಉಪಾಧ್ಯಕ್ಷರಾದ ಡಬ್ಲ್ಯೂ.ಜಿ. ಈಗಲ್‌ಟನ್ ನೇತೃತ್ವದಲ್ಲಿ ನಾ. ಕಸ್ತೂರಿ ಮುಂತಾದವರೊಡನೆ ಸೇರಿ ಮೈಸೂರಿನ ಕೂರ್ಗಳ್ಳಿಯಲ್ಲಿ ಹಳ್ಳಿಯ ಅವಿದ್ಯಾವಂತರಿಗೆ ಅಕ್ಷರ ಕಲಿಸುವ ಕಾರ್ಯದಲ್ಲಿ ತೊಡಗಿಸಿಕೊಂಡಿದ್ದರು. ನಂತರ ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯಲ್ಲಿ ಸದಸ್ಯೆಯಾಗಿದ್ದುಕೊಂಡು ಅಕ್ಷರಪ್ರಚಾರಕಾರ್ಯವನ್ನು ಮುಂದುವರೆಸಿದರು. ಸಾಹಿತ್ಯಪ್ರೇಮಿಯಾಗಿದ್ದ ಎಂ.ಆರ್. ಲಕ್ಷಮ್ಮನವರು ಪತ್ರಿಕೆಗಳಲ್ಲಿ ಲೇಖನಗಳನ್ನು, ಕಥೆ, ಕವನಗಳನ್ನು ಬರೆಯುವುದರ ಮೂಲಕ ಕಾಲೇಜು ದಿನಗಳಲ್ಲಿಯೇ ತಮ್ಮನ್ನು ಗುರುತಿಸಿಕೊಂಡಿದ್ದರು. ಅವರ ಲೇಖನಗಳು, ಕಥೆಗಳು, ಕವನಗಳು ಪ್ರಮುಖ ಪತ್ರಿಕೆಗಳಾದ ಸಾಧ್ವಿ, ಪ್ರಬುದ್ಧ ಕರ್ನಾಟಕ ಇನ್ನಿತರ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದವು. ಇವರ ಪ್ರತಿಭೆಯನ್ನು ಗುರುತಿಸಿದ ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷರಾಗಿದ್ದ ಎನ್. ಬಾಲಕೃಷ್ಣಯ್ಯನವರು ಬೆಳಕು ವಾರಪತ್ರಿಕೆಯ ಸಂಪಾದಕಿಯಾಗುವ ಹೊಣೆಗಾರಿಕೆಯನ್ನು ೧೯೪೫ ರಲ್ಲಿ ನೀಡಿದರು.[೧೯] ಹೆಣ್ಣುಮಕ್ಕಳಿಗೆ ಪತ್ರಿಕೋದ್ಯಮ ದೂರವಾಗಿದ್ದ ಕಾಲದಲ್ಲಿ ಪ್ರಥಮ ಸಂಪಾದಕಿಯಾಗಿ ಜವಾಬ್ದಾರಿಯನ್ನು ತೆಗೆದುಕೊಂಡ ಎಂ.ಆರ್. ಲಕ್ಷಮ್ಮನವರು ಸತತವಾಗಿ ಮೂರು ವರ್ಷಗಳ ಕಾಲ ಬೆಳಕು ವಾರಪತ್ರಿಕೆಯ ಸಾರಥ್ಯವನ್ನು ವಹಿಸಿಕೊಂಡು ಮುನ್ನಡೆಸಿದರು. ಇವರ ಕಾಲದಲ್ಲಿ ಮೈಸೂರು ಸಂಸ್ಥಾನದ ಅಕ್ಷರಪ್ರಚಾರ ಸಮಿತಿ "ವಯಸ್ಕರ ಶಿಕ್ಷಣ ಸಮಿತಿ"ಯಾಗಿ ವಿಶಾಲವಾದ ಕ್ಷೇತ್ರಕ್ಕೆ ಕಾಲಿಟ್ಟಿತು.

ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯು ೫ ತಿಂಗಳ ಕಾಲ ಶಿಕ್ಷಣವನ್ನು ನೀಡಿದ ಮೇಲೆ ಅದನ್ನು ಅಷ್ಟಕ್ಕೆ ಬಿಡದೆ, ಮುಂದುವರಿಸಿಕೊಂಡು ಹೋಗುವ ಕಾರ್ಯವನ್ನು ನಿರ್ವಹಿಸುತ್ತಿತ್ತು. ವಯಸ್ಕರು ತಾವು ಪಡೆದ ಅಕ್ಷರಜ್ಞಾನವನ್ನು ಮರೆಯುತ್ತಿದ್ದದ್ದು ಸ್ವಾಭಾವಿಕವಾಗುತ್ತಿತ್ತು. ಈ ಸಮಸ್ಯೆಯನ್ನು ಬಗೆಹರಿಸಲು ಸಮಿತಿ ನವಸಾಕ್ಷರರಿಗಾಗಿ "ವಯಸ್ಕರ ಶಿಕ್ಷಣದ ಪುಸ್ತಕಮಾಲೆ" ಎಂಬ ಹೆಸರಿನಲ್ಲಿ ಪ್ರತ್ಯೇಕ ಪುಸ್ತಕಗಳನ್ನು ಪ್ರಕಟಿಸಲು ೧೯೪೧ ರಿಂದಲೇ ಪ್ರಾರಂಭಿಸಿತು. ವಯಸ್ಕರ ಶಿಕ್ಷಣದ ಪುಸ್ತಕಮಾಲೆಯ ಅಡಿಯಲ್ಲಿ ಸಣ್ಣ ಸಣ್ಣ

ಕಥೆಗಳಿಂದ ಕೂಡಿದ ಪುಸ್ತಕಗಳು, ಐತಿಹಾಸಿಕ ಸಾಹಿತ್ಯಗಳು, ವ್ಯಕ್ತಿಚಿತ್ರ, ಸಾಹಿತ್ಯಗಳು, ಅಭಿವೃದ್ಧಿ ಸಾಹಿತ್ಯದಲ್ಲಿ ಕೃಷಿ, ತೋಟಗಾರಿಕೆ ಮುಂತಾದವುಗಳ ಬಗ್ಗೆ, ವೈದ್ಯಕೀಯ ಸಾಹಿತ್ಯ ಕಾನೂನುಗಳು, ರಾಷ್ಟ್ರೀಯ ಮೌಲ್ಯಗಳು, ಕಲೆ ಮತ್ತು ಸಂಸ್ಕೃತಿ, ಸಾಹಿತ್ಯ ಇನ್ನೂ ಅನೇಕ ಮಾಹಿತಿಗಳನ್ನು ಒಳಗೊಂಡ ಪುಸ್ತಕಗಳನ್ನು ಪ್ರಕಟಿಸುತ್ತಿದ್ದರು. ವಯಸ್ಕರ ಶಿಕ್ಷಣ ಪುಸ್ತಕಮಾಲೆಯ ಉದ್ದೇಶ ಅವುಗಳನ್ನು ಕೊಂಡು ಓದಿದ ಜನರು ತಮ್ಮ ಜ್ಞಾನವನ್ನು ಹೆಚ್ಚಿಸಿಕೊಳ್ಳುವುದರ ಜೊತೆಗೆ ಜೀವನಮಾರ್ಗವನ್ನು ಉತ್ತಮಪಡಿಸಿಕೊಳ್ಳಲು ಆಡಳಿತದಲ್ಲಿ ಭಾಗವಹಿಸಲು ಸಾಧ್ಯವಾಗುವಂತೆ ಜನರನ್ನು ಪ್ರೇರೇಪಿಸುವುದಾಗಿತ್ತು. ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಪುಸ್ತಕಮಾಲೆಯಲ್ಲಿ ಎಂ.ಆರ್. ಲಕ್ಷಮ್ಮನವರ ಎರಡು ಪುಸ್ತಕಗಳು ಅಂಗೀಕರಿಸಲ್ಪಟ್ಟಿದ್ದವು. 'ಕುಂತೀದೇವಿ' ಹಾಗೂ 'ಮಾರುತಿ' ಎಂಬ ಪುಸ್ತಕಗಳು ಸಣ್ಣ ಕಥೆಗಳ ಪುಸ್ತಕಗಳಾಗಿದ್ದು, ಮಹಾಭಾರತ ಹಾಗೂ ರಾಮಾಯಣದ ಕಥಾವಸ್ತುವನ್ನು ಒಳಗೊಂಡಿದೆ.

**೩.೬. ಎಂ.ಆರ್. ಲಕ್ಷಮ್ಮ ಅವರ ಸಂಪಾದಕತ್ವದ ಬೆಳಕು ಪತ್ರಿಕೆಯ ಆಶಯ ಮತ್ತು ಸ್ವರೂಪ**

ಮೈಸೂರು ಸಂಸ್ಥಾನದ ಅಕ್ಷರ ಪ್ರಚಾರ ಸಮಿತಿಯು ಹೊಸದಾಗಿ ಅಕ್ಷರ ಕಲಿತ ನವಸಾಕ್ಷರರಿಗೆ 'ಬೆಳಕು' ಎಂಬ ಪತ್ರಿಕೆಯನ್ನು ಪ್ರಕಟಿಸಿತು. ದಿನಾಂಕ ೭.೧೧.೧೯೪೨ರ ಶನಿವಾರ ದೀಪಾವಳಿಯಂದು ಮೊದಲ ಸಂಚಿಕೆ ಪ್ರಕಟವಾಯಿತು. "ಅಜ್ಞಾನವೇ ಕತ್ತಲು ಜ್ಞಾನವೇ ಬೆಳಕು" ಎಂಬ ಧ್ಯೇಯವಾಕ್ಯವನ್ನು ಹೊಂದಿದ್ದ ಪತ್ರಿಕೆ ವಾರಪತ್ರಿಕೆಯಾಗಿದ್ದು, ಬೆಳಕುವಿನ ಮೊದಲ ಸಂಪಾದಕರು ಎಸ್.ವಿ. ಶ್ರೀನಿವಾಸರಾಯರಾಗಿದ್ದರು. ಎರಡು ಪುಟದ ಕ್ರೌನ್ ಆಕಾರದಲ್ಲಿದ್ದ 'ಬೆಳಕು' ಪತ್ರಿಕೆ ಪಂಚಾಚಾರ್ಯ ಪ್ರೆಸ್ಸಿನಲ್ಲಿ ಮುದ್ರಣಗೊಳ್ಳುತ್ತಿತ್ತು. ಬೆಳಕು ಪತ್ರಿಕೆಯ ಮೊದಲ ಸಂಚಿಕೆಯಲ್ಲಿ ಇಂದಿನಿಂದ ಕ್ರಮವಾಗಿ ವಾರವಾರವೂ 'ಬೆಳಕು' ಎಂಬ ಪತ್ರಿಕೆಯನ್ನು ಅಚ್ಚುಹಾಕಿಸಲು ಏರ್ಪಾಟಾಗಿದೆ. ಇದರಿಂದ ಹೊಸದಾಗಿ ಅಕ್ಷರ ಕಲಿತವರಿಗೆ ಪತ್ರಿಕೆಯನ್ನು ಓದುವ ಅಭ್ಯಾಸವಾಗಬೇಕು. ಪ್ರಪಂಚದ ಸುದ್ದಿಗಳು ಅವರಿಗೆ ತಿಳಿಯಬೇಕು. ಮುಂದಕ್ಕೆ ಅವರು ತಾವೇ ಇತರ ಪತ್ರಿಕೆಗಳನ್ನು ಓದಬೇಕು. ತಾವು ಕಲಿತ ವಿದ್ಯೆಯನ್ನು ಬೆಳಕಿನ ಮೂಲಕ ಹೆಚ್ಚಿಸಿಕೊಳ್ಳಬೇಕು. ಈ ಉದ್ದೇಶಗಳಿಂದ ಈ ವಾರಪತ್ರಿಕೆಯನ್ನು ಹೊರಡಿಸುತ್ತೇವೆ. ಇದು ಎಲ್ಲ ಊರುಗಳಲ್ಲಿ ಬೆಳಗಲಿ ಎಂಬುದಾಗಿ ಸಂಪಾದಕರು ನಿವೇದಿಸಿಕೊಂಡಿದ್ದರು. ಮೊದಲ ಸಂಚಿಕೆಗೆ ಮೈಸೂರು ಮಹಾರಾಜರು ಶುಭಕೋರಿದ್ದರು.

'ಬೆಳಕು' ಪತ್ರಿಕೆಯು ಹೊಸದಾಗಿ ಓದುಬರಹ ಕಲಿತವರ ಉಪಯೋಗಕ್ಕಾಗಿ ಮೀಸಲಾಗಿದ್ದು, ಅವರಿಗೆ ಓದಿನಲ್ಲಿ ಆಸಕ್ತಿ ಇರುತ್ತದೆ. ಆದರೆ ಅವರು ಸುಲಭವಾಗಿ ಓದಬಹುದಾದ ಸರಳವಾದ ಲೇಖನಗಳನ್ನು ಬಯಸುತ್ತಾರೆ. ಆ ಕೆಲಸವನ್ನು 'ಬೆಳಕು' ಯಶಸ್ವಿಯಾಗಿ ನಿರ್ವಹಿಸಿತು. ಸರಾಗವಾಗಿ ಓದಬಹುದಾದ ಸುಲಭವಾಗಿ ಅರ್ಥಮಾಡಿಕೊಳ್ಳಬಲ್ಲ ಮತ್ತು ಸ್ವಾರಸ್ಯವಾಗಿಯೂ ಇರತಕ್ಕ ಲೇಖನಗಳನ್ನು 'ಬೆಳಕು' ಪತ್ರಿಕೆ

ತನ್ನ ಓದುಗರಿಗೆ ನೀಡಿತು. ನವಸಾಕ್ಷರರು ಈ ಪತ್ರಿಕೆಯ ಓದುಗರಾದ್ದರಿಂದ ಬೇರೆ ಪತ್ರಿಕೆಗಳಿಗಿಂತ ಇಲ್ಲಿ ಅಕ್ಷರಗಳು ದೊಡ್ಡದಾಗಿವೆ. ದೇಶವಿದೇಶದ ಸುದ್ದಿಗಳು, ಆರೋಗ್ಯ, ವ್ಯವಸಾಯದ ಬಗೆಗಿನ ಖಾಯಂ ಅಂಕಣಗಳ ಜೊತೆಗೆ ಸಣ್ಣ ಸಣ್ಣ ಕತೆಗಳು, ಪ್ರಬಂಧಗಳು, ಸರಳ ಪದ್ಯಗಳು, ರೇಖಾಚಿತ್ರಗಳು, ವ್ಯಂಗ್ಯಚಿತ್ರಗಳನ್ನು ಒಳಗೊಂಡ ಪತ್ರಿಕೆ ತನ್ನ ಓದುಗರಿಗೆ ಚಿತ್ರಗಳನ್ನು ಅದಕ್ಕೆ ಹೊಂದುವಂತಹ ಸೂಕ್ತವಾದ ಕತೆಯನ್ನು ಬರೆಯುವಂತೆ ಪ್ರೇರೇಪಣೆಯನ್ನು ಕೂಡ ನೀಡುತ್ತಿತ್ತು. ಸರಳ ಕನ್ನಡದಲ್ಲಿ ನವಸಾಕ್ಷರರಿಗೆ ಬೇಕಾದ ಸಂದೇಶವನ್ನು ಅವರಿಗೆ ಇಷ್ಟವಾಗಬಲ್ಲ ರೂಪದಲ್ಲಿ ನೀಡುವುದು 'ಬೆಳಕು' ಪತ್ರಿಕೆಯ ಗುರಿಯಾಗಿತ್ತು, 'ಬೆಳಕು' ಪತ್ರಿಕೆಯು ಎಲ್ಲೆಲ್ಲಿ ಸಾಧ್ಯವೋ ಅಲ್ಲಲ್ಲಿ ಸಾಕ್ಷರತೆಗೆ ಒತ್ತುಕೊಡುವ ಪ್ರಯತ್ನವನ್ನು ಮಾಡುತ್ತಿತ್ತು. ಉದಾಹರಣೆಗೆ ೧೯೫೦ನೇ ಇಸವಿಯ ದೀಪಾವಳಿ ಸಂಚಿಕೆಯಲ್ಲಿ **"ಎಲ್ಲ ಬಲ್ಲವ ಚಂದ, ಬೆಲ್ಲ ತಿನ್ನಲು ಚಂದ, ಎಲ್ಲ ಅಕ್ಷರ ಕಲಿಯೇ ಬಲುಚಂದ ಕೋಲು ಕೋಲೆನ್ನ ಕೋಲೆ ಮುತ್ತಿನ ರತ್ನದ ಕೋಲು ಕೋಲೆನ್ನ ಕೋಲೆ"** ಎಂಬ ಕೋಲಾಟ ಪದ ಪ್ರಕಟಗೊಂಡಿದೆ. ೧೯೫೧ನೇ ಇಸವಿಯ ದೀಪಾವಳಿ ಸಂಚಿಕೆಯಲ್ಲಿ **"ಎಲ್ಲರಿಗೂ ಹೊಟ್ಟೆತುಂಬ ಅನ್ನ, ಮೈತುಂಬ ಬಟ್ಟೆ ಸಿಕ್ಕಲಿ, ಎಲ್ಲ ದೇಶಗಳಲ್ಲಿಯೂ ಸದಾ ಶಾಂತಿ ನೆಲೆಸಿರಲಿ, ನಮ್ಮ ಗ್ರಾಮದಲ್ಲಿ ಅನಕ್ಷರಸ್ಥರೇ ಇಲ್ಲದಂತಾಗಲಿ"** ಎಂದು ಶುಭಾಶಯ ಕೋರಿದ್ದು, ಇಂದಿಗೂ ಕೂಡ ಪ್ರಸ್ತುತವಾದ ಹಾರೈಕೆಯಾಗಿದೆ.

**'ಬೆಳಕು'** ವಾರಪತ್ರಿಕೆಯಿಂದ ಕನ್ನಡ ಪತ್ರಿಕೋದ್ಯಮ ಬೆಳೆದುಬಂದ ಹಂತವನ್ನು ಗುರುತಿಸಲು ಸಹಕಾರಿಯಾಗಿದ್ದು ಅಂದಿನ ಕಾಲಕ್ಕೆ ಚಿಕ್ಕ, ಚೊಕ್ಕ, ಆಕರ್ಷಕ ಶೀರ್ಷಿಕೆಗಳನ್ನು ತನ್ನ ಲೇಖನಕ್ಕೆ ನೀಡುತ್ತಿದ್ದು ಎಲ್ಲರನ್ನು ಸೆಳೆಯುವಂತಿತ್ತು. **'ಬೆಳಕು'** ಪತ್ರಿಕೆ ವಯಸ್ಕರ ಶಿಕ್ಷಣಕ್ಕೆ ಮಾತ್ರ ಮೀಸಲಾಗಿರದೆ, ಗಾಂಧಿಯುಗದ ಸ್ವದೇಶಿ ಚಳವಳಿಯನ್ನು ಪ್ರೇರೇಪಿಸುವ ಕೆಲಸವನ್ನು ಮಾಡುತ್ತಿದ್ದು, **"ಬಿಡುವಾದಾಗ ನೂಲಿರಿ"** ಎಂಬ ಘೋಷಣಾವಾಕ್ಯವನ್ನು ಒಳಗೊಂಡಿತ್ತು. **'ಬೆಳಕು'** ಪತ್ರಿಕೆ ಕೇವಲ ವಯಸ್ಕರ ಶಿಕ್ಷಣದ ಚಟುವಟಿಕೆಗಳಿಗೆ ತನ್ನನ್ನು ಸೀಮಿತಗೊಳಿಸಿಕೊಳ್ಳದೆ ಆಯಾ ಕಾಲಮಾನದಲ್ಲಿ ರಾಜ್ಯ ದೇಶ ವಿದೇಶಗಳಲ್ಲಿ ಸುದ್ದಿಗಳನ್ನು ಒಳಗೊಂಡ ಸರ್ವಕಾಲಿಕ ದಾಖಲೆಯಾಗಿಯೂ ಕಾರ್ಯ ನಿರ್ವಹಿಸಿದ ಕೀರ್ತಿಗೆ ಭಾಜನವಾಗಿದೆ. ಎಸ್‌ಎಸ್‌ಎಲ್‌ಸಿ ಫೇಲಾದ ವಿದ್ಯಾರ್ಥಿಗಳಿಗೆಂದೇ ವಿಶೇಷ ಪುರವಣಿಗಳನ್ನು ಪ್ರಕಟಿಸಿ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡುವ ಕೆಲಸವನ್ನು ಮಾಡಿದ **'ಬೆಳಕು'** ಪತ್ರಿಕೆ ಇತರ ವಿದ್ಯಾರ್ಥಿಗಳ ಬಗ್ಗೆಯೂ ತನ್ನ ಕಾಳಜಿಯನ್ನು ವ್ಯಕ್ತಪಡಿಸಿದೆ. ಯಾವುದೇ ಲಾಭದಾಸೆ ಇಲ್ಲದೆ, ಜಾಹಿರಾತುಗಳನ್ನು ನಂಬಿ ಮಾರುಕಟ್ಟೆಯನ್ನು ಹೆಚ್ಚಿಸಿಕೊಳ್ಳದೆ, ವಯಸ್ಕರ ಶಿಕ್ಷಣ ಸಂಸ್ಥೆಯಿಂದ ನವಸಾಕ್ಷರರಿಗಾಗಿಯೇ ಪ್ರಕಟಗೊಳ್ಳುತ್ತಿದ್ದ ಪತ್ರಿಕೆ ಅಂದಿನ ಕಾಲದಲ್ಲಿ ಅದರ ಪ್ರಸಾರ ಸುಮಾರು ೧೫,೦೦೦ ದವರೆಗೆ ಇದ್ದು ತನ್ನ ಅಭಿಮಾನಿಗಳನ್ನು ಹೊಂದಿತ್ತು. ೧೯೭೫ರಲ್ಲಿ ಇಡೀ ಭಾರತದಲ್ಲಿ ಪ್ರಕಟವಾಗುತ್ತಿದ್ದ ನವಸಾಕ್ಷರರ ಸಾಪ್ತಾಹಿಕಗಳು ಕೇವಲ ಎರಡಾಗಿದ್ದು, ಒಂದು

ಕನ್ನಡದಲ್ಲಿ ಮತ್ತೊಂದು ಮಲೆಯಾಳದಲ್ಲಿ ಇತ್ತು. 'ಬೆಳಕು' ಉತ್ತಮ ಭಾಷೆ ಮತ್ತು ನಿರೂಪಣೆಗೆ ಹೆಸರಾಗಿದ್ದು ಅದನ್ನು ಯುನೆಸ್ಕೋ ಮೆಚ್ಚಿಕೊಂಡಿತ್ತು. 'ಬೆಳಕು' ಪತ್ರಿಕೆ ವಾರವಾರವೂ ತಪ್ಪದೇ ಪ್ರಕಟಗೊಂಡಿದ್ದು ಒಂದು ವೇಳೆ ತಾಂತ್ರಿಕ ಕಾರಣದಿಂದ ಕೆಲವು ವಾರ ಪ್ರಕಟಗೊಳ್ಳಲು ಅಸಾಧ್ಯವಾದಾಗ ಮುಂದಿನ ಸಂಚಿಕೆಗಳಲ್ಲಿ ಪುಟಗಳನ್ನು ಹೆಚ್ಚಿಸಿ ಓದುಗರಿಗೆ ನೀಡುವ ಕಾರ್ಯವನ್ನು ಮಾಡಿದೆ.

ಬೆಳಕು ಪತ್ರಿಕೆಯ ಸ್ಥಾಪಕ ಸಂಪಾದಕರು ಎಸ್.ವಿ. ಶ್ರೀನಿವಾಸರಾಯರಾಗಿದ್ದು, ದೀರ್ಘಕಾಲ ಆರ್.ವಿ. ಶ್ರೀನಿವಾಸಮೂರ್ತಿಯವರು ಸಂಪಾದಕರಾಗಿದ್ದು, ಕೂಡಲಿ ಚಿದಂಬರಂ, ಎಂ.ಆರ್. ಲಕ್ಷಮ್ಮ, ಐ.ಶ್ರೀ. ಪ್ರಸಾದ್, ಎಸ್.ವಿ. ಕುಮಾರ್, ಎಸ್. ರಜತಾದ್ರಿ, ಚಂದ್ರಶೇಖರಾರಾಧ್ಯ, ಆರ್. ಬೋರಯ್ಯ, ಮುಂತಾದವರು 'ಬೆಳಕು'ವಿನ ಸಾರಥ್ಯ ವಹಿಸಿದ್ದರು. **'ಬೆಳಕು' ಎಂದರೆ ವಯಸ್ಕರ ಶಿಕ್ಷಣ, ವಯಸ್ಕರ ಶಿಕ್ಷಣವೆಂದರೆ 'ಬೆಳಕು'** ಎನ್ನುವಷ್ಟರಮಟ್ಟಿಗೆ ಪರ್ಯಾಯವಾಗಿ ಬೆಳೆದ ಪತ್ರಿಕೆ. ವಯಸ್ಕರ ಶಿಕ್ಷಣದ ಬಗ್ಗೆ ಸರ್ಕಾರದ ರೀತಿನೀತಿಗಳು ಬದಲಾದಂತೆ ಅವುಗಳ ಕಾರ್ಯಚಟುವಟಿಕೆಗಳು ಕಡಿಮೆಯಾದಂತೆ ೨೦೦೧ರಲ್ಲಿ ತನ್ನ ಪ್ರಸಾರವನ್ನು ನಿಲ್ಲಿಸಿತು. ಆರು ದಶಕಗಳ ಕಾಲ 'ಬೆಳಕು' ಬೆಳಗಿತು. 'ಬೆಳಕು' ಪುಟ ಹಣತೆಯಾಗಿ ಅನೇಕ ಹಣತೆಗಳನ್ನು ತನ್ನಿಂದ ಬೆಳಗಿಸಿ ಅನಕ್ಷರತೆಯ ಕತ್ತಲನ್ನು ಹೋಗಲಾಡಿಸುವಲ್ಲಿ ಅವಿರತವಾಗಿ ಶ್ರಮಿಸಿ ಇತಿಹಾಸದ ಪುಟ ಸೇರಿತು.

### ೩.೭. ಎಂ.ಆರ್. ಲಕ್ಷಮ್ಮ ಅವರ ಸಂಪಾದಕತ್ವದಲ್ಲಿ ಬೆಳಕು ಪತ್ರಿಕೆ – ವಿನ್ಯಾಸ ಮತ್ತು ಒಳಪುಟಗಳು

'ಬೆಳಕು' ಪತ್ರಿಕೆಯ ಮಹಿಳಾ ಸಂಪಾದಕರಾಗಿ ಮೂರು ವರ್ಷಗಳ ಕಾಲ ಅದರ ಸಂಪಾದಕತ್ವ ವಹಿಸಿ ಬೆಳಕುವಿನ ಆಶಯವನ್ನು ಓದುಗರಿಗೆ ತಲುಪಿಸಿದ ಕೀರ್ತಿಗೆ ಎಂ.ಆರ್. ಲಕ್ಷಮ್ಮನವರು ಭಾಜನರಾಗಿದ್ದಾರೆ. ೧೯೪೫ ರಿಂದ ೧೯೪೭ ರವರೆಗೆ **'ಬೆಳಕು'** ಪತ್ರಿಕೆಯ ಸಂಪಾದಕರಾಗಿ ಸಮಾಜದಲ್ಲಿರುವ ಅನೇಕ ಅನಿಷ್ಟಗಳನ್ನು ತಮ್ಮ ಹರಿತವಾದ ಲೇಖನಗಳಿಂದ ತಿದ್ದುವ ಹೊಸ ಹೊಸ ಚಿಂತನೆಗಳನ್ನು ಜನರಿಗೆ ತಿಳಿಸುವ ಕಾರ್ಯವನ್ನು ಮಾಡಿದ್ದಾರೆ.

ಎಂ.ಆರ್. ಲಕ್ಷಮ್ಮನವರು ಜೂನ್ ೧೬, ೧೯೪೬ ರಂದು 'ಬೆಳಕು' ಪತ್ರಿಕೆಯ ಸಂಪಾದಕಿಯಾದರು. 'ಬೆಳಕು' ಪತ್ರಿಕೆ ಪ್ರಾರಂಭವಾಗಿ ಮೂರು ವರ್ಷಗಳು ಕಳೆದಿದ್ದು, ೩೪ ಸಂಚಿಕೆಗಳು ಈಗಾಗಲೇ ಪ್ರಕಟವಾಗಿದ್ದವು. ಮೈಸೂರು ಅಕ್ಷರಪ್ರಚಾರ ಸಮಿತಿಯ ವಾರ ಪತ್ರಿಕೆ 'ಬೆಳಕು' ಆಗಿದ್ದು, ಕೇವಲ ಎರಡು ಪುಟಗಳಲ್ಲಿ ಪತ್ರಿಕೆ ಪ್ರಕಟವಾಗುತ್ತಿದ್ದು ಪ್ರತಿ ಶನಿವಾರ ಪತ್ರಿಕೆಯು ಬಿಡುಗಡೆಯಾಗುತ್ತಿತ್ತು. ಮೈಸೂರು ಸಯ್ಯಾಜಿರಾವ್ ರಸ್ತೆಯಲ್ಲಿರುವ ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್‌ನಲ್ಲಿ ಮುದ್ರಣವಾಗುತ್ತಿದ್ದು, ಪತ್ರಿಕೆಯ ಶೀರ್ಷಿಕೆ ಇರುವ ಸ್ಥಳದಲ್ಲಿ ಬೆಟ್ಟಗಳ ನಡುವೆ ಉದಯಿಸುವ ಸೂರ್ಯ, ಅನೇಕ ಮನೆಗಳು ಇರುವ ಹಳ್ಳಿ,

ಹುಲ್ಲಿನ ಹೊರೆಯನ್ನು ಹೊತ್ತು ಸಾಗುತ್ತಿರುವ ರೈತ, ತುಂಬು ಫಲಗಳನ್ನು ಹೊತ್ತು ನಿಂತಿರುವ ತೆಂಗಿನಮರ, ಅದರ ಬಳಿಯಲ್ಲಿ ಕೆರೆಯ ಚಿತ್ರವನ್ನು ಒಳಗೊಂಡ ಹಳ್ಳಿಯ ಹೊರನೋಟದ ನಡುವೆ 'ಬೆಳಕು' ಎಂಬ ಶೀರ್ಷಿಕೆ ಮೊದಲ ಪುಟದಲ್ಲಿ ರಾರಾಜಿಸುತ್ತಿತ್ತು. ಎರಡನೆಯ ಪುಟದಲ್ಲಿ ಬೆಟ್ಟದ ಬದಿಯಲ್ಲಿ ಉದಯಿಸುವ ಸೂರ್ಯ, ಮಧ್ಯೆ ವಿಶಾಲವಾದ ರಸ್ತೆ, ಮತ್ತೊಂದು ಬದಿಯಲ್ಲಿ ಬೆಟ್ಟಗುಡ್ಡಗಳ ಸಾಲು ೨ನೇ ಪುಟದ ಎಡಭಾಗದಲ್ಲಿದ್ದು ಅದರಲ್ಲಿಯೂ ಪತ್ರಿಕೆ ಶೀರ್ಷಿಕೆ ಕಾಣುವಂತಿತ್ತು.

ಎಂ.ಆರ್. ಲಕ್ಷಮ್ಮನವರು ಪತ್ರಿಕೆಯನ್ನು ವಹಿಸಿಕೊಂಡ ಎರಡು ತಿಂಗಳ ನಂತರ ಪತ್ರಿಕೆಯ ವಿನ್ಯಾಸವನ್ನು ಬದಲಾಯಿಸಿದರು. ಮೈಸೂರು ಅಕ್ಷರಪ್ರಚಾರ ಸಮಿತಿ ವಯಸ್ಕರ ಶಿಕ್ಷಣ ಸಮಿತಿಯಾಗಿ ಮಾರ್ಪಟ್ಟಂತಹ ಸಂದರ್ಭದಲ್ಲಿ ಪತ್ರಿಕೆಯ ಪುಟದ ಸಂಖ್ಯೆಯನ್ನು ಎರಡರಿಂದ ನಾಲ್ಕಕ್ಕೆ ಏರಿಸಲಾಯಿತು. 'ಬೆಳಕು' ಎಂಬ ಶೀರ್ಷಿಕೆ ದೊಡ್ಡದಾಗಿ ಮುಖಪುಟದ ಮೇಲ್ಭಾಗದಲ್ಲಿ ಅಚ್ಚಾಗಿದ್ದು ಶೀರ್ಷಿಕೆಯ ಪ್ರಾರಂಭದಲ್ಲಿ 'ಬೆ' ಅಕ್ಷರ ಹಿಂಭಾಗದಲ್ಲಿ ಪ್ರಕಾಶಮಾನವಾಗಿ ಉರಿಯುತ್ತಿರುವ ದೀಪದ ಕಂಬವಿದ್ದು, 'ಳ' ಅಕ್ಷರದ ಮಧ್ಯಭಾಗದಲ್ಲಿ ಎತ್ತರದ ೩ ಜ್ಯೋತಿಗಳಲ್ಲಿ ಪ್ರಜ್ವಲಿಸುವ ದೀಪದ ಕಂಬವಿದ್ದು, 'ಕು' ಅಕ್ಷರದ ಮುಂಭಾಗದಲ್ಲಿ ಪ್ರಾರಂಭದಲ್ಲಿದ್ದಂತಹ ದೀಪದ ಕಂಬದ ಚಿತ್ರವಿದ್ದು ಪತ್ರಿಕೆಯ ಶೀರ್ಷಿಕೆಯನ್ನು ಆಂತರ್ಯದಲ್ಲಿ ತುಂಬಿಕೊಂಡು ಜನರಿಗೆ ತಲುಪಿಸುವ ನಿಟ್ಟಿನಲ್ಲಿ ಪರಿಣಾಮಕಾರಿಯಾಗಿದೆ.

ಪತ್ರಿಕೆಯ ನೋಂದಣಿ ಸಂಖ್ಯೆ ಎಂ-೪೬೭೦ ಎಂದು ೧೯೪೫ ಆಗಸ್ಟ್ ತಿಂಗಳ ಸಂಚಿಕೆಯಲ್ಲಿ ಪ್ರಕಟಿಸಲಾಗಿದೆ. ಪತ್ರಿಕೆಯಲ್ಲಿ ಅನೇಕ ಸ್ಥಿರ ಶೀರ್ಷಿಕೆಗಳ ಸುದ್ದಿಗಳು ಪ್ರಕಟವಾಗುತ್ತಿದ್ದು, ಕಾಲಾನಂತರದಲ್ಲಿ ಅನೇಕ ಬದಲಾವಣೆಗಳನ್ನು ನೋಡಬಹುದು. ೧೯೪೫ ಆಗಸ್ಟ್ ಸಂಚಿಕೆಯಿಂದ ಪತ್ರಿಕೆಯ ಒಳ ಪುಟಗಳಲ್ಲಿರುವ ಸುದ್ದಿಗಳ ತಲೆಬರಹಗಳನ್ನು, ಮುಖ್ಯ ಪುಟದ ಎಡಭಾಗದಲ್ಲಿ ಪಟ್ಟಿಯ ಒಳಗೆ ಕಾಣಬಹುದು. ೧೯೪೬ ಆಗಸ್ಟ್ ತಿಂಗಳಲ್ಲಿ ಪತ್ರಿಕೆಯ ನೋಂದಣಿ ಸಂಖ್ಯೆ ಎಂ.-೪೭೪೮ ಆಗಿದ್ದು, ೧೯೪೬ ಡಿಸೆಂಬರ್ ತಿಂಗಳಲ್ಲಿ ಪತ್ರಿಕೆಯ ಶೀರ್ಷಿಕೆಯ ಚಿತ್ರ ಬದಲಾಗಿದ್ದು 'ಬೆಳಕು' ಅಕ್ಷರದ ಕೆಳಭಾಗದಲ್ಲಿ ವೃತ್ತದ ನಡುವೆ ತೆರೆದಿಟ್ಟ ಪುಸ್ತಕದ ಚಿತ್ರವಿದ್ದು, ಪುಸ್ತಕದ ಮೇಲ್ಭಾಗದಲ್ಲಿ ಉದಯಿಸುತ್ತಿರುವ ಸೂರ್ಯನ ಅರ್ಧ ಚಿತ್ರವಿದ್ದು, ಕೆಳಭಾಗದಲ್ಲಿ ಪ್ರಪಂಚದ ಗೋಳದ ಅರ್ಧ ಭಾಗವಿದ್ದು, ಭಾರತದ ಭೂಪಟದ ಮೇಲೆ ಪುಸ್ತಕವು ನಿಂತಿರುವಂತೆ ಮುದ್ರಿತವಾಗಿದೆ. ವೃತ್ತದ ಹೊರಭಾಗದಲ್ಲಿ ಹುಲ್ಲುಹಾಸಿನ ಮೇಲೆ ಎಡಭಾಗದಲ್ಲಿ ಪುಸ್ತಕವನ್ನು ಓದುತ್ತಿರುವ ಮಹಿಳೆಯ ಚಿತ್ರವನ್ನು ಕಾಣಬಹುದು. ಪುರುಷ ಹಾಗೂ ಮಹಿಳೆ ಎದುರಿಗೆ ಪ್ರಕಾಶಮಾನವಾಗಿ ಉರಿಯುತ್ತಿರುವ ದೀಪದ ಕಂಬವನ್ನು ಕಾಣಬಹುದು. ೧೯೪೬ ಸೆಪ್ಟೆಂಬರ್ ತಿಂಗಳ

ಸಂಚಿಕೆಯಿಂದ ಪತ್ರಿಕೆಗೆ ಲೈಸನ್ಸ್ ದೊರಕಿತು. ಅಂಚೆಚೀಟಿ ಹಚ್ಚದೆಯೇ ಪತ್ರಿಕೆಯನ್ನು ಅಂಚೆ ಮೂಲಕ ವಿತರಿಸುವ ಬಗ್ಗೆ ಪತ್ರಿಕೆಯ ತುದಿಯಲ್ಲಿ ಪ್ರಕಟವಾಗಿದೆ.

ಎಂ.ಆರ್. ಲಕ್ಷಮ್ಮನವರು ಸಂಪಾದಕಿಯಾಗಿ ಕಾರ್ಯ ನಿರ್ವಹಿಸಿದ 'ಬೆಳಕು' ಪತ್ರಿಕೆ ೧೦೨ ಸಂಚಿಕೆಗಳು ಲಭ್ಯವಾಗಿದ್ದು, ಅವುಗಳಲ್ಲಿ ಸಂಪಾದಕೀಯ, ತಿಳಿದುಕೊಳ್ಳಬೇಕಾದುದು, ಅನುಸರಿಸಬೇಕಾದ ಕೆಲವು ವಿಷಯಗಳು, ಕಥೆಗಳು, ಸುದ್ದಿಗಳು, ಏನು ಸಮಾಚಾರ ಸ್ವಾಮಿ? ಪತ್ರಿಕೆಯ ಬಲ ತುದಿಯಲ್ಲಿ ವಚನಗಳು ಮುಂತಾದ ಶೀರ್ಷಿಕೆಯ ಅಡಿಯಲ್ಲಿ ಸುದ್ದಿ ಪ್ರಕಟವಾಗುತ್ತಿತ್ತು. ೧೮.೦೮.೧೯೪೫೮ ಸಂಚಿಕೆಯಿಂದ ಪತ್ರಿಕೆಯ ಒಳಗಿರುವ ಸುದ್ದಿಯ ಶೀರ್ಷಿಕೆಗಳು 'ಈ ವಾರದ ಪತ್ರಿಕೆಯಲ್ಲಿ' ಎಂದು ಚೌಕಟ್ಟಿನೊಳಗೆ ಮುಖಪುಟದಲ್ಲಿ ಪ್ರಕಟವಾಗುತ್ತಿತ್ತು. ೨೫.೦೮.೧೯೪೫೮ ಸಂಚಿಕೆಯಿಂದ 'ಬೆಳಕು' ಪತ್ರಿಕೆಯು ನಾಲ್ಕು ಪುಟಗಳಲ್ಲಿ ಪ್ರಕಟವಾಗುತ್ತಿದ್ದು, ಪತ್ರಿಕೆಯ ಮುಖಪುಟದಲ್ಲಿ ಒಳಸುದ್ದಿಯ ಶೀರ್ಷಿಕೆಗಳು ಪ್ರಕಟವಾಗುತ್ತಿದ್ದವು. ಪತ್ರಿಕೆಯಲ್ಲಿ ದೇಶವಿದೇಶದ ಸುದ್ದಿಗಳು, ಮೈಸೂರು ಸಂಸ್ಥಾನದ ಸುದ್ದಿಗಳು, ಸಾಮಾಜಿಕ ಸುಧಾರಣೆಗೆ ಸಂಬಂಧಪಟ್ಟ ಲೇಖನಗಳು, ವಯಸ್ಕರ ಶಿಕ್ಷಣ ಸುದ್ದಿಗಳು, ಮಹಿಳಾಪರವಾದ ಚಿಂತನೆಗಳು ಮತ್ತು ಬರಹಗಳು, ಸುಭಾಷಿತಗಳು, ಕನ್ನಡ ನಾಡು, ನುಡಿ, ಏಕೀಕರಣಕ್ಕೆ ಸಂಬಂಧಪಟ್ಟ ಲೇಖನಗಳು, ಅರಿವು ಮೂಡಿಸುವ ಲೇಖನಗಳು, ವಚನಗಳು, ಹಾಡು, ಜನಪದ ಗೀತೆಗಳು ಕಥೆಗಳು, ವ್ಯಕ್ತಿ ಮತ್ತು ವ್ಯಕ್ತಿತ್ವಕ್ಕೆ ಸಂಬಂಧಪಟ್ಟ ಲೇಖನಗಳು, ಧಾರ್ಮಿಕ ವಿಚಾರಧಾರೆಗಳು, ಸ್ವಾತಂತ್ರ್ಯ ಚಳವಳಿಯ ಸುದ್ದಿಗಳು ಮತ್ತು ವಿಚಾರಧಾರೆಗಳು, ಕೃಷಿಗೆ ಕೈಗಾರಿಕೆಗೆ ಸಂಬಂಧಪಟ್ಟ ಲೇಖನಗಳು, ವಿಚಾರಪೂರಿತ ಲೇಖನಗಳು, ಮಾನವೀಯ ಮೌಲ್ಯಗಳ ಲೇಖನಗಳು, ವಿಜ್ಞಾನ ತಂತ್ರಜ್ಞಾನಕ್ಕೆ ಸಂಬಂಧಪಟ್ಟ ಲೇಖನಗಳು, ಧಾರ್ಮಿಕ ವಿಚಾರಕ್ಕೆ ಸಂಬಂಧಪಟ್ಟ ಲೇಖನಗಳು ಪ್ರಕಟವಾಗುತ್ತಿದ್ದು ಪ್ರತಿಯೊಂದು ಬರಹಗಳು, ಓದುಗರಲ್ಲಿ ಚಿಂತನೆಯನ್ನು ಹೆಚ್ಚಿಸುವ ಎಲ್ಲ ವರ್ಗದವರಿಗೆ ತಲುಪುವ ಪತ್ರಿಕೆಯಾಗಿತ್ತು.

### ೩.೮. ಕುಂತೀದೇವಿ – ಕೃತಿ

ಎಂ.ಆರ್. ಲಕ್ಷಮ್ಮನವರು ಬರೆದ 'ಕುಂತೀದೇವಿ' ಎಂಬ ಪುಸ್ತಕವು ೧೯೪೩ ರಲ್ಲಿ ಪ್ರಥಮ ಮುದ್ರಣವನ್ನು ಕಂಡಿದ್ದು ೬೦೦೦ ಪ್ರತಿಗಳು ಅಚ್ಚುಹಾಕಿಸಲ್ಪಟ್ಟಿದ್ದವು. ಎರಡನೇ ಮುದ್ರಣವನ್ನು ೧೯೪೮ ರಲ್ಲಿ ಮತ್ತು ಮೂರನೇ ಮುದ್ರಣವನ್ನು ೧೯೫೩ರಲ್ಲಿ ತಲಾ ೬೦೦೦ ಪ್ರತಿಗಳು ಸಿದ್ಧಗೊಂಡವು. ವಯಸ್ಕರ ಶಿಕ್ಷಣದ ಪುಸ್ತಕಮಾಲೆಯಲ್ಲಿ ೧೯೪೧ ರಿಂದ ೧೯೭೭ ರವರೆಗೆ ಒಟ್ಟು ೨೫೦ ಪುಸ್ತಕಗಳು ಪ್ರಕಟಿಸಲ್ಪಟ್ಟಿದ್ದು 'ಕುಂತೀದೇವಿ' ಪುಸ್ತಕವು ವಯಸ್ಕರ ಶಿಕ್ಷಣ ಸಮಿತಿಯ ಪುಸ್ತಕಮಾಲೆಯ ೧೨ನೇ ಪುಸ್ತಕವಾಗಿ ಪ್ರಕಟಗೊಂಡಿತು. ಒಟ್ಟು ೩೨ ಪುಟಗಳ ಪುಸ್ತಕದ ಕೊನೆಯ ಹಾಳೆಯಲ್ಲಿ "ನಿರಕ್ಷರತೆ ಎಂಬುದು ಭಯಂಕರ ಪಿಶಾಚಿ, ಇದನ್ನು

ಹೊಡೆದಟ್ಟಬೇಕಾದರೆ ಎಲ್ಲಾ ಜನರೂ, ಓದು, ಬರಹ, ಲೆಕ್ಕ ಇವುಗಳನ್ನು ಕಲಿಯಲೇಬೇಕು. ದೊಡ್ಡವರು ವಯಸ್ಕರ ಶಾಲೆಗೆ ಸೇರಿರಿ, ಮಕ್ಕಳನ್ನು ಹತ್ತಿರದ ಸ್ಕೂಲಿಗೆ ಸೇರಿಸಿರಿ, ಕಾಲಹರಣ ಮಾಡಬೇಡಿ" ಎಂಬ ಘೋಷಣಾ ವಾಕ್ಯಗಳನ್ನು ಕಾಣಬಹುದು. ಕುಂತೀದೇವಿ ಕಥೆಯು ಸರಳ ವಾಕ್ಯಗಳಿಂದ ಕೂಡಿದ್ದು ಆಡುಭಾಷೆಯನ್ನು ಬಳಸಿಕೊಂಡು ರಚಿಸಿದ ಕಥೆಯಾಗಿದೆ. ಪಂಚಪಾಂಡವರ ತಾಯಿ ಕುಂತೀದೇವಿ ಪುಸ್ತಕದ ಕಥಾವಸ್ತುವಾಗಿದ್ದು, ಕುಂತೀದೇವಿಯ ಜನನದಿಂದ ಆಕೆಯ ಕೊನೆಗಾಲದವರೆಗಿನ ಜೀವನವನ್ನು ತಿಳಿಸುತ್ತದೆ. ಮೂವತ್ತೆರಡು ಪುಟಗಳಲ್ಲಿ ಇಡೀ ಮಹಾಭಾರತದ ಕಥಾ ಹಂದರವನ್ನು ಸಂಕ್ಷಿಪ್ತವಾಗಿ ಚಿತ್ರಿಸಲಾಗಿದೆ. ಕುಂತಿ ಯಾದವ ಕುಲದ ಅರಸ ಶೂರರಾಜನ ಮಗಳಾಗಿ ಹುಟ್ಟಿ, ಶೂರನ ಸೋದರತ್ತೆಯ ಮಗ ಕುಂತೀ ಭೋಜನಿಗೆ ಮಕ್ಕಳಿಲ್ಲದ ಕಾರಣ ದತ್ತುಪುತ್ರಿಯಾಗಿ ಹೋಗಿ 'ಕುಂತೀದೇವಿ' ಹೆಸರಿನಿಂದ ಬೆಳೆಯುತ್ತಾಳೆ. ಚಿಕ್ಕ ವಯಸ್ಸಿನಲ್ಲಿ ಅರಮನೆಗೆ ಅತಿಥಿಯಾಗಿ ಬಂದ ದೂರ್ವಾಸಮುನಿಯ ಸತ್ಕಾರ ಮಾಡಿ ಐದು ಮಂತ್ರಗಳನ್ನು ವರವಾಗಿ ಪಡೆಯುತ್ತಾಳೆ. ಪ್ರತಿ ವರದಿಂದಲೂ ಒಬ್ಬೊಬ್ಬ ಅತಿಶಯ, ಸುಂದರವಾದ, ಮಹಾಬಲಶಾಲಿ ಮಗ ಹುಟ್ಟುತ್ತಾನೆಂಬ ದೂರ್ವಾಸರ ಮಾತನ್ನು ಪರೀಕ್ಷಿಸಲು ಹೋಗಿ ಮದುವೆಗೆ ಮುಂಚೆ ಸೂರ್ಯದೇವನಿಂದ ಮಗುವನ್ನು ಪಡೆಯುತ್ತಾಳೆ. ಅಪವಾದ ತಪ್ಪಿಸಿಕೊಳ್ಳಲು ಮಗುವನ್ನು ದೋಣಿಯಲ್ಲಿಟ್ಟು ಗಂಗೆಯಲ್ಲಿ ತೇಲಿಬಿಡುತ್ತಾಳೆ. ಆ ಮಗು ಬೆಸ್ತರ ಮನೆ ಸೇರಿ ಕರ್ಣನಾಗಿ ಬೆಳೆಯುತ್ತಾನೆ.

ಆನಂತರ ಕುಂತಿ ಪಾಂಡುವನ್ನು ಮದುವೆಯಾಗಿ ಹಸ್ತಿನಾಪುರಕ್ಕೆ ಹೋಗುವುದು, ಪಾಂಡವರ ಜನನ, ವಿದ್ಯಾಭ್ಯಾಸ ಮಾಡಿಸಿಕೊಂಡು ಇರುವುದು, ಅರಗಿನ ಮನೆಯಿಂದ ಮಕ್ಕಳೊಡನೆ ಪಾರಾಗಿ ಹೋಗಿ ವನವಾಸ ಮಾಡುವುದು, ಬಕಾಸುರನ ವಧೆ, ಪಾಂಡವರೊಡನೆ ದ್ರೌಪದಿಯ ಮದುವೆ, ಇಂದ್ರಪ್ರಸ್ಥದಲ್ಲಿ ಮಕ್ಕಳೊಡನೆ ಜೀವನ.

ಪಾಂಡವರು ಜೂಜಾಟದಲ್ಲಿ ಸೋತು ವನವಾಸಕ್ಕೆ ಹೋಗುವುದು, ಹದಿಮೂರು ವರ್ಷ ವನವಾಸದ ನಂತರದ ಯುದ್ಧ, ಕುಂತಿ ಕರ್ಣರ ಭೇಟಿ, ಕೊನೆಯ ದಿನಗಳಲ್ಲಿ ಕುಂತಿ ಧೃತರಾಷ್ಟ್ರ, ಗಾಂಧಾರಿ, ವಿಧುರರ ಜೊತೆ ವನವಾಸಕ್ಕೆ ಹೋಗುತ್ತಾಳೆ. ಅಲ್ಲಿ ಅವರ ಸೇವೆ ಮಾಡುತ್ತಾ ಕೊನೆ ದಿನಗಳನ್ನು ಕಳೆಯುವುದು – ಹೀಗೆ ಚಿಕ್ಕ ಚಿಕ್ಕ ಶೀರ್ಷಿಕೆಗಳನ್ನು ಹೊಂದಿದ್ದು, ಇಡೀ ಮಹಾಭಾರತದ ಘಟನೆಯನ್ನು ಕಣ್ಮುಂದೆ ತರುತ್ತದೆ. ಮಹಾಭಾರತದ ಕಥೆಯನ್ನು ಕುಂತೀದೇವಿಯ ಕಣ್ಣಲ್ಲಿ ನೋಡುವ ಪ್ರಯತ್ನವನ್ನು ಎಂ.ಆರ್. ಲಕ್ಷಮ್ಮನವರು ಮಾಡಿದ್ದಾರೆ. ಹೆಣ್ಣಾಗಿ ಹುಟ್ಟಿ ಜೀವನದಲ್ಲಿ ಅನುಭವಿಸಿದ ಕಷ್ಟಕಾರ್ಪಣ್ಯಗಳ ಬಗ್ಗೆ ಅದನ್ನು ಎದುರಿಸಿದ ಬಗೆಯನ್ನು ಚಿತ್ರಿಸಿದ್ದಾರೆ.

ಈ ಪುಸ್ತಕದ ಕೊನೆಯಲ್ಲಿ ಮಹಾಭಾರತ ರಚಿಸುವಾಗ ವ್ಯಾಸ ಋಷಿಗಳು ಹೇಳಿದ ಮಾತನ್ನು ಲಕ್ಷಮ್ಮನವರು ಉಲ್ಲೇಖಿಸಿದ್ದಾರೆ. "ಗಾಂಧಾರಿದೇವಿಯ ಧರ್ಮಶೀಲತೆಯನ್ನು,

'ವೀರಾಂಜನೇಯ'ನೆಂದು, ಐದು ತಲೆ ಹತ್ತು ಕೈ ಇರುವ ಮೂರ್ತಿಯನ್ನು 'ಪಂಚಮುಖಿ ಆಂಜನೇಯ' ಎಂದು, ರಾಮನ ಭಕ್ತನಾಗಿ ಮನಸ್ಸಿಟ್ಟು ಕೈಮುಗಿದು ನಿಂತಿರುವ ಮೂರ್ತಿಯನ್ನು 'ಸಂಜೀವ ಮುಖ್ಯಪ್ರಾಣ' ಎಂದು ವಿವಿಧ ಹೆಸರುಗಳಿಂದ ಕರೆಯಲ್ಪಡುವ ಹನುಮನ ಮಹಿಮೆ ಅಪಾರವಾದದ್ದು. ಲಕ್ಷಮ್ಮನವರು ಹನುಮನ ಕಥೆಯನ್ನು ನಿರೂಪಿಸುತ್ತಾ ಎಲ್ಲಿಯವರೆಗೂ ನಮ್ಮ ದೇಶ, ನಮ್ಮ ಜನ, ನಮ್ಮ ನಡೆ ನುಡಿ ಉಳಿಯುವುದೋ ಅಲ್ಲಿಯವರೆಗೂ ಹನುಮನ ಪೂಜೆ ಅಳಿಯುವುದಿಲ್ಲವೆಂದು ಹೇಳುತ್ತಾರೆ. ಜನಸಾಮಾನ್ಯರ ಆರಾಧ್ಯದೈವವಾಗಿ ಪ್ರತಿನಿಧಿಯಾಗಿ ಹನುಮನನ್ನು ನೋಡುವ ಪ್ರಯತ್ನವನ್ನು ಮಾಡಿದ್ದಾರೆ.

ಮಾರುತಿ ಪುಸ್ತಕದ ಬೆಲೆ ಒಂದುವರೆ ಆಣೆಯಾಗಿದ್ದು, ಅದರ ಸಂಪಾದಕರಾದ ಕೂಡಲಿ ಚಿದಂಬರಂ ಪುಸ್ತಕದ ಕೊನೆಯ ಹಾಳೆಯಲ್ಲಿ ವಯಸ್ಕರಿಗೆ ಓದುಬರಹವನ್ನು ಕಲಿಸಿದ ಮಾತ್ರಕ್ಕೆ ನಮ್ಮ ಕೆಲಸ ಮುಗಿದಂತಾಗುವುದಿಲ್ಲ. ಕಲಿತ ವಿದ್ಯೆ ಜನರಲ್ಲಿ ಆತ್ಮಗೌರವವನ್ನು ಹುಟ್ಟಿಸಿ, ತಮ್ಮ ಬದುಕನ್ನು ಹಸನಾಗಿ ಮಾಡಿಕೊಳ್ಳಲು ಸಹಾಯವಾಗಿ, ದೇಶದ ಆಡಳಿತದಲ್ಲಿ ಅವರು ಬುದ್ಧಿವಂತಿಕೆಯಿಂದ ಭಾಗವಹಿಸಲು ಒಂದು ಸಾಧನವಾಗಬೇಕು. ಅವರು ತಮ್ಮ ಓದಿನಿಂದ ನಡೆನುಡಿಗಳನ್ನು ತಿದ್ದಿಕೊಂಡು ತಮ್ಮ ಹಳ್ಳಿಗಳ ಆರೋಗ್ಯ, ಐಶ್ವರ್ಯಗಳು ಹೆಚ್ಚುವುದರಲ್ಲಿಯೂ, ತಮ್ಮ ಜೀವನಮಾರ್ಗವನ್ನು ಉತ್ತಮಪಡಿಸಿ ಕೊಳ್ಳುವುದರಲ್ಲಿಯೂ ನಿರತರಾಗುವಂತೆ ಆಗಬೇಕು. ಆದುದರಿಂದ ಐದು ತಿಂಗಳಲ್ಲಿ ನಾವು ಕಲಿಸಿಕೊಟ್ಟ ಓದಿನಿಂದ ಉಂಟಾದ ಉತ್ಸಾಹವನ್ನು ಮುಂದುವರಿಸುವ ಮತ್ತು ದೃಢಪಡಿಸುವ ಉದ್ದೇಶದಿಂದ ವಯಸ್ಕರ ಶಿಕ್ಷಣದ ಪುಸ್ತಕಮಾಲೆಯನ್ನು ಪ್ರಕಟಿಸುತ್ತಿರುವುದು. ಈ ಮಾಲಿಕೆಯ ಪುಸ್ತಕಗಳ ಪ್ರಕಟಣೆಯಲ್ಲಿ ಎಲ್ಲರ ಸಲಹೆಗಳನ್ನು ಸಹಾಯವನ್ನು ಕೋರುತ್ತೇವೆ ಎಂದು ಮನವಿ ಮಾಡಿದ್ದಾರೆ.[೨೧]

## ೩.೧೧. ಎಂ.ಆರ್. ಲಕ್ಷಮ್ಮ ಅವರ ಸಂಪಾದಕತ್ವದ ಸೋದರಿ ವಾರಪತ್ರಿಕೆ

ಎಂ.ಆರ್. ಲಕ್ಷಮ್ಮನವರು ಕರ್ನಾಟಕದ ಪತ್ರಿಕೋದ್ಯಮಕ್ಕೆ ನೀಡಿರುವ ಒಂದು ಅಮೂಲ್ಯ ಕೊಡುಗೆಯೇ 'ಸೋದರಿ' ಎಂಬ ವಾರಪತ್ರಿಕೆ. ೧೯೫೦ ರಲ್ಲಿ ಲಕ್ಷಮ್ಮನವರು ಆರಂಭಿಸಿದ 'ಸೋದರಿ' ಪತ್ರಿಕೆ ಆ ಕಾಲಕ್ಕೆ ತೀರ ಅಪರೂಪವಾಗಿದ್ದು, ಮಹಿಳೆಯರಿಗಾಗಿಯೇ ಇದ್ದ ಪತ್ರಿಕೆಗಳಲ್ಲಿ ಒಂದು. ಪತ್ರಿಕೆಯ ಸಂಪಾದಕಿಯಾಗಿ ಮಾತ್ರವಲ್ಲದೇ ಮುದ್ರಿಸಿ ಪ್ರಕಾಶಿಸುವ ಹೊಣೆಗಾರಿಕೆಯನ್ನು ಹೊತ್ತುಕೊಂಡು ಏಕಾಂಗಿಯಾಗಿ ಇವರು ಮಾಡುತ್ತಿದ್ದ ಕಾರ್ಯ ಶ್ಲಾಘನೀಯವಾದದ್ದು. ಬೆಂಗಳೂರಿನ ನರಸಿಂಹರಾಜ ಕಾಲೋನಿಯ ಅವರ ಬಾಡಿಗೆ ಮನೆಯಲ್ಲಿದ್ದ ಸೋದರಿ ಕಾರ್ಯಾಲಯದಿಂದ ಪತ್ರಿಕೆ ಪ್ರಕಟಗೊಳ್ಳುತ್ತಿದ್ದು, ಕುಟುಂಬದ ಸದಸ್ಯರೇ ಪತ್ರಿಕೆಯ ಕೆಲಸಗಾರರಾಗಿ ದುಡಿಯುತ್ತಿದ್ದರು. ಗಂಡುಮಕ್ಕಳು ಯಂತ್ರದ ಕೆಲಸ ನಿರ್ವಹಣೆ ನೋಡಿಕೊಂಡರೆ ಹೆಣ್ಣುಮಕ್ಕಳು ಮುದ್ರಿತ ಪುಟಗಳನ್ನು ಬಿಡಿಸಿ ಹರಡಿ ನಂತರ ಜೋಡಿಸಿ ಹೊಲಿದು ವಿಳಾಸ ಬರೆದು ಅಂಚೆಚೀಟಿ ಲಗತ್ತಿಸಿರುವ ಹೊಣೆಯನ್ನು

ನಿರ್ವಹಿಸುತ್ತಿದ್ದರು.[೨೨] ಅಲ್ಲದೆ ಅದನ್ನು ಕೊಂಡೊಯ್ದು ಅಂಚೆ ಕಛೇರಿಗೆ ಪತ್ರಿಕೆಗಳನ್ನು ತಲುಪಿಸುವ ಕೆಲಸವನ್ನು ಮಾಡುತ್ತಿದ್ದರು.

'ಸೋದರಿ' ಪತ್ರಿಕೆಯು ಡೆಮಿ ನಾಲ್ಕನೇ ಒಂದರ ಆಕಾರದಲ್ಲಿ ೨೦ ಪುಟಗಳನ್ನು ಒಳಗೊಂಡ ಪತ್ರಿಕೆಯಾಗಿದ್ದು, ಪತ್ರಿಕೆಯ ವಾರ್ಷಿಕ ಚಂದಾದಾರರಾಗಲು ಸ್ಥಳೀಯರು ೬ ರೂಪಾಯಿಗಳನ್ನು ಮತ್ತು ಪರಸ್ಥಳದವರು ೬ ರೂಪಾಯಿಯೊಡನೆ ಅಂಚೆ ವೆಚ್ಚ ೧೨ ರೂಪಾಯಿಗಳನ್ನು ನೀಡಬೇಕಿತ್ತು. 'ಸೋದರಿ' ಪತ್ರಿಕೆಯ ಬಿಡಿ ಸಂಚಿಕೆಯ ಮುಖ ಬೆಲೆ ೨ ಆಣೆಯಾಗಿತ್ತು. 'ಸೋದರಿ' ಪತ್ರಿಕೆಯು ಅಂದಿನ ಕಾಲದಲ್ಲಿ ಮೂರರಿಂದ ನಾಲ್ಕು ಸಾವಿರ ಪ್ರತಿಗಳು ಮಾರಾಟವಾಗುತ್ತಿದ್ದು, ಕರ್ನಾಟಕದ ಹೊರ ರಾಜ್ಯಗಳಿಗೂ ಪತ್ರಿಕೆ ರವಾನೆ ಆಗುತ್ತಿತ್ತು. ಮೈಸೂರು ಸರ್ಕಾರದವರು ತಮ್ಮ ಆದೇಶ ಸಂಖ್ಯೆ ಟಿಬಿಸಿ ೯/೪೯-೫೦ ಪತ್ರದ ಪ್ರಕಾರ ಹೆಣ್ಣುಮಕ್ಕಳ ಎಲ್ಲಾ ಮಾಧ್ಯಮಿಕ ಮತ್ತು ಹೈಸ್ಕೂಲುಗಳಿಗೆ ಈ ಪತ್ರಿಕೆಯನ್ನು ಮಂಜೂರು ಮಾಡಿದ್ದರು. ಹಾಗೆಯೇ ಆದೇಶ ಸಂಖ್ಯೆ ಆರ್.೭ ಸಿ – ೯೯–೫೦–೫೧ ರ ಪ್ರಕಾರ ಹಳ್ಳಿ ಪಂಚಾಯಿತಿಯವರು ಕೊಳ್ಳಬಹುದೆಂದು ಮಂಜೂರು ಮಾಡಿದ್ದರು.[೨೩] 'ಸೋದರಿ' ಪತ್ರಿಕೆಯು ಕಥೆ, ಕವನ, ವೈಚಾರಿಕ ಲೇಖನ, ವಿಮರ್ಶೆ, ವಿನೋದ, ವ್ಯಕ್ತಿತ್ವ ಪರಿಚಯ, ಪ್ರಸಿದ್ಧ ವ್ಯಕ್ತಿಗಳ ಸಾಧನೆಗಳು ಚಿತ್ರ ನಾಟಕ ಮತ್ತು ಸಂಗೀತದ ವಿಮರ್ಶೆ, ಅನುವಾದಿತ ಲೇಖನ, ರೇಖಾ ಚಿತ್ರ, ಮಹಿಳಾ ಸಮಾಜದ ಹಾಗೂ ಮಹಿಳಾ ಸಂಘಗಳ ಚಟುವಟಿಕೆಗಳ ವರದಿಗಳನ್ನು ಒಳಗೊಂಡಿರುತ್ತಿತ್ತು. ಮಹಿಳೆಯರ ಹಕ್ಕುಬಾಧ್ಯತೆಗಳನ್ನು ವಿವರಿಸಲು ರಚನಾತ್ಮಕ ದೃಷ್ಟಿಯಿಂದ ಅದನ್ನು ಸಾಧಿಸುವುದಕ್ಕಾಗಿಯೂ, ನಮ್ಮ ಭಾವನೆಯನ್ನು ಭಾಷೆಯ ರೂಪದಲ್ಲಿ ಹೊರಗೆಡವಿ ಜಗತ್ತಿನ ಮುಂದಿರಿಸುವುದಕ್ಕಾಗಿಯೇ 'ಸೋದರಿ' ಶ್ರಮಿಸುತ್ತಿದೆ ಎಂಬ ಪ್ರಕಟಣೆಯೊಂದಿಗೆ 'ಸೋದರಿ' ತನ್ನತ್ತ ಗಮನವನ್ನು ಸೆಳೆಯುತ್ತಿತ್ತು. ಸಂಪಾದಕೀಯದಿಂದ, ಸಾರ್ವಜನಿಕ ಚುನಾವಣೆಗಳಲ್ಲಿ ಮಹಿಳೆಯರ ಪ್ರಾತಿನಿಧ್ಯ, ಮಹಿಳೆಯರ ಸಾಧನೆಗಳು, ಸ್ತ್ರೀಯರಿಂದ ಕನ್ನಡ ಸಾಹಿತ್ಯದಲ್ಲಿ ಆಗಬೇಕಾಗಿರುವ ಸೇವೆ, ಮಹಿಳಾ ಸಂಘಟನೆಯ ಅಗತ್ಯ, ರಾಜಕೀಯದಲ್ಲಿ ಸರ್ಕಾರದ ಲೋಪದೋಷಗಳು ಪರಿಹಾರಕ್ಕೆ ಉಪಯುಕ್ತ ಸಲಹೆಗಳು ಹೀಗೆ ಗಂಭೀರವಾದ ಚಿಂತನಾರ್ಹವಾದ ವಸ್ತುಗಳನ್ನೊಳಗೊಂಡ ಲೇಖನಗಳು ಹೊರಬರುತ್ತಿದ್ದವು.

ಕೇಂದ್ರೀಯ ಸಮಾಜಕಲ್ಯಾಣ ಮಂಡಲದ ಕಾರ್ಯಕ್ರಮಗಳ ವಿವರಗಳೂ 'ಸೋದರಿ'ಯಲ್ಲಿ ಇರುತ್ತಿದ್ದವು. ಮುಖ್ಯವಾಗಿ ಮಹಿಳೆಯರಿಗೆ ತಮ್ಮ ಅಭಿವೃದ್ಧಿಗೆ ಏನೆಲ್ಲ ಕಾರ್ಯಕ್ರಮಗಳು ತಮ್ಮ ಸುತ್ತ ನಡೆಯುತ್ತಿವೆಯೆಂಬ ಅರಿವು ಮೂಡಿಸುವುದು ಈ ಪತ್ರಿಕೆಯ ಉದ್ದೇಶವಾಗಿತ್ತು. ಕೆಲವು ಸಂದರ್ಭಗಳಲ್ಲಿ ಬೇರೆ ಭಾಷೆಯ ಪತ್ರಿಕೆಗಳು ವಿಶೇಷ ಲೇಖನಗಳ ಅನುವಾದ ಪ್ರಕಟಣೆಯೂ ಇರುತ್ತಿತ್ತು. ಪ್ರವಾಸ ಸಾಹಿತ್ಯ, ಹಿಂದಿ, ಬಂಗಾಳಿಯ ಪ್ರಸಿದ್ಧ ಸಾಹಿತಿಗಳ ಕೃತಿಗಳ ಅನುವಾದಿತ ಕೃತಿಗಳ ಪ್ರಕಟಣೆಗಳು, ವೈಚಾರಿಕ ಲೇಖನಗಳು, ಮಕ್ಕಳ

ಪುಟ ಮಹಿಳೆಯರ ಏಳಿಗೆಗಾಗಿ ನಡೆಸಬೇಕಾದ ಯೋಜನೆ, ಅವುಗಳ ಪ್ರಾಯೋಗಿಕ ಪ್ರಯತ್ನಗಳು ಪಡೆದ ಸಫಲತೆ ಎಲ್ಲ ವಿವರಗಳ ಲೇಖನಗಳು ಓದುಗರಿಗೆ ಲಭ್ಯವಾಗುತ್ತಿದ್ದವು.

ಲೇಖನಗಳು, ಕಥೆಗಳು ಅನೇಕ ಲೇಖಕರಿಂದ ಬರೆಯಲ್ಪಡುತ್ತಿದ್ದು, ನೀಳಾದೇವಿ, ಜಯಲಕ್ಷ್ಮಿಶ್ರೀನಿವಾಸನ್, ಎನ್.ಎಂ. ಇಂದಿರಾ, ಪ್ರತಿಭಾ, ರುಕ್ಮಿಣಿಬಾಯಿ, ಗಿರಿಮಾಜಿ, ಜಯಲಕ್ಷಮ್ಮ ಪಿ.ಆರ್. ರಾಮಯ್ಯ, ಹೆಚ್.ವೈ. ಸರಸ್ವತಮ್ಮ, ಟಿ. ಸುನಂದಮ್ಮ, ಶ್ರೀಮತಿ ಮಾಲತಿ ಶ್ರೀನಿವಾಸನ್ ಮುಂತಾದ ಲೇಖಕರ ಬಳಗ ನಿರಂತರವಾಗಿ ಈ ಪತ್ರಿಕೆಯ ಜೊತೆಗಿದ್ದರು. ಪ್ರತಿ ಮಂಗಳವಾರ ಬೆಂಗಳೂರಿನಿಂದ ಹೊರಡುವ ಸೋದರಿ ವಾರಪತ್ರಿಕೆಯ ಮೈಸೂರಿನ ಪತ್ರಿಕೆಯ ಪ್ರತಿನಿಧಿಯಾಗಿ, ಸಲಹೆಗಾರ್ತಿಯಾಗಿ ಟಿ. ಸುನಂದಮ್ಮನವರು ಕಾರ್ಯ ನಿರ್ವಹಿಸಿದರೆ, ಧಾರವಾಡದಲ್ಲಿ ಶಾಂತಾದೇವಿ ಮಾಳವಾಡರವರು ಮತ್ತು ಮಂಗಳೂರಿನಲ್ಲಿ ರಾಧಾರಾವ್‌ರವರು ಪತ್ರಿಕೆಯ ಸಲಹೆಗಾರ್ತಿಯಾಗಿ ಕೆಲಸ ನಿರ್ವಹಿಸುತ್ತಿದ್ದರು.[೨೪]

'ಸೋದರಿ' ಪತ್ರಿಕೆಯ ಮೊದಲ ಸಂಪುಟದ ಮೊದಲ ಸಂಚಿಕೆ ೪ ಪುಟಗಳ ೨ ಆಣೆ ಬೆಲೆಯ ಗಾಂಧೀಜಿಯವರ ಭಾವಚಿತ್ರವನ್ನು ಒಳಗೊಂಡ ಮುಖಪುಟದಲ್ಲಿ ಪ್ರಕಟಿಸಲಾಗಿತ್ತು. ಭಾರತ ಜನತೆಯ ಅದರಲ್ಲೂ ಭಾರತ ಮಹಿಳೆಯರ ಬಹುಮುಖ ಪ್ರಗತಿಗೆ ಕಾರಣಕರ್ತರಾದ ರಾಷ್ಟ್ರಪಿತ ಗಾಂಧೀಜಿ ಮತ್ತು ಸತಿ ಕಸ್ತೂರಿ ಬಾರವರನ್ನು ಭಕ್ತಿಯಿಂದ ಸ್ಮರಿಸೋಣ ಎಂದು ಪ್ರಕಟಿಸಲಾಗಿದ್ದು, ಒಳಪುಟಗಳಲ್ಲಿ 'ನಮ್ಮ ಮಾತು' ಎಂಬ ಶೀರ್ಷಿಕೆಯಡಿಯಲ್ಲಿ ಸಂಪಾದಕೀಯ ಪ್ರಕಟವಾಗಿದ್ದು 'ಹೆಂಗಸರಿಗಾಗಿಯೇ ಮೀಸಲೆನಿಸಿದ ಪತ್ರಿಕೆ ಏತಕ್ಕಾಗಿ? ಅದರ ಅಗತ್ಯವಿದೆಯೇ? ಇದರ ಅಗತ್ಯವನ್ನು ವಿವಿಧ ವಾರಪತ್ರಿಕೆ, ದಿನಪತ್ರಿಕೆಯಲ್ಲಿರುವ ಮಹಿಳಾ ಪುಟಗಳು ತೀರಸಲಾರವೇ? ಎಂಬ ಪ್ರಶ್ನೆಗಳು ಜನಸಾಮಾನ್ಯರಲ್ಲಿ ಏಳುವುದು ಸಹಜ. ಅದಕ್ಕೆ ಉತ್ತರವಾಗಿ ಸಮಾಜಜೀವಿಯಾದ ಮನುಷ್ಯ ಕಾಳಸಂತೆಕೋರತನಕ್ಕೆ ಬಲಿಯಾಗುವ, ಆಕ್ರಮ ವರ್ತನೆ ದುಷ್ಟವರ್ತನೆ ಇದ್ದು ಅವುಗಳನ್ನು ತಡೆಯಲು ಕಾನೂನು ಬಂದಿದೆ. ಆದರೆ ಸಂಸ್ಕಾರ ಅಗತ್ಯವಾಗಿ ಬೇಕು. ಸಾಹಿತ್ಯ, ಚಲನಚಿತ್ರ, ರೇಡಿಯೋ ಇವುಗಳಿಂದ ಬದುಕನ್ನು ಹಸನುಗೊಳಿಸಲು ಸಾಧ್ಯ. ಆದರೆ ಚಲನಚಿತ್ರ ರೇಡಿಯೋ ಉಳ್ಳವರಿಗೆ ಸಾಧ್ಯ. ಆ ಕೆಲಸವನ್ನು ಕೇವಲ ಎರಡಾಣೆ ಕೊಟ್ಟು ಮನೆಯಲ್ಲಿ ಕುಳಿತು ಸಾಹಿತ್ಯವನ್ನು ಓದಬಹುದಾದ ಪತ್ರಿಕೆಯಿಂದ ಸಾಧ್ಯ. ಹೆಣ್ಣಿನಿಂದ ಉಳಿವು, ಹೆಣ್ಣಿನಿಂದ ಅಳಿವು, ಹೆಂಗಸು ಜಗತ್ತನ್ನು ಆಳಬಲ್ಲಳು. ಅವಳು ಅಳಿಸಲು ಬಲ್ಲಳು. ಅವಳಲ್ಲಿ ಕಟ್ಟುವ ಚೇತನ ಇರುವಂತೆ, ಕಾಲ ವರ್ತಮಾನಗಳಿಗೆ ಹೊಂದಿಕೊಳ್ಳಲು ಸಮಸ್ಯೆಗಳನ್ನು ಬಗೆಹರಿಸಲು ಸೂಕ್ಷ್ಮ ಪ್ರಯತ್ನವನ್ನು ಈ ಪತ್ರಿಕೆಯ ಮೂಲಕ ಪ್ರಯತ್ನಿಸಲಾಗುವುದು. ಮಹಿಳಾ ಪ್ರಪಂಚ, ಸಾಹಿತ್ಯಲೋಕದಲ್ಲಿ ಸ್ತ್ರೀ, ಅಂದು ಇಂದು, ವಿದ್ಯಾರ್ಥಿನಿಯರಿಗಾಗಿ, ನಳಪಾಕ, ಮುಗುಳುನಗೆ, ಮಕ್ಕಳಪಾಲನೆ, ನಿರಕ್ಷರ ಜನತೆಗೆ, ಹಿತ್ತಲಗಿಡ, ಮತ್ತು ವ್ಯವಹಾರ ನೀತಿ ಈ ಎಲ್ಲಾ ಶೀರ್ಷಿಕೆ ಅಡಿಯಲ್ಲಿ ಲೇಖನಗಳನ್ನು ಕಥೆ ಕವನಗಳನ್ನು ನೀಡಲಾಗುವುದು. ಸೋದರಿ ಪತ್ರಿಕೆ

ಯಾವ ಬಗೆಯ ದಾಕ್ಷಿಣ್ಯಕ್ಕೆ ಒಳಗಾಗದೆ ಪಕ್ಷಪಾತಗಳಿಗೆ ಬಲಿಬೀಳದೆ ಆಕ್ರಮ ವರ್ತನೆಗೆ ಎಡೆಗೊಡದೆ ಇರಬೇಕೆಂದು ದೃಢಸಂಕಲ್ಪ ತಾಳಿದೆ. ಜಾಹೀರಾತುಗಳನ್ನು ಎಚ್ಚರಿಕೆಯಿಂದ ಆಯ್ಕೆ ಮಾಡಲಾಗುವುದು. ತಮ್ಮ ಮನೋಭಾವನೆಗೆ ನಿಷ್ಠುರ ವಚನಗಳಿಗೆ, ಆಧಾರರಹಿತ ಹೇಳಿಕೆಗೆ ಇಲ್ಲಿ ಸ್ಥಳವಿಲ್ಲ.

'ಸೋದರಿ' ಕೇವಲ ಮಹಿಳಾ ಓದುಗರಿಗೆ ಮತ್ತು ಬರಹಗಾರ್ತಿಯರಿಗೆ ಮಾತ್ರವೇ ಮೀಸಲಿಲ್ಲ. ಎಂದಿನವರೆಗೆ ಸಂಸಾರವೆಂಬುದು ಭಾರತದ ಜನಜೀವನಕ್ಕೆ ಆಸ್ತಿಪ್ರಾಯವೋ, ಎಂದಿನವರೆಗೆ ಭಾರತದ ಹೆಣ್ಣುಮಗಳಾಗಿ, ಸೋದರಿಯಾಗಿ, ಪತ್ನಿಯಾಗಿ, ತಾಯಿಯಾಗಿ. ಬಾಳುವಳೋ ಅಂದಿನ ತನಕ ಪುರುಷ ವರ್ಗಕ್ಕೆಂದೂ ಹಗೆತನವಿಲ್ಲ. ಕೂಡಿಯೇ ಹೊಸ ಬಾಳು ರಚಿಸೋಣ. ಆದರೆ ಸ್ತ್ರೀ ದೃಷ್ಟಿಗೂ ಪ್ರಾಧಾನ್ಯವಿರಲಿ ಎಂಬುದೇ ನಮ್ಮ ಧ್ಯೇಯ' ಎಂಬ ಅಭಿಪ್ರಾಯವನ್ನು ಲಕ್ಷಮ್ಮ ವ್ಯಕ್ತಪಡಿಸಿದ್ದಾರೆ.[೨೫]

'ಸೋದರಿ' ಪತ್ರಿಕೆಯ ಮುಖಪುಟ ಪ್ರಾರಂಭದಲ್ಲಿ ಅನೇಕ ರಾಷ್ಟ್ರನಾಯಕರ ಭಾವ ಚಿತ್ರವನ್ನು ಒಳಗೊಂಡಿರುತ್ತಿತ್ತು. ನಂತರದ ಸಂಚಿಕೆಗಳಲ್ಲಿ ಮುಖಪುಟದ ವಿನ್ಯಾಸ ಬದಲಾಗಿದ್ದು ವಿಶಿಷ್ಟವಾಗಿತ್ತು. 'ಸೋದರಿ' ಪತ್ರಿಕೆಯ ಶೀರ್ಷಿಕೆಯ ಕೆಳಗೆ ಒಂದು ಚೌಕಟ್ಟು, ಅದರಲ್ಲಿ ಒಂದು ಮರದ ಕೆಳಗೆ ಸಂಪಾದಕಿ ಕೈಯಲ್ಲೊಂದು ಪುಸ್ತಕ ಹಿಡಿದು ಕುಳಿತಿದ್ದರು. ಅವರ ಮುಂದಿನ ಟೇಬಲ್ ಮೇಲೆ ಒಂದು ಟೈಪ್‌ರೈಟರ್ ಮತ್ತು ಪೆನ್ನು ಇರುವ ಶಾಯಿ ಕುಂಡವಿದೆ. ಇವುಗಳ ಮುಂದೆ ಪತ್ರಿಕೆಯ ಬೆಲೆಯನ್ನು ಸೂಚಿಸುವ ಎರಡು ಆಣೆ ನಾಣ್ಯದ ಚಿತ್ರವಿದೆ. ಪತ್ರಿಕೆಯ ಬಣ್ಣಗಳು ಪ್ರತಿ ಸಂಚಿಕೆಯಲ್ಲಿಯೂ ಬದಲಾವಣೆಯಾಗುತ್ತಿದ್ದು ವಿಶೇಷ ಲೇಖನದಿಂದ ಪ್ರಾರಂಭವಾಗಿ ಸೋದರಿಗೆ ಪತ್ರ ಎನ್ನುವ ಸಂಪಾದಕೀಯ ಪ್ರಕಟವಾಗುತ್ತಿತ್ತು. ಸಾಹಿತ್ಯಕ್ಕೆ ಸಂಬಂಧಪಟ್ಟ ಒಂದು ಲೇಖನ, ವೈಚಾರಿಕ ಲೇಖನ, ಅಲ್ಲಿ ಇಲ್ಲಿ ಎನ್ನುವ ಪುಟದಲ್ಲಿ ದೇಶವಿದೇಶಗಳಲ್ಲಿನ ಮಹಿಳೆಯರ ಕುರಿತಾದ ವಿಷಯ, ಮಕ್ಕಳ ಪುಟಗಳನ್ನು ಒಳಗೊಂಡಿರುತ್ತಿತ್ತು.

'ಸೋದರಿ' ಪತ್ರಿಕೆ ಪ್ರಾರಂಭವಾದಾಗ ಸಾಧ್ವಿ, ವಿಶ್ವಕರ್ನಾಟಕ, ಕ್ರಾಂತಿ, ಸಂಯುಕ್ತ ಕರ್ನಾಟಕ, ನವಯುಗ, ತಾಯಿನಾಡು, ಪ್ರಜಾವಾಣಿ ಮತ್ತಿತರ ಪತ್ರಿಕೆಗಳು ಸ್ವಾಗತಿಸಿ 'ಸೋದರಿ' ಬಗ್ಗೆ ಉತ್ತಮ ಲೇಖನಗಳನ್ನು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿದವು. 'ಸೋದರಿ' ಇತರ ಪತ್ರಿಕೆಗಳನ್ನು ತನ್ನ ಸೋದರ ಪತ್ರಿಕೆಗಳೆಂದು ತಿಳಿದು ಅವುಗಳಿಂದ ಸಹಾಯವನ್ನು ಪಡೆಯುತ್ತಿತ್ತು. ಎಂ.ಆರ್. ಲಕ್ಷಮ್ಮನವರು ಅಮೆರಿಕ ಮತ್ತಿತರ ದೇಶಗಳಿಗೆ ಪ್ರವಾಸ ಹೋದಾಗ ಅಲ್ಲಿಂದಲೇ ಸಂಪಾದಕೀಯವನ್ನು ಬರೆಯುತ್ತಿದ್ದರು. ವಿದೇಶಗಳಲ್ಲಿನ ವಿಶೇಷತೆಗಳ ಬಗ್ಗೆ ತಮ್ಮ ಪತ್ರಿಕೆಯಲ್ಲಿ ಬರೆಯುತ್ತಿದ್ದರು, ದೇಶದ ನಾಡಿನ ಸಾಮಾಜಿಕ ರಾಜಕೀಯ ಪುಸ್ತಕ ಪರಿಸ್ಥಿತಿಗಳ ಬಗ್ಗೆ ಅವುಗಳ ಸುಧಾರಣೆ ಬಗ್ಗೆ, ಚಿಂತಿಸುತ್ತಿದ್ದ ಲಕ್ಷಮ್ಮನವರು ತಮ್ಮ ಲೇಖನಗಳಲ್ಲಿ

ಅಭಿವ್ಯಕ್ತಪಡಿಸುತ್ತಿದ್ದರು. ಲಕ್ಷಮ್ಮನವರು ಸಮಾಜಸೇವೆ, ರಾಜಕೀಯ ಕ್ಷೇತ್ರಗಳಲ್ಲಿ ಸಂಪೂರ್ಣವಾಗಿ ತೊಡಗಿದ್ದರೂ ಪತ್ರಿಕೆಯನ್ನು ಅಚ್ಚುಕಟ್ಟಾಗಿ ರೂಪಿಸುವಲ್ಲಿ ಮತ್ತು ನಿರ್ವಹಿಸುವಲ್ಲಿ ಎಂದೂ ಆಸಕ್ತಿ ಕಳೆದುಕೊಂಡವರಲ್ಲ. ಆದರೆ ಬಿಡುವಿಲ್ಲದ ಕೆಲಸಗಳ ಮಧ್ಯೆ, ಲೇಖನಗಳ ಸಂಗ್ರಹಣೆ, ಜಾಹೀರಾತು ಸಂಪಾದನೆ, ಹಣ ಹೊಂದಿಸಿಕೊಳ್ಳುವುದು ಎಲ್ಲವೂ ಕಷ್ಟವಾಗುತ್ತಿತ್ತು. ಒಂದು ಆದರ್ಶವನ್ನಿಟ್ಟುಕೊಂಡು ಪ್ರಾರಂಭವಾಗಿದ್ದ ಈ ಪತ್ರಿಕೆ ಆರ್ಥಿಕ ಲಾಭದ ಉದ್ದೇಶದಿಂದ ಕೂಡಿರಲಿಲ್ಲ. ೮ ವರ್ಷಗಳ ಕಾಲ ಸೋದರಿ ಪ್ರಾಮಾಣಿಕವಾಗಿ ತನ್ನ ಕೆಲಸ ನಿರ್ವಹಿಸಿತು. ನಂತರ ಕಾರ್ಯಭಾರದ ಒತ್ತಡದಿಂದ ೧೯೫೬ ರಲ್ಲಿ 'ಸೋದರಿ'ಯನ್ನು ಮಾಸಪತ್ರಿಕೆಯಾಗಿ ಬದಲಾಯಿಸಲಾಯಿತು. ಪತ್ರಿಕೆಯ ಹೊರವಿನ್ಯಾಸವನ್ನು ಬದಲಾಯಿಸಿ ಅರ್ಥಪೂರ್ಣವಾಗಿ ರಚಿಸಲಾಯಿತು. ಪತ್ರಿಕೆಯ ಆಕಾರ ಬದಲಾಗದೆ ಹಾಗೇ ಇದ್ದು, ಪತ್ರಿಕೆಯ ಮುಖಪುಟದ ಎಡಭಾಗದ ನಗುಮುಖದ ಇಬ್ಬರು ಸ್ತ್ರೀಯರು ಮಗುವಿಗೆ ಹಾಲುಣಿಸುತ್ತಿರುವ ಸ್ತ್ರೀ, ಬಾವುಟವನ್ನು ಹಿಡಿದಿರುವ ಸ್ತ್ರೀ, ಚರಕದಿಂದ ನೂಲುವ ಸ್ತ್ರೀ, ನೃತ್ಯ ಮಾಡುತ್ತಿರುವ ಸ್ತ್ರೀ, ಪುಸ್ತಕ ಓದುತ್ತಿರುವ ಸ್ತ್ರೀಯರ ಚಿತ್ರಗಳನ್ನು ರೇಖಾಚಿತ್ರದಿಂದ ಬಿಡಿಸಿದ್ದು, ಇದು ಎಲ್ಲಾ ರಂಗದಲ್ಲಿಯೂ ಸ್ತ್ರೀಯರು ಇರುವುದನ್ನು ಸೂಚಿಸುತ್ತದೆ. ಅದರ ಪಕ್ಕದಲ್ಲಿ ಸಮಾಜದ ವಿವಿಧ ವರ್ಗಗಳ ಚಿತ್ರವನ್ನು ಪ್ರಕಟಿಸಲಾಗುತ್ತಿತ್ತು. ೧೯೫೬ರ ನಂತರ 'ಸೋದರಿ' ಮಾಸಪತ್ರಿಕೆಯು ೫೨ ಪುಟಗಳನ್ನು ಒಳಗೊಂಡಿದ್ದು ಇದರ ಬಿಡಿ ಪ್ರತಿಯ ಬೆಲೆ ೮ ಆಣೆಯಾಗಿತ್ತು. ಪತ್ರಿಕೆಯ ಚಂದಾಹಣವು ಮೊದಲಿನಂತೆ ಇದ್ದು, 'ಸೋದರಿ' ಆರ್ಥಿಕ ಸಂಕಷ್ಟದಿಂದ ಬಳಲುತ್ತಿದ್ದು ಪೋಷಕರು ನೂರು ರೂಪಾಯಿಗಳನ್ನು ಆಜೀವ ಚಂದಾದಾರರು ೭೫ ರೂಪಾಯಿಗಳನ್ನು, ಆಶ್ರಯದಾತರು ೫೦ ಮತ್ತು ಸಹಾಯಕರು ೨೫ ರೂಪಾಯಿ ನೀಡಿ ವಿಶೇಷ ಚಂದಾದಾರರಾಗಬಹುದಿತ್ತು. ಇದರೊಂದಿಗೆ ಕೇಂದ್ರಿಯ ಸಮಾಜ ಕಲ್ಯಾಣ ಮಂಡಲಿಯ ಚಟುವಟಿಕೆಗಳನ್ನು ಕನ್ನಡದಲ್ಲಿ ಪ್ರಕಟಿಸಲು ಅಧಿಕಾರ ಪಡೆದಿದ್ದ 'ಸೋದರಿ'ಯು ಮಹಿಳೆಯರ ಸರ್ವತೋಮುಖ ಅಭಿವೃದ್ಧಿಗೆ ಬಹಳಷ್ಟು ಶ್ರಮಿಸುತ್ತಿತ್ತು. 'ಸೋದರಿ' ಪತ್ರಿಕೆಯಲ್ಲಿ ಜಾಹೀರಾತುಗಳು ಪ್ರಕಟವಾಗುತ್ತಿದ್ದು ಇತರ ಜಾಹೀರಾತುಗಳ ಜೊತೆಯಲ್ಲಿ ಮೈಸೂರು ಸರ್ಕಾರದ ಜಾಹೀರಾತುಗಳಾದ ಮೈಸೂರು ಪೇಪರ್ ಮಿಲ್ ಮತ್ತು ಮೈಸೂರು ಸ್ಯಾಂಡಲ್ ಸೋಪಿನ ಜಾಹೀರಾತು ಕೂಡ ಸೇರಿದ್ದವು.

ಮೈಸೂರು ಸಂಸ್ಥಾನದಲ್ಲಿ ಅಕ್ಷರಕ್ರಾಂತಿ ಮೊಳಗಿ ಆ ಕ್ರಾಂತಿಯಲ್ಲಿ ತಮ್ಮ ಸೇವೆ ಸಲ್ಲಿಸಿದವರು ಎಂ.ಅರ್. ಲಕ್ಷಮ್ಮ. ೧೯೪೨ ರಲ್ಲಿ ಪ್ರಾರಂಭವಾದ 'ಬೆಳಕು' ವಾರಪತ್ರಿಕೆಯ ಸಾರಥ್ಯವನ್ನು ಅನೇಕ ಜನ ವಹಿಸಿದ್ದರು. ಆದರೆ 'ಬೆಳಕು' ಪತ್ರಿಕೆ ಪ್ರಾರಂಭವಾಗಿ ತನ್ನ ಪ್ರಸಾರವನ್ನು ನಿಲ್ಲಿಸುವವರೆಗೂ ಏಕೈಕ ಮಹಿಳಾ ಸಂಪಾದಕಿಯಾಗಿ ಕಾರ್ಯ ನಿರ್ವಹಿಸಿದವರು ಎಂ.ಆರ್. ಲಕ್ಷಮ್ಮ. ಹೆಣ್ಣುಮಕ್ಕಳಿಗೆ ಪತ್ರಿಕೋದ್ಯಮ ದೂರವಾಗಿದ್ದ ಕಾಲದಲ್ಲಿ ಸತತವಾಗಿ ಮೂರು ವರ್ಷಗಳ ಕಾಲ 'ಬೆಳಕು' ಪತ್ರಿಕೆಯ ಸಂಪಾದಕಿಯಾಗಿ

ಕಾರ್ಯ ನಿರ್ವಹಿಸಿ, ಪತ್ರಿಕೆಯ ಆಕಾರವನ್ನು ಬದಲಾಯಿಸುವುದರ ಜೊತೆಗೆ ಹೊಸ ಚಿಂತನೆ ಮತ್ತು ವಿಚಾರಧಾರೆಗಳನ್ನೂ ಪತ್ರಿಕೆಯಲ್ಲಿ ಪ್ರಕಟಿಸಿದರು. ೧೯೫೦ರ ಜನವರಿ ೨೬ರಂದು ಪ್ರಾರಂಭವಾದ ಸೋದರಿ ೧೯೫೭ ರವರೆಗೆ ಒಟ್ಟು ೮ ವರ್ಷಗಳ ಕಾಲ ಪ್ರಕಟವಾಯಿತು. ೧೯೫೦ರಿಂದ ೧೯೫೫ರವರೆಗೆ ವಾರಪತ್ರಿಕೆಯಾಗಿದ್ದ 'ಸೋದರಿ' ನಂತರ ಮಾಸಪತ್ರಿಕೆಯಾಗಿ ೧೯೫೭ರವರೆಗೆ ಪ್ರಕಟವಾಗಿದೆ. ಏಳು ವರ್ಷಗಳ ಕಾಲ ಸಂಪಾದಕಿಯಾಗಿ, ಪ್ರಕಾಶಕಿಯಾಗಿ ಹಾಗೂ ಮುದ್ರಕಿಯಾಗಿ 'ಸೋದರಿ' ಪತ್ರಿಕೆಯನ್ನು ನಿಭಾಯಿಸಿದ ಎಂ.ಆರ್. ಲಕ್ಷ್ಮಮ್ಮನವರು ನಂತರ ನಿರ್ವಹಣೆ ಮತ್ತು ಕಾರ್ಯಭಾರದ ಒತ್ತಡದಿಂದ ಪತ್ರಿಕೆಯನ್ನು ನಿಲ್ಲಿಸಿದರು. ಮಹಿಳೆಯರ ಸಮ್ಮೇಳನಗಳ ಬಗ್ಗೆ, ಮಹಿಳೆಯರು ಮತ ಚಲಾಯಿಸುವ ಬಗ್ಗೆ, ಕರ್ನಾಟಕದ ಏಕೀಕರಣದ ಬಗ್ಗೆ, ಇನ್ನೂ ಅನೇಕ ವಿಷಯಗಳ ಮಾಹಿತಿಯನ್ನು ನೀಡುತ್ತಿದ್ದ ಪತ್ರಿಕೆಯನ್ನು ಅನಿವಾರ್ಯ ಕಾರಣದಿಂದ ನಿಲ್ಲಿಸಿದರೂ ಲಕ್ಷ್ಮಮ್ಮನವರ ಸಾಹಿತ್ಯಾಸಕ್ತಿ ಕಡಿಮೆಯಾಗಲಿಲ್ಲ. ಅವರು 'ಛಾಯ' ಎಂಬ ಸಾಂಸ್ಕೃತಿಕ ಪತ್ರಿಕೆಗೆ ಸಣ್ಣ ಕತೆಗಳನ್ನು ಡೆಕ್ಕನ್ ಹೆರಾಲ್ಡ್, ಇಂಡಿಯನ್ ಎಕ್ಸ್‌ಪ್ರೆಸ್‌ಗಳಿಗೆ ಇಂಗ್ಲಿಷ್ ಲೇಖನಗಳನ್ನು ಬರೆಯುತ್ತಿದ್ದರು. ಅನೇಕ ನಾಟಕಗಳನ್ನು ಮಕ್ಕಳಿಗಾಗಿ ಬರೆದು ಆಕಾಶವಾಣಿಯಲ್ಲಿ ಮಕ್ಕಳಿಂದ ರಂಗಾಭಿನಯಿಸುತ್ತಿದ್ದರು. ಅವರ ವಿಚಾರಧಾರೆಗಳು ಚಿಂತನೆಗಳು ಸೋದರಿಯಲ್ಲಿ ಪ್ರಕಟವಾಗಿದ್ದು ಸಮಾಜ ಸುಧಾರಣೆ, ಮಹಿಳಾ ಸಬಲೀಕರಣದ ಹಾದಿಯಲ್ಲಿ ಅವರು ಕೈಗೊಂಡಿದ್ದ ಕೈಂಕರ್ಯವನ್ನೂ ಅವುಗಳು ಹೊರಹೊಮ್ಮಿಸುತ್ತವೆ.

## ಅಡಿ ಟಿಪ್ಪಣಿಗಳು

೧) ಅರ್ಜುನಪುರಿ ಅಪ್ಪಾಜಿಗೌಡ, 'ನಂಜನಗೂಡು ತಿರುಮಲಾಂಬ' ಮೈಸೂರು, ೧೯೯೫, ಪು. ೧೨.

೨) ಶಶಿಕಲಾ ಎಸ್.ಡಿ. 'ಆರ್ ಕಲ್ಯಾಣಮ್ಮ ಬದುಕು-ಬರಹ', ಮೈಸೂರು, ೨೦೧೦, ಪು. ೨೬.

೩) ಮಂಜುಳ ಎ.ಸಿ. 'ಸ್ವಾತಂತ್ರ್ಯ ಹೋರಾಟಗಾರ್ತಿ, ಎಂ.ಆರ್. ಲಕ್ಷ್ಮಮ್ಮನವರ ಜೀವನ ಮತ್ತು ಸಾಧನೆ' ಎಂ.ಫಿಲ್. ನಿಬಂಧ (ಅಪ್ರಕಟಿತ) ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ೨೦೧೩.

೪) ಲಕ್ಷ್ಮಮ್ಮ ಎಂ.ಆರ್. 'ಸ್ವವಿವರ ವಿಭಾಗೀಯ ಪತ್ರಾಗಾರ ಕಛೇರಿ, ಪು. ೦೧.

೫) ಸಾಧ್ವಿ ಪತ್ರಿಕೆ ಮೈಸೂರು, ದಿನಾಂಕ ೨೪.೧೨.೧೯೪೫.

೬) ಅಡ್ಮಿನಿಸ್ಟ್ರೇಷನ್ ರಿಪೋರ್ಟ್ ಆನ್ ಪಬ್ಲಿಕ್ ಇನ್‌ಸ್ಟ್ರಕ್ಷನ್ ೧೮೮೯-೯೦, ಪ್ಯಾರ-೫೭.

೭) ವೆಂಕಟೇಶ್ ಟಿ. ಕನ್ನಡದಲ್ಲಿ ನವಸಾಕ್ಷರ ಸಾಹಿತ್ಯ ಒಂದು ಅಧ್ಯಯನ, ಮೈಸೂರು, ೨೦೦೯, ಪು. ೧೨.

೮) ಅಡ್ಮಿನಿಸ್ಟ್ರೇಷನ್ ರಿಪೋರ್ಟ್ ಆನ್ ಪಬ್ಲಿಕ್ ಇನ್‌ಸ್ಟ್ರಕ್ಷನ್ ೧೮೯೩-೯೪, ಪ್ಯಾರ ೭೭.

೯) ನಂಜರಾಜ ಅರಸು ಪಿ.ವಿ ಮತ್ತು ಎಸ್.ಆರ್. ಚಂದ್ರರಾಜ ಅರಸು (ಸಂ). ನಾಲ್ವಡಿ ಕೃಷ್ಣರಾಜ ಒಡೆಯರ್ - ಒಂದು ದರ್ಶನ, ಮೈಸೂರು, ೧೯೯೬, ಪು. ೧೨೪.

೧೦) ರಜತಾದ್ರಿ ಎಸ್. "ಕರ್ನಾಟಕದಲ್ಲಿ ವಯಸ್ಕರ ಶಿಕ್ಷಣ" (ಹುಟ್ಟು ಮತ್ತು ಬೆಳವಣಿಗೆ) ರಾಜ್ಯ ಸಂಪನ್ಮೂಲ ಕೇಂದ್ರ, ಮೈಸೂರು, ಪು. ೧೨.

೧೧) ಪ್ರೊಸಿಡಿಂಗ್ ಆಫ್ ದಿ ಗವರ್ನಮೆಂಟ್ ಆಫ್ ಇಸ್ ಹೈನೆಸ್ ಆಫ್ ದಿ ಮಹಾರಾಜ ಆಫ್ ಮೈಸೂರ್, ೧೯೨೦, ಪು. ೧.

೧೨) ಪ್ರೊಸಿಡಿಂಗ್ ಆಫ್ ದಿ ಗವರ್ನಮೆಂಟ್ ಆಫ್ ಇಸ್ ಹೈನೆಸ್ ಆಫ್ ದಿ ಮಹಾರಾಜ ಆಫ್ ಮೈಸೂರ್, ೧೯೨೦, ಪು.೬.

೧೩) ಮೈಸೂರು ಅಡ್ಮಿನಿಸ್ಟ್ರೇಷನ್ ರಿಪೋರ್ಟ್, ೧೯೨೫-೨೬, ಪು. ೮೮.

೧೪) ಮೈಸೂರು ಅಡ್ಮಿನಿಸ್ಟ್ರೇಷನ್ ರಿಪೋರ್ಟ್, ೧೯೨೬-೨೭, ಪು. ೯೦.

೧೫) ಮೈಸೂರು ಅಡ್ಮಿನಿಸ್ಟ್ರೇಷನ್ ರಿಪೋರ್ಟ್, ೧೯೨೮-೨೯, ಪು. ೮೮.

೧೬) ಮೈಸೂರು ಅಡ್ಮಿನಿಸ್ಟ್ರೇಷನ್ ರಿಪೋರ್ಟ್, ೧೯೩೭-೩೮, ಪು. ೧೨೭.

೧೭) ತುಕಾರಾಮ್ ಎಸ್. (ಸಂ) "ಸಾಕ್ಷರ ದಾರಿಯ ಸಾವಿರ ಹೆಜ್ಜೆ" ರಾಜ್ಯ ಸಂಪನ್ಮೂಲ ಕೇಂದ್ರ, ಮೈಸೂರು ೨೦೦೦, ಪು. ೧೪.

೧೮) ಮೈಸೂರು ಅಡ್ಮಿನಿಸ್ಟ್ರೇಷನ್ ರಿಪೋರ್ಟ್, ೧೯೪೪-೪೫, ಪು. ೧೫೨.

೧೯) ಲಕ್ಷಮ್ಮ ಎಂ.ಆರ್. ಸ್ವವಿವರ ವಿಭಾಗೀಯ ಪತ್ರಾಗಾರ ಕಛೇರಿ, ಮೈಸೂರು, ಪು. ೨.

೨೦) ಲಕ್ಷಮ್ಮ ಎಂ.ಆರ್. ಕುಂತಿದೇವಿ, ವಯಸ್ಕರ ಶಿಕ್ಷಣ ಪುಸ್ತಕ ಮಾಲೆ, ಮೈಸೂರು, ೧೯೪೩.

೨೧) ಲಕ್ಷಮ್ಮ ಎಂ.ಆರ್. ಮಾರುತಿ, ವಯಸ್ಕರ ಶಿಕ್ಷಣ ಪುಸ್ತಕ ಮಾಲೆ, ಮೈಸೂರು, ೧೯೪೪.

೨೨) ನಾಗಲಕ್ಷ್ಮಿ ನಂ. ಕನ್ನಡ ಪತ್ರಿಕಾಲೋಕದ ಧೀಮಂತರು, ಭಾಗ ೦೮, ಬೆಂಗಳೂರು, ಪು. ೭೮.

೨೩) ಲಕ್ಷಮ್ಮ ಎಂ.ಆರ್. 'ಸೋದರಿ ಪತ್ರಿಕೆ', ಬೆಂಗಳೂರು, ೧೯೫೦.

೨೪) ನಾಗಲಕ್ಷ್ಮಿ ನಂ. ಪೂರ್ವೋಕ್ತ, ಪು. ೭೮.

೨೫) ಲಕ್ಷಮ್ಮ ಎಂ.ಆರ್. (ಸಂ) ಸೋದರಿ ಪತ್ರಿಕೆ, ದಿನಾಂಕ ೨೬.೦೧.೧೯೫೦.

# ಅಧ್ಯಾಯ : ನಾಲ್ಕು

# ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಮತ್ತು ಏಕೀಕರಣ ಚಳವಳಿಯಲ್ಲಿ ಎಂ.ಆರ್. ಲಕ್ಷಮ್ಮ

ಭಾರತದ ಸ್ವಾತಂತ್ರ್ಯ ಹೋರಾಟಕ್ಕಾಗಿ ಶ್ರಮಿಸಿದ ವೀರವನಿತೆಯರಲ್ಲಿ ಕರ್ನಾಟಕದ ಕೊಡುಗೆ ಅಪಾರವಾದುದು. ಕಿತ್ತೂರು ರಾಣಿ ಚೆನ್ನಮ್ಮ ಇವರ ದೇಶಪ್ರೇಮದ ಆದರ್ಶವನ್ನು ಮುಂದುವರಿಸಿಕೊಂಡು ದೇಶಕ್ಕಾಗಿ ಸೇವೆ ಸಲ್ಲಿಸಿದ ಮಹಿಳಾಮಣಿಯರು ಅನೇಕರಿದ್ದಾರೆ. ೧೯೨೭ ರಲ್ಲಿ ಮಹಾತ್ಮ ಗಾಂಧೀಜಿಯವರು ಮೈಸೂರು ಸಂಸ್ಥಾನಕ್ಕೆ ಭೇಟಿ ನೀಡಿದ್ದು ಅಲ್ಲಿ ಗಾಂಧೀಜಿಯವರು ಮಾಡಿದ ಭಾಷಣ ಪ್ರತಿಯೊಬ್ಬರನ್ನು ಬಡಿದೆಬ್ಬಿಸಿ ಸ್ವಾತಂತ್ರ್ಯ ಹೋರಾಟಕ್ಕಾಗಿ ದೀಕ್ಷೆ ತೊಡುವಂತೆ ಮಾಡಿತು. ಮೈಸೂರು ಸಂಸ್ಥಾನವು ಪರೋಕ್ಷವಾಗಿ ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಿದ್ದರೂ ಮೈಸೂರಿನಲ್ಲಿ ಮೊಟ್ಟಮೊದಲ ಬಾರಿಗೆ ಪ್ರಜಾಪ್ರತಿನಿಧಿ ಸಭೆ ಸ್ಥಾಪನೆಯಾಗಿ ಮೈಸೂರು ಸಂಸ್ಥಾನದ ಜನರಲ್ಲಿ ಜಾಗೃತಿ ಮೂಡಿಸುವಲ್ಲಿ ಪ್ರಮುಖ ಪಾತ್ರ ವಹಿಸಿತು. ಪ್ರಜಾಪ್ರತಿನಿಧಿ ಸಭೆಯ ಸ್ಥಾಪನೆಯು ಜನಸಾಮಾನ್ಯರು ಆಡಳಿತದಲ್ಲಿ ಭಾಗವಹಿಸಿ ನಿರಂಕುಶಾಡಳಿತದ ವಿರುದ್ಧ ಹೋರಾಟ ಮಾಡಲು ಸಹಕಾರಿಯಾಯಿತು. ದೇಶದಾದ್ಯಂತ ಸ್ವಾತಂತ್ರ್ಯಕ್ಕಾಗಿ ಚಳವಳಿ ನಡೆಯುತ್ತಿದ್ದ ಪ್ರಾರಂಭದ ಹಂತದಲ್ಲಿ ಮೈಸೂರು ಸಂಸ್ಥಾನದಲ್ಲಿ ನಿರ್ದಿಷ್ಟವಾದ ಸ್ವಾತಂತ್ರ್ಯ ಚಳವಳಿ ನಡೆಯದಿದ್ದರೂ, ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಸಮಾನತೆಗಾಗಿ ಹೋರಾಟಗಳು ನಡೆದವು. ಈ ಹೋರಾಟಗಳನ್ನು ನಡೆಸಲು ಮೈಸೂರಿನಲ್ಲಿ ಹಲವು ರಾಜಕೀಯ ಪಕ್ಷಗಳು ಹುಟ್ಟಿಕೊಂಡವು. ಅವುಗಳು ಹಂತಹಂತವಾಗಿ ಬೆಳೆದು ಮೈಸೂರು ಸಂಸ್ಥಾನದಲ್ಲಿ ಕಾಂಗ್ರೆಸ್ ಸ್ಥಾಪನೆಯಾಗಿ ರಾಷ್ಟ್ರೀಯ ಚಳವಳಿಯ ಧ್ಯೇಯೋದ್ದೇಶಗಳನ್ನು ಅಳವಡಿಸಿಕೊಂಡು ಹೋರಾಟ ಮಾಡಲು ಪ್ರಾರಂಭಿಸಿತು.

### ೪.೧. ಮೈಸೂರು ಜಿಲ್ಲಾ ಕಾಂಗ್ರೆಸ್ ಸಮಿತಿ ೧೯೨೧

ಅಖಿಲಭಾರತ ಮಟ್ಟದಲ್ಲಿ ಸ್ವಾತಂತ್ರ್ಯ ಹೋರಾಟ ಮಾಡಲು ೧೮೮೫ ಡಿಸೆಂಬರ್ ೨೫ ರಲ್ಲಿ ಭಾರತ ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥೆ ಸ್ಥಾಪನೆಯಾಯಿತು. ಆದರೆ ಭಾರತದ ಎಲ್ಲಾ ಪ್ರಾಂತ್ಯಗಳಲ್ಲಿ ಕಾಂಗ್ರೆಸ್‌ನ ಸ್ಥಾಪನೆಯಾಗಿರಲಿಲ್ಲ. ಬ್ರಿಟಿಷರ ನೇರ ಆಳ್ವಿಕೆಗೆ ಒಳಪಟ್ಟ ೧೯ ಪ್ರಾಂತ್ಯಗಳಲ್ಲಿ ಮಾತ್ರ ಕಾಂಗ್ರೆಸ್ ಸ್ಥಾಪನೆಯಾಗಿತ್ತು. ಕರ್ನಾಟಕದಲ್ಲಿ ಮುಂಬೈ ಕರ್ನಾಟಕ ಮತ್ತು ಮದ್ರಾಸ್ ಕರ್ನಾಟಕದ ಭಾಗಗಳು ಬ್ರಿಟಿಷರ ನೇರ ಆಳ್ವಿಕೆಗೆ ಒಳಪಟ್ಟಿದ್ದರಿಂದ ಅಲ್ಲಿ ಕಾಂಗ್ರೆಸ್‌ನ ಸ್ಥಾಪನೆಯಾಗಿ ರಾಷ್ಟ್ರೀಯ ಚಳವಳಿಯು ಪ್ರತಿಧ್ವನಿಸಿತು. ಆದರೆ ಮೈಸೂರು ಸಂಸ್ಥಾನದಲ್ಲಿ ನಿಜವಾದ ಸ್ವಾತಂತ್ರ್ಯ ಹೋರಾಟ ಪ್ರಾರಂಭವಾಗಲಿಲ್ಲ. ೧೯೨೦ರಲ್ಲಿ ನಾಗಪುರದಲ್ಲಿ ಕಾಂಗ್ರೆಸ್ ಅಧಿವೇಶನ ನಡೆಯಿತು. ಕರ್ನಾಟಕದಿಂದ ಸುಮಾರು ೮೦೦ ರಷ್ಟು ಪ್ರತಿನಿಧಿಗಳು ಭಾಗವಹಿಸಿದರು. ಅಲ್ಲಿ ಪ್ರತ್ಯೇಕ ಪ್ರದೇಶ ಕಾಂಗ್ರೆಸ್ ಸಮಿತಿಯ ಸ್ಥಾಪನೆ ಬಗ್ಗೆ

ಮುಂದಿನ ದಿನಗಳಲ್ಲಿ ಜನಸಾಮಾನ್ಯರ ಬೆಂಬಲದೊಂದಿಗೆ ಸ್ವಾತಂತ್ರ್ಯ ಹೋರಾಟದಲ್ಲಿ ಮತ್ತು ಜವಾಬ್ದಾರಿ ಸರ್ಕಾರದ ರಚನೆಯಲ್ಲಿ ಮೈಸೂರು ಕಾಂಗ್ರೆಸ್ ಪ್ರಮುಖ ಪಾತ್ರ ವಹಿಸಿತು.

**೪.೩. ಮೈಸೂರು ಚಲೋ ಚಳವಳಿ ಅಥವಾ ಅರಮನೆ ಸತ್ಯಾಗ್ರಹ**

೧೯೪೭ ಆಗಸ್ಟ್ ೧೫ ರಂದು ಭಾರತವು ಸ್ವಾತಂತ್ರ್ಯ ಪಡೆಯಿತು. ಸ್ವಾತಂತ್ರ್ಯ ಪಡೆದ ಸಂಭ್ರಮವನ್ನು ಇಡೀ ದೇಶವೇ ಆಚರಿಸಿತು. ಎಲ್ಲಾ ಸರ್ಕಾರಿ ಕಛೇರಿಗಳಲ್ಲೂ ಭಾರತದ ತ್ರಿವರ್ಣಧ್ವಜ ರಾರಾಜಿಸಿತು. ಆದರೆ ಮೈಸೂರು ಸಂಸ್ಥಾನ ಮಾತ್ರ ತ್ರಿವರ್ಣಧ್ವಜವನ್ನು ಹಾರಿಸಿ ಸ್ವಾತಂತ್ರ್ಯದ ಸವಿಯನ್ನು ಅನುಭವಿಸಲಾಗಲಿಲ್ಲ. ಏಕೆಂದರೆ ಮಹಾರಾಜರಾದ ಜಯಚಾಮರಾಜ ಒಡೆಯರ್ ಅವರು ಭಾರತದ ಒಕ್ಕೂಟಕ್ಕೆ ಸೇರ್ಪಡೆಯಾಗಲು ಒಪ್ಪಿದ್ದರು. ಆದರೆ ದಿವಾನ್ ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್ ಅವರ ಪ್ರಭಾವದಿಂದಾಗಿ ಮೈಸೂರು ಸಂಸ್ಥಾನವನ್ನು ಭಾರತದ ಒಕ್ಕೂಟಕ್ಕೆ ಸೇರ್ಪಡೆ ಮಾಡಲು ಹಿಂಜರಿದರು. ಆದ್ದರಿಂದ ಕೆ.ಸಿ. ರೆಡ್ಡಿಯವರ ನೇತೃತ್ವದಲ್ಲಿ ಕರ್ನಾಟಕ ಕಾಂಗ್ರೆಸ್ ಕಾರ್ಯಕರ್ತರು ರಾಜ್ಯದ ನಾನಾ ಭಾಗಗಳಿಂದ ಬೆಂಗಳೂರಿಗೆ ಆಗಮಿಸಿ ಚಳವಳಿಗೆ ಮುಂದಾದರು. ಜಯಚಾಮರಾಜ ಒಡೆಯರ್ ಅವರ ಆಪ್ತ ಕಾರ್ಯದರ್ಶಿಯಾಗಿದ್ದ ತಂಬೂಚೆಟ್ಟಿ ಅವರೂ ಸಹ ಮೈಸೂರಿನಲ್ಲಿ ಜವಾಬ್ದಾರಿ ಸರ್ಕಾರ ರಚನೆಗೆ ವಿರೋಧವಾಗಿದ್ದರು.[೧]

೧೯೪೭ ರ ಆಗಸ್ಟ್ ೨೦ ರಂದು ಸಭೆ ಸೇರಿದ ಮೈಸೂರು ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಜವಾಬ್ದಾರಿ ಸರ್ಕಾರ ರಚನೆಗಾಗಿ ೧೯೪೭ರ ಸೆಪ್ಟೆಂಬರ್ ೧ರಂದು ಬೆಂಗಳೂರಿನಿಂದ ಮೈಸೂರು ಚಲೋ ಚಳವಳಿಯನ್ನು ಹಮ್ಮಿಕೊಂಡಿತ್ತು. ೧೯೪೭ರ ಸೆಪ್ಟೆಂಬರ್ ೧ರಂದು ಚಳವಳಿಗಾರರು ಬೆಂಗಳೂರಿನ ಬಿನ್ನಿಮಿಲ್ ಮುಂಭಾಗದಲ್ಲಿ ಸಭೆ ಸೇರಿ ಧ್ವಜಾರೋಹಣ ಮಾಡಿದರು. ಸಂಜೆಯ ವೇಳೆಗೆ ಬನ್ನಪ್ಪ ಪಾರ್ಕಿನಲ್ಲಿ ಸೇರಿದ ಸಭೆಯನ್ನು ಉದ್ದೇಶಿಸಿ ಕೆ.ಸಿ. ರೆಡ್ಡಿಯವರು ಭಾಷಣ ಮಾಡುತ್ತಾ, ಹಿಂದೆ ಸುಭಾಷ್‌ಚಂದ್ರ ಬೋಸ್ ಹೇಗೆ ಡೆಲ್ಲಿ ಚಲೋ ಎಂದು ಘೋಷಣೆ ಮಾಡಿದರೋ, ಅದೇ ರೀತಿ ನಾವಿಂದು ಮೈಸೂರು ಪ್ರಾಂತ್ಯ ಕಾಂಗ್ರೆಸ್ ನೇತೃತ್ವದಲ್ಲಿ ೧೯೪೭ರ ಸೆಪ್ಟೆಂಬರ್ ೪ ರಂದು ಮೈಸೂರು ಚಲೋ ಘೋಷಣೆ ಮಾಡಿದ್ದೇವೆ. ಮೈಸೂರು ಅರಮನೆಯ ಮುಂದೆ ಸತ್ಯಾಗ್ರಹ ಮಾಡಲು ತೀರ್ಮಾನಿಸಿದ್ದೇವೆ ಎಂದು ಘರ್ಜಿಸಿದರು. ಆದರೆ ಸೆಪ್ಟೆಂಬರ್ ೩ರ ಮಧ್ಯರಾತ್ರಿಯೇ ಸರ್ಕಾರ ಕಾಂಗ್ರೆಸ್ ನಾಯಕರುಗಳಾದ ಕೆ.ಸಿ. ರೆಡ್ಡಿ, ಸುಬ್ರಹ್ಮಣ್ಯಂ, ಹೆಚ್.ಕೆ. ವೀರಣ್ಣಗೌಡ, ಎ.ಜಿ. ಬಂದೀಗೌಡ, ಎಸ್. ನಿಜಲಿಂಗಪ್ಪ ಮುಂತಾದವರನ್ನು ಬಂಧಿಸಿತು. ಪತ್ರಿಕೆಗಳ ಮೇಲೆ ನಿರ್ಬಂಧ ಹೇರಿತು. ಮಿಲಿಟರಿ ಮತ್ತು ಪೊಲೀಸರ ಸರ್ಪಗಾವಲನ್ನು ಹಾಕಿತು.

ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆಯ ವರದಿಯ ಪ್ರಕಾರ ಮೈಸೂರು ನಗರದ ಸೆಂಟ್ರಲ್ ಜೈಲಿನಲ್ಲಿ ಖೈದಿಗಳನ್ನು ಇಡಲು ಅವಕಾಶವಿರುವುದಕ್ಕಿಂತ ೨೦೦ ಜನ ಹೆಚ್ಚು

ದಸ್ತಗಿರಿಯಾಗಿದ್ದರು. ರಾಜ್ಯದಾದ್ಯಂತ ಸುಮಾರು ೪,೦೦೦ ಜನರು ದಸ್ತಗಿರಿಯಾಗಿದ್ದರು. ಸತ್ಯಾಗ್ರಹದ ಬಿಸಿ ಏರಿದಂತೆ ರಾಜರು ಜವಾಬ್ದಾರಿ ಸರ್ಕಾರವನ್ನು ಸ್ಥಾಪಿಸುವುದಾಗಿ ತಮ್ಮ ತೀರ್ಮಾನವನ್ನು ಪ್ರಕಟಿಸಿದರು. ಸಂಸ್ಥಾನದ ವಿವಿಧ ಭಾಗಗಳಿಂದ ಆಗಮಿಸಿದ ಸತ್ಯಾಗ್ರಹಿಗಳು ೧೯೪೭ರ ಸೆಪ್ಟೆಂಬರ್ ೫ ರಂದು ಮಹಾರಾಜ ಕಾಲೇಜಿನ ಪೂರ್ವಭಾಗಕ್ಕಿರುವ ವೃತ್ತದ ಬಳಿ ಜಮಾಯಿಸಿದರು. ವಿದ್ಯಾರ್ಥಿಗಳು ಮತ್ತು ಸತ್ಯಾಗ್ರಹಿಗಳು ಪೊಲೀಸರ ಮೇಲೆ ಕಲ್ಲು ತೂರಿದರು. ಅಲ್ಲಿಂದ ಅರಮನೆಗೆ ತೆರಳಿ ರಾಜರು ತಮ್ಮ ಪದವಿಯನ್ನು ಬಿಟ್ಟುಕೊಟ್ಟು ಜವಾಬ್ದಾರಿ ಸರ್ಕಾರ ರಚನೆಗೆ ಒಪ್ಪಿಗೆ ಸೂಚಿಸುವಂತೆ ಮಾಡುವ ಗುರಿ ಹೊಂದಿದ್ದರು. ಅಧಿಕಾರದಾಸೆಯನ್ನು ಹೊಂದಿದ್ದ ದಿವಾನ್ ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್ ಅವರನ್ನು ಉದ್ದೇಶಿಸಿ **'ಆರ್ಕಾಟ್ ಬಾಯ್ಕಾಟ್, ತಂಬೂಚೆಟ್ಟಿ ಚಟ್ಟಕಟ್ಟಿ'** ಎಂಬ ಘೋಷಣೆಗಳನ್ನು ಅರಸೀಕೆರೆ ಮೂಲದ ಮತ್ತು ಹಾರ್ಡ್ವಿಕ್ ಪ್ರೌಢಶಾಲೆಯ ವಿದ್ಯಾರ್ಥಿಯಾದ ರಾಮಸ್ವಾಮಿ ಕೂಗಿದಾಗ ಪೊಲೀಸರು ಗುಂಡು ಹಾರಿಸಿದರು. ಆತ ಪೊಲೀಸರ ಗುಂಡಿಗೆ ಬಲಿಯಾದನು. ಅವನ ಬಲಿದಾನದ ನೆನಪಿಗಾಗಿ ಆ ವೃತ್ತಕ್ಕೆ **'ರಾಮಸ್ವಾಮಿ ಸರ್ಕಲ್'** ಎಂದು ಕರೆಯಲಾಯಿತು. ಬಂಧಿತ ಮೈಸೂರು ಚಲೋ ಚಳವಳಿಯ ನಾಯಕರನ್ನು ಸರ್ಕಾರ ರಾಜರ ಹುಟ್ಟುಹಬ್ಬದ ದಿನದ ಪ್ರಯುಕ್ತ ಬಿಡುಗಡೆಗೊಳಿಸಿತು. ಕ್ಯಾಸಂಬಳ್ಳಿ ಚಂಗಲರಾಯರೆಡ್ಡಿ ಅವರ ನೇತೃತ್ವದಲ್ಲಿ ಮೈಸೂರಿನಲ್ಲಿ ೧೯೪೭ರ ಅಕ್ಟೋಬರ್ ೨೪ರ ವಿಜಯದಶಮಿಯಂದು ಜವಾಬ್ದಾರಿ ಸರ್ಕಾರ ಅಸ್ತಿತ್ವಕ್ಕೆ ಬಂದಿತು. ಕೆ.ಸಿ. ರೆಡ್ಡಿ ರಾಜ್ಯದ ಪ್ರಥಮ ಮುಖ್ಯಮಂತ್ರಿಯಾದರೂ ಮಹಾರಾಜರ ಅನುಮತಿ ಪಡೆದು ೧೯೪೭ರ ಅಕ್ಟೋಬರ್ ೨೯ ರಂದು ಮೈಸೂರು ಅರಮನೆಯಲ್ಲಿ ಪ್ರಥಮ ಮಂತ್ರಿಮಂಡಲ ಸಮಾವೇಶಗೊಂಡಿತು.[೨]

ಮೈಸೂರು ಚಲೋ ಚಳವಳಿ ಸುಮಾರು ೪೨ ದಿನಗಳ ಕಾಲ ನಡೆದು ಒಡೆಯರ್ ಮನೆತನದ ಆಳ್ವಿಕೆ ಅಂತ್ಯಗೊಂಡಿತು. ಪ್ರಜಾಪ್ರಭುತ್ವಕ್ಕೆ ಸ್ವಾಗತ ನೀಡಿತು. ಜನರ ಕನಸು ನನಸಾಯಿತು.

**೪.೪. ಚಲೋ ಮೈಸೂರು ಚಳವಳಿಯಲ್ಲಿ ಎಂ.ಆರ್. ಲಕ್ಷಮ್ಮನವರ ಪಾತ್ರ**

ಸಮಾಜಸೇವೆ ಸಾಹಿತ್ಯಸೇವೆ ಮಾಡಿಕೊಂಡಿದ್ದ ಲಕ್ಷಮ್ಮನವರು ಆಕಸ್ಮಿಕವಾಗಿ ರಾಜಕೀಯ ಕ್ಷೇತ್ರಕ್ಕೆ ಅಡಿ ಇಟ್ಟರು. ಅವರ ರಾಜಕೀಯ ಪ್ರವೇಶದ ಬಗ್ಗೆ ಅವರ 'ಪ್ರಜಾಪ್ರತಿನಿಧಿ ಸಭೆಯ ಅವಲೋಕನ' ಲೇಖನವು ಸವಿವರವಾದ ಮಾಹಿತಿಯನ್ನು ನೀಡುತ್ತದೆ.[೩] 'ಕಾಲಮಾನವೆಂಬುದು ಸಮಾಜದ ಪರಿಸರದ ಅಳತೆಗೋಲು'. ನಮಗರಿವಿಲ್ಲದೆಯೇ ಅದರ ಅರಿವು ಸಾಗುತ್ತಿರುತ್ತದೆ. ಅರಿವಾಗಿಯೂ, ಅರಿವಾಗದೆಯೂ ಸಮಾಜ ಅನೇಕ ಸುಳಿಗಳಿಗೆ, ಅಲೆಗಳಿಗೆ, ಒತ್ತಡಗಳಿಗೆ ಸಿಕ್ಕು ಬದಲಾಗುತ್ತಿರುತ್ತದೆ. ವ್ಯಕ್ತಿ ಅದರ ಅವಿಭಾಜ್ಯ ಅಂಗವು ಹೌದು, ಮಹಾನ್ ವ್ಯಕ್ತಿ ತನ್ನ ಸಮಾಜವನ್ನು ಮುನ್ನಡೆಸಲು ಶಕ್ತನೂ ಹೌದು. ನಲವತ್ತು ವರ್ಷಗಳ

ಹಿಂದಿನ ಸಮಾಜ ಇಂದಿನದಕ್ಕಿಂತ ಹಲವು ಅಂಶಗಳಲ್ಲಿ ಭಿನ್ನ, ಬಹಳ ನಿಧಾನ. ಉದಾಸೀನ ತುಂಬಿದ್ದ ಆ ಸಮುದಾಯದೊಳಗಿಂದ ಆಗತಾನೆ ಹೊಸ ಚೇತನವೊಂದು ಉಕ್ಕಿ ಬರುತ್ತಿತ್ತು. ರಾಜಕೀಯದಲ್ಲಿ, ಸಾಹಿತ್ಯಕ್ಷೇತ್ರದಲ್ಲಿ, ಸಮಾಜವಲಯದಲ್ಲಿ ಇದರ ಪ್ರಭಾವ ಕಾಣಬರುತ್ತಿತ್ತು. ಗಾಂಧೀಜಿ ಈ ಚೇತನದ ವಿರಾಟ್ ಸ್ವರೂಪಿ, ಸ್ವಾತಂತ್ರ್ಯದೆಡೆಗಿನ ಆತನ ಹೋರಾಟ ದೇಶದಲ್ಲೆಲ್ಲ ಹೊಸ ವಿಚಾರಗಳ ಹೊಂಬೆಳಕು ಮೂಡಿಸಿತ್ತು.

ಇಂಥ ಕಾಲದಲ್ಲಿ ಲಕ್ಷಮ್ಮ ಶಾಸಕರಾಗಿ ರಾಜಕೀಯರಂಗ ಪ್ರವೇಶಿಸಿದರು. ಸಂಪ್ರದಾಯಬದ್ಧ ಕುಟುಂಬದಲ್ಲಿ ಜನಿಸಿದ ಅವರು ಅಂದಿನ ಲಕ್ಷಾಂತರ ಸ್ತ್ರೀಯರಂತೆ ಲೋಯರ್ ಸೆಕೆಂಡರಿ ಪರೀಕ್ಷೆಗೆ ಕುಳಿತೋ ಪಾಸು ಮಾಡಿಯೋ ಗೃಹಿಣಿಯಾಗಿ ಮನೆಯಲ್ಲಿದ್ದು ಜೀವನ ಕಳೆಯುತ್ತಿದ್ದರು. ಮನ ಗೆಲ್ಲುವುದಾದರೂ ಪುಣ್ಯದ ಕೆಲಸವೇ, ಆದರೆ ವಿಧಿಯ ಚಿತ್ತ ಬೇರೆಯಾಗಿತ್ತು. ಅವರ ಪತಿಯವರು ಗಾಂಧೀಜಿಯ ಮೋಡಿಗೆ ಸಿಕ್ಕವರು. ಉನ್ನತ ಆದರ್ಶಗಳ ಭಕ್ತರಾಗಿದ್ದ ಎಂ. ನಾರಾಯಣಮೂರ್ತಿಯವರು ಮುಂದೆ ಓದಲು ಲಕ್ಷಮ್ಮ ಅವರನ್ನು ಪ್ರೇರೇಪಿಸಿದರು. ಪದವಿಯ ನಂತರ ಆರ್ಥಿಕ ಪರಿಸ್ಥಿತಿಯಿಂದ ನೊಂದು ಬೆಂದ ಅವರು ಎರಡು ಮಕ್ಕಳ ತಾಯಿಯಾಗಿ ಎಂ.ಎ. ಪದವಿಯಲ್ಲಿ ಪ್ರಥಮಶ್ರೇಣಿಯಲ್ಲಿ ಉತ್ತೀರ್ಣರಾದರು. ಆ ವರ್ಷದಲ್ಲಿ ಈ ಶ್ರೇಣಿ ಲಭಿಸಿದ್ದು ಅವರೊಬ್ಬರಿಗೆ ಮಾತ್ರ. ವಿಶ್ವವಿದ್ಯಾನಿಲಯದಲ್ಲಿ ಕೆಲಸಕ್ಕೆ ಸೇರುವ ಇಚ್ಛೆ ಇದ್ದರು ಮಹಿಳೆಯಾಗಿದ್ದರಿಂದ ಕೆಲಸದ ಅವಕಾಶ ದೊರೆಯದಿದ್ದಾಗ, ನಿರ್ವಾಹವಿಲ್ಲದೆ ಸಂಪಾದನೆಯ ಬೇರೆ ಮಾರ್ಗ ಕಂಡುಕೊಂಡರು. ಲೇಖನಗಳನ್ನು ಬರೆಯಲೆತ್ನಿಸುತ್ತಿದ್ದ ಅವರಿಗೆ ವಯಸ್ಕರ ಶಿಕ್ಷಣ ಸಮಿತಿಯ ಪದಾಧಿಕಾರಿಗಳು ತಮ್ಮ 'ಬೆಳಕು' ಪತ್ರಿಕೆಯ ಸಂಪಾದಕಿಯಾಗಲು ಆಹ್ವಾನಿಸಿದರು. ಸಂಪಾದನೆಗಿಂತ ಮಿಗಿಲಾಗಿ ಆ ಕೆಲಸ ಲಕ್ಷಮ್ಮನವರಿಗೆ ಪ್ರಿಯವಾಗಿದ್ದುದರಿಂದ ಒಪ್ಪಿದರು.

೧೯೪೫ರ ವೇಳೆಯಲ್ಲಿ ಅವರಿಗೆ ರಾಜಕೀಯದ ಸಂಪರ್ಕ ಲವಲೇಷವೂ ಇರಲಿಲ್ಲ. ವಯಸ್ಕರ ಶಿಕ್ಷಣ ಸಮಿತಿಯ ಸಭೆಯೊಂದರಲ್ಲಿ ಸಾಹುಕಾರ್ ಚನ್ನಯ್ಯ, ಟಿ. ಮರಿಯಪ್ಪನವರಂತಹ ಮಹನೀಯರ ಮೂಲಕ ಅವರ ಜೀವನದ ಗತಿಯು ಮಾರ್ಪಾಟಾಯಿತು. ಮೈಸೂರು ರಾಜ್ಯ ಮುಂದುವರಿದ ಮಾದರಿ ರಾಜ್ಯ ಅನ್ನಿಸಿಕೊಂಡಿದ್ದ ಕಾಲವದು. ಪ್ರತಿನಿಧಿ ಸಭೆ, ನ್ಯಾಯವಿಧಾಯಕ ಸಭೆ ಎಂಬ ಎರಡು ಶಾಸನಸಭೆಗಳು ರಚಿತವಾಗಿ ಅವುಗಳ ಸಲಹೆ ಪಡೆದೋ, ಅದನ್ನು ಆಗಾಗ ಮೀರಿಯೋ, ಮೈಸೂರು ಮಹಾರಾಜರು ಆಳ್ವಿಕೆ ನಡೆಸುತ್ತಿದ್ದ ಕಾಲ. ಮೇಲ್ಮನೆಗೆ ನಿಗದಿಯಾಗಿದ್ದ ೭೧ ಸದಸ್ಯರ ಪೈಕಿ ಪದನಿಮಿತ್ತ ಅಧಿಕಾರವರ್ಗ, ಚುನಾಯಿತವರ್ಗ, ನಾಮಕರಣ ಸದಸ್ಯವರ್ಗ ಇದ್ದು, ಹೆಣ್ಣುಮಕ್ಕಳಿಗೆ ಎರಡು ಕ್ಷೇತ್ರ ಮೀಸಲಾಗಿತ್ತು. ಮೈಸೂರು ಸ್ತ್ರೀಯರ ಪ್ರತಿನಿಧಿ, ಮತ್ತು ಬೆಂಗಳೂರು ಸ್ತ್ರೀಯರ ಪ್ರತಿನಿಧಿಯನ್ನು ಆಯ್ಕೆ ಮಾಡುತ್ತಿದ್ದು ಅಂದು ನ್ಯಾಯವಿಧಾಯಕ

ಸಭೆಯ ಸದಸ್ಯೆಯಾಗಿದ್ದ ಶ್ರೀಮತಿ ಯಶೋಧರ ದಾಸಪ್ಪ ಅವರ ಅವಧಿ ಮುಗಿದು ಆ ಸ್ಥಾನ ತೆರವಾಗಿತ್ತು. ಕಾಲೇಜು ಮೆಟ್ಟಿಲು ಕಾಣುವ ಹೆಣ್ಣುಮಕ್ಕಳೂ ಆ ಕಾಲಕ್ಕೆ ವಿರಳವಾಗಿದ್ದು, ರಾಜ್ಯದಲ್ಲಿ ಏಕಮಾತ್ರ ಹೆಣ್ಣುಮಕ್ಕಳ ಕಾಲೇಜು ಮಹಾರಾಣಿ ಕಾಲೇಜಿನ ಬಿ.ಎ. ವಿದ್ಯಾರ್ಥಿನಿಯಾಗಿದ್ದಾಗ ಎಂ.ಆರ್. ಲಕ್ಷಮ್ಮನವರು ಪ್ರತಿದಿನವೂ ಪೆಟ್ಟಿಗೆ ಗಾಡಿ (ಎತ್ತಿನ ಗಾಡಿ)ಯಲ್ಲಿ ಕುಳಿತು ಕಾಲೇಜಿಗೆ ಹೋಗುತ್ತಿದ್ದರು. ಇನ್ನು ರಾಜಕಾರಣವೆಂದರೆ ಮುಗಿದೇ ಹೋಯಿತು. ಅದು ಭೀಷಣರಂಗ ಅಲ್ಲಿಯ ವ್ಯಕ್ತಿಗಳು ಭೀಕರ ವ್ಯಕ್ತಿಗಳೆಂದೇ ಅವರ ನಂಬಿಕೆಯಾಗಿತ್ತು.

ಈ ಹಿನ್ನೆಲೆಯಲ್ಲಿ ಅಂದಿನ ಮೈಸೂರು ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಸಾಹುಕಾರ್ ಚನ್ನಯ್ಯ ಮತ್ತು ಟಿ. ಮರಿಯಪ್ಪ ಅವರು ಲಕ್ಷಮ್ಮರವರ ಮನೆಗೆ ಬಂದು ಅವರ ತಂದೆ ಹಾಗೂ ಅವರ ಯಜಮಾನರನ್ನು ಭೇಟಿಯಾಗಿ ಅವರನ್ನು ಕಾಂಗ್ರೆಸ್ ವತಿಯಿಂದ ನ್ಯಾಯವಿಧಾಯಕ ಸಭೆಗೆ ಮೈಸೂರು ಸ್ತ್ರೀಯರ ಪ್ರತಿನಿಧಿಯಾಗಿ ನಿಲ್ಲಲು ಬಗೆಬಗೆಯಿಂದ ಕೇಳಿಕೊಂಡಾಗ, ಹೊಸದೊಂದು ವಿಪ್ಲವ ಎದ್ದಿತು. ಕಾಂಗ್ರೆಸ್ಸೆಂದರೆ ಹೆದರಿಕೆ. ಅಲ್ಲದೆ ಸ್ವಾತಂತ್ರ್ಯ ಹೋರಾಟ ಗುರಿಯುಳ್ಳ ಸಂಸ್ಥೆಯಾದ್ದರಿಂದ ಒಂದಲ್ಲ ಒಂದು ದಿನ ಜೈಲುವಾಸ ತಪ್ಪಿದ್ದಲ್ಲ. ಅದೊಂದು ಹೆದರಿಕೆ. ಮನೆಯ ಸುರಕ್ಷಿತ ವಾತಾವರಣದಿಂದ ಹೊರಬಿದ್ದು ದೇಶದ ಆಗುಹೋಗುಗಳೆಂಬ ವಿಶಾಲ ಸಾಗರದಲ್ಲಿ ಈಜಬೇಕು. ಆ ಶಕ್ತಿ, ಆ ಬಲವಾದರೂ ನನಗಿದೆಯೇ? ಇದೆಲ್ಲಿಯ ಕುತ್ತು ಪ್ರಾಪ್ತವಾಯಿತು ಎಂದು ಅವರು ತುಂಬ ದುಃಖಪಟ್ಟರು. ಎಂ.ಆರ್. ಲಕ್ಷಮ್ಮರವರನ್ನು ಅವರ ತಂದೆ ಸಂತೈಸಿ **'ನಾನು ರಾಜಮನೆತನದವ, ನಮ್ಮ ಹಿರೀಕರು ಪಾಳೆಗಾರರ ಹತ್ತಿರ ಮಂತ್ರಿಗಳಾಗಿದ್ದರಂತೆ. ಜೀವನಕ್ಕಾಗಿ ಸರಕಾರಿ ಉದ್ಯೋಗ ಹಿಡಿದ ನಮಗಂತೂ ದೇಶದ ಸೇವೆ ಮಾಡಲು ಸಾಧ್ಯವಿಲ್ಲವಾಯಿತು. ನೀನಾದರೂ ಬಂದ ಅವಕಾಶ ಬಿಡುವುದು ಸಲ್ಲದಮ್ಮ. ನಾವು ನಿನ್ನ ಹಿಂದೆ ನಿಲ್ಲುತ್ತೇವೆ ಒಪ್ಪು'** ಅಂದರು. ಯಜಮಾನರು ಇನ್ನೂ ಹೆಚ್ಚಿನ ರೀತಿಯಿಂದ ಹುರಿದುಂಬಿಸಿದರು. ಅಳುಕುತ್ತಲೇ ಅವರು ನಾಮಪತ್ರಕ್ಕೆ ಸಹಿ ಹಾಕಿದರು. ಅರ್ಜಿ ಸಲ್ಲಿಸಲೆಂದು ಕಾಂಗ್ರೆಸ್ ಅಧ್ಯಕ್ಷರು ತಮ್ಮ ಕಾರಿನಲ್ಲಿ ಅವರನ್ನು ಕರೆದೊಯ್ದರು. ಇಂಟರ್ ಮೀಡಿಯೆಟ್‌ನಲ್ಲಿ ಅಭ್ಯಾಸ ಮಾಡುತ್ತಿದ್ದಾಗ ಅವರ ಬೋಧಕರು ಕೆ.ಆರ್. ಶ್ರೀನಿವಾಸ ಐಯ್ಯಂಗಾರ್ ಎಂಬುವವರಿದ್ದರು. ಅವರು ಸದಾ ಖಾದಿ ಉಡುಪು ತೊಡುತ್ತಿದ್ದರು. ಕಟ್ಟಾ ದೇಶಪ್ರೇಮಿ. ಅವರ ಬೋಧನೆಯಿಂದ ಲಕ್ಷಮ್ಮರವರು ಖಾದಿ ಸೀರೆ ಒಮ್ಮೆ ಕೊಂಡಿದ್ದರು. ಅದನ್ನು ಧರಿಸಿ ತಾಯಿ, ತಂದೆ, ಪತಿ ಮತ್ತು ದೇವರಿಗೆ ನಮಸ್ಕರಿಸಿ ಹೊರಟರು. ಲಕ್ಷಮ್ಮ ಅವರು ಅವಿರೋಧ ಆಯ್ಕೆಯಾದರು. ಆ ನಡುವೆ ಕಾಂಗ್ರೆಸ್ ವ್ಯಕ್ತಿಗಳ ನಾನಾ ಬಗೆಯ ಕ್ಷುಲ್ಲಕ ವಿಷಯಗಳನ್ನು ಕಾಂಗ್ರೆಸ್ ಜನರೇ ಬಂದು ಅವರಿಗೆ ರಂಜಿಸಿ ಹೇಳಿದರು. ಕೆಲವರ ಜೊತೆ ಸೇರದಿರು ಎಂದು ಬೆದರಿಸಿದರು. ಇದಾವುದಕ್ಕೂ ಲಕ್ಷಮ್ಮನವರು ಕಿವಿಗೊಡಲಿಲ್ಲ ಮತ್ತು ಕಾಂಗ್ರೆಸ್‌ನಲ್ಲಿ ಕಾರ್ಯ ನಿರ್ವಹಿಸುವುದಕ್ಕೆ ಎದೆಗುಂದಲಿಲ್ಲ.

ಲಕ್ಷಮ್ಮನವರು ೧೯೪೫ ರಲ್ಲಿ ನ್ಯಾಯವಿಧಾಯಕ ಸಭೆಯ ಸದಸ್ಯರಾಗಿದ್ದು, ೧೯೪೬ ರಲ್ಲಿ ಮೈಸೂರು ಪುರಸಭೆಗೆ ಆಯ್ಕೆಯಾಗಿ ಸೇವೆ ಸಲ್ಲಿಸಿದ್ದರು. ೧೯೪೫ ರಿಂದ ೧೯೪೭ನೇ ಆಗಸ್ಟ್ ತಿಂಗಳಿನವರೆಗೆ ನ್ಯಾಯವಿಧಾಯಕ ಸಭೆಯ ಸದಸ್ಯರಾಗಿದ್ದು "ಮೈಸೂರು ಚಲೋ" ಚಳವಳಿಯಲ್ಲಿ ಭಾಗವಹಿಸಿದ್ದರು.

ಮೈಸೂರು ಕಾಂಗ್ರೆಸ್ ಸಮಿತಿಯು ಸ್ವಾತಂತ್ರ್ಯ ದಿನಾಚರಣೆಯನ್ನು ಆಚರಿಸುವ ಸಲುವಾಗಿ ಬಹಿರಂಗಸಭೆಯನ್ನು ಕರೆದಿದ್ದರು. ಸಭೆಯಲ್ಲಿ ಭಾಗವಹಿಸಿದ ಲಕ್ಷಮ್ಮನವರು ಮಾತನಾಡಿ ಭಾರತಕ್ಕೆ ಸ್ವಾತಂತ್ರ್ಯ ಬಂದಿದ್ದರೂ ಮೈಸೂರಿಗೆ ಬಾರದಿರುವುದನ್ನು ಖಂಡಿಸಿ, ಇಲ್ಲಿನ ಆಳರಸರು ಕೂಡಲೇ ಎಚ್ಚೆತ್ತು ಪ್ರಜೆಗಳಿಗೆ ಅಧಿಕಾರವನ್ನು ವರ್ಗಾಯಿಸಬೇಕೆಂದು ಕೋರಿದರು. ೧೯೪೭ ಸೆಪ್ಟೆಂಬರ್ ತಿಂಗಳ ೪ ರಂದು ಪುರಸಭೆಯಲ್ಲಿ ಬಹಿರಂಗ ಸಭೆಯನ್ನು ನಡೆಸಲು ಕಾಂಗ್ರೆಸ್ ಪಕ್ಷದ ಕಛೇರಿಯಲ್ಲಿ ತೀರ್ಮಾನಿಸಲಾಗಿತ್ತು. ಅದರಂತೆ ಸಂಜೆ ಹೆಚ್.ಸಿ. ದಾಸಪ್ಪನವರ ಅಧ್ಯಕ್ಷತೆಯಲ್ಲಿ ಸಭೆ ನಡೆಯಿತು. ಹೆಚ್ಚಿನ ಸಂಖ್ಯೆಯಲ್ಲಿ ಜನರು ಸೇರಿದ್ದರು. ಸಭೆಯಲ್ಲಿ ಎಂ.ಆರ್. ಲಕ್ಷಮ್ಮನವರು, ಟಿ. ಸುನಂದಮ್ಮನವರು ಸರ್ಕಾರದ ತಪ್ಪುಗಳನ್ನು ಬಯಲಿಗೆಳೆದರು; ಜವಾಬ್ದಾರಿ ಸರ್ಕಾರಕ್ಕೆ ಒತ್ತಾಯಿಸಿದರು. ಹೆಚ್.ಸಿ. ದಾಸಪ್ಪನವರು ಹೋರಾಟಕ್ಕೆ ಕರೆಯಿತ್ತರು. ಜನಸಮೂಹ ತಾನಾಗಿ ಸ್ವಪ್ರೇರಣೆಯಿಂದ ನೆರೆದಿದ್ದು ಉತ್ಸಾಹ ಉದ್ವೇಗದಿಂದ ಕರತಾಡನ ಮಾಡಿದರು.[೪]

ಸಭೆ ಮುಗಿಸಿ ಮನೆಗೆ ಬಂದ ಲಕ್ಷಮ್ಮನವರು ಊಟ ಮುಗಿಸಿ ಪತಿಯೊಡನೆ ವಿಚಾರ ವಿನಿಮಯ ಮಾಡುತ್ತಿದ್ದಾಗ ರಾತ್ರಿ ಸಮಯ ೧೦.೩೦ ಆಗಿತ್ತು. ಬಾಗಿಲು ತೆರೆದಾಗ ಪೊಲೀಸ್ ಅಧಿಕಾರಿಯವರು ನೀವು ಅರೆಸ್ಟ್ ಆಗಿದ್ದೀರಿ, ನಾನು ಕರ್ತವ್ಯ ನಿರ್ವಹಿಸಲು ಬಂದಿದ್ದೇನೆ ಎಂದು ಲಕ್ಷಮ್ಮನವರನ್ನು ಬಂಧಿಸಿದರು. ಜೊತೆಗೆ ಸುನಂದಮ್ಮನವರನ್ನು ಮತ್ತು ಹೆಚ್.ಸಿ. ದಾಸಪ್ಪನವರನ್ನು ಬಂಧಿಸಿ ಒಂದೇ ವಾಹನದಲ್ಲಿ ಕರೆದೊಯ್ದರು.[೫] ದಿನಾಂಕ ೦೪.೯.೧೯೪೭ ರಿಂದ ೦೫.೧೦.೧೯೪೭ ರವರೆಗೆ ಸೆರೆಮನೆವಾಸವನ್ನು ಅನುಭವಿಸಿದ ಲಕ್ಷಮ್ಮನವರು ಜವಾಬ್ದಾರಿ ಸರ್ಕಾರ ಸ್ಥಾಪನೆಗಾಗಿ ನಡೆಯದ ಅರಮನೆ ಸತ್ಯಾಗ್ರಹದಲ್ಲಿ ಹೆಚ್ಚಿನ ಸಂಖ್ಯೆಯ ಮಹಿಳೆಯರು ಪುರುಷರು ಭಾಗವಹಿಸುವಂತೆ ಸಂಘಟನೆ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡರು.

ದಿನಾಂಕ ೦೭.೧೦.೧೯೪೭ ರಂದು ಲಕ್ಷಮ್ಮನವರ ಅಧ್ಯಕ್ಷತೆಯಲ್ಲಿ ನಗರ ಕಾಂಗ್ರೆಸ್ ಕೆಲಸಗಾರರ ಸಭೆ ನಡೆಯಿತು[೬]. ಮಹಾರಾಜರು ಮಾಡಿರುವ ಘೋಷಣೆಗಳು ಅತೃಪ್ತಿದಾಯಕವಾಗಿದ್ದು, ಸತ್ಯಾಗ್ರಹ ಚಳವಳಿಯಲ್ಲಿ ಭಾಗವಹಿಸಿ ಬಂಧಿಯಾದ ನಾಯಕರ ಬಿಡುಗಡೆಗಾಗಿ ಅರಮನೆ ಸತ್ಯಾಗ್ರಹವನ್ನು ನಡೆಸಿಕೊಂಡುಬರಲು ತೀರ್ಮಾನಿಸಲಾಯಿತು. ನಗರ ಕಾಂಗ್ರೆಸ್ ಸಮಿತಿಯ ಆಶ್ರಯದಲ್ಲಿ ಪುರಸಭಾ ಮೈದಾನದಲ್ಲಿ ೧೬.೧೦.೧೯೪೭ ರಂದು

ನಡೆದ ಸಭೆಯಲ್ಲಿ ಲಕ್ಷಮ್ಮನವರು ಭಾಗವಹಿಸಿದರು. ಸತ್ಯಾಗ್ರಹದಲ್ಲಿ ಭಾಗವಹಿಸಿ ನೊಂದ ಮಹಿಳೆಯರಿಗೆ ವಂದನೆಯನ್ನು ಅರ್ಪಿಸಿ, ಮಹಿಳಾ ಮಂಡಳಿಯು ಜವಾಬ್ದಾರಿ ಸರ್ಕಾರಕ್ಕೆ ಸತತವಾಗಿ ಶ್ರಮಿಸಲು ತೀರ್ಮಾನಿಸಿರುವುದಾಗಿ ಹೇಳಿದರು.[೭]

ಎಂ.ಆರ್. ಲಕ್ಷಮ್ಮನವರು ಜವಾಬ್ದಾರಿ ಸರ್ಕಾರ ಸ್ಥಾಪನೆಗೆ ನಡೆದ ಹೋರಾಟದಲ್ಲಿ ಸತತವಾಗಿ ಭಾಗವಹಿಸಿ, ಅವರು ಮನೆ, ಮಕ್ಕಳು ಎಲ್ಲವನ್ನು ಬಿಟ್ಟು ಸೆರೆಮನೆ ವಾಸವನ್ನು ಅನುಭವಿಸಿದರು. ನಲವತ್ತೆರಡು ದಿನಗಳ ಕಾಲ ನಡೆದ ಚಳವಳಿಯನ್ನು ಹತ್ತಿಕ್ಕಲು ಅಸಮರ್ಥವಾದ ಸರ್ಕಾರ ಅಕ್ಟೋಬರ್ ೨೪, ೧೯೪೭ ರ ವಿಜಯದಶಮಿಯಂದು ಕೆ.ಸಿ. ರೆಡ್ಡಿಯವರ ನಾಯಕತ್ವದಲ್ಲಿ ಜವಾಬ್ದಾರಿ ಸರ್ಕಾರ ಅಸ್ತಿತ್ವಕ್ಕೆ ಬಂತು.

**೪.೫. ಎಂ.ಆರ್. ಲಕ್ಷಮ್ಮನವರ ಸೆರೆಮನೆ ದಿನಚರಿ**

ಜವಾಬ್ದಾರಿ ಸರ್ಕಾರದ ಹೋರಾಟದಲ್ಲಿ ಭಾಗವಹಿಸಿದ ಲಕ್ಷಮ್ಮನವರು ದಿನಾಂಕ ೦೪.೦೯.೧೯೪೭ ರಿಂದ ದಿನಾಂಕ ೧೬.೦೯.೧೯೪೭ ರವರೆಗೆ ಮೈಸೂರಿನ ಸೆರೆಮನೆಯಲ್ಲಿ ಇದ್ದರು. ನಂತರ ಬೆಂಗಳೂರಿನ ಕಾರಾಗೃಹಕ್ಕೆ ದಿನಾಂಕ ೧೬.೦೯.೧೯೪೭ರ ಸಂಜೆ ವರ್ಗಾಯಿಸಲಾಯಿತು. ಲಕ್ಷಮ್ಮನವರು ಸೆರೆಮನೆಯಲ್ಲಿ ಕಳೆದ ತಮ್ಮ ದಿನಗಳನ್ನು '**ತುರಂಗವಾಸ ಅನುಭವ**'ದಲ್ಲಿ ದಾಖಲಿಸಿದ್ದು, ಅವರು ಸೆರೆಮನೆಗಳಲ್ಲಿ ಕಳೆದ ದಿನಗಳ ಬಗ್ಗೆ ಸಮಕಾಲೀನ ಘಟನೆಗಳ ಬಗ್ಗೆ ಅನೇಕ ವಿವರಗಳು ಲಭ್ಯವಿವೆ. ದಿನಾಂಕ ೦೪.೦೯.೧೯೪೭ ರಂದು ಸಂಜೆ ಪುರಭವನದಲ್ಲಿ ಸರ್ಕಾರದ ವಿರುದ್ಧ ಮಾಡಿದ್ದ ಭಾಷಣದಿಂದಾಗಿ ಅಂದೇ ರಾತ್ರಿ ೧೦.೩೦ರ ವೇಳೆಗೆ ಪೊಲೀಸರು ಬಂದು ಇವರನ್ನು ಸೆರೆಮನೆಗೆ ಕರೆದೊಯ್ದ ಸಂಗತಿಯನ್ನು ಹಾಗೂ ವಯಸ್ಸಾದ ಅತ್ತೆ, ನಾಲ್ಕು ಸಣ್ಣ ಮಕ್ಕಳು ಮತ್ತು ಪತಿಯ ಮೇಲೆ ಸಂಸಾರದ ಜವಾಬ್ದಾರಿಯನ್ನು ಹೊರಿಸಿ ಜೈಲಿಗೆ ಹೋಗುವ ಅನಿವಾರ್ಯತೆಗಳನ್ನೆಲ್ಲಾ ಮನಮುಟ್ಟುವಂತೆ ದಾಖಲಿಸಿದ್ದಾರೆ. ಜೈಲಿನಲ್ಲಿರುವ ಪರಿಸ್ಥಿತಿ, ಅಲ್ಲಿನ ಸಹೃದಯಿ ಅಮೀರಾಲಿ, ಮಹಿಳಾ ಖೈದಿಗಳ ಸ್ಥಿತಿಗತಿ ಬಗ್ಗೆ ವಿವರಗಳನ್ನು ದಾಖಲಿಸಿದ್ದಾರೆ. ಅವರು ಸೆರೆಮನೆಯಲ್ಲಿದ್ದಾಗಲೂ ತಮ್ಮ ಸಮಾಜಸೇವೆಯ ಕಾರ್ಯವನ್ನು ಬಿಡಲಿಲ್ಲ.

ಜೈಲಿನಲ್ಲಿದ್ದ ಅನಕ್ಷರಸ್ಥ ಮಹಿಳೆಯರಿಗೆ ಅಕ್ಷರಗಳನ್ನು ಮತ್ತು ಸರಳ ವಿಧಾನದಲ್ಲಿ ಲೆಕ್ಕಗಳನ್ನು ಕಲಿಸಿದರು. ಸೆರೆಮನೆಯಲ್ಲಿದ್ದಾಗ ದಿನಪತ್ರಿಕೆಗಳಲ್ಲಿ ವರದಿಯಾಗಿದ್ದಂತಹ ಅನೇಕ ಸಂಗತಿಗಳನ್ನು ತಮ್ಮ ದಿನಚರಿಯಲ್ಲಿ ದಾಖಲಿಸಿದ್ದು, ಅದೊಂದು ಪ್ರಮುಖ ದಾಖಲೆಯಾಗಿದೆ. ಹೆಚ್.ಸಿ. ದಾಸಪ್ಪ, ಟಿ. ಸುನಂದಮ್ಮ ಮತ್ತು ಲಕ್ಷಮ್ಮನವರನ್ನು ಒಂದೇ ದಿನ ಬಂಧಿಸಲಾಗಿದ್ದು, ಇನ್ನೂ ಹಲವು ನಾಯಕರ ಬಗ್ಗೆ ತಮ್ಮ ದಿನಚರಿಯಲ್ಲಿ ದಾಖಲಿಸಿದ್ದಾರೆ. ಸೆರೆಮನೆಗೆ ಕರೆದೊಯ್ಯುವ ಸಂದರ್ಭದಲ್ಲಿ ಚಳವಳಿಯ ಪ್ರಮುಖ ಮುಂದಾಳುಗಳನ್ನು ಸೆರೆಮನೆಗೆ ಹಾಕಿದರೆ ನಿಮ್ಮ ಚಳವಳಿ ತಣ್ಣಗಾಗುತ್ತದೆ ಎಂದ ಪೊಲೀಸ್ ಅಧಿಕಾರಿಗೆ ಲಕ್ಷಮ್ಮನವರು

'ಹೆಣ್ಣುಮಕ್ಕಳು ಹೇಡಿಗಳೇನಲ್ಲ; ದೇಶಾಭಿಮಾನಿಗಳು. ಸಾವಿರಾರು ಜನ ಇದ್ದಾರೆ. ಚಳವಳಿ ನಡೆಯುತ್ತದೆ' ಎಂದು ಉತ್ತರಿಸಿದ್ದರು.

ದಿನಾಂಕ ೦೪.೦೯.೧೯೪೭ ರಂದು ಪುರಸಭೆಯ ಮುಂದೆ ಮಾಡಿದ ಭಾಷಣದ ಪರಿಣಾಮವಾಗಿ ಅಂದು ರಾತ್ರಿ ಹತ್ತೂವರೆ ಗಂಟೆಗೆ ಬಂಧಿತರಾದ ಲಕ್ಷಮ್ಮ ದಿನಾಂಕ ೦೫.೦೯.೧೯೪೭ ರಂದು ಮೊದಲ ದಿನ ಸೆರೆಮನೆಯಲ್ಲಿ ಉಂಟಾದ ಬೇಸರ, ಮನೆಯ ನೆನಪು ಬಂದು ಮನೆಗೆ ಹೋಗುವ ಆತುರ, ಅಗ್ಗದ ಕುಪ್ರಚಾರಕ್ಕಾಗಿಯೇ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದಾರೆ ಎಂಬ ಕೆಲವು ನಾಯಕರ ಅಭಿಪ್ರಾಯಗಳ ಬಗ್ಗೆ ಬೇಸರ ವ್ಯಕ್ತಪಡಿಸುತ್ತಾ ಸೆರೆಮನೆಯಲ್ಲಿ ದಿನಗಳನ್ನು ಕಳೆಯುವುದು ಹೇಗೆ ಎಂಬ ಭಾವನೆಗಳನ್ನು ದಾಖಲಿಸಿದ್ದಾರೆ.

ದಿನಾಂಕ ೦೬.೦೯.೧೯೪೭ ರಂದು ಮಕ್ಕಳುಮರಿ ಸಂಸಾರಕ್ಕೆ ಕಷ್ಟವಾಗುವುದನ್ನು ನೆನೆದು ಅದಕ್ಕಿಂತ ಹೆಚ್ಚಾಗಿ ದೇಶಕ್ಕೇ ಕಷ್ಟ ಎರಗಿರುವಾಗ ನನ್ನದೇನು ಎಂದು ಹೇಳುತ್ತಾ ಸಂಸಾರಕ್ಕಿಂತ ದೇಶ ಮುಖ್ಯ ಎಂಬ ಭಾವನೆ ವ್ಯಕ್ತಪಡಿಸಿದ್ದಾರೆ. ಜೈಲಿನ ಅಧಿಕಾರಿಯೊಬ್ಬರು ಬಂದಾಗ ಅವರ ಬಳಿ ಸುನಂದಮ್ಮ ಹಾಗೂ ಲಕ್ಷಮ್ಮನವರು ಚಳವಳಿಯ ಬಗ್ಗೆ ಪ್ರಶ್ನೆ ಮಾಡಿ ಅನೇಕ ವಿಷಯಗಳನ್ನು ತಿಳಿದುಕೊಂಡರು. ನೂರಡಿ ರಸ್ತೆಯಲ್ಲಿ ಸಯ್ಯಾಜಿರಾವ್ ವೃತ್ತದಲ್ಲಿ ವಿದ್ಯಾರ್ಥಿ ಚಳವಳಿಗಾರರ ಮೇಲೆ ಗುಂಡು ಹೊಡೆತವಾಗಿ ಐವರು ಗಾಯಗೊಂಡ ಬಗ್ಗೆ, ಕೆ.ಆರ್. ಮಿಲ್ಲಿನ ನೌಕರರ ಪ್ರತಿಭಟನೆ ಬಗ್ಗೆ, ರೈಲ್ವೆ ಕಾರ್ಮಿಕರ ಮುಷ್ಕರದ ಬಗ್ಗೆ, ಬೆಂಗಳೂರಿನಲ್ಲಿ ಕರ್ಫ್ಯೂ ಇದ್ದರೂ ವಿದ್ಯಾರ್ಥಿನಿಯರು ಪ್ರಭಾತ್‌ಫೇರಿ ಮಾಡಿದ ಬಗ್ಗೆ ವಿವರಗಳನ್ನು ತಿಳಿದುಕೊಂಡರು. ಜೈಲಿನ ಮುಖ್ಯಾಧಿಕಾರಿ ಅಮೀರಾಲಿಯವರು ಈ ವಿವರಗಳನ್ನು ನೀಡಿದ್ದು ಅವರ ಮಗ ಕೂಡ ಚಳವಳಿಯಲ್ಲಿ ಭಾಗವಹಿಸಿರುವ ಬಗ್ಗೆ ಹಾಗೂ ವಿದ್ಯಾರ್ಥಿಗಳು ಗುಂಡು ಹೊಡೆದರೂ ಮುನ್ನುಗ್ಗಿ ಚಳವಳಿ ನಡೆಸುತ್ತಿರುವ ಬಗ್ಗೆ ೧೯೩೯ ಹಾಗೂ ೧೯೪೨ರ ಕ್ವಿಟ್ ಇಂಡಿಯಾ ಚಳವಳಿಗಿಂತ ಮೈಸೂರು ಚಲೋ ಚಳವಳಿ ತೀವ್ರವಾಗಿ ನಡೆಯುತ್ತಿರುವ ಬಗ್ಗೆ, ಗಾಂಧೀಜಿಯವರ ಅಹಿಂಸಾನೀತಿ ಇಲ್ಲದಿದ್ದರೆ ಚಳವಳಿ ಇನ್ನೂ ತೀವ್ರವಾಗಿರುತ್ತಿತ್ತು ಎಂದು ಜೈಲಿನ ಅಧಿಕಾರಿ ತಿಳಿಸಿದರು. ಪುರಸಭೆಯ ಮುಂದೆ ದಾಸಪ್ಪ ಮತ್ತು ಎಂ.ಆರ್. ಲಕ್ಷಮ್ಮನವರು ಸರ್ಕಾರವನ್ನು ವಿರೋಧಿಸಿದ್ದನ್ನು ಮತ್ತು ಟೀಕಿಸಿದ್ದನ್ನು ತಿರುಚಿ, ಅವರು ಸರ್ಕಾರವನ್ನು ಪ್ರಶಂಸಿಸಿದ್ದಾರೆಂಬ ಸುದ್ದಿಯನ್ನು ಆಕಾಶವಾಣಿಯಲ್ಲಿ ಪ್ರಸಾರ ಮಾಡಿದ ಬಗ್ಗೆ ಕೂಡ ತಿಳಿಸಿದರು. ಹೆಚ್.ಎಂ. ಚೆನ್ನಬಸಪ್ಪನವರ ನೇತೃತ್ವದಲ್ಲಿ ಚಳವಳಿ ತೀವ್ರವಾಗಿ ನಡೆಯುತ್ತಿರುವ ಬಗ್ಗೆ ಆತನಿಂದ ಮಾಹಿತಿಯನ್ನು ಪಡೆದುಕೊಂಡರು.[೮]

ದಿನಾಂಕ ೦೭.೦೯.೧೯೪೭ ರಂದು ಬೆಳಗ್ಗೆ ಎದ್ದಾಗ ರಾತ್ರಿ ಬಿದ್ದ ಸತ್ಯಾಗ್ರಹದ ಕನಸುಗಳನ್ನು ನೆನೆದು ಹುಡುಗರ ಭಜನೆ ಜನಗಣಮನದ ಗೀತೆಯ ಜೊತೆಗೆ ಗುಬ್ಬಚ್ಚಿಯ

ಚಿಲಿಪಿಲಿ ಮನಸ್ಸನ್ನು ಶಾಂತಗೊಳಿಸಿತು ಎಂದಿರುವ ಲಕ್ಷಮ್ಮ ೪೮ ಗಂಟೆಗಳ ಕರ್ಫ್ಯೂ ಇದ್ದುದರಿಂದ ದಿನಪತ್ರಿಕೆ ಪ್ರಕಟವಾಗದ ಬಗ್ಗೆ ವಿವರಗಳನ್ನು ತಮ್ಮ ದಿನಚರಿಯಲ್ಲಿ ದಾಖಲಿಸಿದ್ದಾರೆ. ಟಿ. ಸುನಂದಮ್ಮನವರು ೧೯೪೨ ರಲ್ಲಿ ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಭಾಗವಹಿಸಿದ್ದರ ಬಗ್ಗೆ ಲಕ್ಷಮ್ಮನವರ ಜೊತೆ ತಮ್ಮ ಅನುಭವಗಳನ್ನು ಹಂಚಿಕೊಂಡರು. ಯಶೋಧರ ದಾಸಪ್ಪ ಮತ್ತು ಟಿ. ಸುನಂದಮ್ಮನವರು ಡೈನಮೇಟು ಇಡುವ, ವೈರು ಕತ್ತರಿಸುವ ಕ್ರಾಂತಿಕಾರಿ ಕಾರ್ಯಗಳನ್ನು ಮಾಡುತ್ತಿದ್ದ ಬಗ್ಗೆ ಹುಡುಗರ ಹೋರಾಟ ಹುಡುಗರದ್ದು, ಅವರ ಹೋರಾಟವನ್ನು ನಮ್ಮ ಹೋರಾಟದಲ್ಲಿ ಬೆರೆಸಬೇಕಾಗಿಲ್ಲ ಎಂದು ದಾಸಪ್ಪನವರ ಅಭಿಪ್ರಾಯವಾಗಿದ್ದು, ಅವರ ನಿಲುವನ್ನು ಟಿ. ಸುನಂದಮ್ಮನವರು ಖಂಡಿಸುತ್ತಿದ್ದ ಬಗೆಗಿನ ವಿವರಗಳನ್ನು ದಾಖಲಿಸಿದ್ದಾರೆ.

ಜೈಲಿನಲ್ಲಿ ಲಕ್ಷಮ್ಮ ಮತ್ತು ಟಿ. ಸುನಂದಮ್ಮನವರ ಉಸ್ತುವಾರಿ ನೋಡಿಕೊಳ್ಳುತ್ತಿದ್ದವರು ಅಂತೋಣಿಯಮ್ಮ ಮತ್ತು ದೇವಮ್ಮ. ಅಂತೋಣಿಯಮ್ಮನ ೧೪ ವರ್ಷದ ಮಗನ ಮರಣದ ಬಗ್ಗೆ, ಮಗಳು ಮದುವೆಯಾದ ಮೂರು ತಿಂಗಳಿಗೆ ಅವಳನ್ನು ತವರುಮನೆಗೆ ವಾಪಸ್ ಕಳಿಸಿದ ಅಳಿಯನ ಕ್ರೂರತನದ ಬಗ್ಗೆ, ಹೊಟ್ಟೆಪಾಡಿಗೆ ಮಗಳನ್ನು ಸಾಕಲು ಜೈಲಿನಲ್ಲಿ ಕೆಲಸ ಮಾಡಬೇಕಾದ ಅನಿವಾರ್ಯತೆಯ ಬಗ್ಗೆ ಅಂತೋಣಿಯಮ್ಮ ತನ್ನ ದುಃಖದ ಕತೆಯನ್ನು ಹಂಚಿಕೊಂಡ ಬಗ್ಗೆ ದಾಖಲಿಸಿದ್ದಾರೆ.

ದಿನಾಂಕ ೦೮.೦೯.೧೯೪೭ ರಂದು ಸೆರೆಮನೆಗೆ ಟಿ. ಮರಿಯಪ್ಪ ಮತ್ತು ದಾಸಪ್ಪನವರು ಬಂದು ಲಕ್ಷಮ್ಮ ಮತ್ತು ಟಿ. ಸುನಂದಮ್ಮನವರನ್ನು ಭೇಟಿ ಮಾಡಿದರು. ಮಂಡ್ಯದಲ್ಲಿ ನಡೆಯುತ್ತಿರುವ ಗಲಭೆ, ಕೊಪ್ಪಲುವಿನಲ್ಲಿ ಜನ ದಂಗೆ ಏಳುತ್ತಿರುವ ಬಗ್ಗೆ, ಮಳವಳ್ಳಿಯಲ್ಲಿ ನಡೆಯುತ್ತಿರುವ ಚಳವಳಿಯ ಬಗ್ಗೆ ದಾಖಲಿಸಿದ್ದಾರೆ. ಮಂಡ್ಯದಲ್ಲಿ ಜಿಲ್ಲಾಧಿಕಾರಿಗೆ ಹೊಡೆದರು ಹಾಗೂ ಪೊಲೀಸರನ್ನು ಸುಟ್ಟರೆಂದು ಜನತೆ ಮೇಲೆ ಗುಂಡು ಹಾರಿಸಿದರೆಂದು ವದಂತಿ ಹಾಗೂ ಅಸ್ಪಷ್ಟ ಸುದ್ದಿಗಳು ಜೈಲಿಗೆ ತಲುಪುತ್ತಿದ್ದವು. ಟಿ. ಸುನಂದಮ್ಮನವರನ್ನು ನೋಡಲು ಬಂದವರ ಮೂಲಕ ತಮ್ಮ ಮನೆಗೆ ಪತ್ರ ಕಳುಹಿಸಿದ್ದ ಬಗ್ಗೆ ಪತಿಯವರು ಸೆರೆಮನೆಗೆ ಯಾವಾಗ ಬಂದು ಭೇಟಿಯಾಗುವರು ಎಂಬ ಕಾತುರತೆಯಿಂದ ಕಾಯುತ್ತಿರುವ ಬಗ್ಗೆ ದಾಖಲಿಸಿದ್ದಾರೆ.

ಜೈಲಿನಲ್ಲಿ ಕಾವಲುಗಾರ್ತಿಯಾಗಿದ್ದ ದೇವಮ್ಮನಿಗೆ ಟಿ. ಸುನಂದಮ್ಮನವರು 'ನಮ್ಮ ಕಾಗದವನ್ನು ವಿಳಾಸದಾರರಿಗೆ ತಲುಪಿಸು ಇಲ್ಲಿಂದ ತಪ್ಪಿಸಿಕೊಳ್ಳಲು ಸಹಾಯ ಮಾಡು' ಎಂದು ಕೇಳಿದರು. ದೇವಮ್ಮ 'ನನ್ನ ಹತ್ತಿರ ಬೀಗದ ಎಸಳು ಇಲ್ಲ. ನೀವುಗಳು ತಪ್ಪಿಸಿಕೊಂಡರೆ ನನ್ನ ಕೆಲಸಕ್ಕೆ ಮಣ್ಣು ಬೀಳುತ್ತದೆ' ಎಂದು ಹೇಳಿದ ಬಗ್ಗೆ ದಾಖಲಿಸಿದ ಲಕ್ಷಮ್ಮ ತಾವು ವಯಸ್ಕರ ಶಿಕ್ಷಣ ಸಮಿತಿಯಲ್ಲಿ ಕೆಲಸ ಮಾಡುತ್ತಿದ್ದ ಬಗ್ಗೆ 'ಬೆಳಕು' ಪತ್ರಿಕೆಯ ಸಂಪಾದಕಿಯಾಗಿ ಅನಕ್ಷರಸ್ಥ ಮಹಿಳೆಯರಿಗೆ ಅಕ್ಷರ ಕಲಿಸುವ ತಮ್ಮ ಚಪಲದ ಬಗ್ಗೆ ವಿವರಗಳನ್ನು ದಾಖಲಿಸಿದ್ದಾರೆ.

ವಯಸ್ಕರಿಗೆ ಅಗತ್ಯವಾದ ಅರಿವು ಮೂಡಿಸುವ ಕಾರ್ಯವನ್ನು ಪ್ರಾರಂಭಿಸಿ ಅಕ್ಷರ ಕಲಿಸುವ ಕಾರ್ಯವನ್ನು ಸೆರೆಮನೆಯಲ್ಲಿ ಪ್ರಾರಂಭಿಸಿದ ಲಕ್ಷಮ್ಮನವರು ಶ್ರೀರಾಮಚಂದ್ರನ ಕತೆಯನ್ನು ಹೇಳುವ ಮೂಲಕ ಲೆಕ್ಕದ ಬಗ್ಗೆ ಅರಿವು ಮೂಡಿಸುತ್ತಾರೆ. ದಶರಥನಿಗೆ ಎಷ್ಟು ಜನ ಹೆಂಡತಿಯರು? ರಾವಣನಿಗೆಷ್ಟು ತಲೆ? ಎಷ್ಟು ಕೈ ಇದೆ? ಎಂದು ಕಾವಲುಗಾರ್ತಿ ದೇವಮ್ಮನಿಗೆ ಕೇಳಿದರು. ದೇವಮ್ಮ ಸಮುದ್ರದ ವಿಶಾಲತೆ ಬಗ್ಗೆ, ಏರೋಪ್ಲೇನ್ ಹಾರಾಟದ ಬಗ್ಗೆ, ಮಾತಾಡೋ ಬಯೋಸ್ಕೋಪ್ ಬಗ್ಗೆ ಹೇಳುತ್ತಾ ಇಂಗ್ಲಿಷ್‌ನವರಿಗೆ ಎಲ್ಲ ಬರುತ್ತದೆ. ಆದರೆ ನಮ್ಮ ಹಾಗೆ ಚಕ್ರದ ಮೇಲೆ ಮಡಕೆ ಮಾಡಲು ಬರುವುದಿಲ್ಲ ಎಂದು ಭಾರತದ ಗೃಹ ಕೈಗಾರಿಕೆಯ ವೈಶಿಷ್ಟ್ಯತೆ ಬಗ್ಗೆ ದಿನಚರಿಯಲ್ಲಿ ದಾಖಲಿಸಿದ್ದಾರೆ. ದೇವಮ್ಮ ತನ್ನ ಹೆಸರನ್ನು ಬರೆಯಲು ಕಲಿತುಕೊಂಡ ಬಗ್ಗೆ ಹಾಗೂ ತನ್ನ ತಂದೆತಾಯಿಗಳು ತನಗೆ ಅಕ್ಷರ ಕಲಿಸದ ಬಗ್ಗೆ ಅಸಮಾಧಾನವನ್ನು ವ್ಯಕ್ತಪಡಿಸಿದ ಬಗ್ಗೆ ವಿವರಗಳನ್ನು ದಾಖಲಿಸಿದ್ದಾರೆ.[೯]

ಲಕ್ಷಮ್ಮನವರೊಂದಿಗೆ ಸೆರೆಮನೆಯಲ್ಲಿ ಎಂ.ಎಲ್.ಸಿ. ಆಗಿದ್ದ ಕಮಲಾದೇವಿ ಭೀಮರಾವ್ ಕೂಡ ಇದ್ದರೆಂದು ಉಲ್ಲೇಖಿಸಿದ್ದಾರೆ. ಸೆರೆಮನೆಯ ಅಧಿಕಾರಿ ಅಮೀರಾಲಿ ತನ್ನ ಪತ್ನಿ ಶಿಕ್ಷಕಿಯಾಗಿದ್ದ ಬಗ್ಗೆ, ಪರ್ಷಿಯನ್, ಉರ್ದು ಭಾಷೆ ಮಾತನಾಡುತ್ತಿದ್ದ ಬಗ್ಗೆ, ಮದುವೆಯಾದ ನಂತರ ಕೆಲಸ ಬಿಟ್ಟು ಸಂಸಾರವನ್ನು ನೋಡಿಕೊಂಡು ಉತ್ತಮ ಪುಸ್ತಕಗಳನ್ನು ಓದುತ್ತಿದ್ದ ಆಕೆ ತನ್ನ ಮಕ್ಕಳನ್ನು ಪುಸ್ತಕಪ್ರೇಮಿಗಳನ್ನಾಗಿ ಮಾಡಿದ್ದ ಬಗ್ಗೆ, ಆತನ ಮಗ ರಂಜಾನ್ ಹಬ್ಬದಲ್ಲಿ ತನ್ನ ಮನೆಗೆ ಇತರ ಹಿಂದೂ ಗೆಳೆಯರನ್ನು ಕರೆತರುತ್ತಿದ್ದ ಬಗ್ಗೆ ಲಕ್ಷಮ್ಮ ಮತ್ತು ಸುನಂದಮ್ಮನವರೊಡನೆ ಹೇಳಿಕೊಂಡಿದ್ದರು. ಹೆಂಗಸಿಗೂ ಗಂಡಸಿಗೂ ಒಂದೇ ಬಗೆಯ ಶಿಕ್ಷಣ ಕೊಟ್ಟರೆ ಅವಳು ತನ್ನ ವೈಶಿಷ್ಟ್ಯ ಕಳೆದುಕೊಳ್ಳುವಳು. ಅವಳು ದೇವತೆಯಾಗಬಲ್ಲಳು ಎಂದು ಹೇಳಿ ಲಿನ್‌ಯಾನ್‌ಟಾಂಗ್‌ನ ಬರಹಗಳನ್ನು ಹೊಗಳಿ ಉಲ್ಲೇಖಿಸಿ ಮಾತನಾಡುತ್ತಿದ್ದ ಅಮೀರಾಲಿಯವರ ಬಗ್ಗೆ ತಮ್ಮ ದಿನಚರಿಯಲ್ಲಿ ದಾಖಲಿಸಿದ್ದಾರೆ. ಸುನಂದಮ್ಮನವರು ಬರೇ ಓದಿನಿಂದ ಪಠಣದಿಂದ ಏನು ಬಂತು, ಓದಿದ್ದನ್ನು ಮನನ ಮಾಡಿಕೊಂಡು ಅದರಿಂದ ಉತ್ಪನ್ನವಾಗುವ ಉದಾತ್ತ ಭಾವನೆಯನ್ನು ಅಳವಡಿಸಿಕೊಳ್ಳಬೇಕು. ಅದರಂತೆ ನಡೆದುಕೊಳ್ಳಬೇಕು. ಬರೀ ಓದುವುದರಿಂದ ಏನು ಪ್ರಯೋಜನವಿಲ್ಲ ಎಂಬುದಾಗಿ ಶಿಕ್ಷಣದ ಬಗೆಗಿನ ತಮ್ಮ ಭಾವನೆಯನ್ನು ವ್ಯಕ್ತಪಡಿಸಿದ್ದಾರೆಂದು ಲಕ್ಷಮ್ಮ ತಮ್ಮ ದಿನಚರಿಯಲ್ಲಿ ಉಲ್ಲೇಖಿಸಿದ್ದಾರೆ.

ಮಹಾರಾಜರು 'ಜವಾಬ್ದಾರಿ ಸರ್ಕಾರ ನಮ್ಮ ಗುರಿಯಾಗಿದೆ. ನಿಪುಣರಾದ ದಿವಾನರ ಸಲಹೆ ದೊರೆತಿದೆ. ಕಾಲವಿಳಂಬ ಅನಿವಾರ್ಯವಾಗಿದ್ದು, ಈಗಿನ ಸಲಹಾ ಸಮಿತಿ ಅವಶ್ಯಕವೆಂದು ಹಾಗೂ ವಿವಿಧ ಪಂಗಡಗಳು ಮತ್ತು ಸಮಿತಿಯೊಂದಿಗೆ ಸಮಾಲೋಚನೆ ನಡೆಸುತ್ತಿದೆ. ಈಗ ಶಾಂತಿ ಸಮಾಧಾನ ಬೇಕಾಗಿದೆ' ಎಂದು ಘೋಷಿಸಿದ ಸುದ್ದಿ ತಿಳಿದು

ಜೈಲಿನಲ್ಲಿದ್ದ ಲಕ್ಷಮ್ಮ ಹಾಗೂ ಸುನಂದಮ್ಮನವರ ಉತ್ಸಾಹ ಹೆಚ್ಚಿ ಸಂತೋಷಪಟ್ಟರು. ಜೈಲಿನ ಅಧಿಕಾರಿ ಅಮೀರಾಲಿಯವರು 'ನಾಳೆ ರೆಡ್ಡಿಯವರಿಗೆ ಜವಾಬ್ದಾರಿ ಸರ್ಕಾರ ರಚಿಸಲು ಆಹ್ವಾನ ನೀಡಲಿದ್ದು ಅವರು ಕಾರ್ಯನಿರ್ವಾಹಕ ಸಮಿತಿಯೊಂದಿಗೆ ಸಮಾಲೋಚಿಸಿ, ಅನಂತರ ನಿಮ್ಮೆಲ್ಲರ ಬಿಡುಗಡೆಯಾಗುವುದು. ನೀವು ನಡೆಸಿದ ಸತ್ಯಾಗ್ರಹ ಕಾಲೋಚಿತವಾದದ್ದು' ಎಂದು ಹೇಳಿದರು. ಲಕ್ಷಮ್ಮನವರ ಪತಿಯ ಮೇಲಾಧಿಕಾರಿಯೊಬ್ಬರು ಅವರ ನಾಲ್ಕು ಜನ ಮಕ್ಕಳನ್ನು ಸೆರೆಮನೆಗೆ ಕರೆತಂದು ಭೇಟಿ ಮಾಡಿಸಿದರು. ಲಕ್ಷಮ್ಮನವರು ತಮ್ಮ ಮಗಳು ಶಾಂತಿ, ಜೈಲಿನ ಅಧಿಕಾರಿಯೊಂದಿಗೆ ಯಾವುದೇ ಭಯವಿಲ್ಲದೆ 'ನನ್ನನ್ನು ಈ ಜೈಲಲ್ಲೇ ಕೂಡಿಹಾಕ್ತೀರಾ? ಹಾಕಿ ನನಗೇನೂ ಭಯವಿಲ್ಲ' ಎಂಬ ದಿಟ್ಟ ಉತ್ತರ ನೀಡಿದ ಮಗಳ ಬಗ್ಗೆ ಹೆಮ್ಮೆ ವ್ಯಕ್ತಪಡಿಸಿದ್ದರು. ಸಂಜೆ ಜೈಲರ್ ಅವರು ಹತ್ತು ವರ್ಷದ ಮಗನ ಕೈಲಿ ಟೀ ಹಾಗೂ ಇಂಡಿಯನ್ ಎಕ್ಸ್‌ಪ್ರೆಸ್ ದಿನಪತ್ರಿಕೆ ಕಳುಹಿಸಿದ್ದು ಆತನಿಗೆ 'ಭಾರತ್ ಮಾತಾ ಕೀ ಜೈ' ಎನ್ನುವಂತೆ ತಿಳಿಸಿದರು. ಬಾಯಿತನಕ ಬಂದ ಮಾತು ಗಂಟಲಿನಿಂದ ದನಿಯಾಗಿ ಹೊರಡಲಿಲ್ಲ ಎಂಬ ಮಾಹಿತಿಯನ್ನು ಉಲ್ಲೇಖಿಸಿದ್ದಾರೆ.

ಲಕ್ಷಮ್ಮನವರು ಮಕ್ಕಳ ಭೇಟಿ ಹಾಗೂ ಮಹಾರಾಜರ ನಿರ್ಧಾರದಿಂದ ಮನಸ್ಸಿನಲ್ಲಿ ಹಬ್ಬದ ಸಂತೋಷ, ಮಹಾರಾಜರು ಒಂದು ಮೆಟ್ಟಿಲು ಇಳಿದರು, ಜನ ಗೆದ್ದರು ಎನ್ನುವ ಭಾವನೆಯನ್ನು ತಮ್ಮ ದಿನಚರಿಯಲ್ಲಿ ವ್ಯಕ್ತಪಡಿಸಿದ್ದಾರೆ.

ದಿನಾಂಕ ೦೯.೦೯.೧೯೪೭ರಂದು ಲಕ್ಷಮ್ಮನವರ ಭಾವನವರು ಬಂದು ಯೋಗಕ್ಷೇಮ ವಿಚಾರಿಸಿ 'ಚಿಯರ್ ಅಪ್' ಎಂದು ಹೇಳಿ ಹೋದ ಬಗ್ಗೆ, ಚೆಂಗಲರಾಯ ರೆಡ್ಡಿಯವರನ್ನು ಬಲಾತ್ಕಾರದಿಂದ ಚಿಕ್ಕಮಗಳೂರಿಗೆ ಕರೆದುಕೊಂಡು ಹೋದ ಬಗ್ಗೆ, ರಾಷ್ಟ್ರನಾಯಕರಾದ ಜಯಪ್ರಕಾಶ್ ನಾರಾಯಣ್ ಅವರು ರೈಲ್ವೆ ಮುಷ್ಕರದ ಇತ್ಯರ್ಥಕ್ಕೆ ಬರುವ ಬಗ್ಗೆ, ಡಾಕ್ಟರ್ ಬಂದು ಆರೋಗ್ಯ ವಿಚಾರಿಸಿದ ಬಗ್ಗೆ ತಮ್ಮ ದಿನಚರಿಯಲ್ಲಿ ದಾಖಲಿಸಿದ್ದಾರೆ.

ದಿನಾಂಕ ೧೦.೦೯.೧೯೪೭ ರಂದು ಸುನಂದಮ್ಮನವರ ಮನೆಯಿಂದ ಗೋಕುಲಾಷ್ಟಮಿ ಪ್ರಯುಕ್ತ ತಿಂಡಿಬುಟ್ಟಿ ಮತ್ತು ಕಾಗದ ಬಂದಿತ್ತು. ಲಕ್ಷಮ್ಮನವರಿಗೆ ಮನೆ ಮತ್ತು ಮಕ್ಕಳ ನೆನಪು ಉಂಟಾದ ಬಗ್ಗೆ ದಿನಚರಿಯಲ್ಲಿ ದಾಖಲಿಸಿದ್ದಾರೆ. ಸುನಂದಮ್ಮನವರು 'ನನ್ನ ಮಕ್ಕಳನ್ನು ನೋಡಬೇಕು' ಎಂದಾಗ ತಮ್ಮ ಸ್ವಂತ ಮಕ್ಕಳಿಲ್ಲದ ಅವರನ್ನು 'ಯಾವ ಮಕ್ಕಳು?' ಎಂದು ಲಕ್ಷಮ್ಮನವರು ಕೇಳಿದರು. ನೆರೆಮನೆಯ ಮಕ್ಕಳು, ಇಬ್ಬರು ಹುಡುಗರು, ಅವರು ಬೇರೆ ಜನಾಂಗಕ್ಕೆ ಸೇರಿದವರಾದರು ಧೈರ್ಯವಂತ ಮತ್ತು ತುಂಟ ಹುಡುಗರು. ಅವರೇ ನನ್ನ ಮಕ್ಕಳು ಎಂದು ಸುನಂದಮ್ಮನವರು ಹೇಳಿದ್ದು ಅವರ ಮಾತೃವಾತ್ಸಲ್ಯ ಹಾಗೂ ಪ್ರೀತಿಯನ್ನು ತಮ್ಮ ದಿನಚರಿಯಲ್ಲಿ ಲಕ್ಷಮ್ಮನವರು ಉಲ್ಲೇಖಿಸಿದ್ದಾರೆ.

ದಿನಾಂಕ ೧೧.೦೯.೧೯೪೭ ರಂದು ಸುನಂದಮ್ಮನವರು ದಾರದಲ್ಲಿ ಕಟ್ಟಿ ನೇತುಹಾಕಿದ್ದ ತಿಂಡಿಬುಟ್ಟಿಯ ದಾರವನ್ನು ಒಂದು ಚಿಕ್ಕ ಗುಬ್ಬಿ ಕಚ್ಚುತ್ತಿದ್ದು, ಗುಬ್ಬಿಯನ್ನು ಗದರಿಸಿದ ಸುನಂದಮ್ಮನವರು 'ಎ ಗುಬ್ಬಿ ಕಡ್ಡಿಯಷ್ಟು ಇದ್ದೀಯಾ ಹಿಚುಕಿ ಜೀವ ತೆಗೆಯಬಲ್ಲೆ ನಾನು, ನಿನಗೆಷ್ಟು ಧೈರ್ಯ ಹೋಗು' ಎಂದು ನುಡಿದರು. ಆದರೆ ಮಧ್ಯಾಹ್ನದ ಹೊತ್ತಿಗೆ ಚಿಕ್ಕ ಗುಬ್ಬಿ ತಿಂಡಿಬುಟ್ಟಿಯನ್ನು ಕಡಿದು ಕೆಳಗೆ ಬೀಳಿಸಿತು. ಇಂತಹ ಚಿಕ್ಕ ಸಂಗತಿಗಳನ್ನು ತಮ್ಮ ದಿನಚರಿಯಲ್ಲಿ ದಾಖಲಿಸಿದ ಲಕ್ಷಮ್ಮನವರು ಸ್ವಾತಂತ್ರ್ಯ ಹೋರಾಟಕ್ಕೆ ತಮ್ಮ ಕಾಣಿಕೆ ಚಿಕ್ಕದಾದರೂ ಅದರ ಪರಿಣಾಮ ದೊಡ್ಡದೆಂಬ ಭಾವವನ್ನು ವ್ಯಕ್ತಪಡಿಸಿದ್ದಾರೆ.

ಆ ದಿನ ಚಂಗಲರಾಯರೆಡ್ಡಿಯವರನ್ನು ಚಿಕ್ಕಮಗಳೂರು ಸೆರೆಮನೆಗೆ ಹಾಗೂ ಭಾಷ್ಯಂ ರನ್ನು ಹಾಸನದ ಸೆರೆಮನೆಗೆ ವರ್ಗಾಯಿಸಿದರೆಂಬ ಸುದ್ದಿ ತಲುಪಿದ ಬಗ್ಗೆ ರಾಜ್ಯಾಂಗ ಸಲಹಾ ಸಮಿತಿಯ ಶಿಫಾರಸುಗಳನ್ನು ಪಕ್ಕದ ಬ್ಯಾರಕ್‌ನಲ್ಲಿದ್ದ ಯುವಕರು ಚರ್ಚಿಸುತ್ತಿದ್ದು ತಾತ್ಕಾಲಿಕ ಮಂತ್ರಿಮಂಡಲ ಏರ್ಪಾಡಾಗಬೇಕು ಎಂದು ತೀರ್ಮಾನಿಸುತ್ತಿದ್ದಾಗ ಕೆಲವು ಯುವಕರು 'ಇಂದು ಜವಾಬ್ದಾರಿ ಸರ್ಕಾರದ ಹೋರಾಟ ನಡೆಯುತ್ತಿದೆ, ನಾಳೆ ಕಾಂಗ್ರೆಸ್ ಮಂತ್ರಿಮಂಡಲ ಬಂದರೂ ಒಂದಲ್ಲ ಒಂದು ಕಾರಣಕ್ಕೆ ಸಮರ ಪ್ರಾರಂಭವಾಗುತ್ತದೆ. ಹೊಟ್ಟೆ ಬಟ್ಟೆಗಿಲ್ಲದವರೂ ದಂಗೆ ಹೂಡುತ್ತಾರೆ. ಮಾನವನ ಕತೆಯೇ ಹೀಗೆ' ಎಂದು ಚರ್ಚಿಸುತ್ತಿದ್ದರು. ಲಕ್ಷಮ್ಮನವರು ಇಂದು ಸ್ವಾತಂತ್ರ್ಯಕ್ಕೆ ಹೋರಾಡುವವರು ನಾಳೆ ಮೂಲಭೂತ ಹಕ್ಕುಗಳಿಗಾಗಿ ಹೋರಾಟ ನಡೆಸುತ್ತಾರೆ. ಹೋರಾಟ ನಿರಂತರ ಎಂಬುದನ್ನು ಉಲ್ಲೇಖಿಸಿದ್ದಾರೆ. ಕರ್ಫ್ಯೂ ಆದೇಶ ಬೆಳಗ್ಗೆ ೬ ರಿಂದ ಸಂಜೆ ೬ರವರೆಗೆ ಇದ್ದು ಒಂದು ವಾರದಿಂದ ಊರು ಸ್ಮಶಾನದಂತೆ ಮೌನವಾಗಿದೆ ಎಂಬ ಮಾತನ್ನು ಜೈಲಿನ ಅಧಿಕಾರಿಯವರು ಲಕ್ಷಮ್ಮನವರೊಡನೆ ಹಂಚಿಕೊಂಡಿದ್ದರು.

ದಿನಾಂಕ ೧೨.೦೯.೧೯೪೭ ರಂದು ತಮ್ಮ ದಿನಚರಿಯಲ್ಲಿ ಸಮಾಜದಲ್ಲಿ ಹೆಣ್ಣುಮಕ್ಕಳ ಬಗ್ಗೆ ಇರುವ ಭಾವನೆಯನ್ನು ದಾಖಲಿಸಿದ್ದಾರೆ. ಕಾಂಗ್ರೆಸ್ ಪಕ್ಷದ ಸಭೆಯಲ್ಲಿ ಪಕ್ಷದ ನಾಯಕತ್ವವನ್ನು ಯಾರು ವಹಿಸಬೇಕೆಂಬ ಪ್ರಶ್ನೆ ಬಂದಾಗ ರೆಡ್ಡಿಯವರ ಹೆಸರನ್ನು ಲಕ್ಷಮ್ಮನವರು ಅನುಮೋದಿಸಿದರು. ಇದರಿಂದ ಹಿರಿಯ ಕಾಂಗ್ರೆಸ್ಸಿಗರಿಗೆ ಅಸಮಾಧಾನವಾಗಿ 'ಈ ದಿನ ಬಂದ ಈ ಹೆಂಗಸಿಗೆಷ್ಟು ಪ್ರತಾಪ' ಎಂದು ಅವರು ಹೇಳುತ್ತಿದ್ದರು ಎಂಬ ಮಾತನ್ನು ಸುನಂದಮ್ಮನವರು ಹೇಳಿದಾಗ ಲಕ್ಷಮ್ಮನವರು ನಾನೆಷ್ಟೋ ಕಲಿಯಬೇಕಿದೆ ಎಂದು ಯೋಚಿಸಿದರು.

ಅಂದು ಇಬ್ಬರು ಮಹಿಳೆಯರು ಜೈಲಿಗೆ ಬಂದರು 'ನಮ್ಮ ಗಂಡಂದಿರು ಚಳವಳಿಯಲ್ಲಿ ಭಾಗವಹಿಸಿದ್ದಾರೆ. ನಮ್ಮದೇನು? ಮಾಂಗಲ್ಯಸೂತ್ರ ಗಟ್ಟಿ ಇದ್ದರೆ ಸಾಕು ಬಂದಿದ್ದೆಲ್ಲ ಬರಲಿ. ೫೦ ಜನ ಚಳವಳಿಗಾರರಿಗೆ ಒಬ್ಬ ಮುಸ್ಲಿಂ ಜನಾಂಗದವರು ಊಟ ತಯಾರು ಮಾಡಿಸಿದ್ದು

ಅದನ್ನು ಕಂಡ ಪೊಲೀಸರು ತಾವೇ ಉಂಡು ಚಳವಳಿಗಾರರಿಗೆ ಸಿಗದಂತೆ ಮಾಡಿದರು. ಪೊಲೀಸರು ಆನೆ ಕೈಯಲ್ಲಿ ನಮ್ಮನ್ನು ತುಳಿಸ್ತೀವಿ ಅಂದಾಗ ತುಳಿಸಿರಿ ನಮ್ಮ ಗಂಡಂದಿರು ಇದ್ದಾರೆ. ಹನ್ನೆರಡು ವರ್ಷ ವಯಸ್ಸಿನ ಹುಡುಗರೆಲ್ಲ ಚಳವಳಿಯಲ್ಲಿ ಭಾಗವಹಿಸಿದ್ದಾರೆ. ಅವರ ಧೈರ್ಯ ನೋಡಿ ನಾನು ಹೋಗ್ತೀನಿ ಎಂದಾಗ ನಮ್ಮ ತಾಯಿಯವರು ಗಂಡ ಮನೆ ಮಕ್ಕಳೊಂದಿಗೆ ಯಾವಾಗಲೂ ಇರುವುದು ಇದ್ದೇ ಇರುತ್ತದೆ ಹೋಗಿ ಚಳವಳಿಯಲ್ಲಿ ಭಾಗವಹಿಸು ಎಂದು ಆಶೀರ್ವಾದ ಮಾಡಿ ಕಳುಹಿಸಿದರು. ಅದಕ್ಕೆ ಬಂದೆವು' ಎಂಬ ಮಾತನ್ನು ಹೆಣ್ಣುಮಕ್ಕಳು ಹೇಳಿದ್ದಾರೆಂದು ದಿನಚರಿಯಲ್ಲಿ ದಾಖಲಿಸಿದ್ದಾರೆ.

ಒಂದು ಚೀಲ, ಎರಡು ಸೀರೆ, ಒಂದು ಹೊದಿಕೆಯನ್ನು ತಂದಿರುವ ಅವರಲ್ಲಿ ಒಬ್ಬ ಹೆಣ್ಣುಮಗಳು ಮುಂದುವರಿದ ಜನಾಂಗ, ಇನ್ನೊಬ್ಬರು ಹಿಂದುಳಿದ ಜನಾಂಗ. ಜಾತ್ಯಾಂಧತೆ ದೂರಗಾಣಿಸಿ ಒಟ್ಟಿಗೆ ಬಂದಿದ್ದಾರೆ. ಜೈಲಿನಲ್ಲಿ ಮತ್ತು ಚಳವಳಿಯಲ್ಲಿ ಜಾತ್ಯಾತೀತ ಮನೋಭಾವವಿದ್ದು ಎಲ್ಲರೂ ಒಟ್ಟಿಗೆ ಭಾಗವಹಿಸಿದ್ದಾರೆ ಎಂಬ ನಿಲುವನ್ನು ಲಕ್ಷಮ್ಮನವರು ದಾಖಲಿಸಿದ್ದಾರೆ. ಲಕ್ಷಮ್ಮನವರು ಸೆರೆಮನೆಗೆ ಬಂದ ಮಹಿಳೆಯರಿಗೆ **'ನಾಳೆ ಮಹಿಳೆಯರು ತಮ್ಮ ಹಕ್ಕುಗಳಿಗೋಸ್ಕರ ಜಾಥಾ ಹೋರಾಟ ಮಾಡಬೇಕಾಗಬಹುದು. ಆಗ ನಿಮ್ಮ ಗಂಡಂದಿರೇ ನಿಮ್ಮನ್ನು ತಡೆಯಬಹುದು ಬರ್ತೀರಾ?'** ಎಂಬ ಪ್ರಶ್ನೆಯನ್ನು ಕೇಳಿದಾಗ ಅವರು ಬರ್ತೀವಿ ಎಂದು ಉತ್ತರ ನೀಡಿದರು. ಮಹಿಳೆಯರ ಹಕ್ಕುಗಳ ಬಗ್ಗೆ ಮಹಿಳೆಯರ ಏಳಿಗೆ ಬಗ್ಗೆ ಅಂದಿನ ಕಾಲದಲ್ಲಿಯೇ ಆಲೋಚಿಸಿದ ಸ್ತ್ರೀವಾದಿ ಚಿಂತಕಿ ಲಕ್ಷಮ್ಮ ಎಂದು ಅವರ ದಿನಚರಿಯಿಂದ ತಿಳಿದುಬರುತ್ತದೆ.[೧೦]

ದಿನಾಂಕ ೧೩.೦೯.೧೯೪೭ ರಂದು ಬಿ.ಬಿ. ಅಪ್ಪಾದೊರೆ ಮೊದಲಿಯಾರ್ ಸೆರೆಮನೆಗೆ ಭೇಟಿ ನೀಡಿ ಲಕ್ಷಮ್ಮ ಅವರ ಯೋಗಕ್ಷೇಮ ವಿಚಾರಿಸಿದರು. ಸೆರೆಮನೆ ಅಧಿಕಾರಿ ಸೆರೆಮನೆಯಲ್ಲಿ ನೀರಿನ ತೊಂದರೆ ಬಗ್ಗೆ ತಿಳಿಸಿದಾಗ ಸರಿಪಡಿಸುವುದಾಗಿ ತಿಳಿಸಿದರು. ಸೆರೆಮನೆಯ ಅಧಿಕಾರಿ ಅಮೀರಾಲಿಯವರು ತಮ್ಮ ಸೇವಾ ಅವಧಿಯಲ್ಲಿ ನಡೆದ ಹಿಂದಿನ ಅನುಭವಗಳನ್ನು ಹಂಚಿಕೊಳ್ಳುತ್ತಾ ಹಾಸನದಲ್ಲಿ ನಡೆದ ಘಟನೆಯನ್ನು ತಿಳಿಸಿದ್ದಾರೆ. ಸತ್ಯಾಗ್ರಹ ನಡೆದಾಗ ಹುಡುಗರೆಲ್ಲರೂ ಜೈಲು ಸುತ್ತ ನೆರೆದಿದ್ದಾಗ ಅವರನ್ನು ಅಲ್ಲಿಂದ ಚದುರಿಸಲು ಬಂದ ಪೊಲೀಸ್ ವ್ಯಾನನ್ನು ಅಮೀರಾಲಿಯವರು ವಾಪಸ್ಸು ಕಳುಹಿಸಿದರು. ಸತ್ಯಾಗ್ರಹಿ ಹುಡುಗರು ಜೈಲಿನ ಒಳಗೆ ಇರುವ ಮುಖಂಡರನ್ನು ಭೇಟಿ ಮಾಡಲು ಕೇಳಿದಾಗ ನಿರಾಕರಿಸಿದ ಅಮೀರಾಲಿಗೆ ಹುಡುಗರು ಬಲವಂತದಿಂದ ಒಳಗೆ ಹೋಗುತ್ತೇವೆ ಎಂದು ಹೇಳಿದರು. ಆದರೆ ಅಮೀರಾಲಿಯವರು ಅದಕ್ಕೆ ಅವಕಾಶ ನಿರಾಕರಿಸಿದಾಗ ಜೈಲಿನ ಹೊರಗೆ ಸತ್ಯಾಗ್ರಹಿ ಹುಡುಗರು ಜೈಕಾರ ಹಾಕಿದರೆ ಒಳಗೆ ಬಂಧಿತ ಮುಖಂಡರು ಜೈಕಾರ ಹಾಕುತ್ತಾರೆ. ಅಮೀರಾಲಿಯವರು 'ಇದು ದೇವ ಇಚ್ಛೆ ಅಥವಾ ಕಾಂಗ್ರೆಸ್ಸಿನವರ ಪುಣ್ಯಬಲ' ಎಂದರು.

ಈ ವಿಷಯವನ್ನು ತಮ್ಮ ದಿನಚರಿಯಲ್ಲಿ ದಾಖಲಿಸಿದ ಲಕ್ಷಮ್ಮನವರು ಸರ್ಕಾರಿ ಅಧಿಕಾರಿಗಳು ಕೂಡ ಪರೋಕ್ಷವಾಗಿ ಚಳವಳಿಯ ಪರ ಇದ್ದರೆಂಬ ಭಾವವನ್ನು ವ್ಯಕ್ತಪಡಿಸಿದ್ದರು. ೩೬ ಗಂಟೆಯಿಂದ ಹೊರಗೆ ಕರ್ಫ್ಯೂ ಇರುವುದರಿಂದ ಯಾವುದೇ ಅವಶ್ಯಕ ವಸ್ತುಗಳು ದೊರೆಯುತ್ತಿಲ್ಲ. ಅಧಿಕಾರಿಗಳಿಗೆ ಮಾತ್ರ ಹೊರಗೆ ಸಂಚರಿಸಲು ಪಾಸಿದ್ದು, ಜನ ಸಾಮಾನ್ಯರು ಓಡಾಟ ಇಲ್ಲದೆ ಸ್ಮಶಾನದ ರೀತಿ ಇದೆ. ಹೊರಗೆ ಒಂದು ಜೈಲಾಗಿದೆ ಎಂದು ಅಮೀರಾಲಿಯವರು ಹೇಳಿದರು. ಲಕ್ಷಮ್ಮನವರ ಪತಿಯವರು ತಮ್ಮ ಪತ್ನಿಯನ್ನು ಭೇಟಿ ಮಾಡಲು ಬಂದಿದ್ದರು. 'ಹಣ ಬೇಕೆ?' ಎಂದು ಪತ್ನಿಯನ್ನು ಕೇಳಿದರು. ಅದಕ್ಕೆ ಅವರು ಯಾತಕ್ಕಾಗಿ ಹಣ? ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆ ಬಂದಿದ್ದರೆ ಚೆನ್ನಾಗಿತ್ತು. ಆಗೀಗ ಕಣ್ಣು ತಪ್ಪಿಸಿ ಪತ್ರಿಕೆ ಪಡೆಯುತ್ತಿದ್ದೇವೆ ಎಂದು ಹೇಳಿದರು. ಆ ದಿನ ಸಿಕ್ಕಾಪಟ್ಟೆ ಮಳೆ ಬಂದು ಒಂದು ರೀತಿ ತೃಪ್ತಭಾವ ಎಂದು ದಾಖಲಿಸಿರುವ ಲಕ್ಷಮ್ಮ ಪತಿಯನ್ನು ಭೇಟಿ ಮಾಡಿದ ಭಾವುಕ ಕ್ಷಣಗಳ ಬಗ್ಗೆ ದಾಖಲಿಸಿದ್ದಾರೆ. ಎಲ್ಲಾ ಭಾವನೆಗಳನ್ನು ಅಡಗಿಸಿಟ್ಟುಕೊಂಡ ಪತಿಯವರು ಮೈಸೂರಿನಲ್ಲಿರುವ ನಾಲ್ಕು ಮಕ್ಕಳ ಕ್ಷೇಮಸಮಾಚಾರದ ಬಗ್ಗೆ ತಿಳಿಸಿ ಧಾರವಾಡದಲ್ಲಿ ಓದುತ್ತಿರುವ ಹಿರಿಯ ಮಗನಿಂದ ಯಾವುದೇ ಪತ್ರ ಬಂದಿಲ್ಲವೆಂದು ತಿಳಿಸಿದಾಗ ಮಗನನ್ನು ನೆನೆಸಿಕೊಂಡ ಲಕ್ಷಮ್ಮನವರು ಮನಸ್ಸಿನಲ್ಲಿ ಉಂಟಾದ ಭಾವನೆಗಳನ್ನು ಮುಚ್ಚಿಟ್ಟು ಕರ್ತವ್ಯದ ಕರೆಗೆ ಓಗೊಟ್ಟರು.

ದಿನಾಂಕ ೧೪.೦೯.೧೯೪೭ ರಂದು ನಡೆದ ಹುಡುಗಿಯರ ಜಾಥಾ ಹಲವಾರು ಜನರ ಬಂಧನ ಕರ್ಫ್ಯೂ ಅದನ್ನು ಮೀರಿದರೆ ಮರಣ ಶಿಕ್ಷೆ ಎನ್ನುವ ಸುದ್ದಿಯನ್ನು ಪಡೆದ ಬಗ್ಗೆ ರಾತ್ರಿ ನಾಲ್ವರು ಮಹಿಳೆಯರು ಬಂಧನವಾಗಿ ಸೆರೆಮನೆಗೆ ಆಗಮಿಸಿದ ಬಗ್ಗೆ ತಮ್ಮ ದಿನಚರಿಯಲ್ಲಿ ದಾಖಲಿಸಿದ್ದಾರೆ. ಅವರಲ್ಲಿ ಕಾವೇರಿಬಾಯಿ, ಕಾಂತಿಲಾಲ್ ಗಾಂಧಿಯ ಪತ್ನಿ ಸರಸ್ವತಿ, ಭಾಗೀರತಿಬಾಯಿ ಹಾಗೂ ಧರ್ಮಾಂಭ ಎನ್ನುವ ತಮಿಳರ ಯುವತಿಯಾಗಿದ್ದು ಕಾವೇರಿಬಾಯಿ ಹಾಗೂ ಸರಸ್ವತಿ, ಎಂ.ಆರ್. ಲಕ್ಷಮ್ಮನವರ ಪರಿಚಿತರಾಗಿದ್ದರು. ಅವರ ಬಳಿ ಇದ್ದ ಚಪಾತಿ ಬೆಣ್ಣೆ ಸಕ್ಕರೆಯನ್ನು ಹಂಚಿ ತಿಂದು ಭಜನೆಯಲ್ಲಿ ತೊಡಗಿಕೊಂಡರು. ಹೊರಗಿನಿಂದ ಹುಡುಗರು ಜೈಕಾರ ಹಾಕಿದರು. ಮಹಿಳಾ ಬ್ಯಾರಕಿನಲ್ಲಿದ್ದ ಮಹಿಳೆಯರು ಜೈಕಾರ ಹಾಕಿದರು. ಮಹಿಳೆಯರು ತಮ್ಮ ಕಷ್ಟಕಾರ್ಪಣ್ಯಗಳ ಬಗ್ಗೆ ಮಾತನಾಡಿಕೊಳ್ಳುವುದರ ಜೊತೆಗೆ ಚಳವಳಿಯ ಬಗ್ಗೆ ಒಬ್ಬ ಪ್ರಸಿದ್ಧ ಸಾಹಿತಿ ತೋರಿದ ಅನಾದರ ಬಗ್ಗೆ ಲಕ್ಷಮ್ಮನವರು ದಾಖಲಿಸಿದ್ದರು. ನಿಜಲಿಂಗಪ್ಪನವರನ್ನು ಬಂಧಿಸಿದ ಬಗ್ಗೆ, ಮರಿಯಪ್ಪನವರು ಬಂದು ಮಹಿಳಾ ಸತ್ಯಾಗ್ರಹಿಗಳಿಗೆ ಧೈರ್ಯ ಹೇಳಿ ಹೋದರು. ಕಾವೇರಿಬಾಯಿಯವರು ಜೈಲಿನಲ್ಲಿ ಕೂಡ ಶಿಸ್ತಾಗಿ ಇರುವ ಬಗ್ಗೆ, ಮತ್ತೊಬ್ಬ ಸತ್ಯಾಗ್ರಹಿ ಸುಬ್ಬಮ್ಮ ಜೋಯಿಸರ ಆಗಮನದ ಬಗ್ಗೆ ಮಾಹಿತಿಗಳನ್ನು ದಾಖಲಿಸಿದ್ದಾರೆ.[೧೧]

ದಿನಾಂಕ ೧೫.೦೯.೧೯೧೭ ರಂದು ನಿಜಲಿಂಗಪ್ಪನವರನ್ನು ಬಂಧಿಸಿ ಬೆಂಗಳೂರಿಗೆ ಒಯ್ದರೆಂದು ಹೈದರಾಬಾದಿನಲ್ಲಿ ನಡೆಯುತ್ತಿರುವ ಹಿಂಸಾಚಾರಕ್ಕಿಂತ ಹೆಚ್ಚಿನ ಹಿಂಸಾಚಾರ ಮೈಸೂರಿನಲ್ಲಿ ನಡೆಯುತ್ತಿದೆ ಎಂದು ಮರಿಯಪ್ಪನವರು ಮತ್ತು ನ. ಭದ್ರಯ್ಯನವರು ಭೇಟಿ ಮಾಡಿದಾಗ ನೊಂದುಕೊಂಡಿದ್ದರು. ಅಗ್ಗದ ಪ್ರಚಾರಕ್ಕಾಗಿ ಸತ್ಯಾಗ್ರಹ ಮಾಡುವ ಬಗ್ಗೆ, ಹೆಣ್ಣು ಮಕ್ಕಳು ಮರ್ಯಾದೆಗೆ ಅಂಜಿಕೊಳ್ಳುವುದರ ಬಗ್ಗೆ ಸತ್ಯಾಗ್ರಹದಲ್ಲಿ ಹೆಣ್ಣುಮಕ್ಕಳಿಗೆ ಮಾನಭಂಗವಾಗುವಂತಹ ಪರಿಸ್ಥಿತಿ ಬಂದರೆ ಏನು ಮಾಡಬೇಕು? ಸ್ತ್ರೀಜನ್ಮ ಕೆಟ್ಟದ್ದು ಎಂದರೆ, ಕೆಲವರು ಸ್ತ್ರೀಜನ್ಮ ಪವಿತ್ರವಾದದ್ದು, ದೇಶಕ್ಕೋಸ್ಕರ ಮಾನ ಹೋದರೂ ಚಿಂತೆ ಇಲ್ಲ ಎನ್ನುವವರು ಕೆಲವರು, ಕಾವೇರಿಬಾಯಿ ಬೆಳಗೆದ್ದು ಶಿಸ್ತಾಗಿ ಎಲ್ಲರನ್ನೂ ಏಳಿಸಿ ಕಸ ಗುಡಿಸಿ, ಸಫಾಯಿ ಕೆಲಸವನ್ನು ನಾವೇ ಮಾಡಿಕೊಳ್ಳಬೇಕು, ಕಾಲುಚಾಚಿ ಕೂರಬಾರದು ಎಂದು ಹೇಳಿದರು. ಬೇಸರ ಕಳೆಯಲು ಪಗಡೆ ಆಟ ಆಡೋಣ ಎಂದು ಇತರ ಮಹಿಳೆಯರು ಹೇಳಿದಾಗ 'ನಮ್ಮ ಸಹೋದರರು ರಕ್ತಪಾತ ಮಾಡಿ ಸಾವಿಗೆ ಗುರಿಯಾಗಿ ಸಂಕಟದಲ್ಲಿ ತೊಳಲುವಾಗ ನಮಗೆ ಪಗಡೆಯೇ? ನೀವು ನಿಜವಾದ ಸತ್ಯಾಗ್ರಹಿಗಳಲ್ಲ, ನಿಮ್ಮಲ್ಲಿ ಶಿಸ್ತಿಲ್ಲ, ನಿಮ್ಮಲ್ಲಿ ಭಯ, ಭಕ್ತಿ ಇಲ್ಲ, ಗಾಂಧೀಜಿ ತಮ್ಮ ಕಾರ್ಯ ತಾವು ಮಾಡಿಕೊಳ್ಳುವವರೇ ಸತ್ಯಾಗ್ರಹಿಗಳು' ಎಂದಿದ್ದಾರೆ ಎಂದು ಕಾವೇರಿಬಾಯಿಯವರು ಹೇಳಿದಾಗ 'ಬೆಳಗೆದ್ದು ಆರೋಗ್ಯ ಕೆಡಿಸಿಕೊಂಡರೆ ನಾಳೆ ನಮ್ಮ ಗತಿ ಏನು? ನಮ್ಮ ಶೌಚಾಲಯ ನಾವೇ ಸ್ವಚ್ಛ ಮಾಡಿಕೊಳ್ಳಲು ನಾವೇನು ಗಾಂಧೀಜಿಗಳೇ?' ಎನ್ನುವ ಅಭಿಪ್ರಾಯವನ್ನು ಕೆಲವು ಮಹಿಳೆಯರು ವ್ಯಕ್ತಪಡಿಸಿದರು. ಇವೆಲ್ಲವನ್ನು ದಾಖಲಿಸಿರುವ ಎಂ.ಆರ್. ಲಕ್ಷಮ್ಮನವರು 'ಕರ್ಮಯೋಗ ಮುಖ್ಯ ಇದರ ವಿವರಣೆ ಅವರವರಿಗೆ ಸೇರಿದ್ದು' ಎಂಬ ಭಾವವನ್ನು ವ್ಯಕ್ತಪಡಿಸುತ್ತಾ ಸತ್ಯಾಗ್ರಹಿಗಳಲ್ಲಿ ಇದ್ದ ಅಭಿಪ್ರಾಯಭೇದಗಳು, ಸತ್ಯಾಗ್ರಹಿಗಳ ಮೇಲೆ ಗಾಂಧೀಜಿಯವರ ಪ್ರಭಾವ ಇವೆಲ್ಲವನ್ನು ಸೂಕ್ಷ್ಮವಾಗಿ ಹೇಳಿದ್ದಾರೆ.[೧೨]

ದಿನಾಂಕ ೧೬.೦೯.೧೯೪೭ರಂದು ಹಿರಿಯಮಗನ ಬಗ್ಗೆ ಯೋಚಿಸಿದ ಲಕ್ಷಮ್ಮನವರು ಮೈಸೂರಿನಲ್ಲಿ ಮಳೆಯ ನಡುವೆಯೇ ಸತ್ಯಾಗ್ರಹಿಗಳು ಮಾಡುತ್ತಿರುವ ಹೋರಾಟದ ಬಗ್ಗೆ, ತುಮಕೂರಿನಲ್ಲಿ ನಡೆಯುತ್ತಿರುವ ಚಳವಳಿ ಹೈದರಾಬಾದಿನಲ್ಲಿ ಘೋರ ಪರಿಸ್ಥಿತಿ ಮತ್ತು ಭಾರತದ ತ್ರಿವರ್ಣಧ್ವಜ ಹೊಲಿದ ದರ್ಜಿಗೆ ಚಿತ್ರಹಿಂಸೆ ನೀಡುತ್ತಿರುವ ಬಗ್ಗೆ ಮಾಹಿತಿಯನ್ನು ದಾಖಲಿಸಿದ್ದಾರೆ. ಕಲ್ಕತ್ತಾದ ಬ್ಲಾಕ್ ಹೋಲ್‌ನ ಘಟನೆ ಪುನರಾವರ್ತನೆಯಾದಂತೆ ಇಲ್ಲಿ ನಡೆಯುತ್ತಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ದಿನಾಂಕ ೧೬.೦೯.೧೯೪೭ ರಂದು ಜೈಲಿನ ಅಧಿಕಾರಿ ಅಮೀರಾಲಿಯವರು ಬಂದು ಎಂ.ಆರ್. ಲಕ್ಷಮ್ಮನವರನ್ನು ಮತ್ತು ಸುನಂದಮ್ಮನವರನ್ನು ಬೆಂಗಳೂರಿನ ಕಾರಾಗೃಹಕ್ಕೆ ವರ್ಗಾಯಿಸಲಾಗಿದೆ ಎಂದು ತಿಳಿಸಿದಾಗ ತಮ್ಮ ವಸ್ತುಗಳನ್ನೆಲ್ಲಾ ಸಿದ್ಧಪಡಿಸಿಕೊಂಡು ಹೊರಡಲು ಸಿದ್ಧರಾದರು. ಮೈಸೂರಿನಿಂದ, ಮನೆಯಿಂದ, ಮಕ್ಕಳಿಂದ ಮತ್ತಷ್ಟು ದೂರ

ಹೋಗುವುದರ ಬಗ್ಗೆ ಬೇಸರವಾದರೂ ಅಖಾಡಕ್ಕೆ ಇಳಿದ ನಂತರ ಎಲ್ಲವನ್ನೂ ಅನುಭವಿಸಲೇಬೇಕೆಂಬ ಗಟ್ಟಿ ನಿರ್ಧಾರವನ್ನು ಮಾಡಿಕೊಂಡ ಲಕ್ಷಮ್ಮನವರು ಬೆಂಗಳೂರಿನ ಕೇಂದ್ರ ಕಾರಾಗೃಹಕ್ಕೆ ಬಂದರು.

ದಿನಾಂಕ ೧೭.೦೯.೧೯೪೭ ರಂದು ಮೈಸೂರಿನ ಜೈಲು ಚಿಕ್ಕ ಸ್ಥಳವಾದರೂ ಸೌಮ್ಯವಾಗಿತ್ತು. ಪಕ್ಕದ ಗಂಡಸರ ಜೈಲಿನಿಂದ ಮಾತುಕತೆಯ ಧ್ವನಿ ಭಜನೆಗಳು ಕೇಳುಬರುತ್ತಿತ್ತು. ತೊಂದರೆಗಳಾದಲ್ಲಿ ಮರಿಯಪ್ಪನವರು, ಮತ್ತಿತರ ಕಾಂಗ್ರೆಸ್ ಮುಖಂಡರು ಬಂದು ಬಗೆಹರಿಸುತ್ತಿದ್ದರು. ಊಟದ ವ್ಯವಸ್ಥೆ ಸಾಧಾರಣವಾಗಿದ್ದರೂ ಸಹನೀಯವಾಗಿತ್ತು. ಜೈಲು ಖೈದಿಗಳ ಗದ್ದಲವಿರುತ್ತಿರಲಿಲ್ಲ. ಆದರೆ ಬೆಂಗಳೂರು ಸೆರೆಮನೆ ವಿಸ್ತಾರವಾಗಿದ್ದು, ಅಪರಾಧಿಗಳಿಂದ ಅಸಹನೀಯ ಊಟದ ವ್ಯವಸ್ಥೆ ಹಾಗೂ ತಮ್ಮ ತಾತ್ವಿಕ ಅನುಭವಗಳನ್ನು ಸಹೃದಯತೆಯಿಂದ ವಿವರಿಸುತ್ತಿದ್ದ ಅಮೀರಾಲಿಯಂತಹ ಜೈಲಿನ ಅಧಿಕಾರಿಗಳು ಇರಲಿಲ್ಲ. ಲಕ್ಷಮ್ಮನವರು ಇಲ್ಲಿಯೂ ಕೂಡ ಪಠಣ, ಮನನ, ಭಜನೆ, ಪ್ರಾರ್ಥನೆಗಳಲ್ಲಿ ಕಾಲ ಕಳೆದರು. ಸುನಂದಮ್ಮನವರ ಆರೋಗ್ಯ ಕೆಟ್ಟಾಗ ಅವರನ್ನು ಉಪಚರಿಸಿದ ಲಕ್ಷಮ್ಮ 'ನಾನು ಮಾನವೀಯತೆಯಿಂದ ವರ್ತಿಸಿದ್ದರೆ ಅದೊಂದು ಹೆಗ್ಗಳಿಕೆಯಲ್ಲ ಅದು ಅಲ್ಪ ವಿಷಯ.' ಅದರ ಉಲ್ಲೇಖವನ್ನು ದಿನಚರಿಯಲ್ಲಿ ಮಾಡುವುದಿಲ್ಲವೆಂದು ಹೇಳಿದ್ದಾರೆ. ಪರರಿಗೆ ಮಾಡಿದ ಸಹಾಯವನ್ನು ತಾವೇ ಹೇಳಿಕೊಳ್ಳದೆ ಅದೊಂದು ಸಣ್ಣ ಸಂಗತಿ ಎಂದು ಮಾನವೀಯ ಮೌಲ್ಯಗಳನ್ನು ಲಕ್ಷಮ್ಮನವರು ಎತ್ತಿ ಹಿಡಿದಿದ್ದಾರೆ.

ಮಲೆನಾಡಿನಲ್ಲಿ ಚಳವಳಿ ಮಾಡಿದ ಅನೇಕ ಮುಖಂಡರನ್ನು ಬೆಂಗಳೂರಿಗೆ ಕರೆತಂದರು. ಅವರಲ್ಲಿ ಅನೇಕ ಮಹಿಳೆಯರು ಇದ್ದರು. ರತ್ನಮ್ಮ ಮಾಧವರಾವ್ ಎನ್ನುವ ಕಾಂಗ್ರೆಸ್ ಪಕ್ಷದ ನಾಯಕಿ ಸಣ್ಣ ಮಗುವನ್ನೆತ್ತಿಕೊಂಡು ಬಂದಿದ್ದು ಮಹಿಳೆಯರ ಬ್ಯಾರಕಿನಲ್ಲಿ ಹೊಸ ಜೀವ ಬಂದಿದ್ದನ್ನು ಕಂಡು ಎಲ್ಲರೂ ಸಂಭ್ರಮಿಸಿ, ಅಲ್ಲಿಯೇ ಹಗ್ಗದಲ್ಲಿ ಒಂದು ತೊಟ್ಟಿಲನ್ನು ಕಟ್ಟಿ ಪೂಜೆ ಮಾಡಿ ಹಾಡನ್ನು ಹಾಡಿ ಸಂಭ್ರಮಪಟ್ಟರು. ಎಳೆಗೂಸಿನ ತಾಯಿ ಬಾಣಂತಿಯ ಗತಿ ಏನು? ಆಕೆಗೆ ಲಕ್ಷಮ್ಮ ಮತ್ತು ಸುನಂದಮ್ಮನವರು ಹಣ್ಣು, ಬೆಣ್ಣೆ ಇತ್ಯಾದಿಗಳನ್ನು ನೀಡಿದರು. ರತ್ನಮ್ಮನವರ ಧ್ವನಿ ಅತ್ಯಂತ ಸುಮಧುರವಾಗಿದ್ದು ಆಕೆ ಕೈಯಲ್ಲಿ ಭಜನೆ ಮಾಡಿಸಿದರು.[೧೩] ಮಲೆನಾಡಿನಿಂದ ಬಂದ ಮಹಿಳೆಯರು ರಾಜಕೀಯ ಖೈದಿಗಳಾಗಿರದೆ ಕೋರ್ಟಿನಲ್ಲಿ ಶಿಕ್ಷಿತರಾಗಿ ಬಂದ ಅಪರಾಧಿಗಳಾಗಿದ್ದರು.

ದಿನಾಂಕ ೧೮.೦೯.೧೯೪೭ ರಂದು ಗಣೇಶ ಚತುರ್ಥಿಯ ಹಬ್ಬದ ಪ್ರಯುಕ್ತ ಸೆರೆಮನೆಯ ಅಧಿಕಾರಿಗಳು ಪೂಜಾ ಸಾಮಗ್ರಿಗಳನ್ನು ಹಾಗೂ ಸಣ್ಣ ಗೌರಿ ಗಣೇಶನನ್ನು ತಂದು ಕೊಟ್ಟರು. ಸೆರೆಮನೆಯಲ್ಲಿದ್ದ ಯುವತಿಯರು ಕುರ್ಚಿ ತಂದು, ಬಾಳೆಕಂದು ಕಟ್ಟಿ, ಹೂವಿಂದ ಅಲಂಕರಿಸಿ, ತೋರಣದಿಂದ ಸಿಂಗರಿಸಿ, ಮಂಟಪ ಸಿದ್ಧಪಡಿಸಿದರು. ಬಾಟಲಿಯ ಮುಚ್ಚಳಕ್ಕೆ

ಕೊಬ್ಬರಿ ಎಣ್ಣೆ ಹಾಕಿ, ಚರಕಾ ಹಿಂಡಿಯ ಹೂಬತ್ತಿ ಮಾಡಿ ದೀಪ ಸಿದ್ಧಪಡಿಸಿ, ಮಂತ್ರಾಕ್ಷತೆ ಕಲಿಸಿ, ಜೈಲಿನ ಆವರಣದಲ್ಲಿ ಬಿಟ್ಟಿದ್ದ ಸೀಬೆಕಾಯಿ, ಜೈಲಿನ ಅಧಿಕಾರಿಗಳು ಕಳುಹಿಸಿದ್ದ ತೆಂಗಿನಕಾಯಿ ನೈವೇದ್ಯಕ್ಕಿಟ್ಟು ಮಂಗಳಾರತಿ ಮಾಡಿ ಎಲ್ಲ ಸ್ತ್ರೀಯರು ಹೂವು ಹಾಕಿ, ನಮಿಸಿ, ಹಾಡು ಹೇಳಿ, ಎಲ್ಲರಿಗೂ ಒಡೆದ ತೆಂಗಿನಕಾಯಿ, ಸೀಬೆಹಣ್ಣು ಹೋಳು ಹಂಚಿದರು. ಕೆಲವರು ಹಬ್ಬದ ದಿನ ಮನೆಯನ್ನು ನೆನೆದು ಕಣ್ಣೀರು ಹಾಕಿದರೆಂದು ಲಕ್ಷಮ್ಮನವರು ಉಲ್ಲೇಖಿಸಿದ್ದಾರೆ. ರಾತ್ರಿ ಹಬ್ಬದೂಟ ಮಾಡುವಾಗ ಹೊರಗಡೆ ನಮ್ಮ ಮಕ್ಕಳು ಎಷ್ಟು ಕಷ್ಟಪಡುತ್ತಿರುವರೋ, ಚಳವಳಿಗಾರರೆಷ್ಟು ಕಷ್ಟಪಡುತ್ತಿರುವರೋ, ನಾವು ಮಾತ್ರ ಹಬ್ಬದೂಟ ಮಾಡುತ್ತಿದ್ದೇವೆಂಬ ಚಿಂತೆಯಲ್ಲಿ ಕಾಲ ಕಳೆದರು.

ಸೆರೆಮನೆಯಲ್ಲಿ ತಾಯಿಯಂತೆ ಎಲ್ಲರಿಗೂ ಊಟ ಬಡಿಸುವ ಜಾನಕಮ್ಮ, ಎಲ್ಲರ ತಟ್ಟೆಗಳನ್ನು ತೊಳೆಯುವ ಹುಡುಗಿ ಪದ್ಮಾವತಿ ಇವರುಗಳ ಪ್ರೀತಿವಿಶ್ವಾಸಗಳನ್ನು ದಾಖಲಿಸಿದ್ದಾರೆ. ಮಹಾರಾಜರು ರಾಜ್ಯದ ಗೊಡವೆಯನ್ನು ಬಿಟ್ಟು ಪ್ರವಾಸಕ್ಕಾಗಿ ಊಟಿಗೆ ಹೋಗಿರುವ ಬಗ್ಗೆ, ಈ ಎಲ್ಲ ಚಳವಳಿಗೆ ದಿವಾನರೇ ಕಾರಣ. ಅವರೇನಾದರು ಜನರ ಕೈಗೆ ಸಿಕ್ಕರೆ ಖಂಡತುಂಡು ಮಾಡುವಷ್ಟು ಜನ ರೊಚ್ಚಿಗೆದ್ದಿದ್ದಾರೆ. ದೌರ್ಜನ್ಯದ ಸರ್ಕಾರ ಎಂದು ದಾಖಲಿಸಿದ್ದಾರೆ.

ಟಿ. ಸುಬ್ರಹ್ಮಣ್ಯಂ ಎನ್ನುವರ ಹೆಂಡತಿ ಬಹಳ ಮಡಿಯನ್ನು ಆಚರಿಸುವವರಾಗಿದ್ದು, ಪೂರ್ವ ಕಂದಾಚಾರದ ಮಹಿಳೆಯಾಗಿದ್ದು, ಅಂತಹವರು ಸಹ ಪಿಕೆಟಿಂಗ್ ಮಾಡುತ್ತಿದ್ದರೆಂದು, ನಗರದ ಹೆಂಗಸರ ಜೊತೆಗೆ ಹಳ್ಳಿ ಹೆಂಗಸರು ಸಮರಕ್ಕೆ ತಯಾರಿದ್ದಾರೆಂದು ತಮ್ಮ ದಿನಚರಿಯಲ್ಲಿ ದಾಖಲಿಸಿದ್ದಾರೆ. ಸಂಪ್ರದಾಯಸ್ಥ ಮಹಿಳೆಯರು, ನಗರ ಅಥವಾ ಹಳ್ಳಿ ಎನ್ನುವ ಯಾವ ಭೇದವಿಲ್ಲದೆ ಚಳವಳಿಯಲ್ಲಿ ಮಹಿಳೆಯರು ಪಾಲ್ಗೊಳ್ಳುತ್ತಿದ್ದಾರೆಂಬುದು ತಿಳಿಯುತ್ತದೆ. ಉತ್ತಮ ಭಾಷಣಕಾರ್ತಿಯಾಗಿದ್ದ ರತ್ನಮ್ಮ ಮಾಧವರಾವ್ ಹಳ್ಳಿಯಿಂದ ಬುತ್ತಿ ತಂದು ಸ್ತ್ರೀಪುರುಷರಾದಿಯಾಗಿ ನಾಲ್ಕಾರು ಸಾವಿರ ಮಂದಿ ಜಮಾವಣೆ ಆದ ಸಭೆಯಲ್ಲಿ ರತ್ನಮ್ಮನವರು ಮಾಡಿದ ಭಾಷಣ, ಹಳ್ಳಿಗರು ಸತ್ಯಾಗ್ರಹಿಗಳ ಊಟದ ವ್ಯವಸ್ಥೆಗೆ ಐದು ಹತ್ತರ ನೋಟುಗಳನ್ನು ನೀಡಿದ್ದು, ಬಾಣಂತಿಯಾಗಿದ್ದ ರತ್ನಮ್ಮನವರಿಗೆ ಬಾದಾಮಿ, ಕಲ್ಲುಸಕ್ಕರೆ ನೀಡಿದ್ದು ಇವೆಲ್ಲವನ್ನು ಎಂ.ಆರ್. ಲಕ್ಷಮ್ಮನವರೊಡನೆ ಹಂಚಿಕೊಂಡಿದ್ದರು.

ರತ್ನಮ್ಮನವರ ಸಂಘಟನಾಸಾಮರ್ಥ್ಯ ಅರಿತ ಲಕ್ಷಮ್ಮ ಅವರನ್ನು ಕುರಿತು 'ಜೈಲಿನಿಂದ ಹೊರಬಂದ ಮೇಲೆ ನಿಮ್ಮ ಹುಮ್ಮಸ್ಸನ್ನು, ನಿಮ್ಮ ಪ್ರಭಾವವನ್ನು, ನಿಮ್ಮ ಶ್ರಮವನ್ನು ಮಹಿಳೆಯರ ಉದ್ಧಾರಕ್ಕಾಗಿ ಮೀಸಲಿಡಿ. ಹೆಣ್ಣುಮಕ್ಕಳ ಸಲುವಾಗಿ ಪ್ರತ್ಯೇಕ ನಿಗಾ ಕೊಡಿಸಿ. ಹೆಣ್ಣುಮಕ್ಕಳ ವತಿಯಿಂದ ಪುರಸಭೆಗೆ ಶಾಸನಸಭೆಗಳಿಗೆ ಪ್ರತಿನಿಧಿಗಳನ್ನು ನಿಲ್ಲಿಸುವ ಕಾಲ ಬರಬೇಕು' ಎಂದು

ಹೇಳುತ್ತಾ ಸೆರೆಮನೆಯಲ್ಲಿದ್ದರೂ ಕೂಡ ಮಹಿಳೆಯರ ಉದ್ಧಾರದ ಬಗ್ಗೆ, ಮಹಿಳೆಯರು ಸಮಾಜದ ಎಲ್ಲಾ ರಂಗಗಳಲ್ಲೂ ಮುಂದೆ ಬರಬೇಕೆಂಬ ಹಂಬಲವನ್ನು ವ್ಯಕ್ತಪಡಿಸಿದ್ದರು. ಪ್ರಾರ್ಥನೆಯ ಸಮಯದಲ್ಲಿ ಎಲ್ಲ ಹುಡುಗಿಯರು ಬಂದು ಹತ್ತಿರ ಕುಳಿತರು. ಹೆಣ್ಣಿನ ಸೌಹಾರ್ದತೆ ಸ್ನೇಹಕ್ಕಿಂತ ಪ್ರಿಯವಾದುದು ಯಾವುದೂ ಇಲ್ಲವೆಂದು ಹೆಣ್ಣುಮಕ್ಕಳ ಬಗೆಗಿನ ಕಾಳಜಿಯನ್ನು ವ್ಯಕ್ತಪಡಿಸಿದ್ದರು.

ಸೆರೆಮನೆಯಲ್ಲಿರುವ ಶಕುಂತಲ ಎಂಬ ಹೆಣ್ಣುಮಗಳು ಬಹಳ ಮುಗ್ಧೆಯಾಗಿದ್ದು ಪ್ರೀತಿಯ ತಾಯಿ, ಅಕ್ಕ ಹಾಗೂ ಗಂಡನನ್ನು ಬಿಟ್ಟು ಬಂದಿದ್ದು ಒಂಟಿಯಾಗಿ ಬಂಧನದಲ್ಲಿದ್ದ ಬಗ್ಗೆ ಆಕೆ ಜೈಲಿಗೆ ಬಂದ ದಿನ ಅನೇಕ ಹುಡುಗರು ಕೂಡ ಸೆರೆಮನೆಗೆ ಬಂದ ಬಗ್ಗೆ ಅವರಲ್ಲಿ ಒಬ್ಬ ಹುಡುಗನಿಗೆ ಸಿಕ್ಕಾಪಟ್ಟೆ ಹೊಡೆದ ಪೊಲೀಸ್ ಇನ್ಸ್‌ಪೆಕ್ಟರ್‌ಗೆ ಶಕುಂತಲ ಬೈದ ಬಗ್ಗೆ, ಆಕೆಯ ತಾಯಿ ಸಂಪ್ರದಾಯಸ್ಥ ಹೆಣ್ಣುಮಗಳಾದರೂ ಕೋಮುಗಲಭೆಯ ಸಮಯದಲ್ಲಿ ರಕ್ಷಣೆಗಾಗಿ ಅಚ್ಚಮೆಣಸಿಕಾಯಿಪುಡಿ ಮಾಡಿಟ್ಟುಕೊಂಡ ಬಗೆಗಿನ ಸಣ್ಣ ಪುಟ್ಟ ಸಂಗತಿಗಳನ್ನು ದಿನಚರಿಯಲ್ಲಿ ದಾಖಲಿಸಿರುವ ಲಕ್ಷಮ್ಮ ಹೆಣ್ಣುಮಕ್ಕಳು ಧೈರ್ಯವಂತರಾಗಿರಬೇಕು ಎಂಬ ಭಾವವನ್ನು ವ್ಯಕ್ತಪಡಿಸಿದರು. ಶಕುಂತಲ ತನ್ನ ಗಂಡ ಬಂದಾಗ ಆತನನ್ನು ನೋಡಿ ಬಿಕ್ಕಿ ಬಿಕ್ಕಿ ಅಳುತ್ತಿದ್ದು, ಆಕೆಯನ್ನು ಆತನೇ ಸಾಂತ್ವನ ಮಾಡಿ 'ಇಷ್ಟು ದಿನ ಧೈರ್ಯವಾಗಿದ್ದೀ, ಈಗ ಹೀಗೆ ಅಳಬೇಡ ಸಮಾಧಾನ ಮಾಡಿಕೋ' ಎಂದು ಧೈರ್ಯ ಹೇಳಿದ ಬಗ್ಗೆ ದಾಖಲಿಸಿರುವ ಲಕ್ಷಮ್ಮ ಅಂದಿನ ಕಾಲದಲ್ಲಿ ಹೆಣ್ಣುಮಕ್ಕಳು ಚಳವಳಿಯಲ್ಲಿ ಭಾಗವಹಿಸಲು ಬೆಂಬಲ ಮತ್ತು ಧೈರ್ಯವನ್ನು ನೀಡಿದ ವಿಷಯಗಳನ್ನು ದಾಖಲಿಸಿದ್ದಾರೆ.

ಸೆರೆಮನೆಯಲ್ಲಿ ಇನ್ನೊಬ್ಬ ಮಹಿಳೆ, ಜಾನಕಮ್ಮ ಹಿಂದೀ ಭಾಷಾಪರಿಣತೆಯಾಗಿದ್ದು, ಆಕೆ ೧೯೪೨ರ ಕ್ವಿಟ್ ಇಂಡಿಯಾ ಸಮಯದಲ್ಲಿ ತಮ್ಮ ಬಡಾವಣೆಯಲ್ಲಿ ಹುಡುಗರು ಮಾಡಿದ ಚಳವಳಿ, ಪೊಲೀಸ್ ವ್ಯಾನ್ ಬಂದಾಗ ಹುಡುಗರು ಅಕ್ಕಪಕ್ಕದ ಮನೆಗೆ ಹೋಗಿ ಅವಿತಿಟ್ಟುಕೊಂಡಿದ್ದು, ಕೆಲವರು ಆ ಹುಡುಗರನ್ನು ಪೊಲೀಸರ ಕೈಗೊಪ್ಪಿಸಿ ಹೊಡೆಸಿದ್ದು, ಹಿಂದೆ ಅವರಲ್ಲಿ ಒಬ್ಬ ವರ್ತಕ ತನ್ನ ಕಾರಿನ ಮೇಲೆ ತ್ರಿವರ್ಣ ಬಾವುಟವನ್ನು ಹಾರಿಸಲು ನಿರಾಕರಿಸಿದಾಗ ಹುಡುಗರು ಆತನಿಗೆ ಧಿಕ್ಕಾರ ಹಾಕಿದ್ದು, ಆತ ಸೇಡನ್ನು ತೀರಿಸಿಕೊಳ್ಳಲು ತಾನೇ ಹುಡುಗರನ್ನು ಪೊಲೀಸರಿಗೆ ಒಪ್ಪಿಸಿದ್ದ ಬಗ್ಗೆ, ಪುಣ್ಯ ಬರಲಿ ಎಂದು ದೇವಾಲಯ ಕಟ್ಟಿದ್ದ ಆತ ಸತ್ಯಾಗ್ರಹಿಗಳಿಗೆ ಹಿಂಸೆ ಮಾಡಿದ್ದನ್ನು ಕಂಡು ಜೀವಂತ ಮನುಷ್ಯರಿಗೆ ಹಿಂಸೆ ಮಾಡುವ ವ್ಯಕ್ತಿ ಯಾವ ಪುಣ್ಯಕ್ಕೆ ಕಲ್ಲಿಗೆ ಪೂಜೆ ಮಾಡುತ್ತಾನೆ ಎಂಬ ತಾತ್ವಿಕ ದರ್ಶನವನ್ನು ವ್ಯಕ್ತಪಡಿಸಿದ್ದರು. ಅವರ ಮಕ್ಕಳಿಗೆ ಹಿಂದಿ ಪಾಠ ಹೇಳಿಕೊಟ್ಟು ತಿಂಗಳಿಗೆ ೨೫ ರೂ.ಗಳನ್ನು ಪಡೆಯುತ್ತಿದ್ದ ಜಾನಕಮ್ಮ ಈ ಘಟನೆಯಾದ ಮೇಲೆ ಅವರಿಗೆ ಪಾಠ ಹೇಳಿಕೊಡುವುದನ್ನು ಬಿಟ್ಟರೆಂಬ

ವಿಷಯವನ್ನು ಲಕ್ಷಮ್ಮನವರೊಡನೆ ಹಂಚಿಕೊಂಡಿದ್ದರು. ಈ ಘಟನೆಯಿಂದ ಹಣಕ್ಕಿಂತ ಸತ್ಯ ನ್ಯಾಯ, ಸ್ವಾತಂತ್ರ್ಯ ಮುಖ್ಯವಾದದ್ದು ಎಂದು ಮಹಿಳಾ ಚಳವಳಿಗಾರರು ನಿರೂಪಿಸಿದ್ದಾರೆ.

ದಿನಾಂಕ ೧೯.೦೯.೧೯೪೭ ರಂದು ಸೆರೆಮನೆಯಲ್ಲಿ ಕೂಡಿಹಾಕಿ ೧೫ ದಿನಗಳಾದ ಬಗ್ಗೆ ಅನಾಮಧೇಯ ಪತ್ರಿಕೋದ್ಯಮಿಯೊಬ್ಬರು ಬರೆದು ಅಚ್ಚುಹಾಕಿಸಿದ ಚೀಟಿಯನ್ನು ಸೆರೆಮನೆಯಲ್ಲಿರುವವರೊಬ್ಬರು ತೋರಿಸಿದರು. ಇಂಡಿಯನ್ ಎಕ್ಸ್‌ಪ್ರೆಸ್‌ನಲ್ಲಿ ಬರುವ ಸುದ್ದಿಗಳು ಬರೀ ಸುಳ್ಳಿನ ಕಂತೆ. ಅದರಲ್ಲಿ ಬ್ರಾಹ್ಮಣರ ಕೈವಾಡ ಅಧಿಕ, ಮುಂತಾದ ಬಗ್ಗೆ ಅನಗತ್ಯ ವಿಷಯಗಳು ಇರುತ್ತವೆ. ಇದನ್ನು ದಾಖಲಿಸಿರುವ ಲಕ್ಷಮ್ಮ ಸದ್ಯ ನಮ್ಮ ಮಹಿಳೆಯರ ಈ ಗುಂಪಲ್ಲಿ ಈ ಜಾತಿ, ಆ ಜಾತಿ ಎಂಬ ಭಾವನೆ ಹೊಕ್ಕಿಲ್ಲ ಎಂದು ಹೇಳಿದರು. ಮಹಿಳಾ ಬ್ಯಾರಕನ್ನು ನೋಡಿಕೊಳ್ಳುವ ಮೇಟ್ರನ್ ಸದಾ ಮಾತು ಬೈಗುಳವನ್ನು ಹರಿಸುವ, ರಚನಾತ್ಮಕ ನಡೆ ನುಡಿ ಇಲ್ಲದ, ಅಹಿತಕರ ವ್ಯಕ್ತಿತ್ವದವರಾಗಿದ್ದು ಸತ್ಯಾಗ್ರಹಿಗಳು ತಮ್ಮ ಬಳಿ ಇಟ್ಟುಕೊಂಡು ನೂಲುತ್ತಿದ್ದ ಚರಕವನ್ನು ತೆಗೆದು ಬಚ್ಚಿಟ್ಟ ಬಗ್ಗೆ, ಸತ್ಯಾಗ್ರಹಿಗಳು ಚರಕ ಬೇಕೆಂದು ಗಲಾಟೆ ಮಾಡಿ ಸೆರೆಮನೆಯ ಮೇಲಾಧಿಕಾರಿಗಳಿಗೆ ಬರೆದುಕೊಟ್ಟು ಚರಕವನ್ನು ಮರಳಿ ಪಡೆದ ಬಗ್ಗೆ, ತಮ್ಮ ದಿನಚರಿಯಲ್ಲಿ ನಿರೂಪಿಸಿದ್ದಾರೆ. ಸೆರೆಮನೆಯಲ್ಲಿ ಸಹವರ್ತಿಯಾಗಿದ್ದ ಶಿವಮೊಗ್ಗದ ಪೊನ್ನಮ್ಮ ಬಿ.ಎಸ್.ಸಿ. ಓದುತ್ತಿದ್ದು ಓದಿಗೆ ಶರಣು ಹೇಳಿ ೧೯೪೨ರ ಚಳವಳಿಯಲ್ಲಿ ಭಾಗವಹಿಸಿ ಸೆರೆಮನೆವಾಸ ಮಾಡಿದ ಬಗ್ಗೆ, ಚಳವಳಿಯಲ್ಲಿ ಭಾಗವಹಿಸಿದ ಪೊನ್ನಮ್ಮಳಿಗೆ ಆಕೆಯ ತಾಯಿ ಕೋಣೆಯಲ್ಲಿ ಕೂಡಿಹಾಕಿ ಚಳವಳಿಯಲ್ಲಿ ಭಾಗವಹಿಸದಂತೆ ಆಕೆಗೆ ಹೊಡೆದ ಬಗ್ಗೆ, ದೆಹಲಿಯ ಕಾರ್ಮಿಕ ಇಲಾಖೆಯಲ್ಲಿ ಕೆಲಸ ಮಾಡಿ ಆನಂತರ ರಾಜೀನಾಮೆ ಸಲ್ಲಿಸಿ, ಮತ್ತೆ ಚಳವಳಿಯಲ್ಲಿ ಭಾಗವಹಿಸಿದ ಬಗ್ಗೆ, ಆಕೆಯ ದೇಶಭಕ್ತಿ, ಕುಂದದ ಉತ್ಸಾಹ, ಆಕೆ ಅದಮ್ಯಚೇತನವೆಂದು ತಮ್ಮ ದಿನಚರಿಯಲ್ಲಿ ದಾಖಲಿಸಿದ್ದಾರೆ. ಚಳವಳಿಗಾರರು ಮತ್ತು ಇತರ ಖೈದಿಗಳು ಸೇರಿ ಭಜನೆ ಮಾಡಿದ ಬಗ್ಗೆ ರಾಮನ ಕತೆ, ಶಬರಿ ಕತೆ, ಎಲ್ಲವನ್ನು ಹೇಳಿ 'ಬಾರ ಬಾರ ಬಡವರನ್ನು ಕಾಯಿಬಾರ' ಎಂಬ ಗೀತೆಯನ್ನು ಹಾಡುತ್ತಾ ಎಲ್ಲರ ಕಣ್ಣಲ್ಲೂ ನೀರು ತುಂಬಿ, ತಾದಾತ್ಮ್ಯಭಾವ ತುಂಬಿತ್ತೆಂದು ದಾಖಲಿಸಿದ್ದಾರೆ.

ದಿನಾಂಕ ೨೦.೦೯.೧೯೪೭ ರಂದು ಸತ್ಯಾಗ್ರಹಿಗಳು ಹಾಗೂ ಮಹಿಳಾ ಖೈದಿಗಳು ಎಂದಿನಂತೆ ಭಜನೆ ಆದ ನಂತರ ಮಹಿಳಾ ಖೈದಿಗಳಿಗೆ ಮಹಾತ್ಮ ಗಾಂಧೀ ಕಿ ಜೈ ಎಂಬ ಜೈಕಾರವನ್ನು ಹೇಳಿಕೊಟ್ಟ ಬಗ್ಗೆ ಶಕುಂತಲಾ ಎಂಬಾಕೆಯ ತಾಯಿ, ಅಕ್ಕ ಮತ್ತು ಮಕ್ಕಳು ಮಧ್ಯಾಹ್ನ ಆಕೆಯ ಭೇಟಿಗೆ ಬಂದ ಬಗ್ಗೆ ದಾಖಲಿಸಿದ್ದಾರೆ. ಮಧ್ಯಾಹ್ನದ ಸಭೆಯಲ್ಲಿ ಸುನಂದಮ್ಮನವರು ಕಾಂಗ್ರೆಸ್ ಪಕ್ಷ ಶಾಸನಸಭೆಯ ಚುನಾವಣೆಯಲ್ಲಿ ಮಹಿಳೆಯರ ಪ್ರಾತಿನಿಧ್ಯದ ಬಗ್ಗೆ ನಿರ್ಲಕ್ಷ್ಯವನ್ನು ತೋರಿದ್ದ ಬಗ್ಗೆ ಚರ್ಚಿಸಿದ್ದರು. ಕಾಂಗ್ರೆಸ್ ಮುಖಂಡರ ಪತ್ನಿಯಾದ ರತ್ನಮ್ಮನವರಿಗೆ ಮಹಿಳೆಯರಿಗೆ ಪ್ರಾತಿನಿಧ್ಯ ನೀಡಲು ಪತಿಯೊಂದಿಗೆ ಹೇಳಲು

ಸುನಂದಮ್ಮನವರು ಒತ್ತಾಯಿಸಿದಾಗ ಆಕೆ ಅರ್ಥಗರ್ಭಿತ ನಗು ನಗುತ್ತಿದ್ದರು ಎಂದು ದಾಖಲಿಸಿದ್ದಾರೆ. ೧೯೪೨ರಲ್ಲಿ ತಮ್ಮ ಸಂಬಂಧಿಯಾದ ಕಮಲಾದೇವಿ ಚಟ್ಟೋಪಾಧ್ಯಾಯರೊಡನೆ ೧೧ ತಿಂಗಳು ಸೆರೆಮನೆವಾಸವನ್ನು ಅನುಭವಿಸಿದ ರತ್ನಮ್ಮನವರು, ಆ ಸಮಯದಲ್ಲಿ ತಮ್ಮ ಮಗುವನ್ನು ಕಳೆದುಕೊಂಡ ಬಗ್ಗೆ, ಮಗುವಿನ ಅಂತ್ಯಸಂಸ್ಕಾರಕ್ಕೆ ಸರ್ಕಾರ ಏಳು ದಿನ ಪೆರೋಲ್ ನೀಡಿದ್ದು ಅದರಲ್ಲಿ ಕೇವಲ ಮೂರು ದಿನ ಬಳಸಿಕೊಂಡು ಜೈಲಿಗೆ ಮರಳಿದ ನಿಷ್ಠಾವಂತೆ ರತ್ನಮ್ಮ ಎಂದು ದಿನಚರಿಯಲ್ಲಿ ಲಕ್ಷಮ್ಮ ಉಲ್ಲೇಖಿಸಿದ್ದಾರೆ. ತಮ್ಮ ವೈಯಕ್ತಿಕ ಬದುಕಿಗಿಂತಲೂ ಅಪರಿಮಿತ ದೇಶಭಕ್ತಿಯನ್ನು ತೋರಿದ ಮಹಿಳೆಯರು ಇತರರಿಗೆ ಮಾದರಿಯಾಗಿದ್ದಾರೆಂದು ಹೇಳಬಹುದು.[೧೫]

ಸತ್ಯಾಗ್ರಹಿಗಳಲ್ಲಿ ಕೆಲವರ ಸ್ವಭಾವದ ಬಗ್ಗೆ ದಾಖಲಿಸಿರುವ ಲಕ್ಷಮ್ಮನವರು ಆಕೆಯ ಹೆಸರನ್ನು ದಾಖಲಿಸದೆ ಇತರರ ವಸ್ತುಗಳನ್ನು ಬಳಸಿಕೊಳ್ಳುವ ಆಕೆ ಇತರರೊಂದಿಗೆ ಸೇರದೆ, ಊಟಕ್ಕೆ ಬೇರೆ ಕುಳಿತುಕೊಳ್ಳುವ ಬಗ್ಗೆ, ಇಲ್ಲಸಲ್ಲದ ಅಪಪ್ರಚಾರವನ್ನು ಮಾಡುವ ಅಕೆಯ ಸ್ವಭಾವದ ಬಗ್ಗೆ ದಾಖಲಿಸಿದ್ದಾರೆ.

ದಿನಾಂಕ ೨೨.೦೯.೧೯೪೭ ರಂದು ಬೆಳಗ್ಗೆ ಆರು ಗಂಟೆಗೆ ಜಾನಕಮ್ಮ ಎಲ್ಲರನ್ನೂ ಎಬ್ಬಿಸಿ ಹಿಂದಿ ಪಾಠ ಹೇಳಿಕೊಟ್ಟರು. ಕತೆ ಹೇಳುತ್ತಾ ಹಿಂದಿ ಕಲಿಸಿದರು. ತಿಂಡಿಯ ತುಂಬಾ ಕಲ್ಲು ಇದ್ದು ಮಧ್ಯಾಹ್ನದ ಬೆಳಗಿನ ಊಟವು ಅಷ್ಟೇ ಭತ್ತ ಕಲ್ಲಿನಿಂದ ತುಂಬಿದ ಅನ್ನ ಕೊಡುತ್ತಿದ್ದು ಅಸಹನೀಯ ಊಟದ ವ್ಯವಸ್ಥೆ ಇತ್ತು. ನಾವೇ ಅಕ್ಕಿಯನ್ನು ಸ್ವಚ್ಛ ಮಾಡಿಕೊಡುವುದಾಗಿ ಕೇಳಿಕೊಂಡರು. ಸುನಂದಮ್ಮನವರಿಗೆ ಅನಾರೋಗ್ಯನಿಮಿತ್ತ ಚಿಕಿತ್ಸೆಗಾಗಿ ಅವರನ್ನು ಆಸ್ಪತ್ರೆಗೆ ಕರೆದೊಯ್ಯುವ ಬಗ್ಗೆ ದಾಖಲಿಸಿದ್ದಾರೆ. ಜೈಲನ್ನು ಸ್ವಚ್ಛಗೊಳಿಸುವ ಚೆನ್ನಿ ಬೆಳಿಗ್ಗೆ ಚಳಿಯಲ್ಲಿ ಕುಪ್ಪಸವಿಲ್ಲದೆ ಬಂದಾಗ 'ಎಲ್ಲಿ ನಿನ್ನ ಕುಪ್ಪಸ' ಎಂದು ಲಕ್ಷಮ್ಮನವರು ಪ್ರಶ್ನಿಸಿದರು. 'ಸ್ನಾನ ಮಾಡಿ ನೆನೆಸಿಟ್ಟಿದ್ದೇನೆ' ಎಂದು ಚೆನ್ನಿ ಹೇಳಿದಾಗ ಇಷ್ಟು ಬೇಗ ಸ್ನಾನಮಾಡಿದೆಯಾ? ಎಂದು ಕೇಳಿದರು. ಅದಕ್ಕೆ ಅವಳು ಹೌದು, ಶೌಚಾಲಯ ಸ್ವಚ್ಛಗೊಳಿಸಿದ್ದರಿಂದ ತಣ್ಣೀರು ಸ್ನಾನ ಮಾಡಿ, ಬೇರೆ ಕುಪ್ಪಸವಿಲ್ಲದೆ ಇರುವುದರಿಂದ ಹಾಗೆ ಬಂದಿರುವುದಾಗಿ ತಿಳಿಸಿದಳು. ಮೂರು ಗಜ ಬಟ್ಟೆ ಒದಗಿಸಿದರೆ ಒಂದು ಜತೆ ಕುಪ್ಪಸ ಆದೀತು. ಇದನ್ನು ಯಾಕೆ ಮಾಡಬಾರದು? ಮಾಡಬೇಕು ಅಂದುಕೊಂಡೆ ಎಂದು ಲಕ್ಷಮ್ಮನವರು ಆಲೋಚಿಸಿದರು. ತಾವು ಸೆರೆಮನೆಯಲ್ಲಿ ಇದ್ದರೂ ಬಡವರ ಬಗ್ಗೆ, ದೀನದಲಿತರ ಬಗ್ಗೆ, ಮಹಿಳೆಯರ ಬಗ್ಗೆ ಎಂ.ಆರ್. ಲಕ್ಷಮ್ಮ ಕಾಳಜಿಯನ್ನು ವಹಿಸುತ್ತಿದ್ದರೆಂದು ತಿಳಿದುಬರುತ್ತದೆ.[೧೬]

ದಿನಾಂಕ ೨೩.೦೯.೧೯೪೭ ರಂದು ಸಂಜೆ ಬಿ.ಬಿ. ಅಪ್ಪಾದೊರೆ ಮೊದಲಿಯಾರ್ ಸೆರೆಮನೆಗೆ ಬಂದು ಯೋಗಕ್ಷೇಮ ವಿಚಾರಿಸಿದರು. ಸೆರೆಮನೆಯಲ್ಲಿರುವ ಧರ್ಮಾಂಬ ಎಂಬುವರ ಗಂಡನಿಗೆ ಉದ್ಯೋಗ ಕೊಡಿಸಿ ಎಂದು ಅಪ್ಪಾದೊರೆಯವರಲ್ಲಿ ಮನವಿ

ಮಾಡಿಕೊಂಡ ಲಕ್ಷಮ್ಮ, ಜೈಲು ಸೂಪರಿಂಟೆಂಡೆಂಟ್‌ರ ಕ್ರೂರ ಸ್ವಭಾವದ ಬಗ್ಗೆ ದಾಖಲಿಸಿದ್ದಾರೆ. 'ಚಳವಳಿಗಾರರು ಮತ್ತು ನಾಯಕರು ಸಣ್ಣ ವಯಸ್ಸಿನ ಬಾಲಕರನ್ನು ಮುಂದೆ ಬಿಟ್ಟು ಅವರಿಂದ ವಿಧ್ವಂಸಕ ಕೆಲಸ ಮಾಡಿಸುತ್ತಿದ್ದಾರೆ. ಚಳವಳಿ ನಡೆಸದೆ ದಿವಾನರಾದ ಆರ್ಕಾಟರ ವಿರುದ್ಧ ಚಳವಳಿ ಮಾಡುತ್ತಿದ್ದಾರೆ. ಚಳವಳಿ ಸತ್ತಿದೆ' ಎಂದು ಹೇಳಿದ ಜೈಲು ಸೂಪರಿಂಟೆಂಡೆಂಟ್‌ರಿಗೆ ಅಪ್ಪಾದೊರೆ ಮೊದಲಿಯಾರರು 'ನಾಯಕರು ಹುಡುಗರಿಗೆ ನಾಶ ಮಾಡುವಂತೆ ಹೇಳಿಲ್ಲ, ಚಳವಳಿ ಮಾಡುವಂತೆ ಹೇಳಿದ್ದಾರೆ, ನಾಲ್ಕೈದು ದಿನಗಳಲ್ಲಿ ಎಲ್ಲ ತೀರ್ಮಾನವಾಗಬಹುದು' ಎಂದು ಹೇಳಿದರು. ರಾತ್ರಿ ೧೦.೩೦ಕ್ಕೆ ಶಿವಮೊಗ್ಗದ ಕಡೆಯಿಂದ ನಾಲ್ಕು ಜನ ಹೆಣ್ಣುಮಕ್ಕಳು ಬಂದರು.

ದಿನಾಂಕ ೨೪.೦೯.೧೯೪೭ ಹಾಗೂ ೨೫.೦೯.೧೯೪೭ ರ ದಿನಚರಿಗಳನ್ನು ಒಂದೇ ಕಡೆಯಲ್ಲಿ ದಾಖಲಿಸಿರುವ ಎಂ.ಆರ್. ಲಕ್ಷಮ್ಮ ಕೆಲವು ಸತ್ಯಾಗ್ರಹಿಗಳು ಹೇಗೆ ವರ್ತಿಸುತ್ತಾರೆಂಬುದರ ಬಗ್ಗೆ ದಾಖಲಿಸಿದ್ದಾರೆ. ರತ್ನಮ್ಮನವರು ಮಾತನಾಡುತ್ತಾ ಈಶ್ವರಪ್ಪ ಎಂಬ ಕಾರ್ಯಕರ್ತನ ಬಗ್ಗೆ ಲಕ್ಷಮ್ಮನವರಿಗೆ ಹೇಳುತ್ತಾ, ಆತ ನೋಡಲು ಜಯಪ್ರಕಾಶನಾರಾಯಣರಂತಿದ್ದು ಮಾತು ಹಾಗೇ ಆಡುತ್ತಾರೆ. ಒಳ್ಳೆಯ ಕಾರ್ಯಕರ್ತರಾಗಿದ್ದು, ಅವರು ಸರ್ಕಾರವನ್ನು ಕೆರಳಿಸುವ ರೀತಿ ಭಾಷಣ ಮಾಡಿದರು. ಅವರನ್ನು ಬಂಧಿಸಲು ಬಂದಾಗ ಹುಡುಗರು ಅವರ ಸುತ್ತಮುತ್ತ ನಿಂತರು. ಅವರು ತಮ್ಮ ಹೊರಮೈ ಬಟ್ಟೆಯನ್ನು ಬಿಚ್ಚಿ ಇನ್ನಾರಿಗೋ ತೊಡಿಸಿ ಆತ ಪರಾರಿಯಾದರು. ಆತನನ್ನು ಬಂಧಿಸಲು ಸಾಧ್ಯವಾಗಲಿಲ್ಲ. ಅಂತಹ ಕ್ರಿಯಾಶೀಲ ವ್ಯಕ್ತಿತ್ವದ ಕಾರ್ಯಕರ್ತ ಎಂಬುದಾಗಿ ಹೇಳಿದ್ದಾರೆ. ಆದರೆ ಅದಕ್ಕೆ ಅಪವಾದ ಎಂಬ ರೀತಿ ಇನ್ನೊಬ್ಬ ನಾಯಕರ ಬಗ್ಗೆ ಕೂಡ ಹೇಳಿದ್ದಾರೆ. ಆತ ಮಾತನಾಡಲು ಹೆದರುವ ವ್ಯಕ್ತಿ. ಉಪಕಾರಿ ಮತ್ತು ಕೆಲಸಗಾರರಾಗಿದ್ದ ಅವರು ಹಣವನ್ನು ಧಾರಾಳವಾಗಿ ನೀಡುವವರಾಗಿದ್ದು ಒಂದು ಬಾರಿಯೂ ಬಂಧನಕ್ಕೆ ಒಳಗಾಗಲಿಲ್ಲ. ಪ್ರತಿ ಸತ್ಯಾಗ್ರಹಕ್ಕೆ ಬರುವಾಗಲೆಲ್ಲಾ ತಾನು ಬಂಧಿತನಾಗುವನೆಂದು ಹಾಸಿಗೆ ಕಟ್ಟಿ ಸಿದ್ಧಮಾಡಿಕೊಂಡು ಬಂಧನವಾಗದೆ ಇರುವ ವ್ಯಕ್ತಿಯಾಗಿದ್ದು ಹೆಸರಿಗೆ ಮಾತ್ರ ಚಳವಳಿಗಾರರಾಗಿದ್ದರು. ಒಂದು ಬಾರಿ ಹುಡುಗರೆಲ್ಲ ಸೇರಿದ್ದು ಚಳವಳಿ ಮಾಡುವ ಸಂದರ್ಭದಲ್ಲಿ ಪೊಲೀಸರು ಹುಡುಗರಿಗೆ ಹೊಡೆಯುತ್ತಿರುವ ಬಗ್ಗೆ ಸುದ್ದಿ ಬಂದಾಗ ರತ್ನಮ್ಮನವರು ಆತನಿಗೆ ಹೋಗಿ ಹುಡುಗರನ್ನು ರಕ್ಷಿಸಲು ಹೇಳಿದಾಗ ಆತ ಹೊರಟೆ ಎಂದು ಹೇಳಿ ತಮ್ಮ ಮನೆಯ ಕಟ್ಟೆಯ ಬಳಿ ನಿಂತು ಯಾರೊಂದಿಗೊ ಮಾತನಾಡುತ್ತಾ ಕಾಲಕಳೆಯುತ್ತಿದ್ದ ಬಗ್ಗೆ, ಬಾಣಂತಿಯಾದ ರತ್ನಮ್ಮನವರೆ ಮಳೆಯಲ್ಲಿ ಛತ್ರಿ ಹಿಡಿದು ಹುಡುಗರನ್ನು ಬಿಡಿಸಲು ಹೊರಟ ಬಗ್ಗೆ, ಅಷ್ಟು ಹೊತ್ತಿಗೆ ಬಿಗುವಿನ ವಾತಾವರಣ ತಿಳಿಯಾಗಿ ಹುಡುಗರೆಲ್ಲಾ ಬೇರೆ ಕಡೆಗೆ ತೆರಳಿದ ಸಮಯದಲ್ಲಿ ಆ ನಾಯಕರು ನಿಧಾನವಾಗಿ ಎಲ್ಲ ಮುಗಿದ ನಂತರ ಆ ಸ್ಥಳಕ್ಕೆ ಬಂದ ಬಗ್ಗೆ ಲಕ್ಷಮ್ಮನವರ ಬಳಿ ಹೇಳಿದರು. ದಾಸಪ್ಪನವರು

ಕೂಡ ಲಕ್ಷಮ್ಮನವರು ಬಂಧನವಾದಾಗ ಮೊದಲ ದಿನ ಪ್ರಚಾರಕ್ಕಾಗಿ ಬಂಧಿತರಾಗಿದ್ದರೆಂದು ಟೀಕೆ ಮಾಡಿದ ಬಗ್ಗೆ ನೆನಪಿಸಿಕೊಂಡರು. ಚಂಗಲರಾಯರೆಡ್ಡಿಯವರ ಧರ್ಮಪತ್ನಿ ಸರೋಜಮ್ಮನವರನ್ನು ಹಾಗೂ ಸುಬ್ಬಮ್ಮಜೋಯಿಸರನ್ನು ಹಿಂಸಿಸಿದ್ದಾರೆ ಮತ್ತು ಅನೇಕ ಸತ್ಯಾಗ್ರಹಿಗಳನ್ನು ಬೇರೆ ಕಡೆಗೆ ಸ್ಥಳಾಂತರ ಮಾಡಿದ್ದಾರೆಂಬ ಸುದ್ದಿ ಹೆಂಗಸರಿಗೆ ಲಾಠಿ ಏಟುಗಳು ಬಿತ್ತಂತೆ ಎಂಬ ಸುದ್ದಿಗಳ ಬಗ್ಗೆ ದಾಖಲಿಸಿದ್ದಾರೆ.[೧೬]

ಶಿವಮೊಗ್ಗದಿಂದ ಬಂದ ಒಬ್ಬ ಯುವತಿ ವಿವಾಹವಾಗಿರುವ ವ್ಯಕ್ತಿಯನ್ನು ತುಂಬಾ ಪ್ರೀತಿಸುವ ಬಗ್ಗೆ, ಆತನ ಹೆಂಡತಿಗೆ ಮಕ್ಕಳಿಲ್ಲದ ಬಗ್ಗೆ, ರತ್ನಮ್ಮನವರೊಂದಿಗೆ ಹೇಳಿಕೊಂಡಾಗ ರತ್ನಮ್ಮನವರು ಅಂತಹ ಸಂಸಾರವನ್ನು ಹಾಳುಮಾಡಬೇಡ, ಬೇರೆ ಲಗ್ನವಾಗು, ನಾನು ಗಂಡು ನೋಡಿಕೊಡುತ್ತೇನೆ ಎಂದು ಹೇಳಿದ್ದರು. ಆದರೆ ಆಕೆ ಪ್ರೇಮವನ್ನು ಬದಲಿಸಲು ಸಾಧ್ಯವಿಲ್ಲ ಮತ್ತು ತಡೆಯಲು ಸಾಧ್ಯವಿಲ್ಲವೆಂದು ಹೇಳಿದಳು.

ದಿನಾಂಕ ೨೫.೦೯.೧೯೪೭ ರಂದು ಸೆರೆಮನೆಯಲ್ಲಿ ಇರುವ ಇಬ್ಬರು ಖೈದಿಗಳ ಬಗ್ಗೆ ದಾಖಲಿಸಿದ್ದಾರೆ. ಗಂಗಾ ಮತ್ತು ಚಿಕ್ಕಮಾರಿ ಇಬ್ಬರು ಜೋರಿನ ವ್ಯಕ್ತಿತ್ವದವರು. ೨೦ ವರ್ಷ ಸಜಾಕ್ಕೆ ಒಳಗಾದವರು. ಉಳಿದವರೆಲ್ಲ ಸಣ್ಣಪುಟ್ಟ ಸಜಾದವರು. ಸೆರೆಮನೆಯಲ್ಲಿ ಊಟಕ್ಕೆ ನೀಡಿದ ಅನ್ನದಲ್ಲಿ ಮಿಕ್ಕಿದ್ದರೆ ಅದನ್ನು ಇವರಿಬ್ಬರೇ ಪಡೆದುಕೊಳ್ಳುವರು. ಬೀಗದಕೈ ಅವರ ಹತ್ತಿರವೇ ಇದ್ದು ಆದೇಶ ನೀಡುವ ನಾಯಕಿಯರ ರೀತಿಯಲ್ಲಿ ವರ್ತಿಸುತ್ತಿದ್ದ ರತ್ನಮ್ಮನವರು ಅತ್ತಿತ್ತ ತೆರಳುವಾಗ ಅವರ ಮಗುವನ್ನು ತೂಗುವ ಕೆಲಸವನ್ನು ಗಂಗಾಳಿಗೆ ವಹಿಸಿದ್ದು, ಗಂಡನನ್ನು ಹತ್ಯೆಮಾಡಿದ ಆಕೆಯ ವಶದಲ್ಲಿ ಎಳೆಮಗುವನ್ನು ಬಿಟ್ಟು ತೆರಳಿದ ಬಗ್ಗೆ ಆತಂಕ ಮತ್ತು ದಿಗಿಲಿನ ಬಗ್ಗೆ ಲಕ್ಷಮ್ಮನವರು ದಾಖಲಿಸಿದ್ದಾರೆ.

ಅಕ್ಕಿಯಲ್ಲಿ ಕಲ್ಲು, ಭತ್ತ ಇದ್ದು, ಅದನ್ನು ಆರಿಸುತ್ತೇವೆಂದು, ಪಡೆದುಕೊಂಡ ಬಗ್ಗೆ ೫೩ ಸೇರು ಅಕ್ಕಿಯನ್ನು ಸಜೆಯನ್ನು ಅನುಭವಿಸುವ ಖೈದಿಗಳಿಗೆ ಹಾಗು ೫೦ ಸೇರು ಅಕ್ಕಿಯನ್ನು ರಾಜಕೀಯ ಖೈದಿಗಳಿಗೆ ನೀಡಿದ್ದು, ಅದನ್ನು ಸ್ವಚ್ಛಮಾಡಿದ ಮೇಲೆ 'ಇಂದು ಮಾತ್ರ ನಾವು ಸ್ವಚ್ಛ ಮಾಡುತ್ತೇವೆ. ನಾಳೆಯಿಂದ ನಮಗಾಗದು, ಯಾರು ಹೋಗಬೇಡಿ' ಎಂದು ಮಹಿಳಾ ಖೈದಿಗಳನ್ನು ತಡೆಯುವ ಕೆಲಸವನ್ನು ಗಂಗಾಳು ಮಾಡಿದಳೆಂದು ದಿನಚರಿಯಲ್ಲಿ ಉಲ್ಲೇಖಿಸಿದ್ದಾರೆ.

ದಿನಾಂಕ ೨೬.೦೯.೧೯೪೭ ರಂದು ಇಬ್ಬರು ಮಹಿಳಾ ಖೈದಿಗಳು ಸೆರೆಮನೆಗೆ ಬಂದ ಘಟನೆಯನ್ನು ದಾಖಲಿಸಿದ್ದಾರೆ. ೩-೪ ದಿನಗಳಿಂದ ಸತ್ಯಾಗ್ರಹ ಮಾಡುತ್ತಿದ್ದ ಇಬ್ಬರು ಹೆಣ್ಣು ಮಕ್ಕಳು ಕಂಟೋನ್‌ಮೆಂಟಿನವರಾಗಿದ್ದು, ಅವರನ್ನು ಸಿಪಾಯಿ ಎಲ್ಲೋ ಬಸವನಗುಡಿ ಹತ್ತಿರ ಬಿಟ್ಟುಹೋದ ನಂತರ ಬಂಧಿತರಾಗಿ ಸೆರೆಮನೆಗೆ ಬಂದ ಅವರು ಊಟವಿಲ್ಲದೆ ಬಳಲಿದ್ದಾಗ

ಕೊಡಲು ಏನೂ ಇರುವುದಿಲ್ಲ. ಸುನಂದಮ್ಮನವರ ಬಳಿ ಹಾಲು, ಹಣ್ಣುಗಳು ಇದ್ದು, ಆಕೆ ಅನಾರೋಗ್ಯದಿಂದ ಅಶಕ್ತಳಾಗಿದ್ದು, ಆ ಹಣ್ಣುಗಳನ್ನು ಲಕ್ಷಮ್ಮನವರು ನೀಡಲು ಹಿಂದೆಗೆದರು. ಆದರೆ ಅಂತಃಕರಣದ ಸುನಂದ ತಾನೇ ಎದ್ದು ಬಂದು ಎರಡು ಕಿತ್ತಳೆಹಣ್ಣನ್ನು ಹಾಲನ್ನು ಕೊಟ್ಟರು ಹಾಗೂ ಶಕುಂತಲೆ ಎರಡು ಸೇಬಿನ ಹಣ್ಣನ್ನು ಹೆಣ್ಣುಮಕ್ಕಳಿಗೆ ನೀಡಿದಾಗ ಅವರು ಕೃತಜ್ಞತೆ ಸಲ್ಲಿಸಿದರು. ಅದಕ್ಕೆ ಪ್ರತಿಯಾಗಿ ಶಕುಂತಲ 'ಇದೇನು ಮಹಾ? ಮಹಾರಾಜರಿಗೆ ಒಳ್ಳೆ ಬುದ್ಧಿ ಕೊಡಬೇಕು ಆರ್ಕಾಟಿಗೆ ಒಳ್ಳೆ ಬುದ್ಧಿ ಬರಲಿ' ಎಂದು ದೇವರಲ್ಲಿ ಪ್ರಾರ್ಥಿಸುತ್ತೇನೆ. ನಾನು ಮಗು ಹಾಗೂ ಯಜಮಾನರು ಜೈಲಲ್ಲಿ ಇದ್ದು ಒಳಗೆ ನೋವು ಇದ್ದರೂ ನಗುತ್ತಾ ಇರಬೇಕು ಎಂದು ಹೇಳಿದಳು.

ಸಂಜೆ ಒಬ್ಬ ಯುವತಿ ಗೀತಾ ಗ್ರಂಥವನ್ನು ತಪ್ಪುತಪ್ಪಾಗಿ ಉಚ್ಚರಿಸಿದಾಗ ಸುನಂದಮ್ಮನವರು ವ್ಯಂಗ್ಯವಾಗಿ ಆ ಯುವತಿಯ ಮೇಲೆ ರೇಗಾಡಿ ನಂತರ 'ನಾನು ಕಳಪೆಯಾಗಿ ನಡೆದುಕೊಂಡೆ' ಎಂದು ತಪ್ಪೊಪ್ಪಿಗೆ ಕೇಳಿದಾಗ ಲಕ್ಷಮ್ಮನವರು ಕಣ್ಣೀರುಹಾಕಿ ಆತ್ಮವಿಮರ್ಶೆ ಮಾಡಿಕೊಂಡರು. ನಾನು ಶಕುಂತಲಳಂತೆ ನಗುನಗುತಾ ಮಾತನಾಡ ಬಲ್ಲನೇ? ನನ್ನ ಈ ಒಳ್ಳೆತನ ಹೇಡಿತನದ ಪರಿಣಾಮವೇ? ಧೈರ್ಯವಂತಿಕೆಯ ಪರಿಣಾಮವೇ? ಹಿಂದೆ ಯಾರೋ ಜ್ಯೋತಿಷಿ ಲಕ್ಷಮ್ಮನವರ ಕೈ ನೋಡಿ 'ಈ ಕೈಯಿಂದ ಕೇಳಿ ಪಡೆಯುವುದು ಬಲ್ಲದು, ಕೊಡೋದು ನಿಧಾನ' ಎಂದು ಹೇಳಿದ್ದನ್ನು ಜ್ಞಾಪಿಸಿಕೊಂಡ ಲಕ್ಷಮ್ಮನವರು, ಆದರೂ ಸುನಂದಮ್ಮನವರು ಲಕ್ಷಮ್ಮನವರು ಮಾಡಿದ ಉಪಕಾರವನ್ನು ಸದಾ ಸ್ಮರಿಸುತ್ತಿದ್ದರು. ನಾನು ಏನು ಉಪಕಾರ ಮಾಡಿದೆನು ಭಗವಂತ ಬಲ್ಲ. ನನ್ನ ಈ ಒಳ್ಳೆತನ ದಿಟ್ಟತನವೆಂದು ಭಾವಿಸಿ ತಾವೇ ಸಮಾಧಾನಗೊಂಡರು.

ಲಕ್ಷಮ್ಮನವರು ಗೀತೆಯ ಬಗ್ಗೆ ವ್ಯಾಖ್ಯಾನ ಮಾಡುತ್ತಿದ್ದಾಗ ಜಾನಕಮ್ಮ ಬಂದು ಮಧ್ಯೆ ಮಾತನಾಡುತ್ತಾ ಕಾಲಹರಣ ಮಾಡುತ್ತಿದ್ದಾಗ ಸುನಂದಮ್ಮನವರು 'ಬೇಗ ಬೇಗ ಹೇಳಿ' ಎಂದು ಅನವಶ್ಯಕ ಮಾತುಗಳನ್ನು ನಿಲ್ಲಿಸಿದರು. ಲಕ್ಷಮ್ಮನವರು ನಾನಾಗಿದ್ದರೆ ಒಳಗೇ ಬೇಸರಪಟ್ಟುಕೊಂಡು ಅವರಿಗೆ ನೇರವಾಗಿ ಹೇಳಲಾಗದೆ ಇರುತ್ತಿದ್ದ ಬಗ್ಗೆ ಸುನಂದಮ್ಮನವರ ನೇರ ನಡೆ, ದಿಟ್ಟತನ ನನಗೆ ಬರಬೇಕು ಎಂದಿದ್ದರು. ಸುನಂದಮ್ಮನವರ ಹೃದಯವೈಶ್ಯಾಲತೆ ಮತ್ತು ಒಳ್ಳೆಯತನದ ಬಗ್ಗೆ ಹಾಗೆಯೇ ತಪ್ಪು ಮಾಡಿದಾಗ ತಪ್ಪೊಪ್ಪಿಗೆಯನ್ನು ಕೇಳುವ ಗುಣದ ಬಗ್ಗೆ ಲಕ್ಷಮ್ಮನವರು ಪ್ರಶಂಸಿಸಿದ್ದಾರೆ. ಬನಪ್ಪ ಪಾರ್ಕಿನಲ್ಲಿ ಸಭೆ ನಡೆದು ಸರ್ಕಾರದ ಪರ ಮಾತನಾಡಿದ ಇಬ್ಬರನ್ನು ನೆರೆದಿದ್ದ ಜನಗಳೇ ಘಾಸಿಗೊಳಿಸಿದ ಬಗ್ಗೆ ದಾಖಲಿಸಿದ್ದಾರೆ.[೧೮]

ದಿನಾಂಕ ೨೭.೦೯.೧೯೪೭ರಂದು ನಾಲ್ವರು ವಿದ್ಯಾರ್ಥಿನಿಯರು ಸೆರೆಮನೆಗೆ ಆಗಮಿಸಿದ ಬಗ್ಗೆ ತಮ್ಮ ದಿನಚರಿಯಲ್ಲಿ ದಾಖಲಿಸಿದ್ದಾರೆ. ಹೈಸ್ಕೂಲ್ ಮತ್ತು ಇಂಟರ್‌ಮೀಡಿಯಟ್ ಓದುವ ಹೆಣ್ಣುಮಕ್ಕಳು ಕೂಡ ಚಳವಳಿಯಲ್ಲಿ ಭಾಗವಹಿಸಿದ್ದರ ಬಗ್ಗೆ

ಮಾಹಿತಿ ನೀಡಿದ್ದಾರೆ. ಬೇಸರದಿಂದ ಕುಳಿತ ಎಂ.ಆರ್. ಲಕ್ಷಮ್ಮನವರಿಗೆ ಸುನಂದಮ್ಮನವರು "ಬೇಸರಪಟ್ಟುಕೊಳ್ಳಬೇಡ ಅರ್ಧ ತ್ಯಾಗ ಮಾಡಿದರೆ ಬೇಸರದಿಂದ ವ್ಯರ್ಥವಾಗುತ್ತದೆಂದು" ಹೇಳಿದಾಗ ಹಾಗೇನಿಲ್ಲ ಪ್ರಪಂಚವೇ ತಲೆಕೆಳಗಾದರೂ ಇಲ್ಲಿಂದ ಬಿಟ್ಟು ಹೋಗಲ್ಲ ಎಂದು ಉತ್ತರಿಸಿದ್ದರು.

ಸುನಂದಮ್ಮನವರ ಓರಗಿತ್ತಿ ಮತ್ತು ಮಗಳು ಅವರನ್ನು ನೋಡಲು ಬಂದರು. ಅದರ ನಡುವೆ ಜೈಲು ಅಧಿಕಾರಿ ಸುನಂದಮ್ಮನವರನ್ನು ಕಂಡು ಅವರಿಗೆ ಬಿಡುಗಡೆಯಾದ ಬಗ್ಗೆ ತಿಳಿಸಿದರು. ಆತ್ಮೀಯ ಗೆಳತಿಯ ಅಗಲಿಕೆಯಿಂದ ಬೇಸರಗೊಂಡ ಲಕ್ಷಮ್ಮನವರು ಮನೆಗೆ ಒಂದು ಪತ್ರವನ್ನು ಕಳುಹಿಸಿಕೊಟ್ಟರು. ಮೋಡ ತುಂಬಿದ ಆಕಾಶದ ಬಗ್ಗೆ ದಾಖಲಿಸಿರುವ ಲಕ್ಷಮ್ಮನವರು ಬೇಸರ ಮತ್ತು ದುಗುಡಗೊಂಡ ಮನಸ್ಥಿತಿಯನ್ನು ವ್ಯಕ್ತಪಡಿಸಿದ್ದರು.

ದಿನಾಂಕ ೩೦.೦೯.೧೯೪೭ ರಂದು ಪ್ರಕೃತಿಯ ವರ್ಣನೆ ಮಾಡಿದ ಎಂ.ಆರ್. ಲಕ್ಷಮ್ಮನವರು ಶುಭ್ರ ಆಕಾಶದಂತೆ ಮನಸ್ಸು ಕೂಡ ಉಲ್ಲಾಸಕರವಾಗಿದೆ ಎಂದು ದಾಖಲಿಸಿದ್ದಾರೆ. ಹಕ್ಕಿಪಕ್ಷಿಗಳ ಚಿಲಿಪಿಲಿ ನಾದ, ಕಾಗೆ, ಗುಬ್ಬಿಗಳು, ಮಾವಿನಮರಗಳ ಮೇಲೆ ಕುಳಿತು ಅತ್ತಿಂದಿತ್ತ ಹಾರಾಡುತ್ತಿರುವ ದೃಶ್ಯವನ್ನು ಕಂಡ ಲಕ್ಷಮ್ಮನವರು 'ಈ ಜಗತ್ತು ಎಷ್ಟು ಸುಂದರ' ನನಗಿಂದು ಶಾಂತಿ ಉಲ್ಲಾಸ ಲಭಿಸಿದೆ ಎಂದು ತಮ್ಮ ಭಾವನೆಗಳನ್ನು ದಾಖಲಿಸಿದ್ದಾರೆ.

ದಿನಾಂಕ ೦೧.೧೦.೧೯೪೭ ರಂದು ಆರೋಗ್ಯದ ಬಗ್ಗೆ ಕಾಳಜಿ ವಹಿಸಿದ ಲಕ್ಷಮ್ಮ ತಮ್ಮ ಸಹವರ್ತಿ ಪೊನ್ನಮ್ಮನೊಂದಿಗೆ ಬ್ಯಾಡ್‌ಮಿಂಟನ್ ಆಟವನ್ನು ಆಡಿದ ಬಗ್ಗೆ ದಾಖಲಿಸಿದ್ದಾರೆ. ಸಾಮೂಹಿಕವಾಗಿ ಪ್ರಾರ್ಥನೆಯನ್ನು ತಮ್ಮ ಮುಖಂಡತ್ವದಲ್ಲಿ ನೆರವೇರಿಸಿದ್ದು ಬಿಡುಗಡೆಯಾದ ಅಣ್ಣಮ್ಮ, ಧರ್ಮಾಂಭ ಇವರಿಬ್ಬರಿಗೆ ಕುಂಕುಮ ಕೊಟ್ಟು ಬೀಳ್ಕೊಟ್ಟರು. ತಿಂಡಿಯ ಪ್ಯಾಕೇಟನ್ನು ಬಿಡುಗಡೆಯಾದ ಹುಡುಗಿಯರು ನೀಡಿದರೆಂದು ಲಕ್ಷಮ್ಮನವರಿಗೆ ತಲುಪಿದಾಗ ಎಲ್ಲರು ತಿಂಡಿಯನ್ನು ಹಂಚಿಕೊಂಡರು. ಬಿಡುಗಡೆಯಾಗಿ ಹೊರ ಹೋದ ಸುನಂದಮ್ಮ ಮತ್ತು ಕಮಲಬಾಯಿ ಭೀಮರಾವ್ ಇವರಿಂದ ಯಾವುದೇ ಸುದ್ದಿ ಇಲ್ಲ ಎಂದು ನೆನಪಿಸಿಕೊಂಡಿದ್ದರು. ಧರ್ಮಾಂಭ, ಅಣ್ಣಮ್ಮ ಮತ್ತೆ ಸೆರೆಮನೆಗೆ ಆಗಮಿಸಿದ ಬಗ್ಗೆ ಮತ್ತು ೨೦ ಮಂದಿ ರಾಜಕೀಯ ಖೈದಿಗಳು ಮೈಸೂರಿನಿಂದ ಆಗಮಿಸುವ ಬಗ್ಗೆ ಸುದ್ದಿ ಬಂದಿದ್ದು, ರಾಜಕೀಯ ಖೈದಿಗಳನ್ನು ಪೋಷಿಸುವುದು ಸರ್ಕಾರಕ್ಕೆ ಹೊರೆಯಾಗಿರುವುದರ ಬಗ್ಗೆ ಹೇಳಿರುವ ಲಕ್ಷಮ್ಮನವರು ದಸರಾ ಹಬ್ಬ ಬರುತ್ತಿದ್ದು ರಾಜ್ಯದಲ್ಲಿ ಇಂತಹ ಪ್ರಕ್ಷುಬ್ಧ ವಾತಾವರಣದಲ್ಲಿ ಹಬ್ಬ ಆಚರಿಸುವ ಧೈರ್ಯ ಮಹಾರಾಜರಿಗೆ ಇಲ್ಲ. ದಸರಾ ನಮ್ಮ ನಾಡಹಬ್ಬ, ಆಚರಿಸಲೇಬೇಕು. ದಸರಾ ಹಬ್ಬವು ದಿನಾಂಕ ೦೬.೧೦.೧೯೪೭ರಂದು ಇದ್ದು, ಅಷ್ಟರೊಳಗೆ ಬಿಡುಗಡೆಯಾಗುತ್ತೇನೆಂಬ ಆಶಾಭಾವನೆಯನ್ನು ಲಕ್ಷಮ್ಮನವರು ವ್ಯಕ್ತಪಡಿಸಿದ್ದರು.

ದಿನಾಂಕ ೦೨.೧೦.೧೯೪೭ ರಂದು ಗಾಂಧೀಜಿಯವರ ಜನ್ಮದಿನ. ಅಂದು ರಾತ್ರಿ ತೀರ್ಥಹಳ್ಳಿಯಿಂದ ಅನೇಕ ಹೆಣ್ಣುಮಕ್ಕಳು ಸೆರೆಮನೆಗೆ ಬಂದರು. ಜೈಲಿನ ಮೇಲ್ವಿಚಾರಕರು ಇಂದು ನಿಮಗೆಲ್ಲಾ ಬಿಡುಗಡೆ ಎಂಬ ಮಾತನ್ನು ಹೇಳಿದ ಬಗ್ಗೆ ಲಕ್ಷಮ್ಮನವರು ಉಲ್ಲೇಖಿಸಿದ್ದಾರೆ. ಆದರೆ ರತ್ನಮ್ಮ, ಪೊನ್ನಮ್ಮರವರಿಗೆ ಬಿಡುಗಡೆಯ ಬಗ್ಗೆ ನಂಬಿಕೆ ಇರಲಿಲ್ಲ. ತಮ್ಮ ಆತ್ಮೀಯ ಗೆಳತಿ ಸುನಂದರ ಸ್ನೇಹಮಯ ಸಾನ್ನಿಧ್ಯ ಅಭಾವ ಬಗ್ಗೆ ದಾಖಲಿಸಿದ್ದಾರೆ. ದಿನಾಂಕ ೦೩.೧೦.೧೯೪೭ರಂದು ರತ್ನಮ್ಮ ಮಾಧವರಾವ್‌ರವರು ತಮ್ಮ ದಾಂಪತ್ಯ ಜೀವನದ ಬಗ್ಗೆ ಹಂಚಿಕೊಂಡಿದ್ದಾರೆ. ರತ್ನಮ್ಮ ಮಾಧವರಾವ್ ತಮ್ಮ ಪತಿಗೆ ಅತ್ಯಂತ ರಮ್ಯವಾಗಿ ಪತ್ರಗಳನ್ನು ಬರೆಯುತ್ತಿದ್ದು ಅದನ್ನು ಮಾಧವರಾಯರ ಸ್ನೇಹಿತರು ಓದುತ್ತಿದ್ದರೆಂದು ಅದು ತಿಳಿದ ಮೇಲೆ ಅಗತ್ಯ ವಿವರಣೆಗಳನ್ನು ಮಾತ್ರ ದಾಖಲಿಸಿ ಪತ್ರವನ್ನು ಬರೆಯುತ್ತಿದ್ದ ಬಗ್ಗೆ ರತ್ನಮ್ಮನವರ ಪತ್ರಗಳನ್ನು ಅವರ ಯಜಮಾನರು ಫೈಲು ಮಾಡಿ ಇಟ್ಟಿದ್ದ ಬಗ್ಗೆ ದಾಖಲಿಸಿದ್ದಾರೆ.

ಲಕ್ಷಮ್ಮನವರು ದಾವಣಗೆರೆಯಲ್ಲಿ ಏಕೀಕರಣ ಪರಿಷತ್ತಿನಲ್ಲಿ ಮಾಡಿದ ಭಾಷಣ ಅವರ ವಿದ್ಯಾರ್ಹತೆಗಿಂತ ಕಡಿಮೆಯಾಗಿತ್ತು ಎಂದು ಹನುಮಂತಯ್ಯನವರ ಅಭಿಪ್ರಾಯವಾಗಿತ್ತು ಎಂದು ರತ್ನಮ್ಮನವರಿಂದ ತಿಳಿದ ಲಕ್ಷಮ್ಮನವರ ಮನಸ್ಸು ಖಿನ್ನಗೊಂಡಿತ್ತು. ಅಂದೇ ರಾತ್ರಿ ಜೈಲಿನ ಪಕ್ಕದ ಗೋಡೆಗೆ ಡೈನಾಮೈಟ್ ಇಟ್ಟು ಕಿಂಡಿ ಮಾಡಿದ್ದರ ಬಗ್ಗೆ ಅದನ್ನು ಆತುರವಾಗಿ ರಿಪೇರಿ ಮಾಡುತ್ತಿದ್ದ ಬಗ್ಗೆ ಉಲ್ಲೇಖಿಸಿದ್ದಾರೆ.

ದಿನಾಂಕ ೦೪.೧೦.೧೯೪೭ರಂದು ಮನೆಯವರ ನೆನಪಾಗಿ ಲಕ್ಷಮ್ಮನವರು 'ಯಜಮಾನರಾಗಲೀ, ಮಕ್ಕಳೇ ಆಗಲೀ ಯಾರು ಬಂದು ನೋಡಲಿಲ್ಲವೆಂದು ಅವರಿಂದ ಒಂದು ಪತ್ರ ಕೂಡ ಬರಲಿಲ್ಲವೆಂದು ಹಾಗೂ ವಯಸ್ಸಾದ ಅತ್ತೆ ಮಾವನವರು ಏನು ಮಾಡಲು ಸಾಧ್ಯ, ನನ್ನ ತಂದೆ ತಾಯಿಯವರು ಧರ್ಮಬೀರುಗಳು, ಕಾಲೇಜಿನಿಂದ ಬರುವುದು ತಡವಾದರೆ ಗೇಟಿನ ಬಳಿ ನಿಲ್ಲುತ್ತಿದ್ದ ತಾಯಿ, ಸಾತ್ವಿಕರಾದ ಅವರೆಷ್ಟು ನೊಂದಿದ್ದಾರೋ, ಹೆದರಿದ್ದಾರೋ ನನ್ನ ಮಕ್ಕಳು ತುಂಬಾ ತುಂಟರಾಗಿದ್ದು, ಅವರಿಗೇನಾದರೂ ನೋವಾದರೆ ದೇವರೆ ನೀನೇ ಗತಿ' ಎಂದು ತಮ್ಮ ದಿನಚರಿಯಲ್ಲಿ ದಾಖಲಿಸಿದ್ದಾರೆ. ಒಂದು ದಿನ ಮನೆಯ ಅಂಗಳದಲ್ಲಿ ಒಂದು ತಾಯಿಚೇಳು ಹೊರಬಂದಿತ್ತು. ಅದನ್ನು ಹೊಡೆದುಹಾಕಿದ ನಂತರ ಅದರ ಹಿಂದೆಯೇ ಹತ್ತಿಪ್ಪತ್ತು ಮರಿ ಚೇಳುಗಳು ಹೊರ ಬಂದವು. ಈ ಘಟನೆಯನ್ನು ದಾಖಲಿಸಿರುವ ಲಕ್ಷಮ್ಮನವರು ತಮ್ಮ ಮನೆ ಮಕ್ಕಳನ್ನು ನೆನೆಸಿಕೊಂಡು ಭಾವುಕರಾಗಿದ್ದಾರೆಂದು ತಿಳಿದುಬರುತ್ತದೆ.

ದಿನಾಂಕ ೦೫.೧೦.೧೯೪೭ರಂದು ಸಂಜೆ ಸೆರೆಮನೆಯಿಂದ ಬಿಡುಗಡೆಯಾದ ಲಕ್ಷಮ್ಮನವರು ರಾತ್ರಿ ಸಮಯದಲ್ಲಿ ಬೆಂಗಳೂರಿನಿಂದ ಮೈಸೂರಿಗೆ ಹೋಗಲು ಅಸಾಧ್ಯವಾಗಿ

ಸೆರೆಮನೆಯಲ್ಲಿ ಉಳಿದುಕೊಂಡರು. ಮರುದಿನ ಬೆಳಿಗ್ಗೆ 'ಅಬ್ಬಾ ಮೈಸೂರು. ನನ್ನ ಮನೆ. ನನ್ನ ಯಜಮಾನರು ಮತ್ತು ಮಕ್ಕಳು' ಎಂದು ದಿನಚರಿಯನ್ನು ಪೂರ್ಣಗೊಳಿಸಿದ್ದಾರೆ. ಅವರ ದಿನಚರಿಯ ಕೊನೆಯ ವಾಕ್ಯ ಅರ್ಧಕ್ಕೆ ನಿಂತಿದ್ದು ಬಣ್ಣಿಸಲು ಆಗದ ಸಂತೋಷ ಸಮಾಧಾನಗಳು ಈ ವಾಕ್ಯದಲ್ಲಿ ಗೋಚರಿಸುತ್ತವೆ.

೧೯೪೫ರಲ್ಲಿ ಕಾಂಗ್ರೆಸ್ ಸದಸ್ಯರಾಗಿ ರಾಜಕೀಯರಂಗ ಪ್ರವೇಶಿಸಿ ಚಳವಳಿಯಲ್ಲಿ ಭಾಗವಹಿಸಿ ಕೇವಲ ೨ ವರ್ಷಗಳಲ್ಲಿ ಸತ್ಯಾಗ್ರಹಿಯಾಗಿ ಸೆರೆಮನೆವಾಸವನ್ನು ಅನುಭವಿಸಿ ಇತಿಹಾಸ ವಿದ್ಯಾರ್ಥಿನಿಯಾಗಿದ್ದ ಲಕ್ಷಮ್ಮನವರು ತಮ್ಮ ಸೆರೆಮನೆವಾಸವನ್ನು 'ತುರಂಗವಾಸ ಅನುಭವ' ಎಂದು ದಾಖಲಿಸಿರುವುದು ಅವರ ಐತಿಹಾಸಿಕ ಪ್ರಜ್ಞೆಗೆ ಸಾಕ್ಷಿಯಾಗಿದೆ. ಸೆರೆಮನೆಯಲ್ಲಿ ಇದ್ದಾಗಲೂ ಕೂಡ ಮಹಿಳೆಯರ ಬಗ್ಗೆ ಅವರ ಅಭಿವೃದ್ಧಿ ಏಳಿಗೆಯ ಬಗ್ಗೆ ಚಿಂತಿಸಿರುವುದು ಕಂಡುಬರುತ್ತದೆ. ಸೆರೆಮನೆಯಲ್ಲಿ ಕೆಲಸ ಮಾಡುವ ದೇವಮ್ಮಳಿಗೆ ಹೆಸರು ಬರೆಯಲು ಕಲಿಸಿ, ಸೆರೆಮನೆಯಲ್ಲಿಯೂ ಹಾಗೂ ಶ್ರೀರಾಮಚಂದ್ರನ ಕಥೆಯ ಮೂಲಕ ಸರಳ ಲೆಕ್ಕಗಳನ್ನು ಹೇಳಿಕೊಟ್ಟ ಲಕ್ಷಮ್ಮನವರು ಶಿಕ್ಷಣದ ಬಗ್ಗೆ ಇವರಿಗಿದ್ದ ಕಾಳಜಿ ಪ್ರಶಂಸನಾರ್ಹ-ವಾದುದು. ಶೌಚಾಲಯವನ್ನು ಸ್ವಚ್ಛಗೊಳಿಸುತ್ತಿದ್ದ ಚೆನ್ನಿಯ ದುಸ್ಥಿತಿಯ ಬಗ್ಗೆ ಮರುಗಿ ದೀನದಲಿತರಿಗೋಸ್ಕರ ನಾನು ಕೆಲಸ ಮಾಡಬೇಕೆಂಬ ನಿರ್ಧಾರವನ್ನು ಸೆರೆಮನೆಯಲ್ಲಿಯೇ ಕೈಗೊಂಡು ಮುಂದಿನ ತಮ್ಮ ಜೀವಿತಾವಧಿಯಲ್ಲಿ ಮಹಿಳೆಯರ ಏಳಿಗೆಗಾಗಿ ತಮ್ಮನ್ನು ಮೀಸಲಾಗಿಟ್ಟ ಲಕ್ಷಮ್ಮನವರು ಅನುಕರಣೀಯ ವ್ಯಕ್ತಿತ್ವವುಳ್ಳವರಾಗಿದ್ದಾರೆ.

ಎಂ.ಆರ್. ಲಕ್ಷಮ್ಮನವರು ಸ್ವಾತಂತ್ರ್ಯ ಚಳವಳಿಯಲ್ಲಿ ಕಟ್ಟಕಡೆಯ ಚಳವಳಿ 'ಮೈಸೂರು ಚಲೋ' ಚಳವಳಿಯಲ್ಲಿ ಮಾತ್ರ ಭಾಗವಹಿಸಿದ್ದು ಹಿಂದಿನ ಯಾವುದೇ ಚಳವಳಿಯಲ್ಲಿ ಭಾಗವಹಿಸಿರುವುದಿಲ್ಲ. ಸಂಪ್ರದಾಯಸ್ಥ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದ ಲಕ್ಷಮ್ಮನವರು ಸಂಸಾರ ನಿರ್ವಹಣೆಯಲ್ಲಿ ತೊಡಗಿಕೊಂಡು ಅದಕ್ಕಾಗಿ 'ವಯಸ್ಕರ ಶಿಕ್ಷಣ ಸಮಿತಿ'ಯಲ್ಲಿ ಕಾರ್ಯ ನಿರ್ವಹಿಸುತ್ತ 'ಬೆಳಕು' ಪತ್ರಿಕೆಯ ಸಂಪಾದಕೀಯಾಗಿ ಕಾರ್ಯ ನಿರ್ವಹಿಸುತ್ತ ಒಲ್ಲದ ಮನಸ್ಸಿನಿಂದ ರಾಜಕೀಯರಂಗಕ್ಕೆ ಕಾಲಿಟ್ಟು, ಚಳವಳಿಯಲ್ಲಿ ಭಾಗವಹಿಸಿದ್ದು ಸ್ಪಷ್ಟವಾಗಿ ಗೋಚರಿಸುತ್ತದೆ. ಆದರೂ ಕೂಡ ಸಂಸಾರದ ಜವಾಬ್ದಾರಿಯ ಜತೆಗೆ ದೇಶಪ್ರೇಮವನ್ನು ಹೊಂದಿದ ಲಕ್ಷಮ್ಮನವರ ಮೂವತ್ತಮೂರು ದಿನಗಳ ಕಾಲ ಸೆರೆಮನೆವಾಸವನ್ನು ಅನುಭವಿಸಿ ಸ್ವಾತಂತ್ರ್ಯ ಚಳವಳಿಗೆ ತಮ್ಮ ಕಿರು ಸೇವೆಯನ್ನು ಸಲ್ಲಿಸಿರುವುದು ಆದರ್ಶಪ್ರಾಯವಾಗಿದೆ.

**೪.೬. ಕರ್ನಾಟಕ ಏಕೀಕರಣ ಚಳವಳಿಯಲ್ಲಿ ಎಂ.ಆರ್. ಲಕ್ಷಮ್ಮ**

ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಮಹಿಳೆಯರು ಪುರುಷರ ಸರಿಸಮಾನವಾಗಿ ಹೋರಾಡಿದಂತೆ ಕರ್ನಾಟಕ ಏಕೀಕರಣ ಚಳವಳಿಯಲ್ಲಿಯೂ ಮಹಿಳೆಯರ ಹೋರಾಟ ಮಹತ್ವವಾದದ್ದು. ಕನ್ನಡ ಮಾತನಾಡುವ ಜನರು ಒಂದೇ ಆಡಳಿತ ಪ್ರಾಂತ್ಯಕ್ಕೆ

ಒಳಪಟ್ಟಿರಬೇಕೆಂಬ ಹಂಬಲ. ಕನ್ನಡಿಗರಲ್ಲಿ ಮೂಡಿ ಸ್ವಾತಂತ್ರ್ಯಾನಂತರ ರಾಜಮಹಾರಾಜರು ಭಾರತದ ಗಣರಾಜ್ಯದಲ್ಲಿ ವಿಲೀನಗೊಳ್ಳುವ ಸಂದರ್ಭದಲ್ಲಿ ಏಕೀಕೃತ ಕರ್ನಾಟಕಕ್ಕಾಗಿ ಹೋರಾಟಗಳು ತೀವ್ರಗೊಂಡವು. ಹಲವಾರು ಸಂಘಸಂಸ್ಥೆಗಳು ಮಹನೀಯರುಗಳು ಏಕೀಕರಣ ಚಳವಳಿಯಲ್ಲಿ ತೊಡಗಿಸಿಕೊಂಡರು. ಮೈಸೂರು ಸಂಸ್ಥಾನದ ಅನೇಕ ಮಹನೀಯರು ಏಕೀಕರಣ ವಿರೋಧಿ ಭಾವನೆಯನ್ನು ವ್ಯಕ್ತಪಡಿಸಿದಾಗ ಮೈಸೂರು ಸಂಸ್ಥಾನದ ಕೆಲವು ಏಕೀಕರಣದ ಪರವಾಗಿ ನಿಂತು ಹೋರಾಟ ಮಾಡಿದರು. ಅಂತಹ ಮಹನೀಯರಲ್ಲಿ ಲಕ್ಷಮ್ಮನವರು ಕೂಡ ಒಬ್ಬರಾಗಿದ್ದಾರೆ.

ಲಕ್ಷಮ್ಮನವರು ಏಕೀಕರಣದ ಪರವಾಗಿ ಇದ್ದು ಕನ್ನಡ ನಾಡು ನುಡಿಯ ಏಳಿಗೆಗೆ ಶ್ರಮಿಸುತ್ತಿದ್ದರು. ಅವರು ರೈಲ್ವೆ ತಡೆ ಚಳವಳಿಯಲ್ಲಿ ಭಾಗವಹಿಸಿದ್ದು,[೨೦] ಸ್ವಾತಂತ್ರ್ಯ ಪೂರ್ವದಲ್ಲಿ ವಯಸ್ಕರ ಶಿಕ್ಷಣ ಸಮಿತಿಯ ಪತ್ರಿಕೆ 'ಬೆಳಕು'ವಿನ ಸಂಪಾದಕಿಯಾಗಿದ್ದಾಗಲೇ ಏಕೀಕರಣವನ್ನು ಸಮರ್ಥಿಸುತ್ತಿದ್ದರು.

### ೪.೭. 'ಬೆಳಕು' ಪತ್ರಿಕೆಯಲ್ಲಿ ಪ್ರಕಟವಾದ ಎಂ.ಆರ್. ಲಕ್ಷಮ್ಮ ಅವರ ಏಕೀಕರಣ ಮತ್ತು ಕನ್ನಡ ನಾಡುನುಡಿಯ ಬಗೆಗಿನ ಚಿಂತನೆಗಳು

ದಿನಾಂಕ ೦೫.೦೧.೧೯೪೭ರ ಸಂಚಿಕೆಯಲ್ಲಿ ಜನವರಿ ೨೬ ರಿಂದ ೨೮ರವರೆಗೆ ಮದ್ರಾಸಿನಲ್ಲಿ ಕನ್ನಡ ಸುಗ್ಗಿಯ ಹಬ್ಬ ನಡೆಯಿತು. ಸಮ್ಮೇಳನಾಧ್ಯಕ್ಷರು ಶ್ರೀ ಟಿ.ಪಿ. ಕೈಲಾಸಂರವರು. ಕನ್ನಡದ ಬಾವುಟವನ್ನು ಏರಿಸಿದ ಅಧ್ಯಕ್ಷರು ಇವರ ಜತೆಗೆ ಮದರಾಸ್ ಪ್ರಾಂತ್ಯದ ಮಾಜಿ ಮಂತ್ರಿಗಳಾದ ರಾಜಗೋಪಾಲಾಚಾರಿ, ಬೇಂದ್ರೆ, ಡಾ. ಯು. ರಾಮರಾವ್, ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಜೆ.ಬಿ. ಮಲ್ಲಾರಾಧ್ಯ ಮುಂತಾದ ಪ್ರಮುಖರು ಭಾಗವಹಿಸಿದರು. ರಾಮರಾಯರು ಮಾತನಾಡಿ 'ನೃಪತುಂಗನ ಕಾಲದಲ್ಲಿ ಮದ್ರಾಸು ಕನ್ನಡನಾಡಿಗೆ ಸೇರಿತ್ತು. ವಿಜಯನಗರದ ಅಧೀನ ನಾಯಕರ ಮನೆತನಕ್ಕೆ ಸೇರಿದ ಚನ್ನಪ್ಪನಾಯಕನಿಂದ ಚನ್ನಪಟ್ಟಣ ಎಂದಾಯಿತು. ಈ ಸಮ್ಮೇಳನದ ಉದ್ದೇಶವೆಂದರೆ ಮದ್ರಾಸಿನಲ್ಲಿರುವ ಕನ್ನಡಿಗರು ಒಟ್ಟಾಗಿ ಸೇರಿ ತಮ್ಮ ಭಾಷೆ ಸಂಸ್ಕೃತಿಯನ್ನು ಉಳಿಸುವ ಬೆಳೆಸುವ ಕಾರ್ಯವನ್ನು ಮಾಡುವುದು' ಎಂದಿದ್ದಾರೆ. ಹೆಚ್ಚಿನ ಸಂಖ್ಯೆಯಲ್ಲಿ ಕನ್ನಡಿಗರು ಇರುವ ಇಲ್ಲಿ ಕನ್ನಡ ಶಾಲೆಯ ಕೊರತೆ ಇದ್ದು, ಕೊರತೆಯನ್ನು ನೀಗಿಸುವ ಕೆಲಸವನ್ನು ಮಾಡಬೇಕೆಂದು ರಾಜಗೋಪಾಲಾಚಾರಿಯವರು ಹೇಳಿದ್ದು, ಸಮ್ಮೇಳನಾಧ್ಯಕ್ಷರಾದ ಕೈಲಾಸಂನವರು ಮಾತನಾಡಿ 'ನನ್ನ ಮನೆಮಾತು ತಮಿಳು, ಮಾಸ್ತಿಯವರದು ತಮಿಳು, ರಾಜಾಜಿಯವರ ಮಾತು ತಮಿಳು. ಆದರೂ ಕನ್ನಡ ನಾಡಿನಲ್ಲಿ ಜನಿಸಿರುವ ನಾವು ಕರ್ನಾಟಕವನ್ನು ಒಂದು ಪ್ರಾಂತ್ಯವನ್ನಾಗಿ ಕಟ್ಟಬೇಕೆಂದು ನಾವು ಆತುರರಾಗಿದ್ದೇವೆ. ಕನ್ನಡ ನಾಡಿನಲ್ಲಿ ನಾನಾ ಭಾಷೆಯ ಜನ ಇದ್ದೇವೆ. ತಮಿಳು, ತೆಲುಗು, ತುಳು, ಕೊಂಕಣಿ, ಮರಾಠಿ, ಕನ್ನಡ ನಾಡಿನಲ್ಲಿ ಸೇರಿ

ಕನ್ನಡಿಗರಾಗಿದ್ದಾರೆ. ಕನ್ನಡ ಬೆಳೆಯುತ್ತಿದೆ. ಅಸಂಖ್ಯ ಗ್ರಂಥರಾಶಿ ಹುಟ್ಟಿದೆ. ಅನೇಕ ಪತ್ರಿಕೆಗಳು ಹುಟ್ಟಿವೆ. ಎಲ್ಲಾರು ಒಂದೊಂದು ಕೆಲಸ ಮಾಡಿ ನಾಡನ್ನು ಮುನ್ನಡೆಸಬೇಕು. ಭಾಷಾವಾರು ಭೇದಭಾವನೆ ದಮನಮಾಡೋಣ, ಒಳಗೂ ಹೊರಗೂ ಎಲ್ಲರೊಡನೆ ಸಾಮರಸ್ಯವಾಗಿ ನಡೆದು, ನಾವು ಕರ್ನಾಟಕದವರು ಉಳಿದ ದಾಕ್ಷಿಣಾತ್ಯರಿಗೆ ಮೇಲುಪಂಕ್ತಿಯಾಗಿ ಇರೋಣ' ಎಂದು ಟಿ.ಪಿ. ಕೈಲಾಸಂರವರು ಸಮ್ಮೇಳನದಲ್ಲಿ ಭಾಷಣ ಮಾಡಿ ಕನ್ನಡ ನಾಡು ನುಡಿಯ ಘನತೆಯನ್ನು ಎತ್ತಿಹಿಡಿದು ಕನ್ನಡ ನಾಡಿನ ಏಕೀಕರಣದ ನಿಲುವನ್ನು ತಮ್ಮ ಭಾಷಣದಲ್ಲಿ ವ್ಯಕ್ತಪಡಿಸಿದರು.[೨೧]

ದಿನಾಂಕ ೧೨.೦೧.೧೯೪೬ರ ಬೆಳಕು ಸಂಚಿಕೆಯ ಮುಖಪುಟದಲ್ಲಿ ಜನವರಿ ೦೫.೧೯೪೬ರಂದು ಮರಣಹೊಂದಿದ ರಾಜಸೇವಾಸಕ್ತ ಬಿ.ಎಂ. ಶ್ರೀಕಂಠಯ್ಯನವರು ಧಾರವಾಡದಲ್ಲಿ ಕೆಲಸ ನಿರ್ವಹಿಸುತ್ತಿದ್ದರು. ಅಕ್ಷರಪ್ರಚಾರ ಸಮಿತಿಯ ಮೊದಲ ಅಧ್ಯಕ್ಷರಾಗಿ ಅಡಿಪಾಯ ಹಾಕಿದವರು ಸಹವರ್ತಿಗಳಾದ ಎಂ.ಆರ್. ಲಕ್ಷಮ್ಮನವರು. ಬಿ.ಎಂ.ಶ್ರೀಯವರಿಗೆ ಅಕ್ಷರನಮನವನ್ನು ಸಲ್ಲಿಸುವ ಮೂಲಕ ಅವರ ವ್ಯಕ್ತಿತ್ವವನ್ನು ಕೊಂಡಾಡಿದ್ದಾರೆ. ಇಂಗ್ಲಿಷ್ ಪ್ರಾಧ್ಯಾಪಕರಾದ ಅವರು ಕನ್ನಡದಲ್ಲಿ ಪಂಡಿತರಾಗಿದ್ದು ಕನ್ನಡ ಲಿಪಿಯ ಸುಧಾರಣೆಯ ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿ, ವಯಸ್ಕರ ಶಿಕ್ಷಣ ಸಮಿತಿ ಈ ಮಟ್ಟಕ್ಕೆ ಬೆಳೆಯಲು ಕಾರಣಕರ್ತರಾದ ಬಗ್ಗೆ ಲೇಖನ ಪ್ರಕಟವಾಗಿದೆ.[೨೨]

ದಿನಾಂಕ ೦೨.೦೨.೧೯೪೬ರ ಬೆಳಕು ಪತ್ರಿಕೆಯ ಸಂಚಿಕೆಯಲ್ಲಿ ಕರ್ನಾಟಕ ಭೂಪಟವನ್ನು ಮುಖಪುಟದ ಬಲಭಾಗದಲ್ಲಿ ಪ್ರಕಟಿಸಿದ್ದು, ಬೊಂಬಾಯಿ ನಗರದಲ್ಲಿ ೧೯.೦೧.೧೯೪೬ ರಂದು ಕನ್ನಡ ಏಕೀಕರಣ ಉತ್ಸವ ನಡೆದ ಬಗ್ಗೆ ಸರ್ದಾರ್ ವಲ್ಲಭಬಾಯಿ ಪಟೇಲರು ಕಳುಹಿಸಿಕೊಟ್ಟ ಭಾಷಣ ಈ ರೀತಿ ಇದ್ದು 'ಕನ್ನಡಿಗರು, ಕನ್ನಡ ಮನೆಮಾತಾಗಿ ಉಳ್ಳವರು, ವಿಶೇಷವಾಗಿ ಯಾವ ಪ್ರದೇಶದಲ್ಲಿದ್ದಾರೋ ಆ ಪ್ರದೇಶಗಳೆಲ್ಲ ಕೂಡಿ ಕನ್ನಡ ಪ್ರಾಂತ್ಯವಾಗಬೇಕು. ಈ ಬಗೆಗೆ ನನ್ನ ಸಹಾನುಭೂತಿ ಇದೆ, ಸದ್ಯದ ಪರಿಸ್ಥಿತಿಯಲ್ಲಿ ಪ್ರಾಂತ್ಯಗಳು ಸರಿಯಾಗಿ ವಿಭಾಗವಾಗಿಲ್ಲ ಚರಿತ್ರೆಯ ಆಧಾರದ, ಭಾಷೆಯ ಆಧಾರದ ಮೇಲೆ ವಿಭಾಗವಾಗದೆ ಹಠಾತ್ತನೆ ನಿರ್ಮಾಣವಾದ ಭೂಭಾಗದಿಂದಾಗಿ ಕನ್ನಡ ಮಾತನಾಡುವ ಸೀಮೆ ಛಿದ್ರಛಿದ್ರವಾಗಿ ತೆಲುಗು, ತಮಿಳು ಪ್ರಾಂತ್ಯಗಳಿಗೆ ಸೇರಿಹೋಗಿದೆ. ಕನ್ನಡ ಅಭಿವೃದ್ಧಿಗೆ ಅಡ್ಡಿ ಉಂಟಾಗಿದೆ. ಈಗೀಗ ಕನ್ನಡ ನಾಡು ಒಂದಾಗಬೇಕೆಂಬ ಭಾವನೆ ಪ್ರಬಲವಾಗುತ್ತಿದೆ. ಬ್ರಿಟಿಷ್ ಪ್ರಾಂತ್ಯದಲ್ಲಿ ಸೇರಿಹೋಗಿರುವ ಕನ್ನಡ ಸೀಮೆಗಳು ವಿಶಾಲವಾಗಿದ್ದು ಮೈಸೂರು ಸಂಸ್ಥಾನಕ್ಕಿಂತ ಹೆಚ್ಚಿನ ಕನ್ನಡಿಗರು ಅಲ್ಲಿ ನೆಲೆಸಿದ್ದಾರೆ. ಬ್ರಿಟಿಷ್ ಪ್ರಾಂತ್ಯದಲ್ಲಿ ಸೇರಿಹೋಗಿರುವ ಕರ್ನಾಟಕವು ಭಾರತದ ಸಿಂಧ್ ಪ್ರಾಂತ್ಯಕ್ಕಿಂತ ವಾಯವ್ಯ ಪ್ರಾಂತ್ಯಕ್ಕಿಂತ ದೊಡ್ಡದಾಗಿದ್ದು, ಇಷ್ಟು ದೊಡ್ಡದಾದ ಜನಭರಿತವಾದ ಪ್ರದೇಶಗಳನ್ನು ಒಂದಾಗಿಸುವ ಉದ್ದೇಶವೇ ಈ ಏಕೀಕರಣ ಉತ್ಸವಕ್ಕೆ ಕಾರಣ. ಇದಕ್ಕೆ ಯಾವ ಆಕ್ಷೇಪಣೆಯೂ ಇಲ್ಲ. ಇದು ನ್ಯಾಯವಾದ ವ್ಯವಸ್ಥೆಯೇ ಆಗಿದೆ. ಆದರೆ ಈ

ವ್ಯವಸ್ಥೆ ಕೈಗೂಡಬೇಕಾದರೆ ಮೊದಲು ಭಾರತವು ಸ್ವಾತಂತ್ರ ಗಳಿಸಬೇಕಾಗಿದೆ. ಈಗ ಅಲ್ಲಲ್ಲಿ ಚದುರಿಹೋಗಿರುವ ಕನ್ನಡ ಭಾಗಗಳನ್ನು ಒಂದಾಗಿಸಲು ಕನ್ನಡಿಗರು ಹೆಚ್ಚು ದಿನ ಕಾಯಬೇಕಾಗಿಲ್ಲ. ಇಷ್ಟರಲ್ಲೇ ಕರ್ನಾಟಕ ಪ್ರಾಂತ್ಯಕ್ಕೆ ಸಂತೋಷಪಡುವ ಕ್ಷಣಗಳು ದೊರಕುವುದರಲ್ಲಿ ಸಂದೇಹವಿಲ್ಲ' ಎಂದಿದ್ದಾರೆ. ಏಕೀಕರಣದ ಅಧ್ಯಕ್ಷತೆ ವಹಿಸಿದ್ದ ಶ್ರೀ ಖೇರರು ಮಾತನಾಡಿ 'ಒಂದು ಕೋಟಿ ಸಂಖ್ಯೆಗೂ ಹೆಚ್ಚಿರುವ ಕನ್ನಡಿಗರು ಪ್ರತ್ಯೇಕ ಪ್ರಾಂತ್ಯಕ್ಕೆ ಬೇಡಿಕೆ ಇಟ್ಟಿದ್ದು ನ್ಯಾಯಯುತವಾಗಿದೆ. ಇದಕ್ಕೆ ನನ್ನ ಬೆಂಬಲವಿದೆ. ಕನ್ನಡದ ಮೊದಲ ಹೋರಾಟ ಭಾರತದ ಸ್ವಾತಂತ್ರ್ಯಕ್ಕಾಗಿ ನಡೆಯಬೇಕು. ಆ ನಂತರವೇ ಕರ್ನಾಟಕ ಏಕೀಕರಣ ಬರಲು ಸಾಧ್ಯ. ನಿಮ್ಮ ಚಳವಳಿಯು ಫಲಪ್ರದವಾಗಲೆಂದು ಹಾರೈಸುತ್ತೇನೆಂದು ಮಾತನಾಡಿದರು'.[೨೩]

ದಿನಾಂಕ ೦೨.೦೩.೧೯೪೬ರ ಪತ್ರಿಕೆಯ ಸಂಚಿಕೆಯಲ್ಲಿ 'ಮಿತ್ರಮಂಡಳಿಯ ಕಾಣಿಕೆ' ಎಂಬ ಶೀರ್ಷಿಕೆಯಲ್ಲಿ ಬೆಂಗಳೂರಿನಲ್ಲಿರುವ ಕನ್ನಡ ಸಾಹಿತ್ಯ ಪರಿಷತ್ತು ನಮ್ಮ ತಾಯಿನುಡಿಯ ಗುಡಿಯಾಗಿದ್ದು, ಅದು ವರ್ಷಕ್ಕೊಮ್ಮೆ ಕನ್ನಡ ನಾಡುನುಡಿಗಳ ಪ್ರೇಮಿಗಳನ್ನು ಸೇರಿಸಿ ಸಾಹಿತ್ಯ ಹಬ್ಬವನ್ನು ಏರ್ಪಡಿಸುತ್ತದೆ. ಸಾಹಿತ್ಯ ಪರಿಷತ್ತಿನ ೨೯ನೇ ಹಬ್ಬ ಡಿಸೆಂಬರ್ ತಿಂಗಳಲ್ಲಿ ಮದ್ರಾಸ್ ನಗರದಲ್ಲಿ ವೈಭವದಿಂದ ನಡೆಯಿತು. ಅದರ ಅಧ್ಯಕ್ಷರಾಗಿ ಟಿ.ಪಿ. ಕೈಲಾಸಂರವರು ಭಾಗವಹಿಸಿದ್ದು, ಮದ್ರಾಸಿನ ಮಾಜಿ ಮಂತ್ರಿಗಳು, ಚಕ್ರವರ್ತಿ ರಾಜಗೋಪಾಲಚಾರಿಯವರು ಉತ್ಸವಕ್ಕೆ ಚಾಲನೆ ನೀಡಿದರು. ಈ ಉತ್ಸವದ ನೆನಪಿಗಾಗಿ ಮದರಾಸಿನ ಮಿತ್ರಮಂಡಳಿಯವರು 'ಮಿತ್ರಮಂಡಳಿಯ ಕಾಣಿಕೆ' ಕೃತಿಯನ್ನು ಪ್ರಕಟಿಸಿದ್ದು, ಅದರ ಸಂಪಾದಕರು ಮಿತ್ರಮಂಡಳಿಯ ಕಾರ್ಯದರ್ಶಿಗಳಾದ ಶ್ರೀ ಕೆ. ವಿಠಲರಾಯರು, ಮಿತ್ರಮಂಡಳಿಯ ಕಾಣಿಕೆ ಎಂಬ ಪುಸ್ತಕದಲ್ಲಿ ೧೪ ಪ್ರಬಂಧಗಳು, ೭ ಕವನಗಳನ್ನು ಕಾಣಬಹುದು. ಪ್ರಸಿದ್ಧ ಸಾಹಿತಿಗಳಾದ ವಿ. ಸೀತಾರಾಮಯ್ಯ, ಕಡೆಂಗೋಡ್ಲು ಶಂಕರಭಟ್ಟ, ಕೆ.ಎಸ್. ನರಸಿಂಹಸ್ವಾಮಿ, ಮಾಸ್ತಿ ವೆಂಕಟೇಶ ಅಯ್ಯಂಗಾರ್ ಮುಂತಾದವರು ಲೇಖನಗಳನ್ನು, ಕವನಗಳನ್ನು ಬರೆದಿದ್ದು, ಕನ್ನಡ ನಾಡುನುಡಿಗಳ ಏಕೀಕರಣ, ಕನ್ನಡ ಸಾಹಿತ್ಯ ಪರಿಷತ್ತು ಬೆಳೆದುಬಂದಿದ್ದರ ಬಗೆಗಿನ ಲೇಖನಗಳು ಇದ್ದು ಕನ್ನಡ ನಾಡು ಸುಂದರವಾದ ದೇಶ ಸಂಸ್ಕೃತಿ, ಧರ್ಮ, ಕವಿಗಳು, ದೇವಾಲಯಗಳು, ಶಿಲ್ಪಕಲೆ, ಧನ, ಧಾನ್ಯ ವಿದ್ಯೆ, ಬುದ್ಧಿ, ಕಾರ್ಯದಲ್ಲಿ ಮುಂದಿದ್ದ ಕನ್ನಡ ಜನತೆ ಹಿಂದಿನ ವೈಭವವನ್ನು ಬೆಳೆಸಿಕೊಂಡುಬರುವ ಹೊಣೆಗಾರಿಕೆಯನ್ನು ಹೊತ್ತಿದ್ದು ಈ ಲೇಖನಗಳನ್ನು ಓದಬೇಕೆಂದು ಪ್ರಕಟಿಸಲಾಗಿದೆ. ಬೆಳಕು ಪತ್ರಿಕೆಯು ಕನ್ನಡ ನಾಡುನುಡಿಯ ರಕ್ಷಣೆ ಏಕೀಕರಣದ ಹಂಬಲವನ್ನು ಇಟ್ಟುಕೊಂಡಂತಹ ಪತ್ರಿಕೆಯಾಗಿದ್ದು, ನವಸಾಕ್ಷರರಿಗಾಗಿ ಇದ್ದ ಪತ್ರಿಕೆಯಾದರೂ ವಿಚಾರಪೂರಿತ ಲೇಖನಗಳನ್ನು ಚಿಂತನೆಗೆ ಒಡ್ಡುವ ವಿಚಾರಧಾರೆಗಳನ್ನು ಪ್ರಕಟಿಸಲು ಮುಂಚೂಣಿಯಲ್ಲಿ ಇತ್ತೆಂದರೆ ತಪ್ಪಾಗಲಾರದು.[೨೪]

ದಿನಾಂಕ ೦೩.೦೮.೧೯೪೬ರ ಸಂಚಿಕೆಯಲ್ಲಿ 'ಕನ್ನಡ ನಾಡಿನ ಒಗ್ಗಟ್ಟು' ಎಂಬ ಶೀರ್ಷಿಕೆಯಡಿಯಲ್ಲಿ ಕನ್ನಡನಾಡು ಬೇರೆಬೇರೆಯಾಗಿ ಒಡೆದುಹೋಗಿದ್ದು, ಮುಂಬೈ, ಮದ್ರಾಸ್ ಪ್ರಾಂತ್ಯಕ್ಕೆ ಮೈಸೂರು ಸಂಸ್ಥಾನ, ಮುಧೋಳ ಸಂಸ್ಥಾನ ಎಂದು ಹರಿದು ಹಂಚಿ ಹೋಗಿದ್ದು ಈ ಭಾಗಗಳು ಒಂದಾಗಬೇಕಾದರೆ ಈ ಭಾಗದ ಜನರು ಕೂಡಿ ಹೀಗೆ ಒಂದಾಗಬೇಕೆಂದು ರಾಜ್ಯಾಂಗ ಸಮಿತಿಗೆ ತಿಳಿಸಬೇಕು. ಅದಕ್ಕಾಗಿ ದಾವಣಗೆರೆಯಲ್ಲಿ ಸೆಪ್ಟೆಂಬರ್ ೩ನೇ ವಾರ ಕನ್ನಡನಾಡಿನ ಎಲ್ಲಾ ಕಡೆಯಿಂದ ಸದಸ್ಯರು ಪ್ರತಿನಿಧಿ ಸಭೆಯ ಸದಸ್ಯರು, ಪ್ರಜಾಮುಖಂಡರು ಬಂದು ಸೇರುವ ನಿರೀಕ್ಷೆ ಇದೆ ಎಂದು ಏಕೀಕರಣದ ಬಗ್ಗೆ ಸುದ್ದಿ ಪ್ರಕಟವಾಗಿದೆ.[೨೫]

ದಿನಾಂಕ ೧೪.೦೯.೧೯೪೬ರ ಸಂಚಿಕೆಯಲ್ಲಿ 'ಏಕೀಕರಣ ಮಹಾ ಪರಿಷತ್ತು ಕರ್ನಾಟಕ ಏಕೀಕರಣ' ಎನ್ನುವ ಶೀರ್ಷಿಕೆಯಡಿಯಲ್ಲಿ ದಾವಣಗೆರೆಯಲ್ಲಿ ಆಗಸ್ಟ್ ೩೧ನೇ ತಾರೀಖು 'ಉತ್ಸವ' ನಡೆದ ಬಗ್ಗೆ, ಕನ್ನಡ ಭಾಷೆಯನ್ನು ಮಾತನಾಡುವ ನಾಡಿಗೆ ಕನ್ನಡ ನಾಡು ಎಂದು ಕರೆದಿದ್ದು ದಕ್ಷಿಣ ಭಾರತದ ಮುಕ್ಕಾಲು ಭಾಗ ಕನ್ನಡನಾಡಿಗೆ ಸೇರಿತ್ತು. ಈಗ ಬೊಂಬಾಯಿ, ಮದ್ರಾಸ್, ಹೈದರಾಬಾದ್, ಇತರ ಸಣ್ಣಪುಟ್ಟ ಸಂಸ್ಥಾನಗಳಿಗೆ ಹರಿದು ಹಂಚಿಹೋಗಿರುವ ಅನೇಕ ಭಾಗಗಳು ಹಿಂದೆ ಒಬ್ಬ ರಾಜನ ಆಳ್ವಿಕೆಗೆ ಒಳಪಟ್ಟು ಕನ್ನಡ ರಾಜಭಾಷೆಯಾಗಿತ್ತು. ಆದರೆ ಈಗ ಕನ್ನಡನಾಡು ೨೧ ಭಾಗವಾಗಿ ಒಡೆದುಹೋಗಿದೆ. ಮೈಸೂರಿನಲ್ಲಿ ಮಾತ್ರ ಕನ್ನಡ ರಾಜಭಾಷೆಯಾಗಿದೆ, ಉಳಿದ ಪ್ರಾಂತ್ಯಗಳಲ್ಲಿ ವಾಸಿಸುತ್ತಿರುವ ಕನ್ನಡಿಗರಿಗೆ ಆಡಳಿತ ಭಾಷೆ ಬೇರೆಯಾಗಿದ್ದು, ವ್ಯವಹಾರ, ವಿದ್ಯಾಭ್ಯಾಸ ಇತರೆ ಭಾಷೆಯಲ್ಲಿ ಮಾತಾಡಬೇಕಾಗಿದ್ದು ಬಹಳ ತೊಂದರೆಯಾಗಿದೆ. ಆದ್ದರಿಂದ ಕನ್ನಡಿಗರು ವಾಸಮಾಡುತ್ತಿರುವ ಪ್ರದೇಶಗಳನ್ನು ಒಂದುಗೂಡಿಸಿ ಒಂದು ನಾಡನ್ನಾಗಿಸಿ ರಾಜಭಾಷೆ ಕನ್ನಡವಾಗಿ, ಆಡುಭಾಷೆ ಕನ್ನಡವಾಗಿ, ಕನ್ನಡದ ದೊರೆ ಆಳಬೇಕು. ಕನ್ನಡ ಜನ ಬಹಳ ದಿನದಿಂದಲೂ ಚಳವಳಿ ಮಾಡುತ್ತಿದ್ದು, ಏಕೀಕರಣ ಪರಿಷತ್ತು ಉತ್ಸವಗಳನ್ನು ಮಾಡುತ್ತ ಬಂದಿದೆ. ದಾವಣಗೆರೆಯಲ್ಲಿ ರಾಜನಹಳ್ಳಿ ಹನುಮಂತರವರು ಕಟ್ಟಿಸಿರುವ ಧರ್ಮಛತ್ರದಲ್ಲಿ ದೊಡ್ಡ ಚಪ್ಪರ ಹಾಕಿಸಿ, ಏಕೀಕರಣ ಪರಿಷತ್ತಿನ ಉತ್ಸವ ಬೊಂಬಾಯಿನ ಅರಣ್ಯ ಮಂತ್ರಿಗಳಾದ ಶ್ರೀ ಪಾಟೀಲರ ಅಧ್ಯಕ್ಷತೆಯಲ್ಲಿ, ಮದರಾಸು ಸರ್ಕಾರದ ಭೂ ಕಂದಾಯ ಮಂತ್ರಿಗಳಾದ ಶ್ರೀಯುತ ಕಾರಂತರ ಚಾಲನೆಯೊಂದಿಗೆ ಉತ್ಸವ ಪ್ರಾರಂಭವಾಗಿದ್ದು, ಎಲ್ಲಾ ಪ್ರಾಂತ್ಯಗಳಿಂದ ಜನಸ್ತೋಮ ಆಗಮಿಸಿದ್ದು, ೨೧ ಭಾಗವಾಗಿ ಒಡೆದುಹೋಗಿರುವ ಕರ್ನಾಟಕದ ಜನ ಒಂದೆಡೆ ಸೇರಿ ಜತೆಗೆ ಜವಾಬ್ದಾರಿ ಸರ್ಕಾರ ಸ್ಥಾಪನೆಯಾಗುವುದರ ಬಗ್ಗೆ ಗಡಿಯನ್ನು ನಿರ್ಧರಿಸಲು ತಾಳ್ಮೆಯಿಂದ ಕೆಲಸ ಮಾಡುವ ಬಗ್ಗೆ, ಅಧ್ಯಕ್ಷರು ಬದಲಾವಣೆಗಳ ಕಾಲ ಈಗ ಬಂದಿದ್ದು ಕನ್ನಡಿಗರು ಒಟ್ಟುಗೂಡಬೇಕೆಂಬ ಆಶಯವನ್ನು ವ್ಯಕ್ತಪಡಿಸಿದ ಬಗ್ಗೆ, ೬೬ ವರ್ಷಗಳಿಂದ ಚಳವಳಿ ನಡೆಯುತ್ತಿರುವ ಬಗ್ಗೆ, ಭಾಷಾವಾರು ಪ್ರಾಂತ್ಯಗಳಲ್ಲಿ ಆಯಾ ಭಾಷೆಯ ಮೂಲಕವೇ ಶಿಕ್ಷಣ ನಡೆಯಬೇಕೆಂಬುದರ ಬಗ್ಗೆ, ಅಲ್ಪಸಂಖ್ಯಾತರು, ಇತರರು ಇದರಿಂದ ಯಾವುದೇ ಹಿಂಜರಿಕೆ

ಇಟ್ಟುಕೊಳ್ಳದೆ ಇರುವ ಬಗ್ಗೆ ಸುದ್ದಿ ಪ್ರಕಟವಾಗಿದೆ. ಆ ಸಭೆಯ ಉತ್ಸವದಲ್ಲಿ ೩ ಗೊತ್ತುವಳಿಗಳನ್ನು ಮಂಡಿಸಲಾಗಿದ್ದು, ಕರ್ನಾಟಕ ಒಂದುಗೂಡುವ ಬಗ್ಗೆ ಕರ್ನಾಟಕದ ಜನರಿಗೆ ಒಂದೇ ಸರ್ಕಾರ ಒಂದೇ ಆಡಳಿತ ಇರುವ ಬಗ್ಗೆ ಭಾಷಾವಾರು ಪ್ರಾಂತ್ಯ ರಚನೆಯಾಗುವ ಬಗ್ಗೆ, ಇವೆಲ್ಲ ಕೆಲಸವನ್ನು ಮಾಡಲು ಒಂದು ಸಮಿತಿಯನ್ನು ರಚಿಸುವ ಬಗ್ಗೆ ತೀರ್ಮಾನಿಸಲಾಗಿದ್ದು, ಈ ಸುದ್ದಿ ವಿವರವಾಗಿ ಪತ್ರಿಕೆಯಲ್ಲಿ ಪ್ರಕಟವಾಗಿದ್ದು, ಸ್ವಾತಂತ್ರ್ಯ ಪೂರ್ವದಲ್ಲಿಯೇ ಬೆಳಕು ಪತ್ರಿಕೆ ಏಕೀಕರಣಕ್ಕೆ ತನ್ನ ಬೆಂಬಲವನ್ನು ನೀಡುತ್ತಿತ್ತು ಮತ್ತು ಅದರ ಹಿಂದೆ ಸಂಪಾದಕರಾದ ಎಂ.ಆರ್. ಲಕ್ಷ್ಮಮ್ಮನವರ ಪ್ರಯತ್ನ ಇತ್ತೆಂದು ತಿಳಿಯಬಹುದು.[೨೬]

ದಿನಾಂಕ ೧೨.೧೦.೧೯೪೬ರ ಪತ್ರಿಕೆಯ ಸಂಚಿಕೆಯಲ್ಲಿ 'ಕನ್ನಡ ಲಿಪಿಯ ಸುಧಾರಣೆ' ಎಂಬ ಶೀರ್ಷಿಕೆಯಡಿಯಲ್ಲಿ ಕನ್ನಡ ವರ್ಣಮಾಲೆಯಲ್ಲಿ ೫೦ ಅಕ್ಷರಗಳಿದ್ದು, ಗುಣಿತಾಕ್ಷರಗಳನ್ನು ಮಾಡುವುದಕ್ಕಾಗಿ ಅನೇಕ ಗುರುತುಗಳಿದ್ದು, ಓದುಬರಹವನ್ನು ಕಲಿಯುವ ದೃಷ್ಟಿಯಿಂದ, ಕನ್ನಡ ಭಾಷೆಯಲ್ಲಿ ಸುಲಭವಾಗಿ ಟೈಪ್ ಮಾಡುವ ಯಂತ್ರವನ್ನು ತಯಾರಿಸುವ ದೃಷ್ಟಿಯಿಂದ, ಅಚ್ಚಿನ ಕೆಲಸಕಾರ್ಯಗಳು ಸುಲಭವಾಗಿ ನಡೆಯುವ ದೃಷ್ಟಿಯಿಂದ, ಕನ್ನಡ ಅಕ್ಷರಗಳನ್ನು ಸುಧಾರಣೆ ಮಾಡಬೇಕೆಂದು ಹಲವು ವರ್ಷಗಳಿಂದ ಪ್ರಯತ್ನಿಸುತ್ತಿದ್ದು, ೧೯೪೩ರಲ್ಲಿ ಮಂಗಳೂರಿನಲ್ಲಿ ಪತ್ರಿಕೋದ್ಯಮಿಗಳ ಸಮ್ಮೇಳನದಲ್ಲಿ ಸುಧಾರಣೆ ಅವಶ್ಯಕವೆಂದು ಅಭಿಪ್ರಾಯಪಟ್ಟಿದ್ದು, ವಯಸ್ಕರ ಶಿಕ್ಷಣ ಸಮಿತಿಯ ಅಂಗವಾದ ಕನ್ನಡ ಸಮಿತಿಯ ಕಾರ್ಯದರ್ಶಿಗಳು ಮಹಾರಾಜ ಕಾಲೇಜಿನ ಮನಃಶಾಸ್ತ್ರಜ್ಞ ಪಂಡಿತರು ಆದ ಡಾ. ಕುಪ್ಪುಸ್ವಾಮಿಯವರು ಪ್ರಯತ್ನಪಟ್ಟು ಮಹಾರಾಜ ಕಾಲೇಜಿನಲ್ಲಿ ಶಿಕ್ಷಣ ಶಾಖಾಧ್ಯಕ್ಷರಾದ ಕಸ್ತೂರಿ ರಾಜಶೆಟ್ಟಿಯವರ ಅಧ್ಯಕ್ಷತೆಯಲ್ಲಿ ೦೮.೧೦.೧೯೪೬ರಲ್ಲಿ ಸಭೆ ಸೇರಿದ್ದರು.[೨೭]

ದಿನಾಂಕ ೨೨.೧೧.೧೯೪೭ರಲ್ಲಿ ಕರ್ನಾಟಕ ಏಕೀಕರಣ ಎಂಬ ಶೀರ್ಷಿಕೆಯಡಿಯಲ್ಲಿ ಕನ್ನಡ ದೇಶ ಹರಿದು ಹಂಚಿಹೋಗಿದ್ದು, ಕನ್ನಡ ನುಡಿ ನಾಡನ್ನು, ಕನ್ನಡಿಗರನ್ನು ಉಳಿಸುವ ಸಲುವಾಗಿ ಕನ್ನಡನಾಡು ಒಂದುಗೂಡಬೇಕಾಗಿದ್ದು, ಕರ್ನಾಟಕ ಏಕೀಕರಣಕ್ಕಾಗಿ ಒಂದು ಸಮಿತಿ ರಚನೆಯಾಗಿದ್ದು, ಡಿ.ಹೆಚ್. ಚಂದ್ರಶೇಖರಯ್ಯನವರು, ಎಸ್. ನಿಜಲಿಂಗಪ್ಪನವರು ಮತ್ತು ರಂಗನಾಥ ದಿವಾಕರರು ಸದಸ್ಯರಾಗಿದ್ದು, ಆದಷ್ಟು ಬೇಗ ಕನ್ನಡನಾಡು ಒಂದಾಗಿ ವಯಸ್ಕರ ಶಿಕ್ಷಣ ಕಾರ್ಯ ಯಶಸ್ವಿಯಾಗಿ ನಡೆಯುವಂತಾಗಲೆಂದು ಸುದ್ದಿ ಪ್ರಕಟವಾಗಿದೆ.[೨೮]

ದಿನಾಂಕ ೦೫.೦೧.೧೯೪೬ ರ ಸಂಚಿಕೆಯಲ್ಲಿ ಸಿ.ಕೆ. ತಿರುಮಲ್ಲೇಶ ಮದರಾಸು ವಿಶ್ವ ವಿದ್ಯಾನಿಲಯ ಇವರು ರಚಿಸಿರುವ ಕರ್ನಾಟಕದ ನಾಡು ನುಡಿಗೆ ಸಂಬಂಧಿಸಿದ 'ಸ್ವಾಗತ ಗೀತೆ' ೩೯ ಸಾಲುಗಳನ್ನು ಒಳಗೊಂಡಿದ್ದು ಕಾವೇರಿ, ಗೋದಾವರಿ, ಪಶ್ಚಿಮವಾಹಿನಿ, ಪೂರ್ವವಾಹಿನಿ ನದಿಗಳ ಬಗ್ಗೆ ಗಿಳಿ ಕೋಗಿಲೆಗಳ ಇಂಚರ ಜೋಳ, ರಾಗಿ, ನವಣೆ, ಬೆಳೆಗಳು ಬಾಳೆ, ಕಿತ್ತಳೆ, ಹಲಸು, ತೆಂಗು, ಕಂಗುಗಳು, ಮಲ್ಲಿಗೆ, ಜಾಜಿ, ಸೇವಂತಿಗೆ, ಸಂಪಿಗೆ, ಕೇದಗೆ,

ಗುಲಾಬಿ, ಕೊಡಗಿನ ಬೆಡಗು ಜಾತಿ ಮರಗಳು ಹಲವು ಇದ್ದರು, ನಾಡನುಡಿ, ಗಡಿ, ನಡತೆ, ಎಲ್ಲ ವೈವಿಧ್ಯತೆ ಇದ್ದರೂ, ಹಲವು ಅರಸುಮನೆತನವಿದ್ದರೂ, ಕೂಡ ಕರ್ನಾಟಕ ಒಂದೇ ತಮಿಳು, ತೆಲುಗು, ಮಲಯಾಳಿ, ತುಳು ಮೊದಲಾದ ಭಾಷೆಗಳಿದ್ದರೂ ಕನ್ನಡ ಕಸ್ತೂರಿಯ ಪರಿಮಳ, ಸಾಗರದ ಮೊರೆತ ಎಲ್ಲವನ್ನು ಹೊಂದಿರುವ ಕನ್ನಡದ ಸಿರಿ ಉದಯವಾಗಲಿ, ಎಲ್ಲಾ ಸೋದರ ಸೋದರಿಯರೆ ನೀವೆಲ್ಲರೂ ಸಹಕರಿಸಿ ಸ್ವಾಗತ, ಸ್ವಾಗತ ನಿಮಗೆ ಎಂಬ ಗೀತೆಯು ಪ್ರಕಟವಾಗಿದ್ದು ಕರ್ನಾಟಕದ ಏಕೀಕರಣವಾಗಬೇಕೆಂಬ ದನಿಯನ್ನು ಈ ಸ್ವಾಗತ ಗೀತೆಯು ಮೊಳಗಿಸುತ್ತಿದೆ.[೨೯]

ದಿನಾಂಕ ೧೨.೦೧.೧೯೪೬ರ ಸಂಚಿಕೆಯಲ್ಲಿ ನರಸಿಂಹಮೂರ್ತಿಯವರು ರಚಿಸಿದ ಮೈಸೂರು ವೈಭವ ಎಂಬ ಲಾವಣಿ ೯ ಚರಣಗಳನ್ನು ಒಳಗೊಂಡಿದ್ದು, ಕನ್ನಡ ನುಡಿಯನ್ನು ಎಲ್ಲರು ಕಲಿಯಲಿ, ಕನ್ನಡಮಾತೆಯ ಪೂಜಿಸಿರಿ, ಜನ್ಮದಾತೆ ಆಕೆ ಪೊರೆವಳು ಎಲ್ಲರ ಮನ್ನಣೆಯಿಂದಲಿ ಕಾಂಬುದು ನೀವು. ದಾನಶೂರರ ನಾಡು, ವೀರರ ಬೀಡು ಧರ್ಮದ ನೆಲೆಬೀಡು, ಜಲಪಾತದ ಸೌಂದರ್ಯ, ಭದ್ರಾವತಿ, ಮಂಡ್ಯ, ಬೆಂಗಳೂರು ಮತ್ತು ಮೈಸೂರು ಕಾರ್ಖಾನೆಗಳ ಬಗ್ಗೆ ಚನ್ನಪಟ್ಟಣ, ದಾವಣಗೆರೆಯ ಕೈಗಾರಿಕೆಗಳು, ಬೇಲೂರು, ಹಳೇಬೀಡು, ಕೆಳದಿ, ಸೋಮನಾಥಪುರ ಶಿಲ್ಪ ಶಾಲೆಯ ವೈಭವವನ್ನು ಬೃಂದಾವನದ ಕೃಷ್ಣರಾಜಸಾಗರದ ಸುಂದರತೆಯನ್ನು ಸಾರುವ ಈ ಗೀತೆಯು ಕನ್ನಡ ನಾಡು ನುಡಿಯನ್ನು ಮೇಲ್ಮಟ್ಟಕ್ಕೇರಿಸುವ ಗೀತೆಯಾಗಿದ್ದು ಇದರ ಹಿಂದಿನ ಆಶಯ ಕನ್ನಡ ನಾಡಿನ ಏಕೀಕರಣವೇ ಆಗಿದೆ ಎಂದು ಭಾವಿಸಬಹುದು.[೩೦]

ದಿನಾಂಕ ೧೫.೦೯.೧೯೪೫ರಂದು 'ಹೈದರಾಬಾದಿನಲ್ಲಿ ಕನ್ನಡ ಚಳವಳಿ' ಎಂಬ ಶೀರ್ಷಿಕೆಯಲ್ಲಿ ಏಕೀಕರಣಕ್ಕಾಗಿ ಹೈದರಾಬಾದ್ ಸಂಸ್ಥಾನದಲ್ಲಿರುವ ಕನ್ನಡ ಮಾತನಾಡುವ ಜನತೆ ಒಂದು ಸಮ್ಮೇಳನವನ್ನು ರಾಯಚೂರಿನಲ್ಲಿ ನಡೆಸಿದ ಬಗ್ಗೆ ಸರ್ಕಾರದ ಆಡಳಿತ ಭಾಷೆ ಮರಾಠಿ ಮತ್ತು ತೆಲುಗು ಭಾಷೆಯಾಗಿದ್ದು, ಕನ್ನಡದಲ್ಲಿ ಸರ್ಕಾರದ ಅರ್ಜಿಗಳನ್ನು ಪ್ರಕಟಿಸಬೇಕೆಂದು ಹಾಗೂ ರೇಡಿಯೋ ಕೇಂದ್ರದಲ್ಲಿ ಕನ್ನಡದ ಕಾರ್ಯಕ್ರಮಗಳನ್ನು ಜರುಗಿಸಲು ಸರ್ಕಾರಕ್ಕೆ ಮನವಿಯನ್ನು ಮಾಡಿಕೊಳ್ಳಲು ಹಾಗೂ ಕನ್ನಡ ಮಾಸಪತ್ರಿಕೆಯೊಂದನ್ನು ಹೊರಡಿಸಲು ಕನ್ನಡಿಗರು ಪ್ರಯತ್ನಿಸಬೇಕೆಂದು ಸಮ್ಮೇಳನದಲ್ಲಿ ತೀರ್ಮಾನವನ್ನು ಕೈಗೊಂಡ ಬಗ್ಗೆ ಸುದ್ದಿ ಪ್ರಕಟವಾಗಿದ್ದು, ಎಂ.ಆರ್. ಲಕ್ಷಮ್ಮನವರು ಸ್ವಾತಂತ್ರ್ಯ ಬರುವುದಕ್ಕಿಂತ ಮುಂಚೆಯೇ ಏಕೀಕರಣದ ಚಿಂತನೆಗಳನ್ನು ಹೊಂದಿದ್ದರು ಮತ್ತು ಏಕೀಕರಣಪರವಾದ ಅಭಿಪ್ರಾಯವನ್ನು ಹೊಂದಿದ್ದರೆಂಬುದು ಈ ಲೇಖನದಿಂದ ತಿಳಿದುಬರುತ್ತದೆ.[೩೧]

## ೪.೮. ಸೋದರಿ ಪತ್ರಿಕೆಯಲ್ಲಿ ಪ್ರಕಟಗೊಂಡ ಎಂ.ಆರ್. ಲಕ್ಷಮ್ಮ ಅವರ ಏಕೀಕರಣದ ಚಿಂತನೆಗಳು

ಭಾರತದ ವಾತಾವರಣದಿಂದ ಕರ್ನಾಟಕ, ಭಾರತೀಯ ಮಹಿಳಾ ಜೀವನದಿಂದ ಕನ್ನಡಿತಿ ಹೊರತಾಗಿಲ್ಲ. ದೇಶದಲ್ಲಾದ ರಾಜಕೀಯ ಸ್ಥಿತ್ಯಂತರಗಳ ಒತ್ತಡಕ್ಕೆ ಸಿಕ್ಕು ಅವಳು ಸಾಕಷ್ಟು ನೂಕುನುಗ್ಗಲಾದಳು. ತಿರುಗಿ ದೇಶದ ಕರೆ ಬಂದಾಗ ಅದಕ್ಕೆ ಓಗೊಟ್ಟು ತನ್ನ ಪಾಲಿನ ಕರ್ತವ್ಯವನ್ನು ಪೂರೈಸಿದರು. ಆದರೆ ಒಟ್ಟು ಕನ್ನಡನಾಡೇ ಪ್ರಗತಿಪಥದಲ್ಲಿ ಮುನ್ನಡೆಯದಿದ್ದಾಗ ಕರ್ನಾಟಕದ ಮಹಿಳೆಯರು ಕ್ರಮದಿಂದ ಹಿಂದೆ ಉಳಿಯಬೇಕಾಯಿತು. ವಿಜಯನಗರ ಸಾಮ್ರಾಜ್ಯ ಪತನವಾದ ಮೇಲೆ ಕರ್ನಾಟಕ ಪುನಃ ಅಂತಹ ಉಚ್ಛ್ರಾಯ ಕಾಲವನ್ನು ಊರ್ಜಿತ ಸ್ಥಿತಿಯನ್ನು ಕಾಣಲಿಲ್ಲ. ಇದ್ದುದರಲ್ಲಿಯೇ ಸಮಾಧಾನ ಹೊಂದಿ ಪ್ರವಾಹವು ಕೊಚ್ಚಿಕೊಂಡು ಹೋದತ್ತ ಕರ್ನಾಟಕವು ತನ್ನ ಜೀವನವನ್ನು ಸಾಗುಬಿಡುತ್ತ ಬಂದಿತು. ದೇಶಕ್ಕೆ ದಾರಿ ತೋರಲಿಲ್ಲ, ಏಕೈಕ ನಾಯಕ ಕರ್ನಾಟಕದ ರತ್ನಗರ್ಭದಿಂದ ಉದಿಸಲಿಲ್ಲ. ಅದರಂತೆ ತನ್ನ ಸೋದರಿಯರ ಪುನರುದ್ಧಾರಕ್ಕೆ ಜೀವ ಸವೆಸುವೆನೆಂದು ಪಣ ತೊಡುವ ಹಿರಿಯಣ್ಣನನ್ನು ಕನ್ನಡತಿಯರು ಪಡೆಯಲಿಲ್ಲ. ಕನ್ನಡನಾಡಿನಂತೆ ಕನ್ನಡಿಗರ ಮನಸ್ಸು ಹರಕುಮುರುಕಾಯಿತು. ವಿಶಾಲ ಭಾವನೆಗೆ ಅಲ್ಲಿ ಸ್ಥಳವಿರಲಿಲ್ಲ. ನಶಿಸಿಹೋಗಿದ್ದ ಸಾಮಾಜಿಕ ಜೀವನ ಕನ್ನಡನಾಡಿನಲ್ಲಿ ರೂಪುಗೊಳ್ಳಲು ಬಹಳ ತಡೆಹಿಡಿಯಿತು. ಈ ಕ್ಷಣಕ್ಕೆ ಸಹ ಅದು ಯಥಾವತ್ತಾಗಿ ರೂಪುಗೊಂಡಿದೆಯೆಂದು ಹೇಳಲಿಕ್ಕೆ ಬರುವುದಿಲ್ಲ. ಹೊರಗಿನವರು ಬಂದು ಎಳೆದಾಗ ಆ ಚಿತ್ರದ ಒಂದು ರೇಖೆ ಮೂಡುವುದು. ಸ್ವಯಂ ಸ್ಫೂರ್ತಿಯಿಂದ ಮುಂದಾಗಿ ಆ ಚಿತ್ರಣವನ್ನು ಪೂರ್ತಿಗೊಳಿಸಬೇಕೆಂಬ ನಿಶ್ಚಲ ಧ್ಯೇಯವಾದಿಗಳು ಇನ್ನೂ ಬಹಳ ಜನ ಕರ್ನಾಟಕದಲ್ಲಿ ಹುಟ್ಟಲೇಬೇಕಾಗಿದೆ. ಭಾರತದ ಪುನರುಜ್ಜೀವನದೊಡನೆ ಉಳಿದ ಪ್ರಾಂತ್ಯಗಳು ಹೊಂದಿರುವ ಒಂದು ಪ್ರಗತಿಯೊಂದಿಗೆ ಕರ್ನಾಟಕವನ್ನು ಹೋಲಿಸಿ ನೋಡಿದರೆ ತಲೆ ತಗ್ಗಿಸಬೇಕಾಗುವುದು. ಆದರೆ ಒಂದು ಮಾತು, ದೇಶಕ್ಕಾಗಿ ದೇಶದ ಹಿತಕ್ಕಾಗಿ ಬಲಿದಾನ ಮಾಡಬೇಕಾದಾಗ ಮಾತ್ರ ಕರ್ನಾಟಕ ಎಂದೂ ಹಿಂತೆಗೆದಿಲ್ಲ. ಪ್ರಾಮಾಣಿಕ ಸೈನಿಕನಂತೆ ಜೀವದ ಹಂಗುತೊರೆದು ಹೋರಾಡಿ ಸೇನಾ ನಾಯಕನ ಆಜ್ಞೆಯಂತೆ ರಕ್ತತರ್ಪಣವನ್ನು ನೀಡಿದೆ. ಅಂದಮೇಲೆ ಕರ್ನಾಟಕದಲ್ಲಿ ಕೆಚ್ಚಿಲ್ಲವೆನ್ನಬೇಕೆ? ಅಭಿಮಾನವಿಲ್ಲವೆನ್ನಬೇಕೆ? ಎಲ್ಲಾ ಇದ್ದು ಇದ್ದುದನ್ನು ಸರಿಯಾಗಿ ವಿನಿಯೋಗಿಸುವ ಬುದ್ಧಿ ಇಲ್ಲವೆನ್ನಬೇಕೆ ಅಥವಾ ಆ ವಿನಿಯೋಗದ ಸರಿಯಾದ ಫಲ ದುರ್ದೈವದಿಂದ ದೊರಕುತ್ತಿಲ್ಲವೆನ್ನಬೇಕೆ?

ಒಟ್ಟಿನಲ್ಲಿ ಕರ್ನಾಟಕವನ್ನಿಂದು ಬಲವಂತವಾಗಿ ದಬ್ಬಿ, ಮುನ್ನುಗ್ಗಿಸಬೇಕಾಗಿದೆಯಲ್ಲದೆ, ಅದು ತಪ್ಪಿ ಕೂಡ ತಾನಾಗಿ ಮುಂದುವರಿಯುತ್ತಿಲ್ಲ. ಭಾರತದ ಭಾಗ್ಯೋದಯಕ್ಕಾಗಿ ಕನ್ನಡಿಗರು ಎಲ್ಲರೊಡನೆ ಸರಿಸಮಾನರಾಗಿ ಹೋರಾಡಿದ್ದಾರೆ. ಮೊದಲು ಭಾರತ ಸ್ವಂತವಾಗಲಿ, ಆಮೇಲೆ ನಮ್ಮ ಸಮಸ್ಯೆಗಳಿಗೆ ಅಲ್ಲಿ ತಕ್ಕ ಪರಿಹಾರ ದೊರೆಯುವುದು ಎಂದು ದೃಢವಾಗಿ ನಂಬಿ ತಮ್ಮ ಶಕ್ತಿ ಸರ್ವಸ್ವವನ್ನೂ ಭಾರತದ ಸ್ವಾತಂತ್ರ್ಯಪ್ರಾಪ್ತಿಗಾಗಿ ಸೂರೆಗೈದಿದ್ದಾರೆ.

ತಮ್ಮ ಹಿತಾಹಿತವನ್ನು ಬದಿಗಿರಿಸಿ ತಮ್ಮ ಲಕ್ಷ್ಯವನ್ನೆಲ್ಲ ಸ್ವಾತಂತ್ರ್ಯ ಸಂಪಾದನೆಯ ಕಾರ್ಯದಲ್ಲಿ ಕೇಂದ್ರೀಕರಿಸಿ ಹೋರಾಡಿದ್ದಾರೆ. ಅವರೆಂದೂ ಭಾರತದ ಅಹಿತವನ್ನು ಬಯಸಲಾರರು. ಕನ್ನಡನಾಡು ಬೆಳೆದು ಭಾರತದ ಸೇವೆಗೈಯಬೇಕೆಂದರೆ ಕನ್ನಡಿಗರ ಐಕ್ಯ ಅವಶ್ಯ. ಇದರ ವಿಸ್ತೃತ ವಿಚಾರ ಇಲ್ಲಿ ಅಪ್ರಸ್ತುತ. ಕರ್ನಾಟಕದ ವಾತಾವರಣ ಹೇಗೆಂದು ನೋಡುವಾಗ, ಅದು ಹೊಂದಿದ ಪ್ರಗತಿ ಎಷ್ಟೆಂದು ಅಳೆಯುವಾಗ ಕನ್ನಡಿಗರಲ್ಲಿ ಐಕಮತ್ಯವಿಲ್ಲವೆಂಬ ವಿಚಾರ ಅನಿವಾರ್ಯವಾಗಿ ಮುಂದೆ ಬಂದು ನಿಲ್ಲುವುದು. ತೊಡೆದುಹಾಕಿದರೂ ಅದು ಅಳಿಯುವುದಿಲ್ಲ. ಹರಿದು ಹಂಚಿದ ಕರ್ನಾಟಕದ ಶಕ್ತಿಗಳೆಲ್ಲ ಒಟ್ಟುಗೂಡಿ ತಮ್ಮ ಅಭ್ಯುದಯವನ್ನು ಸಾಧಿಸಲು ಪ್ರಯತ್ನಿಸುವಂತಿದ್ದರೆ ಕರ್ನಾಟಕದ ವಾತಾವರಣದಲ್ಲಿ ಆಶಾದಾಯಕ ಉತ್ಸಾಹ ಪ್ರಕಟವಾಗುತ್ತಿತ್ತು.

ದಿನಾಂಕ ೩೦.೦೭.೧೯೫೪ರ ಬೆಳಕು ಪತ್ರಿಕೆಯ ಸಂಚಿಕೆಯಲ್ಲಿ 'ಕರ್ನಾಟಕದ ಏಳಿಗೆಗಾಗಿ' ಎಂಬ ಶೀರ್ಷಿಕೆಯ ಅಡಿಯಲ್ಲಿ ಕರ್ನಾಟಕವು ಮುಂದುವರಿಯಬೇಕೆಂದರೆ ಕನ್ನಡ ಭಾಷೆಗೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡುವ ಬಗ್ಗೆ ಕನ್ನಡ ಭಾಷಿಕರು ಸರಳ ಮತ್ತು ಉದಾರವಾಗಿರುವ ಬಗ್ಗೆ ಮದ್ರಾಸ್ ಪ್ರಾಂತ್ಯದಿಂದ ಮೈಸೂರು ಪ್ರಾಂತ್ಯಕ್ಕೆ ಉಂಟಾಗಿರುವ ತೊಂದರೆಯ ಬಗ್ಗೆ ಕನ್ನಡಿಗರು ಬೇರೆಯವರ ಜೊತೆ ಸೇರಿಕೊಂಡು ತಮ್ಮತನವನ್ನು ಮರೆಯುತ್ತಿರುವ ಬಗ್ಗೆ ಮೈಸೂರು ಸರ್ಕಾರದವರು ತಮಿಳು, ತೆಲುಗು, ಮರಾಠಿ ಭಾಷೆಗಳು ಚಲನಚಿತ್ರಗಳಿಗೆ ಕೊಟ್ಟಿರುವ ಪ್ರಾಮುಖ್ಯತೆ ಬಗ್ಗೆ ಕನ್ನಡಕ್ಕಿಂತ ಹೆಚ್ಚಾಗಿ ಮೈಸೂರು ಆಕಾಶವಾಣಿ ಕೇಂದ್ರದವರು ತಮಿಳು ಸಂಗೀತ, ತಮಿಳು ಚಲನಚಿತ್ರವನ್ನು ಪ್ರದರ್ಶಿಸುತ್ತಿರುವ ಬಗ್ಗೆ ಕನ್ನಡ ವಾರಪತ್ರಿಕೆ, ದಿನಪತ್ರಿಕೆಗಳಲ್ಲಿ ಅನ್ಯಭಾಷೆಯ ಚಿತ್ರ ರಚನೆ ಪ್ರಕಟಣೆ ಇವೆಲ್ಲವು ಕನ್ನಡನಾಡಿಗೆ ಅಪಕೀರ್ತಿಯನ್ನು ತಂದಿದ್ದು ಕರ್ನಾಟಕದಲ್ಲಿ ಅನ್ಯಭಾಷಿಗರ ಹಾವಳಿ ಇದ್ದು ಕನ್ನಡ ನಾಡಿನವರೆಲ್ಲ ಒಂದುಗೂಡಿ ಕನ್ನಡದ ಯಶಸ್ಸನ್ನು ಉಳಿಸಬೇಕು. ಮೈಸೂರು ಸರ್ಕಾರವು ಪ್ರಾಂತೀಯ ಭಾಷೆ ರಾಷ್ಟ್ರೀಯ ಭಾಷೆಯ ಶಾಲೆಗಳನ್ನು ಹಾಗೂ ಚಲನಚಿತ್ರ ಪ್ರದರ್ಶಿಸುವಾಗ ಹಾಗೂ ಆಕಾಶವಾಣಿ ಕೇಂದ್ರಗಳಲ್ಲಿ ಮತ್ತು ಪತ್ರಿಕೆಗಳಲ್ಲಿ ಕನ್ನಡ ಮತ್ತು ರಾಷ್ಟ್ರಭಾಷೆ ಬಿಟ್ಟು ಅನ್ಯಭಾಷೆಗಳನ್ನು ನಿರ್ಬಂಧಿಸಿದ್ದರೆ ಕನ್ನಡಿಗರ ಕೀರ್ತಿ ಹೆಚ್ಚುವುದು ಎಂಬ ಲೇಖನ ಪ್ರಕಟವಾಗಿದ್ದು ಕನ್ನಡನಾಡು ನುಡಿ ಭಾಷೆಯ ಬಗ್ಗೆ ಅವರಿಗಿರುವ ಅಭಿಮಾನವನ್ನು ಈ ಲೇಖನವು ಬಿಂಬಿಸುತ್ತದೆ.[೩೩]

ದಿನಾಂಕ ೧೬.೦೯.೧೯೫೪ರ ಪತ್ರಿಕೆಯ ಸಂಚಿಕೆಯಲ್ಲಿ ಮೈಸೂರು ವಿಧಾನ ಪರಿಷತ್ತಿನ ಕಾಂಗ್ರೆಸ್ ಸದಸ್ಯರು ಪ್ರಾಂತ್ಯ ಪುನರ್ವಿಂಗಡಣೆ ಬಗ್ಗೆ ಮಾತನಾಡಬಾರದೆಂದು ಪಕ್ಷದ ನಿಲುವಾಗಿದ್ದು ಏಕೀಕರಣದ ಬಗ್ಗೆ ತಮ್ಮ ಅಭಿಪ್ರಾಯವನ್ನು, ನಿಲುವನ್ನು ವ್ಯಕ್ತಪಡಿಸದೆ ಇರುವ ಬಗ್ಗೆ ಪತ್ರಿಕೆಗಳಲ್ಲಿ ಬಂದಿರುವ ಟೀಕೆಗಳ ಬಗ್ಗೆ ಮಂಡ್ಯ, ಮೈಸೂರು, ತುಮಕೂರು,

ಹಾಸನ ಜಿಲ್ಲೆಯ ಸದಸ್ಯರು ಏಕೀಕರಣದ ವಿರೋಧಿಗಳಾಗಿದ್ದು, ಕರ್ನಾಟಕದ ದೃಷ್ಟಿಯಿಂದ ಮೈಸೂರಿನ ದೃಷ್ಟಿಯಿಂದ ಏಕೀಕರಣ ಹೇಗಾಗಬೇಕು, ಯಾವ ಪ್ರಾಂತ್ಯ ಕೂಡಿ ಆಗಬೇಕು ಎಂಬ ಮಾಹಿತಿ ಅವಶ್ಯಕತೆ ಇದ್ದು, ಆಂಧ್ರ ರಾಜ್ಯದ ನಿಲುವನ್ನು, ಧೋರಣೆಯನ್ನು ಮೈಸೂರು ಸಂಸ್ಥಾನ ಅಳವಡಿಸಿಕೊಳ್ಳಬೇಕು. ಮೈಸೂರು ಸಂಸ್ಥಾನದಲ್ಲಿ ಎಲ್ಲಾ ಭಾಷೆಗಳನ್ನಾಡುವ ಜನರಿದ್ದು, ಮತ ಚಲಾಯಿಸಿದ ಜನತೆಗೆ ಸೇವಕನಂತೆ ಕಾರ್ಯ ನಿರ್ವಹಿಸಬೇಕೆಂದು ಈ ಲೇಖನದಲ್ಲಿ ಹೇಳಲಾಗಿದೆ.[೩೪]

ಎಂ.ಆರ್. ಲಕ್ಷ್ಮಮ್ಮನವರು ಏಕೀಕರಣದ ಪ್ರಬಲ ಪ್ರತಿಪಾದಕರಾಗಿದ್ದು, ಹಳೆ ಮೈಸೂರಿನ ನಾಯಕರು ಏಕೀಕರಣದ ವಿರೋಧೀಭಾವನೆಯಿದ್ದಾಗಿಯೂ, ಕಾಂಗ್ರೆಸ್ಸಿನ ಅನೇಕ ನಾಯಕರು ಏಕೀಕರಣವನ್ನು ವಿರೋಧಿಸುತ್ತಿದ್ದಾಗಲೂ, ಏಕೀಕರಣದ ಚಳವಳಿಯಲ್ಲಿ ಭಾಗವಹಿಸಿ ಸ್ವಾತಂತ್ರ್ಯಪೂರ್ವದಲ್ಲಿಯೇ **'ಬೆಳಕು'** ಪತ್ರಿಕೆಯ ಸಂಪಾದಕಿಯಾಗಿದ್ದಾಗ ಏಕೀಕರಣದ ಪರವಾಗಿ ಅನೇಕ ಲೇಖನಗಳನ್ನು, ಚಿಂತನೆಗಳನ್ನು ಪ್ರಕಟಿಸಿದರು. ತಮ್ಮ **'ಸೋದರಿ'** ಪತ್ರಿಕೆಯಲ್ಲಿ ಏಕೀಕರಣದ ಪರವಾಗಿ ಅನೇಕ ಲೇಖನಗಳನ್ನು ಪ್ರಕಟಿಸಿ, ಕನ್ನಡ ನಾಡಿನ ಜನತೆ ಒಂದುಗೂಡುವ ಕನ್ನಡನಾಡು ಒಂದಾಗುವ ಆಶಯವನ್ನು ವ್ಯಕ್ತಪಡಿಸಿದ್ದರು.

### ಅಡಿ ಟಿಪ್ಪಣಿಗಳು

೧) ಸೂರ್ಯನಾಥ ಕಾಮತ್ (ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂಪುಟ ೨, ಪು. ೧೪೮.

೨) ಎಚ್.ಎಸ್. ದೊರೆಸ್ವಾಮಿ, ಹೋರಾಟದ ದಿಟ್ಟ ಹೆಜ್ಜೆಗಳು, ಪು. ೧೦೦.

೩) ಎಸ್. ಸುರೇಶ್ ಕುಮಾರ್ (ಪ್ರ. ಸಂ.) ಕರ್ನಾಟಕ ವಿಧಾನಸಭೆ ೬೦ನೇ ವಾರ್ಷಿಕೋತ್ಸವ ಸಮಾರಂಭದ ಸ್ಮರಣ ಸಂಚಿಕೆ, ಬೆಂಗಳೂರು, ೨೦೧೨, ಪು. ೩೨-೪೯.

೪) ಸಾಧ್ವಿ ಪತ್ರಿಕೆ, ದಿನಾಂಕ ೨೧.೦೪.೧೯೪೭.

೫) ಎಂ.ಆರ್. ಲಕ್ಷಮ್ಮ ಅವರ ತುರಂಗವಾಸ ಅನುಭವ, ವಿಭಾಗೀಯ ಪತ್ರಾಗಾರ ಕಛೇರಿ, ಮೈಸೂರು, ಪು. ೧.

೬) ಸಾಧ್ವಿ ಪತ್ರಿಕೆ, ಮೈಸೂರು, ದಿನಾಂಕ ೦೭.೧೦.೧೯೪೭.

೭) ಸಾಧ್ವಿ ಪತ್ರಿಕೆ, ಮೈಸೂರು, ದಿನಾಂಕ ೧೬.೧೦.೧೯೪೭.

೮) ಎಂ.ಆರ್. ಲಕ್ಷಮ್ಮನವರ ತುರಂಗವಾಸ ಅನುಭವ, ವಿಭಾಗೀಯ ಪತ್ರಾಗಾರ ಕಛೇರಿ, ಮೈಸೂರು, ಪು. ೩.

೯) ಅದೇ, ಪು. ೪.

೧೦) ಅದೇ, ಪು. ೮.

೧೧) ಅದೇ, ಪು. ೧೧.

೧೨) ಅದೇ, ಪು. ೧೧.

೧೩) ಅದೇ, ಪು. ೧೪.

೧೪) ಅದೇ, ಪು. ೧೭.

೧೫) ಅದೇ, ಪು. ೧೮.

೧೬) ಅದೇ, ಪು. ೧೯.

೧೭) ಅದೇ, ಪು. ೨೦.

೧೮) ಅದೇ, ಪು. ೨೨.

೧೯) ಅದೇ, ಪು. ೨೪.

೨೦) ಲಕ್ಷಮ್ಮ ಎಂ.ಆರ್. ಸ್ವವಿವರ ವಿಭಾಗೀಯ ಪತ್ರಾಗಾರ ಕಛೇರಿ, ಮೈಸೂರು, ಪು. ೩.

೨೧) ಲಕ್ಷಮ್ಮ ಎಂ.ಆರ್. (ಸಂ) ಬೆಳಕು, ದಿನಾಂಕ ೦೫.೦೧.೧೯೪೬.

೨೨) ಅದೇ, ದಿನಾಂಕ ೧೨.೦೧.೧೯೪೬.

೨೩) ಅದೇ, ದಿನಾಂಕ ೦೨.೦೨.೧೯೪೬.

೨೪) ಅದೇ, ದಿನಾಂಕ ೦೨.೦೩.೧೯೪೬.

೨೫) ಅದೇ, ದಿನಾಂಕ ೦೩.೦೮.೧೯೪೬.

೨೬) ಅದೇ, ದಿನಾಂಕ ೧೪.೦೯.೧೯೪೬.

೨೭) ಅದೇ, ದಿನಾಂಕ ೧೨.೧೦.೧೯೪೬.

೨೮) ಅದೇ, ದಿನಾಂಕ ೧೨.೧೧.೧೯೪೬.

೨೯) ಅದೇ, ದಿನಾಂಕ ೦೫.೦೧.೧೯೪೬.

೩೦) ಅದೇ, ದಿನಾಂಕ ೧೨.೦೧.೧೯೪೬.

೩೧) ಅದೇ, ದಿನಾಂಕ ೧೫.೦೯.೧೯೪೫.

೩೨) ಲಕ್ಷಮ್ಮ ಎಂ.ಆರ್. (ಸಂ), ಸೋದರಿ ಪತ್ರಿಕೆ, ದಿನಾಂಕ ೩೦.೦೭.೧೯೫೪.

೩೩) ಲಕ್ಷಮ್ಮ ಎಂ.ಆರ್. (ಸಂ), ಸೋದರಿ ಪತ್ರಿಕೆ, ದಿನಾಂಕ ೧೬.೦೯.೧೯೫೪.

# ಅಧ್ಯಾಯ : ಐದು

# ರಾಜಕೀಯ ಕ್ಷೇತ್ರದಲ್ಲಿ ಎಂ.ಆರ್. ಲಕ್ಷಮ್ಮ

ಎಂ.ಆರ್. ಲಕ್ಷಮ್ಮನವರ ರಾಜಕೀಯ ಪ್ರವೇಶ ಅವರ ಜೀವನದಲ್ಲಿ ಉಂಟಾದ ಒಂದು ಮಹತ್ತರ ತಿರುವಾಗಿದ್ದು 'ಎತ್ತಣ ಮಾಮರ ಎತ್ತಣ ಕೋಗಿಲೆ' ಎಂಬಂತೆ ರಾಜಕೀಯರಂಗದ ಪ್ರವೇಶ ಅವರ ಜೀವನದ ಗತಿಯನ್ನು ಬದಲಾಯಿಸಿತು. ವಯಸ್ಕರ ಶಿಕ್ಷಣ ಸಮಿತಿಯ 'ಬೆಳಕು' ವಾರಪತ್ರಿಕೆಯ ಸಂಪಾದಕತ್ವದ ಜೊತೆಗೆ ರಾಜಕೀಯ ಕ್ಷೇತ್ರದ ಪ್ರವೇಶ ಅವರ ಸಮಾಜಸೇವೆಯ ಕೈಂಕರ್ಯವನ್ನು ಸುಗಮವಾಗಿ ನಡೆಸಲು ಸಹಕಾರಿಯಾಯಿತು. ವಿದ್ಯಾವಂತ ಕುಟುಂಬದ ಹಿನ್ನೆಲೆಯನ್ನು ಹೊಂದಿದ್ದು, ಸರ್ಕಾರಿ ಉದ್ಯೋಗದಲ್ಲಿದ್ದ ಲಕ್ಷಮ್ಮನವರ ತಂದೆ ಹಾಗೂ ಪತಿಯವರಿಗೆ ರಾಜಕೀಯದ ಯಾವುದೇ ಹಿನ್ನೆಲೆ ಇರಲಿಲ್ಲ. ಆದರೆ ಗಾಂಧೀಜಿಯವರ ಪ್ರಭಾವಕ್ಕೆ ಒಳಗಾಗಿ ಉನ್ನತ ಆದರ್ಶಗಳನ್ನು ಬಳಸಿಕೊಂಡ ಲಕ್ಷಮ್ಮನವರ ಪತಿ ಅವರನ್ನು ಹೆಚ್ಚಿನ ಶಿಕ್ಷಣ ಪಡೆಯಲು ಪ್ರೇರೇಪಿಸಿದರು ಮತ್ತು ಸಮಾಜಸೇವೆಯಲ್ಲಿ ತೊಡಗಿಸಿಕೊಳ್ಳಲು ಎಲ್ಲ ರೀತಿಯ ಸಹಕಾರ ನೀಡಿದರು.[೧]

ಲಕ್ಷಮ್ಮನವರು ವಯಸ್ಕರ ಶಿಕ್ಷಣ ಸಮಿತಿಯ ಸಭೆಯಲ್ಲಿ ಭಾಗವಹಿಸಿದಾಗ ಆ ವೇಳೆಗಾಗಲೇ ನಾಯಕರಾಗಿದ್ದ ಅನೇಕ ಪ್ರತಿಷ್ಠಿತ ವ್ಯಕ್ತಿಗಳ ಪರಿಚಯವಾಯಿತು. ಅವರಲ್ಲಿ ಸಾಹುಕಾರ್ ಚೆನ್ನಯ್ಯ, ಟಿ. ಮರಿಯಪ್ಪ, ಯಶೋಧರಮ್ಮ ದಾಸಪ್ಪ, ಎಚ್.ಸಿ. ದಾಸಪ್ಪ, ಟಿ. ಸಿದ್ಧಲಿಂಗಯ್ಯ, ನ. ಭದ್ರಯ್ಯ ಪ್ರಮುಖರು. ದೇಶದಲ್ಲಿಯೇ ಮಾದರಿ ಸಂಸ್ಥಾನ ಎನಿಸಿಕೊಂಡಿದ್ದು ಮೈಸೂರು ರಾಜ್ಯದಲ್ಲಿ ಪ್ರಜಾಪ್ರತಿನಿಧಿ ಸಭೆ ಎಂಬ ಶಾಸನಸಭೆಯು ೧೮೮೧ ರಲ್ಲಿ ಸ್ಥಾಪನೆಯಾಗಿತ್ತು. ಇದು ಕೆಳಮನೆಯಾಗಿತ್ತು. ನ್ಯಾಯವಿಧಾಯಕ ಸಭೆ ಎಂಬ ಮೇಲ್ಮನೆ ೧೯೦೭ ರಲ್ಲಿ ಸ್ಥಾಪನೆಯಾಗಿತ್ತು. ಮೇಲ್ಮನೆಯಾದ ನ್ಯಾಯವಿಧಾಯಕ ಸಭೆಯು ೭೧ ಸದಸ್ಯರನ್ನು ಒಳಗೊಂಡಿದ್ದು, ಚುನಾಯಿತ ವರ್ಗ, ನಾಮಕರಣ ಸದಸ್ಯರು ಮತ್ತು ಪದನಿಮಿತ್ತ ಅಧಿಕಾರ ವರ್ಗದವರಿದ್ದರು. ಮಹಿಳೆಯರಿಗಾಗಿ ಎರಡು ಸ್ಥಾನಗಳನ್ನು ಮೀಸಲಾಗಿಟ್ಟಿದ್ದು, ಮೈಸೂರು ಮತ್ತು ಬೆಂಗಳೂರಿನಿಂದ ತಲಾ ಒಬ್ಬೊಬ್ಬರು ಮಹಿಳೆಯರು ನ್ಯಾಯವಿಧಾಯಕ ಸಭೆಯಲ್ಲಿ ಸದಸ್ಯರಾಗಿರುತ್ತಿದ್ದರು. ೧೯೪೫ರ ನ್ಯಾಯವಿಧಾಯಕ ಸಭೆಯ ಸದಸ್ಯೆಯಾಗಿದ್ದ ಯಶೋಧರಾ ದಾಸಪ್ಪನವರ ಅವಧಿ ಮುಗಿದು ತೆರವಾಗಿದ್ದ ಆ ಸ್ಥಾನಕ್ಕೆ ಚುನಾವಣೆ ನಡೆಯಬೇಕಾಗಿತ್ತು. ಈ ಸ್ಥಾನಕ್ಕೆ ಲಕ್ಷಮ್ಮನವರನ್ನು ಸ್ಪರ್ಧಿಸುವಂತೆ ಕಾಂಗ್ರೆಸ್ ಮುಖಂಡರು ಕೇಳಿಕೊಂಡಿದ್ದರು.

### ೫.೧ ನ್ಯಾಯವಿಧಾಯಕ ಸಭೆಯ ಸದಸ್ಯೆಯಾಗಿ ಎಂ.ಆರ್. ಲಕ್ಷಮ್ಮ

ಮೈಸೂರು ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಸಾಹುಕಾರ್ ಚೆನ್ನಯ್ಯನವರು ಮತ್ತು ಮುನ್ಸಿಪಲ್ ಸಮಿತಿಯ ಕಾಂಗ್ರೆಸ್ ನಾಯಕರಾಗಿದ್ದ ಟಿ. ಮರಿಯಪ್ಪನವರು ಲಕ್ಷಮ್ಮನವರ ಮನೆಗೆ ಬಂದು ಕಾಂಗ್ರೆಸ್ ಪಕ್ಷಕ್ಕೆ ಸೇರುವಂತೆ ಹಾಗೂ ಮೇಲ್ಮನೆಯಾದ ನ್ಯಾಯವಿಧಾಯಕ ಸಭೆಗೆ ಮೈಸೂರು ಕ್ಷೇತ್ರದಿಂದ ಮಹಿಳಾ ಪ್ರತಿನಿಧಿಯಾಗಿ ಚುನಾವಣೆಯಲ್ಲಿ ಸ್ಪರ್ಧಿಸುವಂತೆ ಕೇಳಿಕೊಂಡರು.[೨] ಆದರೆ ಲಕ್ಷಮ್ಮನವರಿಗೆ ರಾಜಕಾರಣವೆಂದರೆ ನಮ್ಮಂತವರಿಗಲ್ಲ ಎಂಬ ಭಾವನೆ ಇದ್ದು, ಮನೆಯಿಂದ ಹೊರಗಿದ್ದು ದೇಶದ ಆಗುಹೋಗುಗಳಲ್ಲಿ ಭಾಗವಹಿಸಲು ಸಾಧ್ಯವೇ? ಅಂತಹ ಶಕ್ತಿ ನನ್ನಲ್ಲಿದೆಯೇ? ಎಂಬ ಪ್ರಶ್ನೆ ಮನದಲ್ಲಿ ಮೂಡಿದಾಗ ಅವರ ತಂದೆ ಲಕ್ಷಮ್ಮನವರ ಗೊಂದಲವನ್ನು ಬಗೆಹರಿಸಿದರು. 'ನಮ್ಮ ಪೂರ್ವಿಕರು ಪಾಳೆಯಗಾರರ ಹತ್ತಿರ ಮಂತ್ರಿಗಳಾಗಿದ್ದವರು. ನಾವು ರಾಜಮನೆತನದವರು. ಆದರೆ ಜೀವನಕ್ಕಾಗಿ ಸರ್ಕಾರಿ ಉದ್ಯೋಗದಲ್ಲಿ ಇರುವ ನಮಗೆ ದೇಶದ ಸೇವೆ ಮಾಡಲು ಅವಕಾಶವಿಲ್ಲವಾಗಿದೆ. ಆದರೆ ನಿನಗೆ ಬಂದಿರುವ ಅವಕಾಶವನ್ನು ಬಿಡದೆ ದೇಶಸೇವೆಯಲ್ಲಿ ತೊಡಗಿಕೋ, ನಾವು ನಿನ್ನ ಹಿಂದೆ ಇದ್ದು ಬೇಕಾದ ಸಹಕಾರವನ್ನು ನೀಡುತ್ತೇವೆ' ಎಂದರು.[೩] ಅದಕ್ಕಿಂತ ಹೆಚ್ಚಿನ ಸಹಕಾರವನ್ನು ನೀಡಲು ಒಪ್ಪಿದ ಅವರ ಪತಿಯವರು ಲಕ್ಷಮ್ಮನವರನ್ನು ರಾಜಕೀಯರಂಗ ಪ್ರವೇಶಿಸಲು ಹುರಿದುಂಬಿಸಿದರು. ಅಳುಕುತ್ತಲೇ ಕಾಂಗ್ರೆಸ್ ಪಕ್ಷದ ಸದಸ್ಯತ್ವದ ಅರ್ಜಿಗೆ ಸಹಿ ಹಾಕಿದರು. ಒಲ್ಲದ ಮನಸ್ಸಿನಿಂದಲೇ ತಮಗಿಷ್ಟವಾದ ಆಕಾಶವಾಣಿಯ ಕೆಲಸವನ್ನು ಬಿಡಲು ನಿರ್ಧರಿಸಿದರು.

ಇಂಟರ್‌ಮೀಡಿಯೇಟ್‌ನಲ್ಲಿ ಓದುತ್ತಿದ್ದಾಗ ಕೆ.ಆರ್. ಶ್ರೀನಿವಾಸ ಐಯ್ಯಂಗಾರ್ ಎಂಬುವವರು ಖಾದಿ ಉಡುಪನ್ನು ಧರಿಸುತ್ತಿದ್ದು, ಅವರು ಕಟ್ಟಾ ದೇಶಪ್ರೇಮಿಯಾಗಿದ್ದರು. ಅವರ ಬೋಧನೆಯಿಂದ ಪ್ರಭಾವಿತರಾದ ಲಕ್ಷಮ್ಮನವರು ಖಾದಿ ಸೀರೆ ಕೊಂಡಿದ್ದರು.[೪] ಆದರೆ ಅದನ್ನು ಉಡಲು ಸಾಧ್ಯವಾಗಿರಲಿಲ್ಲ. ರಾಜಕೀಯರಂಗದ ಪ್ರವೇಶ ಮಾಡಿ ದೇಶಸೇವೆ ಸಲ್ಲಿಸುವ ನಿರ್ಧಾರ ಮಾಡಿದ ಮೇಲೆ ಖಾದಿ ಸೀರೆಯನ್ನು ಉಡುವ ಅವಕಾಶ ದೊರೆಯಿತು. ಎಂ.ಆರ್. ಲಕ್ಷಮ್ಮನವರು ಅವರ ಜೀವನಪೂರ್ತಿ ಸದಾ ಖಾದಿ ಉಡುಪನ್ನು ಧರಿಸುತ್ತಿದ್ದು ಗಾಂಧೀಜಿಯವರ ಸರಳ ತತ್ವಾದರ್ಶಗಳಿಗೆ ಒಳಗಾಗಿ ಸರಳವಾದ ನಡೆನುಡಿ ವೇಷಭೂಷಣಗಳನ್ನು ತನ್ನದಾಗಿಸಿಕೊಂಡರು.

ಮೈಸೂರು ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಸಾಹುಕಾರ್ ಚೆನ್ನಯ್ಯನವರು ಎಂ.ಆರ್. ಲಕ್ಷಮ್ಮನವರನ್ನು ತಮ್ಮ ಕಾರಿನಲ್ಲಿ ಕರೆದೊಯ್ದು ಚುನಾವಣೆಗೆ ಸ್ಪರ್ಧಿಸಲು ನಾಮಪತ್ರವನ್ನು ಸಲ್ಲಿಸುವಂತೆ ಮಾಡಿದರು. ೧೯೪೫ರ ಫೆಬ್ರವರಿ ತಿಂಗಳಲ್ಲಿ ನ್ಯಾಯವಿಧಾಯಕ ಸಭೆಗೆ ಅವಿರೋಧವಾಗಿ ಆಯ್ಕೆಗೊಂಡ ಲಕ್ಷಮ್ಮನವರು ರಾಜಕೀಯರಂಗವನ್ನು ಪ್ರವೇಶಿಸಿದರು.[೫] ಕಾಂಗ್ರೆಸ್ಸಿನ ಸದಸ್ಯರಾಗಿ ನ್ಯಾಯವಿಧಾಯಕ ಸಭೆಗೆ ಪ್ರವೇಶಿಸಿದ ಲಕ್ಷಮ್ಮನವರು ರಾಜಕೀಯದಲ್ಲಿ

ರಚನಾತ್ಮಕ ಕೆಲಸಕಾರ್ಯಗಳ ನಡುವೆ ವಯಸ್ಕರ ಶಿಕ್ಷಣ ಸಮಿತಿಯಲ್ಲಿ ಕೂಡ ಕೆಲಸ ಮಾಡುತ್ತಿದ್ದು, ಬೆಳಕು ವಾರಪತ್ರಿಕೆಯ ಸಂಪಾದಕಿಯಾಗಿ ಕೂಡ ತಮ್ಮ ಕೆಲಸವನ್ನು ಮುಂದುವರಿಸಿದರು.

### ೫.೨ ನ್ಯಾಯವಿಧಾಯಕ ಸಭೆಯ ಸದನದಲ್ಲಿ ಎಂ.ಆರ್. ಲಕ್ಷಮ್ಮನವರ ವಿಚಾರಧಾರೆಗಳು

೧೯೪೫ರ ಜೂನ್ ೨೦ರಂದು ಮೊದಲ ಅಧಿವೇಶನ ಡಿ.ಎಚ್. ಚಂದ್ರಶೇಖರಯ್ಯನವರ ಅಧ್ಯಕ್ಷತೆಯಲ್ಲಿ ಪ್ರಾರಂಭವಾಯಿತು. ಲಕ್ಷಮ್ಮನವರು ತಮ್ಮ ವಾಕ್‌ಚಾತುರ್ಯ ಮತ್ತು ಬುದ್ಧಿವಂತಿಕೆಯಿಂದ ಮೊದಲ ದಿನವೇ ಅನೇಕ ಪ್ರಶ್ನೆಗಳನ್ನು ಕೇಳಿ ನಂತರದ ಚರ್ಚೆಗಳಲ್ಲಿ ಭಾಗವಹಿಸಿದರು. ಆಯವ್ಯಯದ ಮೇಲೆ ಭಾಷಣವನ್ನು ಮಾಡಿದ ಲಕ್ಷಮ್ಮನವರು ಪಾನನಿರೋಧದ ಬಗ್ಗೆ ಮಾತನಾಡಿ ಸರ್ಕಾರಕ್ಕೆ ಆದಾಯವನ್ನು ತರುವಂತಹ ಪ್ರಮುಖ ಇಲಾಖೆ ಅಬಕಾರಿ ಇಲಾಖೆ ಆಗಿದ್ದರೂ ಸರ್ಕಾರವು ಕಠಿಣ ನಿರ್ಧಾರ ಮಾಡಿ ಪಾನನಿರೋಧದ ಬಗ್ಗೆ ತನ್ನ ಮೊದಲ ಹೆಜ್ಜೆಯನ್ನು ಇಡಬೇಕು. ಮದ್ಯಪಾನದಿಂದ ಕುಡಿಯುವರಿಗಷ್ಟೇ ಅಲ್ಲದೆ, ಆತನನ್ನು ಅವಲಂಬಿಸಿರುವ ಕುಟುಂಬ ವರ್ಗದವರು ಕೂಡ ನರಳಬೇಕಾಗುತ್ತದೆ. ಇದರೊಂದಿಗೆ ಮಾದಕವಸ್ತುಗಳಾದ ಬೀಡಿ, ಸಿಗರೇಟು ಇವುಗಳನ್ನು ಕೂಡ ನಿಷೇಧಿಸಬೇಕು. ಮದ್ಯಪಾನದಿಂದ ಆಗುವ ದುಷ್ಪರಿಣಾಮದ ಬಗ್ಗೆ ಹೆಚ್ಚಿನ ಪ್ರಚಾರ ಮಾಡಬೇಕು. ಜನರಲ್ಲಿ ನೈತಿಕ ಶಿಕ್ಷಣದ ಬಗ್ಗೆ ಅರಿವನ್ನು ಮೂಡಿಸಬೇಕು. ಕುಡಿತಕ್ಕೆ ದಾಸರಾಗಿರುವವರ ಗಮನವನ್ನು ಬೇರೆಡೆಗೆ ಹರಿಸಲು ಕಾಫಿ ಹೌಸ್‌ಗಳನ್ನು, ನಾಟಕ ಮಂದಿರಗಳನ್ನು, ಆಕಾಶವಾಣಿಯ ಕಾರ್ಯಕ್ರಮಗಳನ್ನು ಆಲಿಸುವ ಕೇಂದ್ರಗಳನ್ನು ಸರ್ಕಾರದ ವತಿಯಿಂದ ಸ್ಥಾಪಿಸಬೇಕು ಎಂದರು.[೬]

ಶಿಕ್ಷಣದ ಬಗ್ಗೆ ವಿಶೇಷ ಕಾಳಜಿ ಇದ್ದ ಲಕ್ಷಮ್ಮನವರು ಶಿಶುವಿಹಾರಗಳಿಂದ ಕಾಲೇಜು ಶಿಕ್ಷಣದವರೆಗಿನ ಸಮಸ್ಯೆಗಳ ಬಗ್ಗೆ ಮಾತನಾಡಿದ್ದಾರೆ. ಶಿಶುವಿಹಾರದ ಮಕ್ಕಳಿಗೆ ಮಧ್ಯಾಹ್ನ ಉಚಿತ ಊಟ ಮತ್ತು ಹಾಲನ್ನು ವಿತರಿಸಬೇಕು.[೭] ಇದರಿಂದಾಗಿ ಹೆಚ್ಚಿನ ಮಕ್ಕಳು ಶಿಶುವಿಹಾರಕ್ಕೆ ಬರುತ್ತಾರೆ ಹಾಗೂ ಮಕ್ಕಳಿಗೆ ಪೌಷ್ಠಿಕ ಆಹಾರ ದೊರೆಯುತ್ತದೆ. ಶಿಶುವಿಹಾರಗಳಿಗೆ ಮಹಿಳಾ ಶಿಕ್ಷಕರನ್ನೇ ನೇಮಿಸಬೇಕು. ಏಕೆಂದರೆ ಮಹಿಳಾ ಶಿಕ್ಷಕರು ತಾಯಿಯ ಮಮತೆಯನ್ನು ಕಾಳಜಿಯನ್ನು ಮಕ್ಕಳ ಮೇಲೆ ತೋರಿಸಲು ಸಾಧ್ಯ. ಮಕ್ಕಳ ದೈಹಿಕ ಮತ್ತು ಮಾನಸಿಕ ಬೆಳವಣಿಗೆಗೆ ಬೇಕಾದಂತಹ ವಾತಾವರಣವನ್ನು ಕಲ್ಪಿಸಿಕೊಡಬೇಕು. ಪ್ರೌಢಶಾಲೆ ಶಿಕ್ಷಣದಲ್ಲಿ ಹೆಣ್ಣುಮಕ್ಕಳಿಗೆ ಕಲೆಯ ಬಗ್ಗೆ ಮಾಹಿತಿ ನೀಡಬೇಕು. ಲಲಿತಕಲೆಗಳ ಬಗ್ಗೆ, ಗೃಹ ಕೈಗಾರಿಕೆಗಳ ಬಗ್ಗೆ, ವಸ್ತ್ರಗಳ ಮೇಲೆ ವಿವಿಧ ವಿನ್ಯಾಸಗಳ ಅಲಂಕಾರಿಕ ಕೆಲಸಗಳನ್ನು ಮಾಡುವುದು ಕಸೂತಿ ಹಾಕುವುದು ಮುಂತಾದವುಗಳ ಬಗ್ಗೆ ಮಾಹಿತಿಯನ್ನು ನೀಡಬೇಕು. ಇದರಿಂದ ಹೆಣ್ಣುಮಕ್ಕಳು ಮುಂದೆ ಆರ್ಥಿಕ ಸ್ವಾವಲಂಬನೆ ಹೊಂದಲು ಸಾಧ್ಯವಾಗುತ್ತದೆ. ಪ್ರಾಥಮಿಕ ಶಾಲೆಯಲ್ಲಿ ಕನ್ನಡ

ಮಾಧ್ಯಮದ ಪಠ್ಯಪುಸ್ತಕಗಳ ಕೊರತೆ ಕಂಡುಬರುತ್ತದೆ. ಈ ಬಗ್ಗೆ ತಾಯಿನಾಡು ಮತ್ತು ದೇಶಬಂಧು ಪತ್ರಿಕೆಯಲ್ಲಿ ಸುದ್ದಿ ಬಂದಿದ್ದು, ಸರ್ಕಾರವು ಅಗತ್ಯ ಪುಸ್ತಕಗಳನ್ನು ಒದಗಿಸಬೇಕೆಂದು ಸರ್ಕಾರವನ್ನು ಒತ್ತಾಯಿಸಿದ್ದರು.[೮]

ಲಕ್ಷ್ಮಮ್ಮನವರು ಮೂಲ ಶಿಕ್ಷಣ ಪದ್ಧತಿಯನ್ನು ಜಾರಿಗೆ ತರಬೇಕೆಂದು ಸರ್ಕಾರವನ್ನು ಒತ್ತಾಯಿಸಿದರು. ಆಧುನಿಕ ಶಿಕ್ಷಣ ಪದ್ಧತಿಯಲ್ಲಿ ಕೆಲಸದ ಅವಕಾಶಗಳು ಕಡಿಮೆ ಇದ್ದು ಕಾಶ್ಮೀರ ಹಾಗೂ ಬಿಹಾರ ಪ್ರಾಂತ್ಯಗಳಲ್ಲಿ ಜಾರಿಗೆ ತಂದಿರುವಂತೆ ಮೈಸೂರು ಸಂಸ್ಥಾನದಲ್ಲಿಯೂ ಮೂಲ ಶಿಕ್ಷಣ ಪದ್ಧತಿಯನ್ನು ಜಾರಿಗೆ ತರಬೇಕೆಂದು ಸಲಹೆ ನೀಡಿದ್ದರು.[೯] ಸಾರ್ಜೆಂಟ್ ಸಮಿತಿಯವರು ಮಾಡಿದ ಶಿಫಾರಸ್ಸಿನಂತೆ ಮೂಲ ಶಿಕ್ಷಣ ಪದ್ಧತಿಯನ್ನು ಜಾರಿಗೆ ತಂದರೆ ಕೈಗಾರಿಕೆಗಳ ಬಗ್ಗೆ, ಗೃಹ ಕೈಗಾರಿಕೆಗಳ ಬಗ್ಗೆ ಜ್ಞಾನ ಬೆಳೆದು ಮುಂದಿನ ಜೀವನದಲ್ಲಿ ಕೆಲಸಗಳನ್ನು ನಿರ್ವಹಿಸಲು ಸಾಧ್ಯವಾಗುತ್ತದೆ. ಮೂಲ ಶಿಕ್ಷಣವು ಜೀವನಕ್ಕೆ ದಾರಿದೀಪವಾಗುವುದು. ೧೯೩೮ರಲ್ಲಿ ನಂಜನಗೂಡು ತಾಲ್ಲೂಕು ತಗಡೂರಿನಲ್ಲಿ ಮತ್ತು ಬದನವಾಳುವಿನಲ್ಲಿ ತೆರೆದಂತಹ ಖಾದಿ ಕೇಂದ್ರವನ್ನು ಮೂಲ ಶಿಕ್ಷಣ ನೀಡುವ ಕೇಂದ್ರವಾಗಿ ಪರಿವರ್ತಿಸಬೇಕು. ಆಧುನಿಕ ಶಿಕ್ಷಣದಿಂದ ಸರ್ಕಾರಿ ಕೆಲಸಕ್ಕೆ ಸೇರಲು ಮಾತ್ರ ಸಾಧ್ಯ ಶಿಕ್ಷಣ ಪಡೆದ ಎಲ್ಲರಿಗೂ ಸರ್ಕಾರಿ ಕೆಲಸ ದೊರಕದೆ, ನಿರುದ್ಯೋಗ ಸೃಷ್ಟಿಯಾಗುತ್ತದೆ. ಆದರೆ ಮೂಲಶಿಕ್ಷಣವು ಜೀವನಕ್ಕೆ ಆಧಾರವಾಗುತ್ತದೆ.

ಕೈಗಾರಿಕೆಗಳು ದೇಶದ ಅಭಿವೃದ್ಧಿಗೆ ಪೂರಕವಾಗಿದ್ದು, ರಾಜ್ಯದಲ್ಲಿರುವ ಕೈಗಾರಿಕೆಗಳು ಅದರಲ್ಲೂ ವಿಶೇಷವಾಗಿ ಗೃಹ ಕೈಗಾರಿಕೆ ಮತ್ತು ಗುಡಿ ಕೈಗಾರಿಕೆಗಳ ಬಗ್ಗೆ ಎಂ.ಆರ್. ಲಕ್ಷಮ್ಮನವರು ಸರ್ಕಾರದ ಗಮನ ಸೆಳೆದಿದ್ದರು.[೧೦] ರಾಜ್ಯದಲ್ಲಿರುವ ಗೃಹ ಕೈಗಾರಿಕೆಗಳು ಎಷ್ಟಿವೆ? ಗೃಹ ಕೈಗಾರಿಕೆಗಳಲ್ಲಿ ಮಹಿಳೆಯರನ್ನು ತೊಡಗಿಸಿಕೊಳ್ಳಲು ಅವಕಾಶ ನೀಡಬೇಕು. ಮಹಿಳಾ ಸಮಾಜ, ಮಹಿಳಾ ಮಂಡಳಿಗಳ ಸಹಾಯದಿಂದ ಇಂತಹ ಕೈಗಾರಿಕೆಗಳನ್ನು ನೀಡಬೇಕು. ಸರ್ಕಾರವು ತರಬೇತಿಯನ್ನು ನೀಡುವುದರ ಜೊತೆಗೆ ತರಬೇತಿ ಭತ್ಯೆಯನ್ನು ನೀಡಬೇಕು. ಹೊಲಿಗೆ, ಕಸೂತಿ ಮುಂತಾದ ವಿಷಯಗಳ ಬಗ್ಗೆ ತರಬೇತಿ ನೀಡಬೇಕೆಂದು ಸರ್ಕಾರಕ್ಕೆ ಆಗ್ರಹಿಸಿದ್ದರು.

ಹೆಣ್ಣುಮಕ್ಕಳ ಬಗ್ಗೆ ವಿಶೇಷ ಕಾಳಜಿಯನ್ನಿಟ್ಟುಕೊಂಡಿದ್ದ ಎಂ.ಆರ್. ಲಕ್ಷಮ್ಮನವರು ಹೆಣ್ಣುಮಕ್ಕಳು ಮತ್ತು ಶಿಶುಗಳಿಗೆ ಸರ್ಕಾರ ನೀಡುತ್ತಿರುವ ಸವಲತ್ತುಗಳು ಮತ್ತು ವೈದ್ಯಕೀಯ ಚಿಕಿತ್ಸೆ ಬಗ್ಗೆ ಪ್ರಶ್ನಿಸಿದರು.[೧೧] ಮೈಸೂರಿನ ಚೆಲುವಾಂಬ ಆಸ್ಪತ್ರೆಯಲ್ಲಿ ಹೆಣ್ಣುಮಕ್ಕಳಿಗೆ ದೊರೆಯುತ್ತಿರುವ ಚಿಕಿತ್ಸೆ, ಶಿಶುಗಳ ಮರಣಕ್ಕೆ ಕಾರಣವೇನು? ರಕ್ತಹೀನತೆಯಿಂದ ಬಳಲುತ್ತಿದ್ದವರಿಗೆ ಸೂಕ್ತ ಸೌಲಭ್ಯವನ್ನು ಕಲ್ಪಿಸಿಕೊಡುವ ಬಗ್ಗೆ ಸರ್ಕಾರದ ಆರೋಗ್ಯ ಸಚಿವರನ್ನು ಪ್ರಶ್ನಿಸಿದರು. ಮಧ್ಯಮವರ್ಗ ಮತ್ತು ಕೆಳವರ್ಗದ ಜನತೆಯ ಬಗ್ಗೆ ವಿಶೇಷ

ಅಭಿಮಾನವುಳ್ಳವರಾಗಿದ್ದು, ಸರ್ಕಾರಿ ನೌಕರಿಯಲ್ಲಿರುವ ಕೆಳವರ್ಗದ ನೌಕರರನ್ನು ಅಧಿಕಾರಿಗಳು ವ್ಯಕ್ತಪಡಿಸಿದ ಲಕ್ಷಮ್ಮನವರು ಅಧಿಕಾರೇತರ ಸರ್ಕಾರಿ ನೌಕರರು 'ಇಲಾಖೆಯ ಬೆನ್ನುಮೂಳೆ ಇದ್ದಂತೆ' ಮತ್ತು ಇಲಾಖೆಯ ಎಲ್ಲ ಕೆಲಸಕಾರ್ಯಗಳ ಬಗ್ಗೆ ತಿಳಿದಿದ್ದು, ಅವರು 'ಇಲಾಖೆಯ ಜ್ಯೋತಿ' ಎಂದು ನೌಕರರನ್ನು ಪ್ರಶಂಸಿಸಿದ್ದರು.[೧೨] ಅಧಿಕಾರಿಗಳಿಗೆ ಉತ್ತಮ ಸಂಬಳ ಸವಲತ್ತುಗಳು ದೊರಕುತ್ತಿದ್ದರೂ, ಅಧಿಕಾರಿಗಳು ಭ್ರಷ್ಟಾಚಾರದಲ್ಲಿ ತೊಡಗಿಕೊಂಡಿದ್ದು, ಅವರಿಗೆ ಕಠಿಣ ಶಿಕ್ಷೆ ವಿಧಿಸಬೇಕು ಎಂದು ಭ್ರಷ್ಟಾಚಾರದ ವಿರುದ್ಧ ಧ್ವನಿ ಎತ್ತಿದ ಲಕ್ಷಮ್ಮನವರು ಗುಮಾಸ್ತರು ಮತ್ತು ಕೆಳವರ್ಗದವರು ಹಣದ ಕೊರತೆಯಿಂದ ಭ್ರಷ್ಟಾಚಾರದಲ್ಲಿ ತೊಡಗುತ್ತಾರೆ. ಭ್ರಷ್ಟಾಚಾರವನ್ನು ಕಡಿಮೆ ಮಾಡಲು ಕೆಳವರ್ಗದ ನೌಕರರಿಗೆ ಹೆಚ್ಚಿನ ಸಂಬಳ ಮತ್ತು ಭತ್ಯೆಯನ್ನು ನೀಡಬೇಕೆಂದು ಸರ್ಕಾರವನ್ನು ಆಗ್ರಹಿಸಿದರು. ಮೈಸೂರು ನಗರದಲ್ಲಿ ಹಾಲಿನ ಕೊರತೆಯ ಬಗ್ಗೆ ಪ್ರಶ್ನಿಸಿದ ಲಕ್ಷಮ್ಮನವರು ಮಧ್ಯಮವರ್ಗ ಮತ್ತು ಕೆಳವರ್ಗದ ಜನತೆಗೆ ಅಗತ್ಯವಿರುವಷ್ಟು ಹಾಲಿನ ಕೊರತೆ ಇದ್ದು, ಸರ್ಕಾರದವರು ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ಸಲಹೆ ನೀಡಿದ್ದರು.[೧೩]

ನ್ಯಾಯವಿಧಾಯಕ ಸಭೆ ದಿನಾಂಕ ೧೯.೦೬.೧೯೪೬ ರಂದು ರಾಜಮಂತ್ರ ಪ್ರವೀಣ ಎಚ್.ಬಿ. ಗುಂಡಪ್ಪಗೌಡರ ಅಧ್ಯಕ್ಷತೆಯಲ್ಲಿ ನಡೆಯಿತು.[೧೪] ಲಕ್ಷಮ್ಮನವರು ಪತ್ರಿಕಾ ಸಲಹಾ ಸಮಿತಿ ವಿಚಾರವಾಗಿ ಪ್ರಶ್ನೆಗಳನ್ನು ಕೇಳಿದ್ದರು. ಆಯವ್ಯಯದ ಮೇಲೆ ಭಾಷಣ ಮಾಡಿ ಸಣ್ಣ ಸಣ್ಣ ಕೈಗಾರಿಕೆಗಳಿಗೆ ಸಾಕಷ್ಟು ಪ್ರೋತ್ಸಾಹ ನೀಡಬೇಕು. ಸ್ತ್ರೀಯರ ಶಿಕ್ಷಣಕ್ಕೆ ಹೆಚ್ಚಿನ ಗಮನ ಕೊಡಬೇಕು. ಕನ್ನಡ ಭಾಷಾಭಿವೃದ್ಧಿಗಾಗಿ ಸಾಕಷ್ಟು ಉತ್ತೇಜನ ಕೊಡಬೇಕೆಂದು ಒತ್ತಾಯಿಸಿದ್ದರು[೧೫]. ಲಕ್ಷಮ್ಮನವರು ಸ್ನಾತಕೋತ್ತರ ಪದವೀಧರೆಯಾದ್ದರಿಂದ ಶಿಕ್ಷಣದ ಬಗ್ಗೆ ಹೆಚ್ಚಿನ ಕಾಳಜಿಯುಳ್ಳವರಾಗಿದ್ದು, ದಿನಾಂಕ ೩೦.೦೬.೧೯೪೮ ರಂದು ಶಾಸನಸಭೆಯಿಂದ ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್‌ಗೆ ಚುನಾಯಿತರಾದರು. ಇದರೊಂದಿಗೆ ಶೈಕ್ಷಣಿಕ ರಂಗದ ಸೇವೆಯು ಅಧಿಕೃತವಾಗಿ ಆರಂಭವಾಯಿತು.

೧೯೪೫ರಿಂದ ೧೯೪೭ ಅಕ್ಟೋಬರ್ ತಿಂಗಳವರೆಗೆ ನ್ಯಾಯವಿಧಾಯಕ ಸಭೆಯ ಸದಸ್ಯರಾಗಿ ಸೇವೆ ಸಲ್ಲಿಸಿದ ಲಕ್ಷಮ್ಮನವರು ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದರು. ಜವಾಬ್ದಾರಿ ಸರ್ಕಾರದ ರಚನೆಯ ಹೋರಾಟವಾದ 'ಚಲೋ ಮೈಸೂರು' ಚಳವಳಿಯಲ್ಲಿ ಭಾಗವಹಿಸಿ ಸೆರೆಮನೆಯಿಂದ ಹೊರಬಂದ ಲಕ್ಷಮ್ಮನವರು ಸ್ತ್ರೀಯರನ್ನು ಸಂಘಟಿಸುವ ಮೂಲಕ ಚಳವಳಿಗೆ ಬೆನ್ನೆಲುಬಾಗಿ ನಿಂತಿದ್ದರು. ನ್ಯಾಯವಿಧಾಯಕ ಸಭೆಯ ಸದಸ್ಯತ್ವದ ಅವಧಿ ೩ ವರ್ಷಗಳಾಗಿದ್ದು, ಚಳವಳಿಯಲ್ಲಿ ಭಾಗವಹಿಸಿದ ಪರಿಣಾಮವಾಗಿ ಅವರ ಸದಸ್ಯತ್ವ ರದ್ದುಗೊಳಿಸಲ್ಪಟ್ಟಿತು.

## ೫.೩ ಮೈಸೂರು ಪುರಸಭಾ ಸದಸ್ಯರಾಗಿ ಎಂ.ಆರ್. ಲಕ್ಷಮ್ಮನವರ ಸೇವೆ

ನ್ಯಾಯವಿಧಾಯಕ ಸಭೆಯ ಸದಸ್ಯರಾಗಿದ್ದ ಎಂ.ಆರ್. ಲಕ್ಷಮ್ಮನವರು ಸಮಾಜಸೇವೆಯ ಜೊತೆಗೆ ವಯಸ್ಕರ ಶಿಕ್ಷಣ ಸಮಿತಿಯ 'ಬೆಳಕು' ವಾರಪತ್ರಿಕೆಯ ಸಂಪಾದಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗಲೇ ಮೈಸೂರು ಕಾಂಗ್ರೆಸ್ ಪಕ್ಷ ಅವರನ್ನು ಮೈಸೂರು ಪುರಸಭಾ ಚುನಾವಣೆಗೆ ಉಮೇದುವಾರರನ್ನಾಗಿ ನಿಲ್ಲಿಸಿತು.[೧೬] ಒಟ್ಟು ೨೪ ಜನರು ಕಾಂಗ್ರೆಸ್ ಪಕ್ಷದಿಂದ ಸ್ಪರ್ಧಿಸಿದ್ದು, ದಿನಾಂಕ ೧೪.೧೧.೧೯೪೬ರಂದು ಪುರಸಭೆ ಚುನಾವಣೆ ನಡೆಯಿತು. ಮೈಸೂರಿನ ಚಾಮರಾಜ ಮೊಹಲ್ಲಾ ಕ್ಷೇತ್ರದಿಂದ ಒಟ್ಟು ೪ ಸ್ಥಾನಗಳಿದ್ದು, ೯ ಜನರು ಕಣದಲ್ಲಿದ್ದರು. ಅವರಲ್ಲಿ ೪ ಜನರು ಕಾಂಗ್ರೆಸ್ ಪಕ್ಷದ ಉಮೇದುವಾರರಾಗಿದ್ದರು. ಚಾಮರಾಜ ಮೊಹಲ್ಲಾದಿಂದ ಅತ್ಯಧಿಕ ಮತಗಳಿಂದ ೩ ಜನ ಕಾಂಗ್ರೆಸ್ ಪಕ್ಷದಿಂದ ಮತ್ತು ಒಬ್ಬರು ಸ್ವತಂತ್ರ ಅಭ್ಯರ್ಥಿಯಾಗಿ ಪುರಸಭಾ ಚುನಾವಣೆಯಲ್ಲಿ ಜಯಗಳಿಸಿದರು. ಇವರಲ್ಲಿ ಬಿ. ನಾರಾಯಣಸ್ವಾಮಿ ೫೪೪ ಮತ, ಎಂ.ಆರ್. ಲಕ್ಷಮ್ಮನವರು ೫೦೪ ಮತ, ಅಗರಂ ರಂಗಯ್ಯನವರು ೪೬೦ ಮತಗಳನ್ನು ಪಡೆದು ಕಾಂಗ್ರೆಸ್ ಪಕ್ಷದಿಂದ ಮತ್ತು ಸ್ವತಂತ್ರ ಅಭ್ಯರ್ಥಿ ಎಂ. ವೆಂಕಟೇಶಯ್ಯನವರು ೪೫೦ ಮತಗಳನ್ನು ಪಡೆದು ಪುರಸಭಾ ಸದಸ್ಯರಾದರು. ಕಾಂಗ್ರೆಸ್ ಪಕ್ಷದಿಂದ ಇಬ್ಬರು ಮಹಿಳೆಯರು ಆಯ್ಕೆಯಾಗಿದ್ದು ಎಂ.ಆರ್. ಲಕ್ಷಮ್ಮ ಮತ್ತು ಎಂ.ಎನ್. ಸೀತಮ್ಮನವರು ಪುರಸಭಾ ಸದಸ್ಯರಾಗಿದ್ದು ಮೊಟ್ಟಮೊದಲ ಬಾರಿಗೆ ಸ್ಥಳೀಯ ಸಂಸ್ಥೆಗೆ ನಡೆದ ಚುನಾವಣೆಯಲ್ಲಿ ಇಬ್ಬರು ಮಹಿಳೆಯರು ಪುರಸಭೆಗೆ ಆಯ್ಕೆಯಾಗಿದ್ದರು[೧೮].

ಮೈಸೂರು ಪುರಸಭಾ ಸದಸ್ಯರಾಗಿ ಆಯ್ಕೆಯಾದ ಲಕ್ಷಮ್ಮನವರು ನಂತರ ದಿನಾಂಕ ೦೬.೦೧.೧೯೪೭ರಲ್ಲಿ ಪುರಸಭೆಯ ಉಪಾಧ್ಯಕ್ಷರಾಗಿ ಆಯ್ಕೆಯಾದರು[೧೯]. ಈ ಸಂದರ್ಭದಲ್ಲಿ ಟಿ. ಮರಿಯಪ್ಪನವರು ಅಧ್ಯಕ್ಷರಾಗಿದ್ದರು. ಒಂದು ವರ್ಷಗಳ ಕಾಲ ಉಪಾಧ್ಯಕ್ಷೆಯಾಗಿ ಕಾರ್ಯ ನಿರ್ವಹಿಸಿದ ಲಕ್ಷಮ್ಮನವರ ನಾಯಕತ್ವದ ಗುಣಗಳು ಅವರನ್ನು ಪುರಸಭೆಯ ಕಾಂಗ್ರೆಸ್ ಪಕ್ಷದ ಅಧ್ಯಕ್ಷ ಸ್ಥಾನವನ್ನಲಂಕರಿಸುವಂತೆ ಮಾಡಿತು. ಟಿ. ಮರಿಯಪ್ಪನವರು ಮತ್ತು ಮಹಮ್ಮದ್ ಷರೀಫ್‌ರವರು ಮೈಸೂರು ಪುರಸಭೆಯಿಂದ ಮಂತ್ರಿಮಂಡಲಕ್ಕೆ ಆಯ್ಕೆಯಾದರು. ಟಿ. ಮರಿಯಪ್ಪನವರ ತೆರವಾದ ಪುರಸಭಯ ಅಧ್ಯಕ್ಷ ಸ್ಥಾನಕ್ಕೆ ಎಂ.ಆರ್. ಲಕ್ಷಮ್ಮನವರನ್ನು ಆಯ್ಕೆ ಮಾಡಲಾಯಿತು[೨೦]. ೧೯೪೬ ರಿಂದ ೧೯೪೮ರವರೆಗೆ ಎರಡು ಅವಧಿಗಳಲ್ಲಿ ಪುರಸಭಾ ಸದಸ್ಯರಾಗಿ ಸೇವೆ ಸಲ್ಲಿಸಿದ ಲಕ್ಷಮ್ಮನವರು ಜನರ ಸಮಸ್ಯೆಗಳನ್ನು ಬಗೆಹರಿಸುವುದರಲ್ಲಿ ಮೊದಲ ಆದ್ಯತೆಯನ್ನು ನೀಡಿದರು.

## ೫.೪ ಸ್ವಾತಂತ್ರ್ಯ ನಂತರದ ರಾಜಕೀಯದಲ್ಲಿ ಎಂ.ಆರ್. ಲಕ್ಷಮ್ಮ

ಲಕ್ಷಮ್ಮನವರು ನ್ಯಾಯವಿಧಾಯಕ ಸಭೆಯ ಸದಸ್ಯರಾಗಿ, ಪುರಸಭಾ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ ನಂತರ ೧೯೪೯ರಿಂದ ೧೯೫೨ ರವರೆಗೆ ಸಮಾಜಸೇವೆಯಲ್ಲಿ ತಮ್ಮನ್ನು

ತೊಡಗಿಸಿಕೊಂಡರು. ಸಮಾಜಮುಖಿ ಲಕ್ಷಮ್ಮನವರು ರಾಜಕೀಯರಂಗಕ್ಕಿಂತ ಸಮಾಜಸೇವೆ ಮತ್ತು ಪತ್ರಿಕಾರಂಗದಲ್ಲಿ ಕೆಲಸ ನಿರ್ವಹಿಸುವ ಇಚ್ಛೆಯನ್ನು ಇಟ್ಟುಕೊಂಡವರಾಗಿದ್ದು ಕಾಂಗ್ರೆಸ್ ಪಕ್ಷವು ಲೋಕಸಭಾ ಚುನಾವಣೆಯಲ್ಲಿ ಸ್ಪರ್ಧಿಸಲು ಟಿಕೆಟ್ ನೀಡುವುದಾಗಿ ಹೇಳಿದಾಗ ಅವರು ಅದನ್ನು ನಯವಾಗಿ ತಿರಸ್ಕರಿಸಿದರು[೨೧]. ಆದರೆ ಕಾಂಗ್ರೆಸ್ ಪಕ್ಷದ ಸಂಘಟನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಮೈಸೂರು ಪ್ರದೇಶ ಕಾಂಗ್ರೆಸ್‌ನ ಮಹಿಳಾ ಘಟಕದ ಸಂಘಟನೆಯನ್ನು ಮಾಡಿ ವಿವಿಧ ರಚನಾತ್ಮಕ ಕಾರ್ಯಗಳನ್ನು ಕೈಗೊಂಡರು. ಮೈಸೂರು ರಾಜ್ಯದ ಮೂಲೆ ಮೂಲೆಗಳಲ್ಲಿ ಸಂಚರಿಸಿ ಜನರನ್ನು ಸಂಘಟಿಸಿದರು. ಇವರ ಅವಿರತ ಶ್ರಮದಿಂದಾಗಿ ವಿಧಾನಪರಿಷತ್ತಿನ ಸದಸ್ಯರಾಗಿ ೧೯೫೨ ರಲ್ಲಿ ಚುನಾಯಿತರಾದರು.

ಲಕ್ಷಮ್ಮನವರು ಸಮಾಜಸೇವೆ ಜನರ ಬಗ್ಗೆ ತೋರುತ್ತಿದ್ದ ಕಾಳಜಿ ಅವರು ವಿಧಾನ ಪರಿಷತ್ತಿನ ಸದಸ್ಯರಾದ ನಂತರ ಇನ್ನೂ ಹೆಚ್ಚಾಗಿ ತಮ್ಮನ್ನು ತಾವು ಜನಸೇವೆಯಲ್ಲಿ ತೊಡಗಿಸಿಕೊಳ್ಳಲು ಸಾಧ್ಯವಾಯಿತು. ವಿಧಾನಪರಿಷತ್ತಿನ ಸದಸ್ಯರಾದ ಇವರು ೧೯೫೨ ರಿಂದ ೧೯೫೬ರವರೆಗೆ ನಾಲ್ಕು ವರ್ಷಗಳ ಕಾಲ ಕಾಂಗ್ರೆಸ್‌ನ ಶಾಸಕಾಂಗ ಪಕ್ಷದ ಸಹಕಾರ್ಯದರ್ಶಿಯಾಗಿ ಕೆಲಸ ನಿರ್ವಹಿಸಿದರು. ಶೀಘ್ರಲಿಪಿಕಾರರ ಕೊರತೆಯಿಂದಾಗಿ ಎರಡು ವರ್ಷಗಳ ಕಾಲ ತಾವೇ ಎಲ್ಲಾ ನಡಾವಳಿಗಳನ್ನು ಸಿದ್ಧಪಡಿಸುತ್ತಿದ್ದರು[೨೨]. ಯಾವ ನೌಕರರ ಸಹಾಯವಿಲ್ಲದೆ ಪತ್ರವ್ಯವಹಾರಗಳನ್ನೆಲ್ಲ ತಾವೊಬ್ಬರೆ ನಿಭಾಯಿಸುತ್ತಿದ್ದರು. ಶಾಸಕಾಂಗದ ಅನೇಕ ಸಮಿತಿಗಳಲ್ಲಿ ಸದಸ್ಯರಾಗಿ ಕೆಲಸ ನಿರ್ವಹಿಸಿದ್ದರು. ನಿಯಮ ಸಮಿತಿ, ಸಾರ್ವಜನಿಕ ಹಣಕಾಸು ಸಮಿತಿ ಇದಲ್ಲದೆ ಪ್ರವಾಹಪೀಡಿತ ಪ್ರದೇಶಗಳಿಗೆ ತೆರಳಿ, ನೆರೆ ಸಂತ್ರಸ್ತರನ್ನು ಸಂತೈಸಿ ಅವರ ಸ್ಥಿತಿಗತಿಗಳನ್ನು ಅಧ್ಯಯನ ಮಾಡಲು ನೇಮಿಸಿದ ಐವರು ಸದಸ್ಯರ ಸಮಿತಿಯಲ್ಲಿ ಒಬ್ಬರಾಗಿ ಕಾರ್ಯ ನಿರ್ವಹಿಸಿದರು. ಪ್ರದೇಶ ಕಾಂಗ್ರೆಸ್ ಸಮಿತಿಯ ಮಹಿಳಾ ಘಟಕದ ಸಂಚಾಲಕರಾಗಿ ಕೆಲಸವನ್ನು ನಿರ್ವಹಿಸಿದರು.

ಲಕ್ಷಮ್ಮನವರು ವಿಧಾನಪರಿಷತ್ತಿನ ಸದಸ್ಯರಾಗಿ ಅಮೆರಿಕಾ ದೇಶದ ಆಹ್ವಾನದ ಮೇರೆಗೆ ೧೯೫೪ರಲ್ಲಿ ಅಮೆರಿಕಾ ಪ್ರವಾಸವನ್ನು ಕೈಗೊಂಡರು. ರಾಜಕೀಯ ಸಂಸ್ಥೆಗಳ ಅಧ್ಯಯನ ಮತ್ತು ಮಹಿಳೆಯರ ಬಗ್ಗೆ ತಿಳಿದುಕೊಳ್ಳಲು ಅಮೆರಿಕಾಕ್ಕೆ ತೆರಳಿದರು. ಲಕ್ಷಮ್ಮನವರು ಸದಾ ಖಾದಿವಸ್ತ್ರಗಳನ್ನೇ ಧರಿಸುತ್ತಿದ್ದರು. ಅಮೆರಿಕಾದಲ್ಲಿ ಭಾರತೀಯರ ಸಂಸ್ಕೃತಿಯ ಹಿರಿಮೆಯನ್ನು ತಿಳಿಸಲು ಹಾಗೂ ಭಾರತದ ಘನತೆ ಗೌರವಕ್ಕೆ ತಕ್ಕಂತೆ ಇರಲು ನಿರ್ಧರಿಸಿ ರೇಷ್ಮೆ ವಸ್ತ್ರಗಳನ್ನು ಕೊಂಡು ಧರಿಸಿದರು. ಅಮೆರಿಕಾ ಮಾತ್ರವಲ್ಲದೆ ಇಂಗ್ಲೆಂಡ್, ಇಟಲಿ, ಫ್ರಾನ್ಸ್, ಸ್ವಿಟ್ಜರ್‌ಲ್ಯಾಂಡ್ ಮುಂತಾದ ದೇಶಗಳಿಗೂ ಭೇಟಿ ಇತ್ತರು. ಅಮೆರಿಕಾದ ಡೆಮೊಕ್ರೆಟಿಕ್ ಪಕ್ಷದ ಮಹಿಳಾ ವಿಭಾಗಕ್ಕೆ ಸಂಬಂಧಪಟ್ಟಂತೆ ಹಾಗೂ ಇಂಗ್ಲೆಂಡಿನ ಲೇಬರ್ ಪಕ್ಷದ ಮಹಿಳಾ ಘಟಕದ ಬಗ್ಗೆ ಅಧ್ಯಯನ ಮಾಡಿದರು. ವಿದೇಶಗಳಲ್ಲಿ ಮಹಿಳೆಯರ ಸ್ಥಿತಿಗತಿಗಳು, ಅವರಿಗೆ ದೊರೆತಿರುವ

ಸ್ಥಾನಮಾನಗಳನ್ನು ಕಂಡು ಮೆಚ್ಚಿದರು. ಅಮೆರಿಕಾದ ಅಧ್ಯಕ್ಷರ ಪತ್ನಿ ಶ್ರೀಮತಿ ರೂಸ್‌ವೆಲ್ಟ್‌ರನ್ನು ಮತ್ತು ಉಪಾಧ್ಯಕ್ಷರಾದ ರಿಚರ್ಡ್ ನಿಕ್ಸನ್ ಹಾಗೂ ಅವರ ಪತ್ನಿ ಪ್ಯಾಟ್ರೀಷಿಯಾ ನಿಕ್ಸನ್, ಚೆಸ್ಟರ್ ಬೌಲ್ ದಂಪತಿಗಳು ಮುಂತಾದ ಮಹನೀಯರನ್ನು ಭೇಟಿ ಮಾಡಿ ಅಲ್ಲಿನ ಮಹಿಳೆಯರ ಸ್ಥಿತಿಗತಿಗಳ ಬಗ್ಗೆ ವಿಚಾರವಿನಿಮಯ ಮಾಡಿಕೊಂಡರು[೨೩]. ಅಲ್ಲದೆ ಅಮೆರಿಕದ ಪ್ರಮುಖ ಶಾಸಕರು, ಅಧಿಕಾರಿಗಳು, ಗಣ್ಯವ್ಯಕ್ತಿಗಳು, ಹಾಲಿವುಡ್‌ನ ಪ್ರಸಿದ್ಧ ನಟರುಗಳನ್ನು ಭೇಟಿ ಮಾಡಿ ಅಲ್ಲಿನ ಹಲವಾರು ವಿಷಯಗಳ ಬಗ್ಗೆ ತಿಳಿದುಕೊಂಡರು. ಲಕ್ಷಮ್ಮನವರು ಭಾರತ ಮತ್ತು ಕರ್ನಾಟಕದ ಬಗ್ಗೆ ಅನೇಕ ಮಾಹಿತಿಗಳನ್ನು ಹಾಗೂ ಪುಸ್ತಕಗಳನ್ನು ಅಮೆರಿಕಾಕ್ಕೆ ತೆಗೆದುಕೊಂಡು ಹೋಗಿದ್ದು ಅಮೆರಿಕಾದ ಜನರಿಗೆ ಭಾರತದ ವೈಶಿಷ್ಟ್ಯತೆ, ಇತಿಹಾಸ ಸಂಸ್ಕೃತಿ ಮತ್ತು ಪರಂಪರೆಗಳ ಬಗ್ಗೆ ವಿಶೇಷವಾಗಿ ಕರ್ನಾಟಕದ ಬಗ್ಗೆ ಅನೇಕ ಮಾಹಿತಿಗಳನ್ನು ತಿಳಿಸಿದರು[೨೪]. ಟೊರೆಂಟೋದಲ್ಲಿ ನಡೆದ ಅಂತಾರಾಷ್ಟ್ರೀಯ ಸಮಾಜಸೇವಾ ಸಮ್ಮೇಳನದಲ್ಲಿ ಭಾಗವಹಿಸುವ ಅವಕಾಶ ಲಕ್ಷಮ್ಮನವರಿಗೆ ದೊರೆತು ಭಾರತದ ಸಂಸ್ಕೃತಿ ಮತ್ತು ಇತಿಹಾಸವನ್ನು ಹೆಚ್ಚು ಪ್ರಚಾರಪಡಿಸಲು ಸಾಧ್ಯವಾಯಿತು. ಅವರ ಜ್ಞಾನ ಮತ್ತು ಕಾರ್ಯವೈಖರಿಯನ್ನು ನೋಡಿದರೆ ಭಾರತವನ್ನು ಪ್ರತಿನಿಧಿಸುವ ಸೂಕ್ತ ರಾಯಭಾರಿಯಾಗಿ ಎಂ.ಆರ್. ಲಕ್ಷಮ್ಮನವರು ಹೊರಹೊಮ್ಮಿದರು.

ಎಂ.ಆರ್. ಲಕ್ಷಮ್ಮನವರು ಮೈಸೂರು ಪದವೀಧರ ಕ್ಷೇತ್ರದಿಂದ ಚುನಾವಣೆಗೆ ಸ್ಪರ್ಧಿಸಿ ಬಹುಮತದಿಂದ ಆಯ್ಕೆಯಾಗಿ ಎರಡನೇ ಬಾರಿಗೆ ೧೯೫೮ರಲ್ಲಿ ವಿಧಾನ ಪರಿಷತ್ ಸದಸ್ಯರಾದರು. ವಿಧಾನಪರಿಷತ್ತಿನಲ್ಲಿ ಪದವೀಧರರಿಗೆ ೨ ಸ್ಥಾನಗಳಿದ್ದು, ಲಕ್ಷಮ್ಮನವರು ಒಬ್ಬರಾಗಿ ಆಯ್ಕೆಯಾದರು. ಮೈಸೂರು ಪ್ರದೇಶ ಕಾಂಗ್ರೆಸ್‌ನ ಮಹಿಳಾ ಘಟಕದ ಸಂಚಾಲಕಿಯಾಗಿ ೪ ವರ್ಷಗಳ ಕಾಲ ಸೇವೆ ಸಲ್ಲಿಸಿದರು. ೧೯೬೨ ರಲ್ಲಿ ಚಿತ್ರದುರ್ಗ ಜಿಲ್ಲೆಯಿಂದ ವಿಧಾನಸಭಾ ಚುನಾವಣೆಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಕಾಂಗ್ರೆಸ್ ಪಕ್ಷದ ಶಾಸಕಾಂಗ ಸಭೆಯು ಐವರು ಸದಸ್ಯರ ಸಮಿತಿಯನ್ನು ಆಯ್ಕೆ ಮಾಡಿದ್ದು ಅದರ ಸಂಚಾಲಕರಾಗಿ ಕಾರ್ಯನಿರ್ವಹಿಸಿದರು[೨೫]. ಮೈಸೂರು ಪ್ರದೇಶ ಕಾಂಗ್ರೆಸ್ ಪಕ್ಷದ ಪದನಿಮಿತ್ತ ಸದಸ್ಯೆಯಾಗಿ ನಾಲ್ಕು ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸದಸ್ಯೆಯಾಗಿ ಪಕ್ಷದ ಪ್ರಚಾರ ಭಾಷಣಗಳನ್ನು ಮಾಡಿ ಪಕ್ಷದ ಸಂಘಟನೆಯಲ್ಲಿ ಎರಡು ವರ್ಷಗಳ ಕಾಲ ತಮ್ಮನ್ನು ತೊಡಗಿಸಿಕೊಂಡರು. ೧೯೬೨ ರಿಂದ ೧೯೬೪ರವರೆಗೆ ಮೈಸೂರು ವಿಧಾನಪರಿಷತ್ತಿನ ಉಪಸಭಾಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಇವರು ವಿಧಾನಪರಿಷತ್ತಿನಲ್ಲಿ ನಡೆಸಿದ ಚರ್ಚೆಗಳು ಭಾಷಣಗಳು ಅವರ ಸೇವಾ ಮನೋಭಾವವನ್ನು ಮತ್ತು ಉತ್ತಮ ರಾಜಕೀಯಪಟು ಎಂಬುದನ್ನು ಸಾಬೀತುಪಡಿಸಿವೆ.

ಎಂ.ಆರ್. ಲಕ್ಷಮ್ಮನವರು ಮೂರನೇ ಬಾರಿಗೆ ವಿಧಾನಪರಿಷತ್ತಿನ ಸದಸ್ಯರಾಗಿ ಪದವೀಧರ ಕ್ಷೇತ್ರದಿಂದ ೧೯೬೪ರಲ್ಲಿ ಆಯ್ಕೆಯಾದರು. ಅನೇಕ ಸಮಸ್ಯೆಗಳ ಬಗ್ಗೆ ಸರ್ಕಾರದ ಗಮನ ಸೆಳೆದು ಪ್ರತಿಯೊಂದು ವಿಚಾರಗಳ ಬಗ್ಗೆ ಚರ್ಚೆ ಮಾಡಿದ ಲಕ್ಷಮ್ಮನವರು ಸಮಾಜ ಮುಖಿಯಾಗಿದ್ದರೆಂಬುದು ಸಾಬೀತಾಗುತ್ತದೆ.

**೫.೫ ಸದನದಲ್ಲಿ ಎಂ.ಆರ್. ಲಕ್ಷಮ್ಮನವರ ಮಹಿಳಾಪರ ಚಿಂತನೆಗಳು**

ಲಕ್ಷಮ್ಮನವರು ಕೆಳವರ್ಗದವರ ಬಗ್ಗೆ, ಮಹಿಳೆಯರ ಬಗ್ಗೆ, ರೈತರ ಬಗ್ಗೆ, ಸಮಾಜ ಸುಧಾರಣೆಯ ಬಗ್ಗೆ, ದೇಶದ ಅಭಿವೃದ್ಧಿಯ ಬಗ್ಗೆ ಅಪಾರವಾದ ಕಾಳಜಿಯನ್ನಿಟ್ಟುಕೊಂಡಿದ್ದು, ವಿಧಾನಪರಿಷತ್ತಿನಲ್ಲಿ ಅವರು ಮಾಡಿದ ಭಾಷಣಗಳು ಮತ್ತು ಚರ್ಚೆಗಳನ್ನು ಅವಲೋಕಿಸಿದಾಗ ಅವರ ಆಳವಾದ ಜ್ಞಾನ ದೂರದೃಷ್ಟಿತ್ವ, ದೇಶಾಭಿಮಾನ ವಿಶೇಷವಾಗಿದ್ದು ಲಕ್ಷಮ್ಮನವರು ಅತ್ಯುತ್ತಮ ವಾಕ್ಪಟು ಕೂಡ ಆಗಿದ್ದರು ಎಂಬುದು ಅರಿವಾಗುತ್ತದೆ.

ಮಹಿಳೆಯರ ಬಗ್ಗೆ ಅಪಾರವಾದ ಕಾಳಜಿ ಹೊಂದಿದ್ದ ಲಕ್ಷಮ್ಮನವರು ಮೊದಲಿನಿಂದಲೂ ಅನೇಕ ಮಹಿಳಾ ಮಂಡಲಿಗಳ ಸ್ಥಾಪನೆ, ಮಹಿಳೆಯರನ್ನು ಸಂಘಟಿಸುವುದು, ಮಹಿಳೆಯರಿಗೆ ಅಕ್ಷರಾಭ್ಯಾಸ ಮುಂತಾದ ಕಾರ್ಯಗಳನ್ನು ಸತತವಾಗಿ ನಡೆಸಿಕೊಂಡು ಬಂದಿದ್ದರು. ವಿಧಾನಪರಿಷತ್ತಿನ ಸದಸ್ಯರಾದ ಮೇಲೆ ಮಹಿಳೆಯರ ಅಭಿವೃದ್ಧಿಗಾಗಿ ಮತ್ತು ಉತ್ತಮ ಸ್ಥಾನಮಾನ ಕಲ್ಪಿಸಲು ಒಂದು ಸದಾವಕಾಶ ದೊರೆಯಿತು. ಮಹಿಳಾ ಕಾರ್ಮಿಕರು ಅನೇಕ ರಂಗಗಳಲ್ಲಿ ಕೆಲಸ ನಿರ್ವಹಿಸುತ್ತಿದ್ದು, ಅವರ ಸ್ಥಿತಿಗತಿಗಳನ್ನು ಗಮನಿಸಲು ಮಹಿಳಾ ಕಾರ್ಮಿಕ ಆಯುಕ್ತರನ್ನು ನೇಮಿಸುವಂತೆ ಸರ್ಕಾರಕ್ಕೆ ವಿನಂತಿ ಮಾಡಿದ ಅವರು ಸ್ತ್ರೀಯರ ವಿದ್ಯಾಭ್ಯಾಸದ ಬಗ್ಗೆ ವಿಶೇಷವಾದ ಆದ್ಯತೆಯನ್ನು ನೀಡಿದರು. ತಾಯಿಯೇ ಮೊದಲ ಗುರುವಾಗಿದ್ದರಿಂದ ಮತ್ತು ಅಕ್ಷರ ಕಲಿತ ಹೆಣ್ಣು ಸಂಸಾರದ ಕಣ್ಣಿದ್ದಂತೆ. ಆದುದರಿಂದ ಸ್ತ್ರೀಯರಿಗೆ ವಿದ್ಯಾಭ್ಯಾಸ ಅತ್ಯಗತ್ಯ. ಒಬ್ಬ ಮಹಿಳೆ ವಿದ್ಯಾವಂತೆ ಆದರೆ ಮುಂದಿನ ಪೀಳಿಗೆಗೆ ಕೂಡ ಆಕೆ ವಿದ್ಯಾಭ್ಯಾಸ ನೀಡಬಲ್ಲಳು. ಹೆಚ್ಚಿನ ಸಂಖ್ಯೆಯ ಹೆಣ್ಣು ಮಕ್ಕಳು ಅರ್ಧದಲ್ಲಿಯೇ ವಿದ್ಯಾಭ್ಯಾಸವನ್ನು ಮೊಟಕುಗೊಳಿಸುತ್ತಾರೆ. ಅವರಿಗೆ ವಯಸ್ಕರ ಶಿಕ್ಷಣದ ಮೂಲಕ ಶಿಕ್ಷಣ ಮುಂದುವರೆಸಲು ಅವಕಾಶ ನೀಡಬೇಕು. ಸ್ವಭಾವತಃ ಹೆಣ್ಣುಮಕ್ಕಳು ಬುದ್ಧಿವಂತರಾಗಿದ್ದು, ಸೂಕ್ಷ್ಮಬುದ್ಧಿವುಳ್ಳವರಾಗಿರುತ್ತಾರೆ. ಅವರ ಬುದ್ಧಿ ಬಹುಬೇಗ ವಿಕಸಿತವಾಗುತ್ತದೆ. ಆದರೆ ಹೆಣ್ಣುಮಕ್ಕಳಿಗೆ ವಿದ್ಯೆಯನ್ನು ನೀಡುವುದರಲ್ಲಿ ಹೆಚ್ಚಿನ ಪ್ರಾತಿನಿಧ್ಯವನ್ನು ನೀಡದಿರುವ ಕಾರಣ ಸಮಾಜದ ಮುಖ್ಯವಾಹಿನಿಗೆ ಹೆಣ್ಣುಮಕ್ಕಳು ಬರುತ್ತಿಲ್ಲ. ಅವರ ಬಗ್ಗೆ ಗೌರವಯುತವಾಗಿ ನಡೆದುಕೊಳ್ಳಬೇಕು ಮತ್ತು ಹಗುರವಾಗಿ ಮಾತನಾಡಬಾರದು ಎಂದು ಸ್ತ್ರೀ ಶೋಷಣೆಯ ವಿರುದ್ಧ ಅಂದಿನ ಕಾಲದಲ್ಲೇ ಧ್ವನಿ ಎತ್ತಿದವರು. ಹೆಣ್ಣುಮಕ್ಕಳಿಗೆ ಶಿಕ್ಷಣವನ್ನು ನೀಡಿದರೆ ಮುಂದೆ ಅವರು ಸ್ವಾವಲಂಬಿಗಳಾಗಿ ಜೀವನ ನಡೆಸಲು

ಸಹಕಾರಿಯಾಗುತ್ತದೆ. ಹೆಣ್ಣುಮಕ್ಕಳು ಮನೆಯೊಳಗೆ ಕುಳಿತರೆ ಸಮಾಜದ ರಚನೆ ಕುಂಠಿತವಾಗುತ್ತದೆ. ಆದುದರಿಂದ ಅವರ ಶಿಕ್ಷಣಕ್ಕೆ ಸಮಾಜವು ಉತ್ತೇಜನ ನೀಡಬೇಕು. ಪೂರ್ವ ಪ್ರಾಥಮಿಕ ಶಾಲೆಗಳನ್ನು ಮಹಿಳಾ ಸಮಾಜದ ಮೇಲ್ವಿಚಾರಣೆಗೆ ನೀಡಿದರೆ ಮಕ್ಕಳ ಸರ್ವಾಂಗೀಣ ಅಭಿವೃದ್ಧಿಯ ಜೊತೆಗೆ ಸ್ತ್ರೀ ಸಮಾಜದ ಏಳಿಗೆಗೆ ಕಾರಣವಾಗುತ್ತದೆ. ಹೆಣ್ಣು ಮಕ್ಕಳಿಗೆ ಆರ್ಥಿಕ ಸಂಕಷ್ಟವಿದ್ದು ಶುಲ್ಕ ಕಟ್ಟಲು ತೊಂದರೆಯಿದೆ. ಆದ್ದರಿಂದ ಸರ್ಕಾರವು ಅವರಿಗೆ ಉಚಿತ ಶಿಕ್ಷಣ ನೀಡುವ ಬಗ್ಗೆ ಗಮನ ನೀಡಬೇಕು. ಹೆಣ್ಣುಮಕ್ಕಳಿಗೆ ಗೃಹ ವಿಜ್ಞಾನದಂತಹ ವಿಷಯದ ಬಗ್ಗೆ ಹೆಚ್ಚಿನ ಶಿಕ್ಷಣ ನೀಡಬೇಕು. ಜೊತೆಗೆ ಕರಕುಶಲ ವಸ್ತುಗಳ ತಯಾರಿಕೆ ಬಗ್ಗೆ ಶಿಕ್ಷಣವನ್ನು ನೀಡಬೇಕು. ಶಾಲಾ ಪಠ್ಯಪುಸ್ತಕಗಳ ಜೊತೆಯಲ್ಲಿ ಸಾಮಾನ್ಯ ಜ್ಞಾನದ ಅರಿವನ್ನು ಮೂಡಿಸುವ ಶಿಕ್ಷಣಕ್ಕೆ ಆದ್ಯತೆ ನೀಡಬೇಕು. ಪ್ರಾಥಮಿಕ ಶಾಲೆಗಳಲ್ಲಿ ಮಹಿಳಾ ಶಿಕ್ಷಕಿಯರು ಇರಬೇಕು. ಜೊತೆಗೆ ಶಾಲಾ ತನಿಖಾಧಿಕಾರಿಗಳು ಕೂಡ ಮಹಿಳೆಯರೇ ಇರಬೇಕು. ಹೆಣ್ಣುಮಕ್ಕಳು ಕಾರ್ಖಾನೆಗಳಲ್ಲಿ ಕೆಲಸ ಮಾಡುತ್ತಿದ್ದು ಪುರುಷರಿಗಿಂತ ಯಾವ ವಿಧದಲ್ಲಿಯೂ ಹಿಂದುಳಿದಿಲ್ಲದಿರುವ ಕಾರಣ ಅವರ ಸಾಮರ್ಥ್ಯಕ್ಕನುಗುಣವಾಗಿ ಕೆಲಸವನ್ನು ನೀಡಬೇಕು.

ಗೃಹ ಕೈಗಾರಿಕೆಯಲ್ಲಿ ಜಪಾನ್ ದೇಶ ಅಗ್ರಸ್ಥಾನವನ್ನು ಪಡೆದಿದ್ದು, ಜಪಾನಿನ ಮಹಿಳೆಯರು ಕೂಡ ಭಾರತೀಯರಂತೆ ಸದ್ಗೃಹಿಣಿಯರು. ಜಪಾನಿಯರ ಶಿಸ್ತು, ಸಂಯಮ, ಮಹಿಳೆಯರ ಕಷ್ಟ ಮತ್ತು ಸಹಿಷ್ಣುತೆ, ಬುದ್ಧಿಕುಶಲತೆ, ಧೈರ್ಯ ಸ್ಥೈರ್ಯ ಮನೋಭಾವನೆ ಪ್ರಶಂಸನೀಯವಾದುದು. ಜಪಾನ್ ದೇಶದ ಮೇಲೆ ಭಾರತೀಯರ ಪ್ರಭಾವ ಇದ್ದು ಭಾರತದಲ್ಲಿ ಉದಯಿಸಿದ ಬೌದ್ಧ ಧರ್ಮದ ಅನುಯಾಯಿಗಳಾಗಿರುವ ಜಪಾನಿಯರು ಭಾರತೀಯರ ಮೇಲೆ ಗೌರವವನ್ನಿಟ್ಟುಕೊಂಡಿರುವವರು. ಜಪಾನ್ ದೇಶಕ್ಕೆ ಮಹಿಳಾ ಸದಸ್ಯರು ಪ್ರವಾಸ ಕೈಗೊಂಡು ಜಪಾನಿಯರ ಕೈಗಾರಿಕಾಭಿವೃದ್ಧಿಯನ್ನು ಖುದ್ದಾಗಿ ವೀಕ್ಷಿಸಲು ಪ್ರವಾಸ ಸಮಿತಿಯನ್ನು ನೇಮಿಸಬೇಕು. ಇದರಿಂದ ಭಾರತದಲ್ಲಿಯೂ ಅಭಿವೃದ್ಧಿಯನ್ನು ಕೈಗೊಳ್ಳಲು ಮತ್ತು ಜಪಾನಿಯರ ಪದ್ಧತಿಯನ್ನು ಅನುಷ್ಠಾನಕ್ಕೆ ತರಲು ಸಾಧ್ಯವಾಗುತ್ತದೆ. ಜಪಾನಿಯರು ಸಂಘಟಿತರಾಗಿ ಸಹಕಾರ ಮನೋಭಾವದಿಂದ ಕೆಲಸ ನಿರ್ವಹಿಸಿ ಕೈಗಾರಿಕಾಭಿವೃದ್ಧಿಯನ್ನು ಸಾಧಿಸಿದ್ದಾರೆ. ಆದುದರಿಂದ ಮಹಿಳೆಯರಿಂದ ಕೂಡಿದ ಒಂದು ನಿಯೋಗವನ್ನು ಜಪಾನಿಗೆ ಕಳುಹಿಸಬೇಕು. ಆ ನಿಯೋಗವು ಒಬ್ಬರು ಶಿಕ್ಷಕಿ, ಒಬ್ಬರು ಗೃಹಿಣಿ, ಒಬ್ಬರು ಕಲಾವಿದೆ, ಒಬ್ಬರು ಮಹಿಳಾ ಸಾಹಿತಿ ಮತ್ತು ಮಹಿಳಾ ಶಾಸನಸಭೆಯ ಸದಸ್ಯೆಯನ್ನು ಒಳಗೊಂಡಿರಬೇಕು. ಏಕೆಂದರೆ ಗೃಹ ಕೈಗಾರಿಕೆಗಳ ಬಗ್ಗೆ ಅಧ್ಯಯನ ಮಾಡಿ ನಮ್ಮಲ್ಲೂ ಕೂಡ ಅನುಷ್ಠಾನಕ್ಕೆ ತರಲು ಮತ್ತು ಆ ರೀತಿಯ ಶಿಕ್ಷಣಕ್ರಮವನ್ನು ಅಳವಡಿಸಿಕೊಳ್ಳಲು ಸಾಧ್ಯವಾಗುತ್ತದೆ. ಜಪಾನಿನಲ್ಲಿ ೧೩-೧೪ನೇ ವಯಸ್ಸಿನಿಂದಲೇ ಕೈಗಾರಿಕಾ ಶಿಕ್ಷಣವನ್ನು ನೀಡಲು ಪ್ರಾರಂಭಿಸುತ್ತಾರೆ. ಜಪಾನಿಯರು ಕಸದಿಂದ ರಸವನ್ನು ಮಾಡುವಲ್ಲಿ ಅವರು ಮೇಲುಗೈಯನ್ನು ಸಾಧಿಸಿದ್ದಾರೆ.

### ೫.೬ ಸದನದಲ್ಲಿ ಎಂ.ಆರ್. ಲಕ್ಷಮ್ಮನವರ ಸಮಾಜಸುಧಾರಣೆಯ ಚಿಂತನೆಗಳು

ಲಕ್ಷಮ್ಮನವರು ರಾಜಕೀಯ ಕ್ಷೇತ್ರಕ್ಕೆ ಬರುವ ಮೊದಲು ಸಮಾಜ ಸುಧಾರಕಿಯಾಗಿದ್ದರು. ಸಮಾಜಸುಧಾರಣೆಯ ಬಗ್ಗೆ ವಿಶೇಷ ಒಲವನ್ನಿಟ್ಟುಕೊಂಡಿದ್ದರು. ಉತ್ತಮ ಸಮಾಜನಿರ್ಮಾಣದ ಬಗ್ಗೆ ಹಲವಾರು ಚಿಂತನೆಗಳನ್ನು ಇಟ್ಟುಕೊಂಡಿದ್ದರು. ಪಾನನಿರೋಧ ಜಾರಿ ಮಾಡಿ ಸಮಾಜಸುಧಾರಣೆ ಕೆಲಸವನ್ನು ಕೈಗೊಳ್ಳಬೇಕೆಂದು ಸರ್ಕಾರವನ್ನು ಒತ್ತಾಯಿಸಿದರು. ಪಾನನಿರೋಧವನ್ನು ಕಾನೂನಿನ ಮೂಲಕ ಜಾರಿಗೆ ತರುವ ಬದಲು ಸಮಾಜ ಸುಧಾರಣೆಯ ಮೂಲಕ ಯಶಸ್ವಿಯಾಗಿ ಜಾರಿಗೆ ತರಬಹುದು. ಸಮಾಜ ಸುಧಾರಣಾ ಸಂಸ್ಥೆಗಳ ಮೂಲಕ ಪಾನನಿರೋಧದ ಯೋಜನೆಯನ್ನು ಜಾರಿಗೊಳಿಸಬಹುದು. ಪಾನನಿರೋಧ ಯಶಸ್ವಿಯಾಗಬೇಕಾದರೆ ಜನರಲ್ಲಿ ಅರಿವನ್ನುಂಟು ಮಾಡಬೇಕು. ಅವರ ಮನ ಪರಿವರ್ತನೆ ಮಾಡಲು ಪಾನನಿರೋಧದ ಬಗ್ಗೆ ಹೆಚ್ಚು ಪ್ರಚಾರವಾಗಬೇಕು. ವಿನೋಬಾಭಾವೆಯವರು ಹೇಳಿದಂತೆ 'ಪಾನನಿರೋಧ ಯಶಸ್ವಿ ಆಗಬೇಕಾದರೆ ಪ್ರಚಾರದಿಂದಲೇ ಹೊರತು ಸರ್ಕಾರದಿಂದಲ್ಲ' ಎಂಬುದನ್ನು ಸರ್ಕಾರ ಮನಗಾಣಬೇಕು ಎಂದು ಎಂ.ಆರ್. ಲಕ್ಷಮ್ಮನವರು ಅಭಿಪ್ರಾಯಪಟ್ಟರು.

ಲಕ್ಷಮ್ಮನವರು ಮೈಸೂರು ಹೆಬಿಚ್ಯುಯಲ್ ಅಫೆಂಡರ್ಸ್ ಕಾಯ್ದೆಯ ಬಗ್ಗೆ ಮಾತನಾಡುತ್ತಾ ಪ್ರಾಚೀನಕಾಲದಿಂದಿಲೂ ದೇವದಾಸಿ ಪದ್ಧತಿ ಜಾರಿಯಲ್ಲಿದ್ದು, ಈಗಲೂ ಕೂಡ ಕೆಲವು ಸ್ಥಳಗಳಲ್ಲಿ ಈ ಪದ್ಧತಿ ಜಾರಿಯಲ್ಲಿದೆ. ರಾಜ್ಯದಲ್ಲಿ ಅನೇಕ ಕಡೆ ಹೆಣ್ಣುಮಕ್ಕಳಿಗೆ ಪುನರ್ವಸತಿ ಕೇಂದ್ರಗಳನ್ನು ಸ್ಥಾಪಿಸಿರುವುದು ಸ್ವಾಗತಾರ್ಹ. ಇಲ್ಲಿ ಉತ್ತಮ ಶಿಕ್ಷಣವನ್ನು ನೀಡಿ ಅವರಿಗೆ ಜೀವನಮಾರ್ಗವನ್ನು ತೋರಿಸಿಕೊಡುವ ಕೆಲಸ ಆಗಬೇಕಿದೆ. ವೇಶ್ಯಾವೃತ್ತಿಯನ್ನು ಕೈಗೊಳ್ಳಲು ಅನೇಕ ಕಾರಣಗಳಿದ್ದು, ಜೀವನ ನಡೆಸುವುದಕ್ಕೋಸ್ಕರ ಹಣಕಾಸಿನ ತೊಂದರೆಯಿಂದ ದಾರಿದ್ರ್ಯದಿಂದ ಈ ವೃತ್ತಿಯನ್ನು ಕೈಗೊಳ್ಳುತ್ತಿದ್ದು, ಅವರಿಗೆ ಸೂಕ್ತ ರೀತಿಯ ಸೌಲಭ್ಯಗಳನ್ನು ಒದಗಿಸಿಕೊಟ್ಟರೆ ಅವರ ಜೀವನ ಸುಧಾರಿಸುತ್ತದೆ. ಅವರಿಗೆ ಸರಿಯಾದ ರೀತಿಯಲ್ಲಿ ಪುನರ್ವಸತಿ ಕೇಂದ್ರಗಳಲ್ಲಿ ಆಪ್ತ ಸಲಹೆ ನೀಡಲು ವೈದ್ಯರು, ಕಾನೂನಿನ ಅರಿವು ಮೂಡಿಸಲು ಪೊಲೀಸರು ಇರಬೇಕು. ಅವರನ್ನು ಅಪರಾಧಿಗಳಂತೆ ನೋಡದೆ ಅವರೊಡನೆ ಮಾನವೀಯ ದೃಷ್ಟಿಯಿಂದ ಕೆಲಸ ಮಾಡುವ ಸಿಬ್ಬಂದಿಯನ್ನು ನೇಮಿಸಬೇಕು. ಹಳ್ಳಿಗಳಿಂದ ಜನರು ವಲಸೆ ಬಂದು ನಗರಗಳಲ್ಲಿ ನೆಲೆಸುತ್ತಿದ್ದು, ನಗರಗಳಲ್ಲಿ ಜನಸಂಖ್ಯೆ ಹೆಚ್ಚಾಗಿದ್ದು, ನಗರಗಳಲ್ಲಿ ನಿರುದ್ಯೋಗ ಸಮಸ್ಯೆ ಮತ್ತು ಒತ್ತಡ ಹೆಚ್ಚಾಗಿ ವೇಶ್ಯಾವೃತ್ತಿ ಹೆಚ್ಚಾಗಿದೆ. ಇವರಿಗೆ ಪುನರ್ವಸತಿ ಕಲ್ಪಿಸುವುದರ ಜೊತೆಗೆ ಸಮಾಜ ಕಲ್ಯಾಣ ಇಲಾಖೆಯಲ್ಲಿ ಒಂದು ಸಮಿತಿಯನ್ನು ಸ್ಥಾಪಿಸಬೇಕು. ಪುನರ್ವಸತಿ ಕೇಂದ್ರಗಳಲ್ಲಿ ಸಣ್ಣ ಕೈಗಾರಿಕೆಗಳ ಬಗ್ಗೆ ತರಬೇತಿಯನ್ನು ನೀಡಿ ಸ್ವಾವಲಂಬನೆಯನ್ನು ಮೂಡಿಸಬೇಕು ಎಂದು ಅಭಿಪ್ರಾಯಪಟ್ಟರು.[೨೬]

### ೫.೭ ಸದನದಲ್ಲಿ ಎಂ.ಆರ್. ಲಕ್ಷಮ್ಮ ಅವರ ಕೃಷಿ ಹಾಗೂ ರೈತಪರ ನಿಲುವುಗಳು

ವಿಧಾನಪರಿಷತ್ತಿನಲ್ಲಿ ಮೈಸೂರು ರಾಜ್ಯದ ಆಹಾರ ಕಾಯ್ದೆಯ ಬಗ್ಗೆ ಮಾತನಾಡುತ್ತಾ ಮೈಸೂರು ರಾಜ್ಯದಲ್ಲಿ ಆಹಾರಧಾನ್ಯಗಳ ಬೆಲೆ ಕಡಿಮೆ ಇದ್ದು, ಮುಂಬೈ ಮತ್ತು ಮದ್ರಾಸ್ ಪ್ರಾಂತ್ಯಗಳಲ್ಲಿ ಆಹಾರಧಾನ್ಯಗಳ ಬೆಲೆ ಹೆಚ್ಚಿಗೆ ಇದೆ. ಸರ್ಕಾರವು ಬೆಂಬಲ ಬೆಲೆಯನ್ನು ನೀಡಿದರೆ ರೈತರು ಹೆಚ್ಚಿನ ಸಂಖ್ಯೆಯಲ್ಲಿ ಬೆಳೆಯನ್ನು ಬೆಳೆಯುತ್ತಾರೆ. ರೈತರಿಗೆ ವ್ಯವಸಾಯಕ್ಕೆ ನೀರಾವರಿ ವ್ಯವಸ್ಥೆಯನ್ನು ಸರ್ಕಾರ ಮಾಡಿಕೊಡಬೇಕು. ಕೆರೆಕಟ್ಟೆಗಳ ಮೂಲಕ ವ್ಯವಸಾಯಕ್ಕೆ ನೀರನ್ನು ಒದಗಿಸಿಕೊಡಬೇಕು. ರೈತರಿಗೆ ಬೆಂಬಲ ಬೆಲೆ ಕಡಿಮೆಯಾದರೆ ಆಹಾರ ಧಾನ್ಯಗಳನ್ನು ಹೊರ ರಾಜ್ಯಕ್ಕೆ ಸಾಗಿಸಿ, ಅಲ್ಲಿ ಮಾರಾಟ ಮಾಡುತ್ತಾರೆ. ಅದರಿಂದಾಗಿ ಮೈಸೂರು ರಾಜ್ಯದಲ್ಲಿ ಆಹಾರ ಸಮಸ್ಯೆ ತಲೆದೋರುತ್ತದೆ[೨೭]. ರೈತರಿಂದ ಲೆವಿ ಸಂಗ್ರಹಿಸುವ ಪದ್ಧತಿ ಜಾರಿಯಲ್ಲಿರಬೇಕೆ? ಎಂಬುದನ್ನು ಸರ್ಕಾರ ಪುನರ್ ಪರಿಶೀಲಿಸಬೇಕು. ರೈತರಿಂದ ಧಾನ್ಯಗಳಿಗೆ ತಕ್ಷಣವೆ ನಗದು ಹಣ ಪಾವತಿಸಬೇಕು. ರೈತರಿಗೆ ಹಣ ಪಾವತಿಸುವಲ್ಲಿ ಸರ್ಕಾರ ನಿಧಾನಗತಿಯನ್ನು ಅನುಸರಿಸುತ್ತಿದೆ. ವ್ಯವಸಾಯಗಾರರಿಗೆ ಭತ್ತವನ್ನು ಶೇಖರಿಸುವುದಕ್ಕೆ ಸರ್ಕಾರ ಗೋದಾಮುಗಳನ್ನು ಕಟ್ಟಿಸಿಕೊಟ್ಟು ಉತ್ತೇಜನ ನೀಡಬೇಕು. ರೈತರಿಗೆ ಗ್ರಾಮಾಂತರ ಅಪೆಕ್ಸ್ ಬ್ಯಾಂಕ್‌ಗಳು ಐವತ್ತು ಲಕ್ಷ ರೂಪಾಯಿಗಳಷ್ಟು ಸಾಲ ನೀಡಬೇಕು. ಗ್ರಾಮೀಣಾಭಿವೃದ್ಧಿಗೆ ಹೆಚ್ಚಿನ ಪ್ರೋತ್ಸಾಹ ನೀಡಬೇಕು. ಆಂಧ್ರಪ್ರದೇಶದವರು ತುಂಗಭದ್ರಾನದಿಗೆ ಕಟ್ಟಿದಂತಹ ಅಣೆಕಟ್ಟಿನಿಂದ ಮೈಸೂರು ರಾಜ್ಯಕ್ಕೆ ನೀರಾವರಿ ಅನುಕೂಲಗಳು ಸಾಧ್ಯವೇ? ಎಷ್ಟು ಎಕರೆ ಜಮೀನಿಗೆ ನೀರಾವರಿ ಸೌಲಭ್ಯ ದೊರೆತಿದೆ? ಎಂದು ಅವರು ಪ್ರಶ್ನೆ ಮಾಡಿದ್ದರು. ಕ್ಷಾಮ ಪರಿಸ್ಥಿತಿಯನ್ನು ಸರ್ಕಾರವು ಮಾನವೀಯತೆ ನೆಲೆಗಟ್ಟಿನಲ್ಲಿ ನೋಡಬೇಕು ಮತ್ತು ಪರಿಹರಿಸಬೇಕು. ಮಹಾತ್ಮ ಗಾಂಧೀಜಿಯವರು ಹೇಳಿದ ಧರ್ಮಮಾರ್ಗವನ್ನು ಅನುಸರಿಸಬೇಕು. ಅದೇ ಶ್ರೇಷ್ಠವಾದ ಹಾದಿಯಾಗಿದ್ದು ನಮ್ಮ ದೇಶ ಸಂಸ್ಕೃತಿಯ ನೆಲೆಬೀಡು ಪ್ರಪಂಚದ ಇತರೆ ದೇಶಗಳು ಬೇರೆ ಬೇರೆ ವಿಷಯಗಳಲ್ಲಿ ಪರಿಣಿತಿಯನ್ನು ಪಡೆದುಕೊಂಡಿದೆ. ಉದಾಹರಣೆಗೆ ಜಪಾನ್ ದೇಶ ಕೈಗಾರಿಕೆಗೆ ಪ್ರಸಿದ್ಧಿ, ಆದರೆ ಜರ್ಮನಿಯು ವಿಜ್ಞಾನದ ಕ್ಷೇತ್ರದಲ್ಲಿ ತನ್ನ ಸಾಧನೆಯನ್ನು ಮಾಡಿದೆ. ಆದರೆ ಭಾರತ ದೇಶವು ಧರ್ಮನಿಷ್ಠೆಗೆ ಹೆಸರಾಗಿದ್ದು, ಅದನ್ನು ಕಾಪಾಡಬೇಕು. ಕ್ಷಾಮ ಪರಿಹಾರ ನಿಧಿಗಳನ್ನು ಸರ್ಕಾರದ ವತಿಯಿಂದ ನೀಡಬೇಕು. ದನಕರುಗಳ ಮೇವಿಗೆ ಬೇಕಾಗುವ ಹುಲ್ಲನ್ನು ಸರಬರಾಜು ಮಾಡಬೇಕು ಎಂಬುದು ಇವರ ನಿಲುವಾಗಿತ್ತು. ಅಲ್ಲದೇ ಲಕ್ಷಮ್ಮನವರು ೧೯೫೩ ರಲ್ಲಿಯೇ ಉದ್ಯೋಗ ಖಾತ್ರಿ ಯೋಜನೆಯಂತಹ ಯೋಜನೆಗಳನ್ನು ರೂಪಿಸುವ ಬಗ್ಗೆ ಮಾತನಾಡಿದ್ದಾರೆ.[೨೮] ಕಾಮಗಾರಿ ಕೆಲಸಗಳನ್ನು ನಡೆಸುವುದರ ಮೂಲಕ ಗ್ರಾಮೀಣ ಭಾಗದಲ್ಲಿ ರೈತರಿಗೆ ಉದ್ಯೋಗವನ್ನು ಒದಗಿಸಿಕೊಡಬೇಕು ಆಹಾರ ಪಡಿತರ ನೀತಿಯನ್ನು ಜಾರಿಗೆ ತರಬೇಕು. ಈಗ ನೀಡುತ್ತಿರುವ ವಿದ್ಯಾಭ್ಯಾಸಕ್ರಮವನ್ನು ಸುಧಾರಣೆ ಮಾಡಿ ಗ್ರಾಮೀಣ ಭಾಗದ ವಿದ್ಯಾರ್ಥಿಗಳಿಗೆ ವ್ಯವಸಾಯದ

ಬಗ್ಗೆ ಹೆಚ್ಚಿನ ಮಾಹಿತಿ ನೀಡುವ ಶಿಕ್ಷಣವನ್ನು ನೀಡಬೇಕು. ವ್ಯವಸಾಯವು ಮುಖ್ಯವಾದ ಉದ್ಯೋಗವಾಗಿದ್ದು, ಹೆಚ್ಚು ಜನರು ಅದರಲ್ಲಿ ತೊಡಗಿಸಿಕೊಂಡರೆ ಆ ದೇಶ ಸುಭಿಕ್ಷವಾಗುತ್ತದೆ.

ಭಾರತ ಹಳ್ಳಿಗಳ ದೇಶ. ಪಂಚವಾರ್ಷಿಕ ಯೋಜನೆಗಳು ಫಲಕಾರಿಯಾಗಬೇಕಾದರೆ ಜನರ ಸಹಕಾರ ಅಗತ್ಯ. ಸಾಮುದಾಯಿಕ ಯೋಜನೆಯ ರಚನೆಯಿಂದ ಹಳ್ಳಿಗಳನ್ನು ಸಂಪೂರ್ಣವಾಗಿ ಉದ್ಧಾರ ಮಾಡಬೇಕು. ಗ್ರಾಮೀಣಾಭಿವೃದ್ಧಿಯಾಗಬೇಕಾದರೆ ಸಹಕಾರ ತತ್ವದ ಆಧಾರದ ಮೇಲೆ ಶ್ರಮದಾನ ಶಿಬಿರಗಳನ್ನು ಏರ್ಪಡಿಸಬೇಕು. ಉದಾ: ಹಾಸನ ಜಿಲ್ಲೆಯಲ್ಲಿ ಹತ್ತಿಗಟ್ಟ ಬಳಿ ಊರಿನಲ್ಲಿರುವವರೆಲ್ಲರೂ ಸೇರಿ ರಸ್ತೆಯನ್ನು ನಿರ್ಮಿಸಿಕೊಂಡಿದ್ದಾರೆ.[೨೯] ವಿಶ್ವೇಶ್ವರಯ್ಯ ಕಾಲುವೆಯನ್ನು ರಿಪೇರಿ ಮಾಡಿಸಿ ವ್ಯವಸಾಯಕ್ಕೆ ಅನುಕೂಲ ಮಾಡಿಕೊಡಬೇಕೆಂದು ಎಂ.ಆರ್. ಲಕ್ಷಮ್ಮನವರು ಸರ್ಕಾರವನ್ನು ಒತ್ತಾಯಿಸಿದ್ದರು. ತೆರಿಗೆ ಮತ್ತು ಕೊರತೆ ಆಯವ್ಯಯದ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದು ಕ್ಷಾಮ ಪರಿಸ್ಥಿತಿಯ ಕಾಲದಲ್ಲಿ ಪೂರಕ ಆಯವ್ಯಯವನ್ನು ಮಂಡಿಸಬೇಕು. ಏಕೆಂದರೆ ಇಂತಹ ಪರಿಸ್ಥಿತಿಯಲ್ಲಿ ಹಣದ ಏರಿಳಿತಗಳು ಸಾಮಾನ್ಯವಾಗಿ ನಡೆಯುತ್ತಲೇ ಇರುತ್ತದೆ. ಅಂತಹ ಸಮಯದಲ್ಲಿ ನಿರುದ್ಯೋಗ ಸಮಸ್ಯೆ ತಲೆದೋರುತ್ತಲೇ ಇರುತ್ತದೆ. ಈ ಸಮಸ್ಯೆಗಳನ್ನು ನಿವಾರಿಸಲು ಅನೇಕ ಜನೋಪಯುಕ್ತ ಕಾರ್ಯಕ್ರಮಗಳನ್ನು ಅಳವಡಿಸಿಕೊಳ್ಳಬೇಕು. ಸರ್ಕಾರದವರು ದೇಶದ ಅಭ್ಯುದಯಕ್ಕೋಸ್ಕರ ಹಣವನ್ನು ಒದಗಿಸಿರುವುದು ಸರಿಯಾದ ಕ್ರಮವಾಗಿದ್ದು ಕೊರತೆ ಆಯವ್ಯಯ ಮಂಡಿಸುವುದರಿಂದ ಹಾನಿಯಾಗುವುದಿಲ್ಲ. ಆಸ್ಪತ್ರೆ ಶಾಲೆಗಳು ಮತ್ತಿತರ ಸೌಕರ್ಯಗಳನ್ನು ಒದಗಿಸಬೇಕು. ಮೈಸೂರು ರಾಜ್ಯದಲ್ಲಿ ಇತರ ರಾಜ್ಯಕ್ಕಿಂತ ಹೆಚ್ಚಿನ ಪ್ರಜಾಹಿತ ಕಾರ್ಯಗಳನ್ನು ಕೈಗೊಳ್ಳಲಾಗಿದ್ದು, ಹೆಚ್ಚಿನ ಹಣದ ವಿನಿಯೋಗವಾಗುತ್ತಿದೆ. ಸರ್ಕಾರವು ಸಾಮಾನ್ಯ ವರ್ಗದವರು ಬಳಸುವ ವಸ್ತುಗಳ ಮೇಲೆ ಕಡಿಮೆ ತೆರಿಗೆಯನ್ನು ವಿಧಿಸಿ ಶ್ರೀಮಂತರು ಬಳಸುವ ವಸ್ತುಗಳ ಮೇಲೆ ಹೆಚ್ಚಿನ ತೆರಿಗೆಯನ್ನು ವಿಧಿಸಬೇಕು. ಮೋಟಾರು ವಾಹನಗಳ ಬೆಲೆ ಕಡಿಮೆಯಾಗಿರುವ ಕಾರಣ ಪೆಟ್ರೋಲ್ ಮೇಲೆ ಹೆಚ್ಚಿನ ತೆರಿಗೆಯನ್ನು ವಿಧಿಸಬೇಕು. ಸರ್ಕಾರವು ರಸ್ತೆಗಳನ್ನು ನಿರ್ಮಾಣ ಮಾಡಿ ಬಸ್ ಮಾಲೀಕರಿಂದ ನಿರ್ದಿಷ್ಟವಾದ ತೆರಿಗೆ ವಸೂಲಿ ಮಾಡಿದರೆ ಸರ್ಕಾರಕ್ಕೆ ಹೆಚ್ಚಿನ ಆದಾಯ ಬರುತ್ತದೆ. ಇದರಿಂದ ರಾಷ್ಟ್ರಾಭಿವೃದ್ಧಿ ಸಾಧ್ಯ. ಪರಸ್ಪರ ಅವಲಂಬಿತವಾದ ಎರಡು ಇಲಾಖೆಗಳನ್ನು ಒಗ್ಗೂಡಿಸುವ ಮೂಲಕ ಸರ್ಕಾರದ ಖರ್ಚುವೆಚ್ಚವನ್ನು ಕಡಿಮೆ ಮಾಡಬಹುದು. ಉದಾಹರಣೆಗೆ ವಯಸ್ಕರ ಶಿಕ್ಷಣ ಸಮಿತಿಯನ್ನು ಗ್ರಾಮೀಣಾಭಿವೃದ್ಧಿ ಇಲಾಖೆಯೊಂದಿಗೆ ಒಗ್ಗೂಡಿಸಬಹುದು. ಹಳ್ಳಿಯನ್ನು ಸ್ವಾವಲಂಬನೆಯ ಹಾದಿಯ ಕಡೆಗೆ ಕರೆದೊಯ್ಯಬಹುದು. ಉದಾಹರಣೆಗೆ ಗ್ರಾಮೀಣ ಜನರೇ ತಮ್ಮ ಊರಿನ ಶಾಲೆಗಳನ್ನು ನಿರ್ಮಿಸಿ ಅವರೇ ನಿರ್ವಹಣೆ ಮಾಡಿದರೆ ಸರ್ಕಾರದ ವೆಚ್ಚ ಕಡಿಮೆಯಾಗಿ ಜನರು ತಮ್ಮನ್ನು ತಾವು ಅಭಿವೃದ್ಧಿಕಾರ್ಯಗಳಲ್ಲಿ ತೊಡಗಿಸಿಕೊಳ್ಳಲು ಸಾಧ್ಯವಾಗುತ್ತದೆ.

ಲಕ್ಷಮ್ಮನವರು ರೈತರ ಬಗ್ಗೆ ವಿಶೇಷ ಕಾಳಜಿಯುಳ್ಳವರಾಗಿದ್ದರು. ರೈತರು ಈ ದೇಶದ ಬೆನ್ನೆಲುಬು. ಅವರಿಗೆ ಬೇಕಾದ ಸೌಲಭ್ಯಗಳನ್ನು ಒದಗಿಸಿಕೊಡಬೇಕೆಂದು ವಿಧಾನಪರಿಷತ್ತಿನಲ್ಲಿ ಒತ್ತಾಯಿಸಿದ್ದರು. ಮಂಡ್ಯದಲ್ಲಿರುವ ಕೃಷಿ ಸಂಶೋಧನಾ ಕೇಂದ್ರದಲ್ಲಿ ಬೆಳೆಯಲಾಗಿರುವ ರಾಗಿಯ ಹೊಸ ತಳಿಯನ್ನು ಎಲ್ಲ ಜಿಲ್ಲೆಗಳಿಗೂ ವಿಸ್ತರಿಸಲಾಗಿದೆಯೇ? ಏಕೆಂದರೆ ರಾಗಿ ಬಡವರ ಆಹಾರ. ಅದು ಎಲ್ಲರಿಗೂ ದೊರಕುವಂತಾಗಬೇಕು.[೩೧] ಮೈಸೂರು ಭೂಸುಧಾರಣಾ ಕಾಯ್ದೆ ೧೯೬೫ ಅನ್ನು ಸ್ವಾಗತಿಸಿದ ಎಂ.ಆರ್. ಲಕ್ಷಮ್ಮನವರು ತೋಟದ ಬೆಳೆಗಳಾದ ತೆಂಗು, ಕಾಫಿ, ಏಲಕ್ಕಿ ಮುಂತಾದ ಬೆಳೆಗಳಿಗೆ ಸರ್ಕಾರ ಪ್ರೋತ್ಸಾಹವನ್ನು ನೀಡಬೇಕು. ಮೈಸೂರು ನೀರಾವರಿ ಕಾಯ್ದೆಯ ಅನ್ವಯ ಸಣ್ಣ ನೀರಾವರಿ ಯೋಜನೆಗಳು ಅನುಷ್ಠಾನಕ್ಕೆ ಬರುತ್ತಿದ್ದು, ಅವುಗಳನ್ನು ಬಳಸಿಕೊಳ್ಳುವಲ್ಲಿ ವಿಫಲರಾಗಿದ್ದಾರೆ. ನೀರಾವರಿ ಯೋಜನೆಗಳಲ್ಲಿ ಅವೈಜ್ಞಾನಿಕ ರೀತಿಯಲ್ಲಿ ನೀರನ್ನು ಸಂಗ್ರಹ ಮಾಡುವುದರಿಂದಾಗಿ ಕೃಷಿಗೆ ಸಂಪೂರ್ಣವಾಗಿ ಬಳಕೆ ಮಾಡುವಲ್ಲಿ ಮತ್ತು ಸದ್ವಿನಿಯೋಗ ಮಾಡಿಕೊಳ್ಳಲು ವಿಫಲರಾಗುತ್ತಿದ್ದಾರೆ. ಕೃಷಿಯ ಅಭಿವೃದ್ಧಿಗಾಗಿ ಕಂದಾಯ ಇಲಾಖೆ, ಕೃಷಿ ಇಲಾಖೆ, ನೀರಾವರಿ ಇಲಾಖೆ ಒಟ್ಟಿಗೆ ಕಾರ್ಯ ನಿರ್ವಹಿಸಬೇಕೆಂದು ಹೇಳಿದ್ದಾರೆ.[೩೨]

ಕರ್ನಾಟಕದ ಏಕೀಕರಣಕ್ಕೆ ಮೊದಲು ವಿವಿಧ ಪ್ರಾಂತ್ಯಗಳಲ್ಲಿ ವಿವಿಧ ರೀತಿಯ ಕಂದಾಯ ಪದ್ಧತಿ ಜಾರಿಯಲ್ಲಿದ್ದು ಕಂದಾಯ ವಿಧಿಸುವಾಗ ಒಂದು ಕಡೆ ಒಟ್ಟು ಆದಾಯ ಗಣನೆಗೆ ತೆಗೆದುಕೊಳ್ಳುತ್ತಿದ್ದು, ರಾಜ್ಯದಲ್ಲಿ ಕಂದಾಯವನ್ನು ಸರಿಯಾಗಿ ವಿಧಿಸುತ್ತಿಲ್ಲ. ಕಂದಾಯವನ್ನು ಸರಿಯಾದ ರೀತಿಯಲ್ಲಿ ನಿಗಧಿ ಮಾಡಬೇಕು ಹಾಗೂ ಭೂಮಿಯನ್ನು ಅಳತೆ ಮಾಡುವ ಭೂಮಾಪಕರಿಗೆ ಪ್ರತಿ ತಾಲ್ಲೂಕಿನಲ್ಲಿ ತರಬೇತಿಯನ್ನು ನೀಡುವ ವ್ಯವಸ್ಥೆ ಜಾರಿಗೊಳಿಸಬೇಕು. ಡಿಪ್ಲೋಮೊ ಮಾಡಿರುವ ಸಿವಿಲ್ ಇಂಜಿನಿಯರ್‌ಗಳಿಗೆ ಭೂಮಿಯನ್ನು ಅಳತೆ ಮಾಡುವ ಬಗ್ಗೆ ತರಬೇತಿಯನ್ನು ನೀಡಿ ಅವರನ್ನು ಕಂದಾಯ ಇಲಾಖೆಗೆ ನೇಮಿಸಿಕೊಳ್ಳಬೇಕು.[೩೩] ಕಾವೇರಿ ನದಿ ನೀರಿನ ಹಂಚಿಕೆ ಬಗ್ಗೆ ಲಕ್ಷಮ್ಮನವರು ಮಾತನಾಡುತ್ತಾ ಕಾವೇರಿ ನದಿ ಮೈಸೂರು ಮತ್ತು ಮದ್ರಾಸ್ ರಾಜ್ಯದ ನಡುವೆ ಹಂಚಿಕೆಯಾಗಿದ್ದು, ಮದ್ರಾಸ್ ರಾಜ್ಯ ಕಾವೇರಿ ನೀರಿನಿಂದ ಹೆಚ್ಚಿನ ಪ್ರಯೋಜನವನ್ನು ಪಡೆದುಕೊಂಡು ಕೃಷಿಯಲ್ಲಿ ಅಭಿವೃದ್ಧಿಯನ್ನು ಸಾಧಿಸಿದೆ. ಆದರೆ ಮೈಸೂರು ಮತ್ತು ಮದ್ರಾಸ್ ರಾಜ್ಯಕ್ಕೆ ನದಿನೀರಿನ ಹಂಚಿಕೆಯಾಗಬೇಕು. ಕೇಂದ್ರದ ನದಿ ಪ್ರಾಧಿಕಾರವು ಅಂತರರಾಜ್ಯ ನದಿನೀರಿನ ವಿವಾದಗಳನ್ನು ಬಗೆಹರಿಸಬೇಕು.

ಮೈಸೂರು ಭೂಸುಧಾರಣಾ ಕಾಯ್ದೆ ಬಗ್ಗೆ ಮಾತನಾಡುತ್ತಾ ನಮ್ಮಲ್ಲಿ ಸಮಾಜವಾದಿ, ಪ್ರಜಾಸತ್ತಾತ್ಮಕ ವ್ಯವಸ್ಥೆ ಜಾರಿಗೆ ಬರಬೇಕು. ಭೂಮಿ ಇಲ್ಲದವರಿಗೆ ಭೂಮಿಯನ್ನು ನೀಡುವ ಕೆಲಸ ಆಗಬೇಕು. ಉಳುವವನೆ ಭೂಮಿಯ ಒಡೆಯನಾಗಬೇಕು ಎಂಬುದು ಭೂಸುಧಾರಣಾ

ಕಾಯ್ದೆಯ ಉದ್ದೇಶವಾಗಿದೆ. ಭೂಸುಧಾರಣೆ ಕಾಯ್ದೆಯಲ್ಲಿ ಹೆಣ್ಣುಮಕ್ಕಳಿಗೂ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲು ದೊರಕುವಂತೆ ಮಾಡಬೇಕು. ಕೆಲವು ಸಂದರ್ಭದಲ್ಲಿ ವಿಧವೆಯಾದ ಹೆಣ್ಣುಮಕ್ಕಳು ಗಂಡನ ಮನೆಯಿಂದ ತಿರಸ್ಕೃತಳಾಗಿ ದುಸ್ತರ ಜೀವನ ನಡೆಸಬೇಕಾಗುತ್ತದೆ. ಆದರೆ ಹೆಣ್ಣುಮಕ್ಕಳಿಗೆ ಆಸ್ತಿ ಇದ್ದರೆ ಜೀವನೋಪಾಯ ಮಾಡಬಹುದು. ಆದ್ದರಿಂದ ಹೆಣ್ಣು ಮಕ್ಕಳಿಗೂ ಕೂಡ ಆಸ್ತಿ ಹಕ್ಕನ್ನು ಕೊಡಬೇಕು.[೩೪] ಎಂ.ಆರ್. ಲಕ್ಷಮ್ಮನವರು ನಲವತ್ತೆಂಟು ವರ್ಷಗಳಿಗೂ ಹಿಂದೆ ಹೆಣ್ಣುಮಕ್ಕಳಿಗೆ ಆಸ್ತಿಯ ಹಕ್ಕಿನ ಬಗ್ಗೆ ಧ್ವನಿಯೆತ್ತಿದ್ದು ಇಂದು ಹೆಣ್ಣುಮಕ್ಕಳಿಗೆ ಆಸ್ತಿ ಹಕ್ಕು ಜಾರಿಗೆ ಬಂದಿರುವುದನ್ನು ಕಾಣಬಹುದು.

**೫.೮ ಮಹಿಳಾ ಶಿಕ್ಷಣದ ಬಗೆಗಿನ ಎಂ.ಆರ್. ಲಕ್ಷಮ್ಮನವರ ಚಿಂತನೆಗಳು**

ಶಿಕ್ಷಣದ ಬಗ್ಗೆ ಪ್ರಾರಂಭದಿಂದಲೂ ಕಾಳಜಿ ಇದ್ದಂತಹ ಲಕ್ಷಮ್ಮನವರು ಎಂ.ಎ. ಪದವೀಧರರಾದ ಪ್ರಾರಂಭದಲ್ಲಿಯೇ ವಯಸ್ಕರ ಶಿಕ್ಷಣ ಸಮಿತಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದರು. ರಾಜ್ಯದಲ್ಲಿ ಮಹಿಳೆಯರ ಮತ್ತು ಪುರುಷರ ಸಾಕ್ಷರತೆ ಪ್ರಮಾಣದ ಬಗ್ಗೆ ಪ್ರಶ್ನಿಸಿದ ಲಕ್ಷಮ್ಮನವರು ಪಂಚವಾರ್ಷಿಕ ಯೋಜನೆಯಲ್ಲಿ ಮಹಿಳೆಯ ವಿದ್ಯಾಭ್ಯಾಸಕ್ಕೆ ಯಾವ ವಿಶೇಷ ಸವಲತ್ತುಗಳನ್ನು ನೀಡಲಾಗಿದೆ ಎಂಬುದರ ಬಗ್ಗೆ ಶಿಕ್ಷಣ ಸಚಿವರಾದ ಅಣ್ಣಾರಾವ್ ಗಣಮುಖಿಯವರನ್ನು ಪ್ರಶ್ನಿಸಿದರು. ಹೆಣ್ಣುಮಕ್ಕಳಿಗೆ ವಿಶೇಷ ಶಿಷ್ಯವೇತನ ಮತ್ತು ಶುಲ್ಕ ವಿನಾಯಿತಿಯನ್ನು, ಮಹಿಳಾ ಶಿಕ್ಷಕಿಯರಿಗೆ ವಸತಿನಿಲಯಗಳನ್ನು ಸರ್ಕಾರದ ವತಿಯಿಂದ ನೀಡಲಾಗಿದ್ದು, ಸ್ತ್ರೀಯರ ವಿದ್ಯಾಭ್ಯಾಸದ ಬಗ್ಗೆ ಗಮನ ನೀಡಲಾಗಿದೆ ಎಂಬ ಉತ್ತರವನ್ನು ಪಡೆದರು. ಕಡ್ಡಾಯ ಶಿಕ್ಷಣವನ್ನು ಸರ್ಕಾರ ಜಾರಿಗೊಳಿಸಬೇಕು. ಗ್ರಾಮೀಣ ಭಾಗದಲ್ಲಿ, ಮಲೆನಾಡಿನ ಭಾಗಗಳಲ್ಲಿ ಕೆಲಸ ಮಾಡುವ ಶಿಕ್ಷಕಿಯರಿಗೆ ಭತ್ಯೆಗಳನ್ನು ನೀಡಬೇಕೆಂದು ಸರ್ಕಾರವನ್ನು ಒತ್ತಾಯಿಸಿದರು.[೩೫]

ಸರ್ಕಾರವು ಶಾಲೆಗಳಲ್ಲಿ ಮಕ್ಕಳಿಗೆ ಮಧ್ಯಾಹ್ನದ ಬಿಸಿಯೂಟದ ಯೋಜನೆಯನ್ನು ಕೈಗೊಳ್ಳಲಾಗಿದೆಯೇ? ಸರ್ಕಾರ ಅದಕ್ಕಾಗಿ ಮಾಡಿರುವ ಖರ್ಚುವೆಚ್ಚವೆಷ್ಟು? ಬಿಸಿಯೂಟದ ಕಾರ್ಯಕ್ರಮದ ನಂತರ ಶಾಲೆಗಳಲ್ಲಿ ಮಕ್ಕಳ ಹಾಜರಾತಿ ಸಂಖ್ಯೆಯಲ್ಲಿ ಏರಿಕೆಯಾಗಿದೆಯೇ? ಎಂದು ಪ್ರಶ್ನಿಸಿದ್ದಾರೆ. ಬಡತನದಲ್ಲಿರುವವರು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಲು ಮತ್ತು ಅವರಿಗೆ ಮಧ್ಯಾಹ್ನದ ಉಪಹಾರ ನೀಡುವ ಬಗ್ಗೆ ಅಂದೇ ಯೋಚಿಸಿದವರು ಲಕ್ಷಮ್ಮನವರು. ಹೆಣ್ಣುಮಕ್ಕಳ ಶಿಕ್ಷಣದ ಬಗ್ಗೆ ಹೆಚ್ಚಿನ ಗಮನ ಹರಿಸಬೇಕು. ಹೆಣ್ಣುಮಕ್ಕಳ ಶೈಕ್ಷಣಿಕ ಸುಧಾರಣೆ ಬಗ್ಗೆ ಗಮನ ಹರಿಸಲು ಮಹಿಳಾ ಜಂಟಿ ನಿರ್ದೇಶಕರನ್ನು ಮತ್ತು ಸಹಾಯಕ ನಿರ್ದೇಶಕರನ್ನು ಶಿಕ್ಷಣ ಇಲಾಖೆಗೆ ನೇಮಿಸಬೇಕು. ಹೈದ್ರಾಬಾದ್ ಕರ್ನಾಟಕದಲ್ಲಿ ಮಹಿಳೆಯರ ಸಾಕ್ಷರತೆ ಕಡಿಮೆ ಇದೆ. ಆದರೆ ಕೇರಳ, ಮದ್ರಾಸ್, ಮುಂಬೈಗಿಂತ ಮೈಸೂರು ರಾಜ್ಯದಲ್ಲಿ ಹೆಣ್ಣುಮಕ್ಕಳ

ಶಿಕ್ಷಣದ ಮಟ್ಟ ಹೆಚ್ಚಾಗಿದ್ದು ಮಹಿಳಾ ಅಧಿಕಾರಿಯನ್ನು ನೇಮಿಸಿದರೆ ಇನ್ನೂ ಹೆಚ್ಚಿನ ಪ್ರಗತಿಯನ್ನು ಸಾಧಿಸಲು ಸಾಧ್ಯವಾಗುತ್ತದೆ.

ಇಂದಿನ ದಿನಗಳಲ್ಲಿ ಆಧುನಿಕ ಶಿಕ್ಷಣದ ಜೊತೆಗೆ ೧೮ ವರ್ಷ ಮೇಲ್ಪಟ್ಟ ವಿದ್ಯಾರ್ಥಿಗಳಿಗೆ ಕಡ್ಡಾಯವಾಗಿ ಮಿಲಿಟರಿ ಶಿಕ್ಷಣವನ್ನು ನೀಡಬೇಕು. ಕಾಲೇಜುಗಳಲ್ಲಿ ಕಡ್ಡಾಯ ಶಿಕ್ಷಣವನ್ನು ಜಾರಿಗೆ ತಂದರೆ ನಮ್ಮನ್ನು ನಾವು ರಕ್ಷಿಸಿಕೊಳ್ಳುವ ತಂತ್ರವನ್ನು ಕಲಿಯಲು ಸಾಧ್ಯವಾಗುತ್ತದೆ.[೩೬] ಏಕೆಂದರೆ ಇಂದು ವಿಶ್ವದಾದ್ಯಂತ ರಾಸಾಯನಿಕ ಯುದ್ಧಗಳು, ಬ್ಯಾಕ್ಟೀರಿಯಾ ಯುದ್ಧಗಳು, ಬಾಂಬ್ ಸ್ಫೋಟಗಳು ನಡೆಯುತ್ತಿದ್ದು ಅಮಾಯಕ ನಾಗರಿಕರು ಪ್ರಾಣ ಕಳೆದುಕೊಳ್ಳುತ್ತಿದ್ದಾರೆ. ತುರ್ತುಪರಿಸ್ಥಿತಿಯನ್ನು ಎದುರಿಸಲು ಮತ್ತು ಸ್ವಯಂ ರಕ್ಷಣೆ ಮಾಡಿಕೊಳ್ಳಲು ಮಿಲಿಟರಿ ಶಿಕ್ಷಣವನ್ನು ನೀಡಿದರೆ ನಾಗರಿಕರಿಗೆ ಪರಿಸ್ಥಿತಿಗಳನ್ನು ನಿಭಾಯಿಸಲು ಮತ್ತು ಎದುರಿಸಲು ಸಾಧ್ಯವಾಗುತ್ತದೆ. ಉದಾಹರಣೆಗೆ ೨ನೇ ಮಹಾಯುದ್ಧದಲ್ಲಿ ಜಪಾನಿನ ಹಿರೋಶಿಮಾ, ನಾಗಸಾಕಿ ಮತ್ತು ಜರ್ಮನಿಯ ಹ್ಯಾಂಬರ್ಗ್‌ನಲ್ಲಿ ಅನೇಕ ನಾಗರಿಕರು ಪ್ರಾಣ ಕಳೆದುಕೊಂಡರು. ವಿದ್ಯಾರ್ಥಿಗಳನ್ನು ಎನ್.ಸಿ.ಸಿ. ಮತ್ತು ಎನ್.ಎಸ್.ಎಸ್.ಗಳಿಗೆ ಸೇರಲು ಪ್ರೇರೇಪಿಸಬೇಕು. ಹೆಣ್ಣುಮಕ್ಕಳಿಗೆ ನರ್ಸಿಂಗ್ ತರಬೇತಿಯನ್ನು ನೀಡಬೇಕು. ಇಷ್ಟೇ ಅಲ್ಲದೆ ಆಹಾರ ತಂತ್ರಜ್ಞಾನಕ್ಕೆ ಸಂಬಂಧಪಟ್ಟಂತೆ ಮತ್ತು ವಸ್ತ್ರವಿನ್ಯಾಸಕ್ಕೆ ಸಂಬಂಧಪಟ್ಟ ಶಿಕ್ಷಣಗಳನ್ನು ನೀಡಲು ತಾಂತ್ರಿಕ ಶಿಕ್ಷಣ ಶಾಲೆಗಳನ್ನು ತೆರೆಯಬೇಕು.[೩೭] ವಿಶ್ವವಿದ್ಯಾನಿಲಯಗಳಲ್ಲಿ ನಡೆಸುವ ಸಂಶೋಧನೆಗಳು ಸಕಾಲಕ್ಕೆ ಬೇಕಾದಂತಹ ಮತ್ತು ಪೂರಕವಾದ ಮೂಲಭೂತ ಕೊಡುಗೆಯನ್ನು ನೀಡುವಂತಾಗಬೇಕು. ಕರ್ನಾಟಕದಲ್ಲಿರುವ ಎಲ್ಲ ವಿಶ್ವವಿದ್ಯಾನಿಲಯಗಳಲ್ಲಿ ಏಕರೂಪ ಕಾನೂನುಗಳು ಜಾರಿಗೆ ಬರಬೇಕೆಂದು ಲಕ್ಷಮ್ಮನವರು ಅಭಿಪ್ರಾಯಪಟ್ಟಿದ್ದರು.

ಕನ್ನಡ ನಮ್ಮ ರಾಜ್ಯಭಾಷೆಯಾಗಿರುವುದರಿಂದ ಸಾಕಷ್ಟು ಪ್ರಮಾಣದಲ್ಲಿ ಕನ್ನಡ ಪ್ರಾಧ್ಯಾಪಕರುಗಳನ್ನು ನೇಮಿಸಬೇಕು. ಮೈಸೂರು ಕಡ್ಡಾಯ ಶಿಕ್ಷಣ ಕಾಯ್ದೆ ೧೯೬೯ ಒಂದು ಪ್ರಮುಖವಾದ ಕಾಯ್ದೆಯಾಗಿದ್ದು, ಬಾಂಬೆ ಕರ್ನಾಟಕ ಮತ್ತು ಮದ್ರಾಸ್ ಕರ್ನಾಟಕದಲ್ಲಿ ಕೂಡ ಶಿಕ್ಷಣದ ಪ್ರಗತಿಯನ್ನು ಸಾಧಿಸಬೇಕು. ಕಡ್ಡಾಯ ಶಿಕ್ಷಣ ಅನ್ವಯ ಗ್ರಾಮೀಣ ಜನರಿಗೆ ಅನುಕೂಲವಾಗಿ ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸಲು ಸಾಧ್ಯ ಎಂದು ಶಿಕ್ಷಣದ ಕಾಯ್ದೆಯನ್ನು ಸ್ವಾಗತಿಸಿದ್ದರು.

### ೫.೯ ಸದನದಲ್ಲಿ ಹರಿಜನೋದ್ಧಾರ ಕಾರ್ಯಗಳ ಅನುಷ್ಠಾನದ ಬಗ್ಗೆ ಎಂ.ಆರ್. ಲಕ್ಷಮ್ಮ ಅವರ ಚಿಂತನೆಗಳು

ಸಂವಿಧಾನದಲ್ಲಿ ದಲಿತರಿಗೆ ಮೀಸಲಾತಿಯನ್ನು ನೀಡಲಾಗಿದ್ದರೂ ಕೂಡ ಇನ್ನೂ ಸಾಮಾಜಿಕ ಸಮಾನತೆ ಸಾಧಿಸಲು ಸಾಧ್ಯವಾಗಿಲ್ಲ. ರಾಜ್ಯಾಂಗದ ೩೩೪ನೇ ಕಾಯ್ದೆ ಪ್ರಕಾರ ೮ನೇ ತಿದ್ದುಪಡಿ ಮಾಡಿ ಮೀಸಲಾತಿ ನಿಯಮವನ್ನು ೧೦ ವರ್ಷಕ್ಕೆ ಬದಲಾಗಿ ೨೦ ವರ್ಷಕ್ಕೆ

ವಿಸ್ತರಿಸಲಾಗಿದ್ದು, ಮೂಲತತ್ವದಲ್ಲಿ ಬದಲಾವಣೆಯಾಗಿಲ್ಲ. ಸ್ವಾತಂತ್ರ್ಯ ಬಂದು ೧೨ ವರ್ಷಗಳಲ್ಲಿ ಅಸಮಾನತೆ ಕಡಿಮೆಯಾಗಿದ್ದು ಹರಿಜನರಿಗೆ ಇನ್ನೂ ಅನೇಕ ಸೌಲಭ್ಯಗಳನ್ನು ನೀಡಬೇಕು. ಅಮೆರಿಕದಂತಹ ಮುಂದುವರಿದ ರಾಷ್ಟ್ರದಲ್ಲಿ ವರ್ಣಭೇದ ನೀತಿ ಜಾರಿಯಲ್ಲಿರುವುದನ್ನು ಕಾಣಬಹುದು. ಹಾಗೆಯೇ ಆಫ್ರಿಕಾದಲ್ಲಿ ಕೂಡ ವರ್ಣಭೇದ ನೀತಿ ಇದೆ. ಆದರೆ ಭಾರತದಲ್ಲಿ ಅಸಮಾನತೆ ಕಡಿಮೆಯಾಗಿದ್ದು ಸುಧಾರಣೆಯತ್ತ ಸಾಗುತ್ತಿದ್ದು ಕಡ್ಡಾಯ ಶಿಕ್ಷಣ ಜಾರಿಗೆ ಬಂದು ಹನ್ನೊಂದು ವರ್ಷದ ಎಲ್ಲ ಮಕ್ಕಳಿಗೆ ವಿದ್ಯಾಭ್ಯಾಸ ದೊರಕಿದರೆ ಸಾಮಾಜಿಕ ನ್ಯಾಯ ಸಿಗುತ್ತದೆ. ದಲಿತರಿಗೆ ಪ್ರತ್ಯೇಕ ವಸತಿನಿಲಯಗಳನ್ನು ಸ್ಥಾಪಿಸುವುದರ ಬದಲು ಎಲ್ಲ ವರ್ಗಗಳ ಪಂಗಡಗಳ ವಿದ್ಯಾರ್ಥಿಗಳು ಒಂದೇ ವಸತಿ ನಿಲಯದಲ್ಲಿದ್ದು ವ್ಯಾಸಂಗ ಮಾಡುವಂತಹ ಏರ್ಪಾಡನ್ನು ಮಾಡಬೇಕು.

ಕೋಲಾರ ಜಿಲ್ಲೆಯ ಒಂದು ಹಳ್ಳಿಯಲ್ಲಿ ಶಿಶುವಿಹಾರವನ್ನು ರಾಮಮಂದಿರದಲ್ಲಿ ನಡೆಸುತ್ತಿದ್ದು, ಹರಿಜನರ ಮಕ್ಕಳಿಗೆ ಅವಕಾಶ ನೀಡುತ್ತಿಲ್ಲವೆಂದು ಸವರ್ಣೀಯರು ತಡೆಯೊಡ್ಡಿರುವುದು ಕಂಡುಬಂದಿದೆ. ಸಮಾಜದಲ್ಲಿ ಈ ರೀತಿಯ ಮನೋಭಾವನೆ ಇದ್ದರೆ ಹತ್ತಲ್ಲ ಇಪ್ಪತ್ತು ವರ್ಷವಾದರೂ ಹರಿಜನರ ಉದ್ಧಾರ ಸಾಧ್ಯವಿಲ್ಲ.[೬೯] ಸರ್ಕಾರದಿಂದ ಹರಿಜನರಿಗೆ ವಾಸಗೃಹಗಳನ್ನು ಊರಿನಿಂದ ದೂರದ ಸ್ಥಳದಲ್ಲಿ ನಿರ್ಮಾಣ ಮಾಡುವ ಪದ್ಧತಿ ಇದ್ದು, ಅವರು ಮತ್ತು ಅವರ ಮಕ್ಕಳು ಜನರಿಂದ ದೂರವಿರಬೇಕು ಎಂಬ ಮನೋಭಾವನೆ ಇದ್ದು ಕನಿಷ್ಠವೇತನ ಸಮಿತಿಯ ಶಿಫಾರಸ್ಸಿನ ಪ್ರಕಾರ ಅವರು ಕೂಡ ಎಲ್ಲರ ಜೊತೆಯಲ್ಲಿ ವಾಸಮಾಡಬೇಕು. ಇದರಿಂದ ಸಮಾಜದಲ್ಲಿರುವ ಅಂತರ ಕಡಿಮೆಯಾಗಿ ಹರಿಜನ ಮತ್ತು ಗಿರಿಜನರ ಏಳಿಗೆ ಸಾಧ್ಯವೆಂದು ಅಭಿಪ್ರಾಯಪಟ್ಟರು.

ಕೇವಲ ಅಸ್ಪೃಶ್ಯತಾ ನಿವಾರಣೆ ಕಾಯ್ದೆಯಿಂದ ಮತ್ತು ಸಹಭೋಜನದಿಂದ ಸಮಾನತೆ ಬರುವುದಿಲ್ಲ. ಅದಕ್ಕಿಂತ ಹೆಚ್ಚಾಗಿ ಮಹಿಳಾ ಸಮಾಜಗಳಲ್ಲಿ ವಿದ್ಯಾರ್ಥಿನಿಲಯಗಳಲ್ಲಿ ಹರಿಜನರ ಮಕ್ಕಳನ್ನು ಸವರ್ಣೀಯರು ತಮ್ಮ ಮಕ್ಕಳೊಂದಿಗೆ ಇದ್ದುಕೊಂಡು ಬೆಳೆಸಬೇಕು. ಆಗ ಮಾತ್ರ ಜಾತೀಯತೆ ಅಳಿಯುತ್ತದೆ. ಸಾಮಾನ್ಯರ ಚುನಾವಣಾ ಕ್ಷೇತ್ರದಿಂದ ಹರಿಜನರು ಮತ್ತು ಸ್ತ್ರೀಯರು ಸ್ಪರ್ಧಿಸಿದರೆ ಅಸಮಾನತೆ ಅಳಿದು ಹೆಚ್ಚು ಹೆಚ್ಚು ಅವಕಾಶಗಳು ಕಲ್ಪಿತವಾಗಿ ಮೀಸಲಾತಿ ತಾನಾಗಿಯೇ ಮಾಯವಾಗುತ್ತದೆ. ಉದಾಹರಣೆಗೆ ಕೇರಳದಲ್ಲಿ ಹರಿಜನರ ಸಮಸ್ಯೆ ಅಷ್ಟು ತೀವ್ರವಾಗಿಲ್ಲದಿದ್ದರೂ, ಸಾಮಾನ್ಯ ಕ್ಷೇತ್ರದಿಂದ ಚುನಾವಣೆಗೆ ಸ್ಪರ್ಧಿಸುವುದಾಗಿ ಒಬ್ಬ ಅಭ್ಯರ್ಥಿ ಘೋಷಿಸಿದ್ದಾನೆ. ಹೀಗೆ ಮಾಡಿದರೆ ವಿರಸ ತಾನಾಗಿಯೇ ಮಾಯವಾಗುತ್ತದೆ. ಮುಂದಿನ ಹತ್ತು ವರ್ಷಗಳಲ್ಲಿ ಈ ಎಲ್ಲ ಸಮಸ್ಯೆಗಳನ್ನು ಪರಿಹರಿಸುವುದಕ್ಕೆ ಎಲ್ಲರೂ ಒಂದಾಗಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಬಗ್ಗೆ ಎಂ.ಆರ್. ಲಕ್ಷಮ್ಮ ಮಾತನಾಡಿದ್ದರು. ಮೀಸಲಾತಿ ನಿಯಮದ ಪ್ರಕಾರ ಸರ್ಕಾರಿ ನೌಕರಿಯಲ್ಲಿ ಹಿಂದುಳಿದ ವರ್ಗದವರು ಹೆಚ್ಚಿನ

ಸಂಖ್ಯೆಯಲ್ಲಿದ್ದಾರೆ. ಹಿಂದುಳಿದ ವರ್ಗದವರೆಂದರೆ ಆರ್ಥಿಕವಾಗಿ ಹಿಂದುಳಿದ ವರ್ಗದವರೇ ಅಥವಾ ವಿದ್ಯೆಯಲ್ಲಿ ಹಿಂದುಳಿದ ವರ್ಗದವರೇ ಎಂಬುದರ ಬಗ್ಗೆ ಚರ್ಚೆಯಾಗಬೇಕಿದೆ. ಸಾಹಿತಿಕವಾಗಿ ಆಲೋಚಿಸಿದಾಗ ಹಿಂದುಳಿದ ವರ್ಗದಲ್ಲಿ ಮಹಿಳೆಯರು ಕೂಡ ಸೇರುತ್ತಾರೆ. ೧೯೧೮ರ ಮಿಲ್ಲರ್ ಸಮಿತಿಯ ನಂತರ ಸರ್ಕಾರ ಯಾವುದೇ ಸಮಿತಿಯ ನೇಮಕ ಮಾಡಿಲ್ಲದಿರುವುದರಿಂದ ಇನ್ನೊಂದು ಸಮಿತಿಯನ್ನು ನೇಮಕ ಮಾಡಬೇಕು.[೪೦] ಹಿಂದುಳಿದ ವರ್ಗ ಎಂಬುದನ್ನು ಸ್ಪಷ್ಟವಾಗಿ ಗುರುತಿಸಬೇಕು. ಅದರಲ್ಲಿ ಬೇಡರು, ಗೊಲ್ಲರು, ಬೆಸ್ತರು ಮುಂತಾದ ವರ್ಗಗಳು ನಿಜವಾಗಿಯೂ ಹಿಂದುಳಿದಿದ್ದು ಅವರಿಗೆ ಮೀಸಲಾತಿಯನ್ನು ಕಲ್ಪಿಸಬೇಕು. ಹಿಂದುಳಿದ ವರ್ಗ ಎಂದರೆ ಆರ್ಥಿಕವಾಗಿ ಹಿಂದುಳಿದವರನ್ನು ಗಮನದಲ್ಲಿಟ್ಟು ನೋಡಬೇಕು. ಕರ್ನಾಟಕ ಲೋಕಸೇವಾ ಆಯೋಗದವರು ಬಡ್ತಿಯನ್ನು ನೀಡುವಾಗ ಅರ್ಹತೆಯುಳ್ಳ ಹಿರಿಯ ನೌಕರರಿಗೆ ನೀಡಬೇಕು. ಲೋಕಸೇವಾ ಆಯೋಗದಲ್ಲಿ ಮಹಿಳಾ ಸದಸ್ಯರಿಗೂ ಪ್ರಾತಿನಿಧ್ಯತೆ ನೀಡಬೇಕೆಂಬುದು ಎಂ.ಆರ್. ಲಕ್ಷಮ್ಮನವರ ನಿಲುವಾಗಿದೆ.

**೫.೧೦ ಕರ್ನಾಟಕ ಏಕೀಕರಣ ಮತ್ತು ಗಡಿವಿವಾದದ ಬಗೆಗಿನ ಎಂ.ಆರ್. ಲಕ್ಷಮ್ಮನವರ ನಿಲುವು**

ಪ್ರಾಚೀನಕಾಲದಿಂದಲೂ ಕನ್ನಡ ನಾಡಿನ ಬಗ್ಗೆ ಹಲವು ಉಲ್ಲೇಖಗಳಿದ್ದಾಗ್ಯೂ ಕನ್ನಡ ಮಾತನಾಡುವ ಪ್ರದೇಶಗಳು ಹರಿದು ಹಂಚಿಹೋಗಿದ್ದು ಹಲವು ಮಹನೀಯರು ಕನ್ನಡ ನಾಡಿನ ಏಕೀಕರಣಕ್ಕಾಗಿ ಶ್ರಮಿಸಿದರು. ಕನ್ನಡ ನಾಡು ಹಲವಾರು ಭಾಗಗಳಲ್ಲಿ ಹಂಚಿಹೋಗಿತ್ತು. ಮುಂಬೈ ಹೈದರಾಬಾದ್, ಮದ್ರಾಸ್ ಸಂಸ್ಥಾನಗಳಲ್ಲಿ ಅಲ್ಲದೆ ಕರ್ನಾಟಕದಲ್ಲಿ ಮೈಸೂರು ಸಂಸ್ಥಾನ, ಕೊಡಗು, ಮುಧೋಳ ಮುಂತಾದ ಅನೇಕ ಸಣ್ಣಪುಟ್ಟ ಸಂಸ್ಥಾನಗಳು ವಿಭಾಗವಾಗಿದ್ದ ಕನ್ನಡನಾಡು ನಂತರದ ಕಾಲದಲ್ಲಿ ಒಂದುಗೂಡಲು ಸಾಕಷ್ಟು ಶ್ರಮಿಸಬೇಕಾಯಿತು. ಸ್ವಾತಂತ್ರ್ಯಾನಂತರ ಮೊಟ್ಟಮೊದಲ ಭಾಷಾವಾರು ಪ್ರಾಂತ್ಯವಾಗಿ ಆಂಧ್ರಪ್ರದೇಶ ರಚನೆಯಾಯಿತು. ಮದ್ರಾಸ್ ಪ್ರಾಂತ್ಯಕ್ಕೆ ಸೇರಿದ್ದ ಬಳ್ಳಾರಿಯನ್ನು ಕರ್ನಾಟಕಕ್ಕೆ ಸೇರಿಸಬೇಕೇ ಅಥವಾ ಆಂಧ್ರಪ್ರದೇಶಕ್ಕೆ ಸೇರಿಸಬೇಕೇ ಎಂಬ ಸಮಸ್ಯೆ ಉಂಟಾಗಿ ಬಳ್ಳಾರಿ ಸೇರಿದಂತೆ ಅನೇಕ ತಾಲ್ಲೂಕುಗಳನ್ನು ಮೈಸೂರು ರಾಜ್ಯಕ್ಕೆ ೧೯೫೩ರಲ್ಲಿ ಸೇರಿಸಲಾಯಿತು. ಬಳ್ಳಾರಿ ಮೈಸೂರು ರಾಜ್ಯಕ್ಕೆ ಸೇರ್ಪಡೆಯಾದ ಬಗ್ಗೆ ಮಾತನಾಡುತ್ತಾ ಲಕ್ಷಮ್ಮನವರು ಕನ್ನಡ ಮಾತನಾಡುವ ಪ್ರದೇಶಗಳಾದ ಬಳ್ಳಾರಿ ಸೇರಿದಂತೆ ೭ ತಾಲ್ಲೂಕುಗಳು ಮೈಸೂರು ರಾಜ್ಯಕ್ಕೆ ಸೇರ್ಪಡೆಗೊಂಡಿರುವುದು ಸಂತೋಷ. ಆದರೆ, ಆಲೂರು, ಅದೋನಿ, ಮಡಕಸಿರಾಗಳನ್ನು ಕರ್ನಾಟಕ್ಕೆ ಸೇರಿಸಬೇಕಾಗಿತ್ತು ಎಂದು ಏಕೀಕರಣವನ್ನು ಸ್ವಾಗತಿಸಿದರು.

ಹಳೇ ಮೈಸೂರು ಪ್ರಾಂತ್ಯದ ಕೆಲವು ಮುಖಂಡರು ಅಭಿವೃದ್ಧಿಗೊಂಡ ಮೈಸೂರು ರಾಜ್ಯಕ್ಕೆ ಇತರ ಪ್ರಾಂತ್ಯಗಳು ಸೇರ್ಪಡೆಗೊಳ್ಳುವುದನ್ನು ವಿರೋಧಿಸಿದರು ಕೂಡ ಎಂ.ಆರ್. ಲಕ್ಷಮ್ಮನವರು ಕರ್ನಾಟಕ ಏಕೀಕರಣಗೊಳ್ಳಬೇಕು ಎಂಬ ನಿಲುವನ್ನು ತಾಳಿದರು. ಜೆ.ವಿ.ಪಿ.

ಸಮಿತಿ ಮತ್ತು ಧಾರ್ ಸಮಿತಿಯ ವರದಿಯನ್ನು ಜಾರಿಗೆ ತಂದು ಭಾಷಾವಾರು ಪ್ರಾಂತ್ಯವನ್ನು ರಚಿಸಬೇಕು. ಹೈದ್ರಾಬಾದ್ ಕರ್ನಾಟಕದಲ್ಲೂ ಅಭಿವೃದ್ಧಿಯಾಗಿಲ್ಲ. ಹಾಗೆಯೇ ಮದ್ರಾಸ್ ಪ್ರಾಂತ್ಯದ ಕರ್ನಾಟಕ ಅಭಿವೃದ್ಧಿಯಾಗಿಲ್ಲ. ಆದರೆ ಆಯಾಯ ಪ್ರದೇಶಗಳು ತಮ್ಮದೇ ಆದ ವೈಶಿಷ್ಟ್ಯತೆಗಳನ್ನು ಹೊಂದಿದ್ದು ಮೈಸೂರು ರಾಜ್ಯಕ್ಕೆ ಸೇರ್ಪಡೆಯಾದರೂ ಅಭಿವೃದ್ಧಿ ಸಾಧ್ಯವಾಗುತ್ತದೆ ಎಂದು ಆಶಾವಾದಿಯಾಗಿರಬೇಕು. ಬೀದರ್ ಜಿಲ್ಲೆಯಲ್ಲಿ ವಿಶೇಷವಾದ ಪಶುತಳಿಗಳು ಲೋಕಪ್ರಸಿದ್ಧಿಯಾಗಿದ್ದು, ಹೈದರಾಬಾದ್ ಕರ್ನಾಟಕದಲ್ಲಿ ಸಣ್ಣಪುಟ್ಟ ಕೈಗಾರಿಕೆಗಳು ಮುಂದುವರೆದಿವೆ. ನೀರಾವರಿ ಯೋಜನೆಗಳು ಖನಿಜಸಂಪತ್ತು, ಚಿನ್ನದ ಗಣಿಗಳು ಸಿಮೆಂಟ್ ಕೈಗಾರಿಕೆಗೆ ಬೇಕಾದ ಸರಕುಗಳು ಎಲ್ಲವೂ ಇದೆ.

ಗುಲ್ಬರ್ಗಾದಲ್ಲಿ ಬಟ್ಟೆ ಕೈಗಾರಿಕೆ ಇದೆ. ಕರ್ನಾಟಕ ಏಕೀಕರಣವಾದರೆ ಅಲ್ಲಿನ ಸಂಪತ್ತು ಎಷ್ಟಿದೆ ಎಂಬುದು ನಮಗೆ ತಿಳಿಯುತ್ತದೆ. ಉತ್ತರ ಕನ್ನಡದಲ್ಲಿ ಸಮುದ್ರ ಇರುವುದರಿಂದ ಮೀನುಗಾರಿಕೆಗೆ ಅವಕಾಶವಿದೆ. ಮೀನನ್ನು ಆಹಾರವಾಗಿ ಬಳಸುವುದರ ಜೊತೆಗೆ ರಫ್ತುಮಾಡುವ ಅವಕಾಶವಿದ್ದು, ಮತ್ಸ್ಯೋದ್ಯಮ ಅಭಿವೃದ್ಧಿಪಡಿಸಿದರೆ ರಾಜ್ಯದ ಆದಾಯ ಹೆಚ್ಚಾಗಲಿದೆ. ಉತ್ತರದಲ್ಲಿ ತೆಂಗು, ಭತ್ತ, ಗೋಡಂಬಿಗಳನ್ನು ಹೆಚ್ಚಾಗಿ ಬೆಳೆಯುತ್ತಿದ್ದು ಅವೆಲ್ಲಾ ಸಂಪತ್ತು ಕರ್ನಾಟಕಕ್ಕೆ ಸೇರಬೇಕಾಗಿದೆ. ಏಕೀಕರಣದಿಂದ ಭಟ್ಕಳ, ಮಲ್ಪೆ ಮುಂತಾದ ನೈಸರ್ಗಿಕ ಬಂದರುಗಳು ನಮ್ಮದಾಗುತ್ತದೆ. ಬಿಜಾಪುರದಲ್ಲಿ ಬೆಳೆಯುವ ಆಹಾರ ಸಾಮಗ್ರಿಗಳನ್ನು ರಫ್ತು ಮಾಡಬಹುದು. ಸಂಪತ್ತಿನ ದೃಷ್ಟಿಯಿಂದ ಮಾತ್ರವಲ್ಲದೇ ಭಾಷಾದೃಷ್ಟಿಯಿಂದ ಭಾಷಾವಾರು ಪ್ರಾಂತ್ಯದ ರಚನೆ ಅಗತ್ಯವಾಗಿದ್ದು ಒಂದೇ ಭಾಷೆ ಮಾತನಾಡುವ ಜನ ಒಪ್ಪಿಗೆ ಇದ್ದರೆ ಉತ್ತಮ ಆಡಳಿತ ನಡೆಸಿ ಸುಖೀರಾಜ್ಯ ಕಲ್ಪನೆಯನ್ನು ಸಾಕಾರಗೊಳಿಸಬಹುದು.

ಮಹಾರಾಷ್ಟ್ರ, ಗುಜರಾತ್ ರಾಜ್ಯ ನಿರ್ಮಾಣವಾಗಿ ೩ ಕೋಟಿ ಕನ್ನಡಿಗರು ಒಂದಾಗಬೇಕು. ೧೯೪೭-೪೮ ರಲ್ಲಿಯೇ ಮುದವೀಡು ಕೃಷ್ಣರಾಯರು, ಕೆ.ವಿ. ಪುಟ್ಟಪ್ಪನವರು ಭಾಷಾವಾರು ಪ್ರಾಂತ್ಯ ರಚನೆಯನ್ನು ವಿರೋಧಿಸುವವರಿಗೆ ಬದಲಾವಣೆ ಅನಿವಾರ್ಯವಾದದ್ದು, ನಾವು ಒಪ್ಪಿಕೊಳ್ಳಲು ಸಿದ್ಧರಿರಬೇಕು ಎಂಬ ಮಾತನ್ನು ಹೇಳಿದ್ದಾರೆ. ಪ್ರಾಥಮಿಕ ವಿದ್ಯಾಭ್ಯಾಸ ಮಾತೃಭಾಷೆಯಲ್ಲಿ ನೀಡಬೇಕು. ಬೆಂಗಳೂರಿನಲ್ಲಿ ತೆಲುಗು ಭಾಷೆ ಮಾತನಾಡುವವರು ಇದ್ದಾರೆ. ಆದರೂ ಬೆಂಗಳೂರು, ಮೈಸೂರು ರಾಜ್ಯದ ಭಾಗವಾಗಿದೆ. ಆದರೂ ಕನ್ನಡ ಮಾತನಾಡುವಂತಹ ಹೈದ್ರಾಬಾದ್ ಕರ್ನಾಟಕದ ವಿಲೀನವನ್ನು ಏಕೆ ತಡೆಯುತ್ತೀರಿ? ಕನ್ನಡಿಗರು ಸ್ನೇಹಸೌಹಾರ್ದದಿಂದ ಬಾಳುತ್ತಿದ್ದು, ಎಲ್ಲರೂ ತಮ್ಮ ತಮ್ಮ ವೈಷಮ್ಯವನ್ನು ಮರೆತು ಒಂದಾಗಬೇಕು. ನಮ್ಮ ದೇಶ ಜಾತ್ಯಾತೀತ ರಾಷ್ಟ್ರವಾಗುತ್ತಿದೆ. ಕರ್ನಾಟಕ ಪ್ರಾಂತ್ಯ ರಚನೆಯಲ್ಲಿ ಮತೀಯ ಭಾವನೆ ಬರಬಾರದು. ಪ್ರಾಂತ್ಯ ಪುನರ್ವಿಂಗಡನೆ ಆಗಬೇಕೆಂದು ಎಂ.ಆರ್. ಲಕ್ಷಮ್ಮನವರ ಚಿಂತನೆಯಾಗಿದೆ.

ಪ್ರಾಚೀನ ಕರ್ನಾಟಕದ ಗಡಿಯು ಕವಿರಾಜಮಾರ್ಗದಲ್ಲಿ ಉಲ್ಲೇಖವಾಗಿರುವಂತೆ ಕಾವೇರಿಯಿಂದ ಗೋದಾವರಿಯವರೆಗೆ ಹರಡಿದ್ದು, ಕರ್ನಾಟಕದ ಏಕೀಕರಣ ಸಂದರ್ಭದಲ್ಲಿ ಅನೇಕ ಪ್ರದೇಶಗಳು ಕನ್ನಡನಾಡಿನ ಕೈಬಿಟ್ಟುಹೋದವು. ಮೈಸೂರು ರಾಜ್ಯ ಮತ್ತು ಕೇರಳದ ನಡುವೆ ಕಾಸರಗೋಡು ಕರ್ನಾಟಕಕ್ಕೆ ಸೇರಬೇಕಾಗಿದ್ದು, ಅಲ್ಲಿ ಕನ್ನಡಿಗರೇ ಹೆಚ್ಚಾಗಿ ವಾಸಿಸುತ್ತಿದ್ದಾರೆ. ಕನ್ನಡ ಭಾಷೆಯಲ್ಲಿ ವ್ಯವಹರಿಸುತ್ತಾರೆ. ಕಾಸರಗೋಡು ಮಂಗಳೂರಿಗೆ ಕೇವಲ ೨೮ ಮೈಲಿ ದೂರವಿದ್ದು ತಿರುವನಂತಪುರಂಗೆ ೨೨೦ ಕಿ.ಮೀ. ದೂರವಿದೆ. ಕಾಸರಗೋಡುವಿನಲ್ಲಿ ಕನ್ನಡ ಭಾಷೆಯ ಜೊತೆಗೆ ಕನ್ನಡದ ಉಪಭಾಷೆ ತುಳು ಭಾಷೆಯನ್ನು ಮಾತನಾಡುವ ಜನರಿದ್ದು, ದಕ್ಷಿಣ ಕನ್ನಡದ ಅಳಿಯ ಸಂತಾನ ಪದ್ಧತಿ ಕೂಡ ಕಾಸರಗೋಡುವಿನಲ್ಲಿ ಚಾಲ್ತಿಯಲ್ಲಿದೆ.[೪೧] ಕಾಸರಗೋಡು ರಾಷ್ಟ್ರಕವಿ ಗೋವಿಂದ ಪೈಯವರ ಜನ್ಮಸ್ಥಳವಾಗಿದ್ದು, ೧೯೪೭ರಲ್ಲಿ ಕಾಸರಗೋಡುವಿನಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ನಡೆದು ಅದರ ಅಧ್ಯಕ್ಷತೆಯನ್ನು ಗೋವಿಂದ ಪೈಯವರೇ ವಹಿಸಿದ್ದರು.

ಮಹಾರಾಷ್ಟ್ರ ಮತ್ತು ಕರ್ನಾಟಕದ ಗಡಿ ಸಮಸ್ಯೆ ಬಗ್ಗೆ ಆರ್.ಆರ್. ದಿವಾಕರ್‌ರವರು ಇಂದಿರಾ ಗಾಂಧಿಯವರಿಗೆ ಪತ್ರ ಬರೆದಿದ್ದಾರೆ. ಗಡಿ ಸಮಸ್ಯೆಗಳನ್ನು ರಾಷ್ಟ್ರೀಯ ಏಕತಾ ಸಮಿತಿಯು ಬಗೆಹರಿಸಬೇಕಿದೆ. ಕರ್ನಾಟಕ ಮತ್ತು ಮಹಾರಾಷ್ಟ್ರದ ಗಡಿ ಸಮಸ್ಯೆಯಲ್ಲಿ ಮಹಾಜನ ಆಯೋಗದ ವರದಿ ಅಂತಿಮವಾದುದು.[೪೨] ಮಹಾಜನ ಆಯೋಗದ ವರದಿಯನ್ನು ಒಪ್ಪದ ಶಿವಸೇನೆ ಮುಂಬೈಯಲ್ಲಿರುವ ಕನ್ನಡಿಗರಿಗೆ ತೊಂದರೆ ಕೊಟ್ಟಿದೆ. ಮಹಾರಾಷ್ಟ್ರ ಸರ್ಕಾರ ಇದರ ಬಗ್ಗೆ ಕಾನೂನುಕ್ರಮ ಕೈಗೊಳ್ಳಬೇಕು. ಯಾವುದೇ ಕನ್ನಡಿಗರಿಗೆ ತೊಂದರೆಯಾಗದಂತೆ ರಕ್ಷಣೆಯನ್ನು ನೀಡಬೇಕು.

ಬೆಳಗಾಂ ಬಗ್ಗೆ ವಿವಾದ ಸೃಷ್ಟಿಸಿರುವ ಶಿವಸೇನೆ ಮತ್ತು ಅದರ ಮುಖ್ಯಸ್ಥರು ರಾಷ್ಟ್ರದ್ರೋಹದ ಕೆಲಸ ಮಾಡುತ್ತಿದ್ದು, ಶಿವಸೇನೆಯ ಹೋರಾಟಗಳ ಬಗ್ಗೆ ಮಹಾರಾಷ್ಟ್ರ ಸರ್ಕಾರ ಗಮನಹರಿಸಬೇಕೆಂದು ಕರ್ನಾಟಕ ಸರ್ಕಾರ ಒತ್ತಡ ತರಬೇಕು.[೪೩] ಕನ್ನಡಿಗರ ರಕ್ಷಣೆ ಬಗ್ಗೆ ಎಂ.ಆರ್. ಲಕ್ಷಮ್ಮನವರು ಖಾರವಾಗಿ ಪ್ರತಿಕ್ರಿಯೆ ನೀಡಿದ್ದಾರೆ. ಶ್ರೀಲಂಕಾ ಮತ್ತು ಟಿಬೆಟ್‌ನಿಂದ ಬಂದ ನಿರಾಶ್ರಿತರಿಗೆ ಮೈಸೂರು ರಾಜ್ಯದಲ್ಲಿ ಸಾಕಷ್ಟು ಪುನರ್ವಸತಿ ಕೇಂದ್ರಗಳನ್ನು ಸ್ಥಾಪಿಸಿ ಅವರಿಗೆ ಸ್ಥಳಾವಕಾಶವನ್ನು ಮಾಡಿಕೊಡಲಾಗಿದೆ. ಹಾಗೆಯೇ ನೆರೆಯ ರಾಜ್ಯಗಳಿಂದ ಕೂಡ ತಮಿಳರು, ತೆಲುಗರು, ಮಲೆಯಾಳಿಗಳು ಕರ್ನಾಟಕದಲ್ಲಿ ನೆಲೆಸುತ್ತಿದ್ದಾರೆ. ಕನ್ನಡಿಗರು ಅಂತಃಕರಣದಿಂದ ಬರಮಾಡಿಕೊಂಡು ಸೌಹಾರ್ದತೆಯಿಂದ ಜೀವನ ನಡೆಸುತ್ತಿದ್ದಾರೆ. ಆದರೆ ಇದು "ಮನೆಗೆ ಮಾರಿ ಪರರಿಗೆ ಉಪಕಾರಿ"ಯಂತೆ ಆಗಬಾರದು. ಸರ್ಕಾರ ಆಲೋಚಿಸಿ ಯೋಜಿತ ರೀತಿಯಲ್ಲಿ ಕ್ರಮ ಕೈಗೊಳ್ಳಬೇಕೆಂದು ಎಂ.ಆರ್.

ಲಕ್ಷ್ಮಮ್ಮನವರು ಹೇಳಿದ್ದರು.[೪೪] ಮುಂದೆ ಬರಬಹುದಾದ ಪರಭಾಷಿಕರ ಸಮಸ್ಯೆಯನ್ನು ಅರಿತವರಾದ ಲಕ್ಷ್ಮಮ್ಮನವರ ದೂರದೃಷ್ಟಿ ಪ್ರಶಂಸನೀಯವಾದದ್ದು.

### ೫.೧೧ ಕೈಗಾರಿಕೋದ್ಯಮಗಳ ಬಗ್ಗೆ ಎಂ.ಆರ್. ಲಕ್ಷ್ಮಮ್ಮನವರ ನಿಲುವು

ಮೈಸೂರು ರಾಜ್ಯವು ಕೈಗಾರಿಕೆಗಳಲ್ಲಿ ತನ್ನದೇ ಆದ ಪ್ರಸಿದ್ಧಿಯನ್ನು ಹೊಂದಿದ್ದು, ಜಪಾನ್ ಬಿಟ್ಟರೆ ಏಷ್ಯಾದಲ್ಲಿಯೇ ಏಕಮಾತ್ರ ಕಬ್ಬಿಣದ ಕಾರ್ಖಾನೆ ಭದ್ರಾವತಿ ಕಾರ್ಖಾನೆಯಾಗಿದ್ದು, ಭದ್ರಾವತಿ ಕಾರ್ಖಾನೆಗೆ ವಿದ್ಯುಚ್ಛಕ್ತಿಯನ್ನು ಬಳಸುತ್ತಿರುವ ಬಗ್ಗೆ ಸಂತಸ ವ್ಯಕ್ತಪಡಿಸಿದ ಎಂ.ಆರ್. ಲಕ್ಷ್ಮಮ್ಮನವರು ನೈಸರ್ಗಿಕ ಸಂಪತ್ತನ್ನು ಹಿತಮಿತವಾಗಿ ಬಳಸಬೇಕೆಂದು ಹೇಳಿದ್ದಾರೆ.[೪೫] ಭದ್ರಾವತಿ ಕಾರ್ಖಾನೆಯಲ್ಲಿ ವಿದ್ಯುಚ್ಛಕ್ತಿಯನ್ನು ಬಳಸುತ್ತಿರುವುದರಿಂದ ಉರುವಲಿನ ಉಳಿತಾಯವಾಗುತ್ತದೆ ಎಂದು ಹೇಳಿದ್ದಾರೆ. ಕೇಂದ್ರ ಸರ್ಕಾರದಿಂದ ಬೆಂಗಳೂರಿನಲ್ಲಿ ಸ್ಥಾಪಿಸಲ್ಪಟ್ಟಿರುವ ಗುಡಿಕೈಗಾರಿಕೆ ಕೇಂದ್ರದ ಕಾರ್ಯವೈಖರಿಯ ಬಗ್ಗೆ ತಿಳಿದುಕೊಂಡ ಲಕ್ಷ್ಮಮ್ಮನವರು ಪಂಚವಾರ್ಷಿಕ ಯೋಜನೆಯಲ್ಲಿ ಕೈಗಾರಿಕೆಗಳಿಗೆ ಉತ್ತೇಜನ ನೀಡಬೇಕೆಂದು ಒತ್ತಾಯಿಸಿದರು. ಮೈಸೂರು ರೇಷ್ಮೆ ಕೈಗಾರಿಕೆ, ಟೆಲಿಫೋನ್ ಕಾರ್ಖಾನೆ ಬಗ್ಗೆ ವಿಚಾರ ಮಾಡಿದರು.[೪೬]

ಭಾರತವು ಗೃಹ ಕೈಗಾರಿಕೆಗೆ ಪ್ರಸಿದ್ಧಿ ಪಡೆದಿದ್ದು, ಸರ್ಕಾರದವರು ಕೈಮಗ್ಗದ ಕೈಗಾರಿಕೆಯ ಅಭಿವೃದ್ಧಿಗೆ ಹಾಕಿಕೊಂಡಿರುವ ಯೋಜನೆ ಬಗ್ಗೆ ಮಾಹಿತಿ ಕೇಳಿದ ಲಕ್ಷ್ಮಮ್ಮನವರು ಆಧುನಿಕ ಬಟ್ಟೆಗಿರಣಿಗಳಿಂದಾಗಿ ಕೈಮಗ್ಗದ ಬಟ್ಟೆಗಳಿಗೆ ಬೇಡಿಕೆ ಕಡಿಮೆಯಾಗಿ ಕಾರ್ಮಿಕರು ಸಂಕಷ್ಟದಲ್ಲಿರುವ ಬಗ್ಗೆ ಸರ್ಕಾರದ ಗಮನ ಸೆಳೆದರು. ಸಹಕಾರ ಸಂಘಗಳಿಗೆ ಮತ್ತು ಸಂಕಷ್ಟದಲ್ಲಿರುವ ಕಾರ್ಮಿಕರಿಗೆ ಸರ್ಕಾರವು ಸೂಕ್ತ ಪರಿಹಾರ ನೀಡಬೇಕೆಂದು ಹೇಳಿದರು. ಅಮೆರಿಕಾದಲ್ಲಿ ಕೈಮಗ್ಗ ಬಟ್ಟೆ ತಯಾರಿಕೆಯ ಯಂತ್ರಗಳು ಬಂದಿದ್ದು, ಅವುಗಳನ್ನು ನಮ್ಮ ರಾಜ್ಯಕ್ಕೆ ಆಮದು ಮಾಡಿಕೊಳ್ಳಬೇಕು. ಇದರಿಂದ ಕಾರ್ಮಿಕರು ಹೆಚ್ಚಿನ ಕಾರ್ಯ ನಿರ್ವಹಿಸಲು ಸಾಧ್ಯವಾಗುತ್ತದೆ.

### ೫.೧೨ ಚರಿತ್ರೆ ಮತ್ತು ಸಂಸ್ಕೃತಿಯ ಬಗ್ಗೆ ಎಂ.ಆರ್. ಲಕ್ಷ್ಮಮ್ಮನವರ ನಿಲುವು

ಎಂ.ಆರ್. ಲಕ್ಷ್ಮಮ್ಮನವರು ಚರಿತ್ರೆ ವಿದ್ಯಾರ್ಥಿನಿಯಾಗಿದ್ದರಿಂದ ಇತಿಹಾಸ ಮತ್ತು ಸಂಸ್ಕೃತಿ ಬಗ್ಗೆ ವಿಶೇಷ ಆಸಕ್ತಿಯನ್ನು ಹೊಂದಿದ್ದರು. ಕರ್ನಾಟಕದಲ್ಲಿರುವ ಪುರಾತನ ಸ್ಮಾರಕಗಳ ಸಂರಕ್ಷಣೆಗೆ ವಿಶೇಷವಾದಂತಹ ಪುರಾತತ್ವ ಇಲಾಖೆಯನ್ನು ಸ್ಥಾಪಿಸಬೇಕು.[೪೭] ಹರಪ್ಪ ಮತ್ತು ಮೊಹೆಂಜಾದಾರೊ ನಗರಗಳಲ್ಲಿ ಉತ್ಖನನದಿಂದ ದೊರೆತಿರುವ ಚಿನ್ನದ ಆಭರಣಗಳ ಮೂಲ ಎಲ್ಲಿಯದು, ಅವುಗಳು ಕರ್ನಾಟಕದ ಕೋಲಾರ ಚಿನ್ನದ ಗಣಿಯಿಂದ ಪಡೆದಂತಹವುಗಳೇ? ಈ ಸಂಬಂಧ ಏರ್ಪಟ್ಟಿರುವ ಜಿಜ್ಞಾಸೆಗಳ ಬಗ್ಗೆ ಸಂಶೋಧನೆಗಳು

ನಡೆಯಬೇಕು. ರಾಜ್ಯಕ್ಕೆ ಪ್ರತ್ಯೇಕ ಪ್ರಾಚ್ಯ ಸಂಶೋಧನಾ ಇಲಾಖೆಯನ್ನು ಸ್ಥಾಪಿಸಬೇಕು. ಮಳೆಗಾಲದಲ್ಲಿ ಬಿಜಾಪುರದಲ್ಲಿರುವ ಸ್ಮಾರಕಗಳ ಸಂರಕ್ಷಣೆಗೆ ಸರ್ಕಾರ ಕೈಗೊಂಡಿರುವ ಕ್ರಮದ ಬಗ್ಗೆ ಲಕ್ಷಮ್ಮನವರು ಪ್ರಶ್ನಿಸಿದರು.[೪೮]

ಪುರಂದರದಾಸರ ಜಯಂತಿ ಫೆಬ್ರವರಿ ೬ನೇ ತಾರೀಖು ಇದ್ದು ಆಕಾಶವಾಣಿಯಲ್ಲಿ ಅವರ ಕೀರ್ತನೆಯನ್ನು ಪ್ರಸಾರ ಮಾಡಬೇಕು. ಆದರೆ ಆಕಾಶವಾಣಿಯಲ್ಲಿ ಅವರ ಕುರಿತಾದ ಒಂದು ಕಾರ್ಯಕ್ರಮವನ್ನೂ ಏರ್ಪಡಿಸಿಲ್ಲ. ಆದರೆ ಮದ್ರಾಸ್ ಆಕಾಶವಾಣಿಯಲ್ಲಿ ತ್ಯಾಗರಾಜರ ಕೀರ್ತನೆಗಳನ್ನು ಪ್ರಸಾರ ಮಾಡುತ್ತಿದ್ದು, ಅವರಿಗೆ ಗೌರವ ಸಲ್ಲಿಸುವ ಕೆಲಸ ಮಾಡುತ್ತಿದೆ. ಕನಕದಾಸರ ಮತ್ತು ಪುರಂದರದಾಸರ ಕೀರ್ತನೆಗಳು, ಬಸವಣ್ಣನವರ ವಚನಗಳನ್ನು ಪ್ರಸಾರಮಾಡಬೇಕು. ಆಕಾಶವಾಣಿಯಲ್ಲಿ ಸಾಹಿತ್ಯ ಸಂಗೀತ ಸಂಸ್ಕೃತಿಗೆ ಸಂಬಂಧಪಟ್ಟ ಕಾರ್ಯಕ್ರಮಗಳನ್ನು ಪ್ರಸಾರ ಮಾಡುವಂತೆ ಸರ್ಕಾರ ಕ್ರಮ ಕೈಗೊಳ್ಳಬೇಕೆಂದು ಲಕ್ಷಮ್ಮನವರು ಸರ್ಕಾರವನ್ನು ಒತ್ತಾಯಿಸಿದರು. ಕನ್ನಡನಾಡಿನ ಸಾಹಿತ್ಯ, ಸಂಗೀತ, ಸಂಸ್ಕೃತಿಗೆ ಅವರು ನೀಡಿರುವ ಕೊಡುಗೆ ಅನನ್ಯವಾದದ್ದು.[೪೯]

ಲಕ್ಷಮ್ಮನವರು ೧೯೫೨ರಿಂದ ೧೯೭೦ರವರೆಗೆ ಸತತವಾಗಿ ಮೂರು ಬಾರಿ ವಿಧಾನಪರಿಷತ್ತಿನ ಸದಸ್ಯರಾಗಿ ೧೮ ವರ್ಷಗಳ ಕಾಲ ರಾಜಕೀಯರಂಗದಲ್ಲಿ ವಿಶಿಷ್ಟ ಸಾಧನೆ ಮಾಡಿದ ಮಹಿಳೆ ಅಂದಿನ ಕಾಲದಲ್ಲಿ ಹೆಣ್ಣುಮಕ್ಕಳು ಮನೆಯಿಂದ ಹೊರಬರುವುದೇ ಕಷ್ಟವಾಗಿದ್ದಂತಹ ಪರಿಸ್ಥಿತಿಯಲ್ಲಿ ಜನರ ಸಮಸ್ಯೆಗಳನ್ನು ಪರಿಹರಿಸಲು ಸಮಾಜಸೇವೆಯನ್ನು ಮಾಡಲು ರಾಜಕೀಯರಂಗಕ್ಕಿಳಿದು ವಿದೇಶಗಳಿಗೆ ಭೇಟಿನೀಡಿ ನಮ್ಮ ದೇಶದ ಸಂಸ್ಕೃತಿಯನ್ನು ಅಲ್ಲಿ ಹರಡಿ ಅಲ್ಲಿನ ಮಹಿಳೆಯರ ಸ್ಥಿತಿಗತಿಗಳನ್ನು ಅಧ್ಯಯನ ಮಾಡಿ, ಇಲ್ಲಿ ಮಹಿಳೆಯರ ಅಭ್ಯುದಯಕ್ಕೆ ಶ್ರಮಿಸಿದವರು ಲಕ್ಷಮ್ಮ. ರಾಜಕೀಯರಂಗಕ್ಕೆ ಹೊಸಬರಾಗಿ ಕಾಲಿಟ್ಟ ಲಕ್ಷಮ್ಮನವರು ಕ್ರಮೇಣ ಸದನದ ಎಲ್ಲಾ ಚರ್ಚೆಗಳಲ್ಲೂ ಸಕ್ರಿಯವಾಗಿ ಪಾಲ್ಗೊಂಡಿದ್ದರಿಂದ ಪಡೆದ ಅನುಭವ ಅವರಲ್ಲಿ ಮನೆಮಾಡಿಕೊಂಡಿದ್ದ ಹಲವು ಚಿಂತನೆಗಳು, ವಿಚಾರಧಾರೆಗಳು ಸಾಕಾರಗೊಳ್ಳಲು ನೆರವಾದವು. ಇವರ ಸಮಾಜಮುಖಿ ಚಿಂತನೆಗಳನ್ನು ಸರ್ಕಾರ ಅನುಷ್ಠಾನಗೊಳಿಸಲು ಮುಂದಾಯಿತು. ಇದರಿಂದ ಲಕ್ಷಮ್ಮ ಓರ್ವ ಉತ್ತಮ ಸಂಸದೀಯಪಟುವಾಗಿ ಹೊರಹೊಮ್ಮಿದ್ದರು.

## ಅಡಿಟಿಪ್ಪಣಿಗಳು

೧) ಸುರೇಶ್‌ಕುಮಾರ್ ಆರ್ (ಸಂ) ಕರ್ನಾಟಕ ವಿಧಾನಸಭೆಯ ೬೦ನೇ ವಾರ್ಷಿಕೋತ್ಸವದ ಸಮಾರಂಭದ ಸ್ಮರಣ ಸಂಚಿಕೆ, ಪು. ೩೨.

೨) ಲಕ್ಷಮ್ಮ ಎಂ. ಆರ್. ಅವರ ಸ್ವವಿವರ, ವಿಭಾಗೀಯ ಪತ್ರಾಗಾರ ಕಛೇರಿ, ಮೈಸೂರು, ಪು. ೭.

೩) ಸುರೇಶ್‌ಕುಮಾರ್ ಆರ್. (ಸಂ), ಪೂರ್ವೋಕ್ತ, ಪು. ೩೩.

೪) ಅದೇ, ಪು. ೩೩.

೫) ಲಕ್ಷಮ್ಮ ಎಂ.ಆರ್. ಪೂರ್ವೋಕ್ತ – ಪು. ೨.

೬) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೨೩.೦೬.೧೯೪೫, ಪು. ೨೨೦

೭) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೨೩.೦೬.೧೯೪೫, ಪು. ೨೨೨

೮) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೨೩.೦೬.೧೯೪೫, ಪು. ೨೨೬

೯) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೩೦.೦೬.೧೯೪೫, ಪು. ೫೧೬, ೫೧೭

೧೦) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೦೭.೦೭.೧೯೪೫, ಪು. ೮೨೭

೧೧) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೨೫.೦೬.೧೯೪೫, ಪು. ೨೨೯

೧೨) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೨೩.೦೬.೧೯೪೫, ಪು. ೨೨೩

೧೩) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೨೬.೦೬.೧೯೪೫, ಪು. ೨೯೭

೧೪) ಸಾಧ್ವಿ ದಿನಪತ್ರಿಕೆ, ದಿನಾಂಕ ೨೦.೦೬.೧೯೪೬.

೧೫) ಸಾಧ್ವಿ ದಿನಪತ್ರಿಕೆ, ದಿನಾಂಕ ೨೪.೦೬.೧೯೪೭.

೧೬) ಸಾಧ್ವಿ ದಿನಪತ್ರಿಕೆ, ದಿನಾಂಕ ೨೩.೧೦.೧೯೪೬.

೧೭) ಸಾಧ್ವಿ ದಿನಪತ್ರಿಕೆ, ದಿನಾಂಕ ೧೫.೧೧.೧೯೪೬.

೧೮) ಸಾಧ್ವಿ ದಿನಪತ್ರಿಕೆ, ದಿನಾಂಕ ೧೬.೧೧.೧೯೪೬.

೧೯) ಸಾಧ್ವಿ ದಿನಪತ್ರಿಕೆ, ದಿನಾಂಕ ೦೬.೦೧.೧೯೪೭.

೨೦) ಸಾಧ್ವಿ ದಿನಪತ್ರಿಕೆ, ದಿನಾಂಕ ೦೭.೧೨.೧೯೪೭.

೨೧) ಲಕ್ಷಮ್ಮ ಎಂ.ಆರ್. ಪೂರ್ವೋಕ್ತ, ಪು. ೯.

೨೨) ಅದೇ, ಪು. ೯.

೨೩) ಅದೇ, ಪು. ೯.

೨೪) ಸುರೇಶ್‌ಮೂನ, ಬೆಂಗಳೂರಿನ ನಗರ ನಿರ್ಮಾಪಕರು, ಪು. ೧೭೨.

೨೫) ಲಕ್ಷಮ್ಮ ಎಂ.ಆರ್. ಪೂರ್ವೋಕ್ತ, ಪು. ೨.

೨೬) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೦೩.೦೯.೧೯೬೦, ಪು. ೧೩೭.

೨೭) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೨೨.೧೦.೧೯೫೨, ಪು. ೧೭೪.

೨೮) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೦೯.೦೩.೧೯೫೩, ಪು. ೫೦-೫೧.

೨೯) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೧೩.೦೧.೧೯೫೪, ಪು. ೭೩.

೩೦) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೨೨.೧೦.೧೯೫೨, ಪು. ೨೧೧.

೩೧) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೨೧.೦೪.೧೯೬೫, ಪು. ೨೩೪.

೩೨) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೦೩.೦೨.೧೯೬೫, ಪು. ೫೬೯.

೩೩) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೨೬.೦೨.೧೯೬೯, ಪು. ೫೭೪.

೩೪) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೦೪.೦೨.೧೯೭೦, ಪು. ೫೨೫.

೩೫) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೧೭.೧೨.೧೯೫೯, ಪು. ೩೧೦.

೩೬) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೨೯.೦೩.೧೯೬೬, ಪು. ೧೨೭.

೩೭) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೩೧.೦೩.೧೯೬೬, ಪು. ೨೧೬.

೩೮) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೨೭.೦೮.೧೯೬೯, ಪು. ೧೨೬.

೩೯) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೨೧.೧೨.೧೯೫೯, ಪು. ೩೫೫.

೪೦) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೨೩.೧೨.೧೯೫೯, ಪು. ೪೯೪.

೪೧) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೦೭.೦೮.೧೯೬೭, ಪು. ೪೨೫.

೪೨) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೧೦.೦೧.೧೯೬೮, ಪು. ೨೭೯.

೪೩) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೨೬.೦೨.೧೯೬೯, ಪು. ೨೦೬.

೪೪) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೦೧.೦೮.೧೯೬೭, ಪು. ೨೦೭.

೪೫) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೦೯.೦೩.೧೯೫೩, ಪು. ೫೨.

೪೬) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೧೧.೦೩.೧೯೫೩, ಪು. ೧೬೨.

೪೭) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೨೯.೦೧.೧೯೬೫, ಪು. ೩೮೫.

೪೮) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೦೨.೦೨.೧೯೬೫, ಪು. ೫೨೩.

೪೯) ಎಂ.ಎಲ್.ಸಿ. ಡಿಬೇಟ್ಸ್, ದಿನಾಂಕ ೦೫.೦೨.೧೯೭೦, ಪು. ೫೫೧.

# ಅಧ್ಯಾಯ : ಆರು

# ಎಂ.ಆರ್. ಲಕ್ಷಮ್ಮ ಅವರ ರಚನಾತ್ಮಕ ಕಾರ್ಯಗಳು

ಎಂ.ಆರ್. ಲಕ್ಷಮ್ಮನವರು ತಮ್ಮ ಸ್ನಾತಕೋತ್ತರ ಶಿಕ್ಷಣ ಪೂರೈಸಿದ ನಂತರ ಸಂಸಾರವನ್ನು ನಿಭಾಯಿಸಲು ಕೆಲಸಕ್ಕೆ ಸೇರುವುದೆಂದು ನಿಶ್ಚಯಿಸಿದಾಗ ಅವರ ತಂದೆಯವರು ಕೆಲಸಕ್ಕೆ ಸೇರಿ ಹಣ ಸಂಪಾದಿಸುವುದಕ್ಕಿಂತ ನೀನೊಬ್ಬ ಸಮಾಜಸೇವಕಿಯಾಗಬೇಕೆಂಬುದು ನನ್ನಾಸೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ತಂದೆಯವರ ಮಾತನ್ನು ಅಕ್ಷರಶಃ ಪಾಲಿಸಿದ ಲಕ್ಷಮ್ಮನವರು ತಮ್ಮ ಕೊನೆಗಾಲದವರೆಗೂ ಸಮಾಜಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಅಲ್ಲದೇ ಲಕ್ಷಮ್ಮ ಅವರ ಪತಿ ನಾರಾಯಣಮೂರ್ತಿಯವರು ತಮ್ಮ ಪತ್ನಿ ಸಮಾಜಸೇವಾಕಾರ್ಯವನ್ನು ಕೈಗೊಳ್ಳಲು ಒಪ್ಪಿಕೊಂಡರು. ಲಕ್ಷಮ್ಮನವರಿಗಿದ್ದ ಮಾನವೀಯ ಚಿಂತನೆಗಳು ಅವರ ಸಮಾಜಮುಖಿ ವ್ಯಕ್ತಿತ್ವ, ಜಾಣ್ಮೆ, ಮಾತುಗಾರಿಕೆ ಜೊತೆಗೆ ತಾಳ್ಮೆ ಮತ್ತು ಸದಾ ಹಸನ್ಮುಖ ಅವರ ಸಮಾಜಸೇವೆಗೂ ಇನ್ನಷ್ಟು ಸಹಕಾರಿಯಾದವು.

### ೬.೧ ಮಹಿಳಾ ಮಂಡಲಿಗಳ ಸ್ಥಾಪನೆ

ಲಕ್ಷಮ್ಮನವರು ಕಾಲೇಜು ವಿದ್ಯಾಭ್ಯಾಸ ಮಾಡುತ್ತಿದ್ದಾಗಲೇ ನಾ. ಕಸ್ತೂರಿ ಮುಂತಾದವರೊಂದಿಗೆ ಸೇರಿ ಪ್ರೊ. ಈಗಲ್ಟನ್‌ರ ನೇತೃತ್ವದಲ್ಲಿ ಮೈಸೂರಿನ ಕೂರ್ಗಳ್ಳಿಯಲ್ಲಿ ಅನಕ್ಷರಸ್ಥರಿಗೆ ಅಕ್ಷರ ಕಲಿಸುವ ಕಾರ್ಯವನ್ನು ಕೈಗೊಂಡಿದ್ದರು. ಮಹಿಳೆಯರು ಅಕ್ಷರಸ್ಥರು, ವಿದ್ಯಾವಂತರೂ ಆಗಬೇಕು ಹಾಗೂ ತಮ್ಮನ್ನು ದೇಶಸೇವೆಯಲ್ಲಿ ತೊಡಗಿಸಿಕೊಳ್ಳಬೇಕೆಂಬುದು ಇವರ ಆಕಾಂಕ್ಷೆಯಾಗಿತ್ತು. ೧೯೪೬-೪೭ರಲ್ಲಿ ಅನೇಕ ಮಹಿಳಾ ಮಂಡಳಿಗಳನ್ನು ಮೈಸೂರು ಮತ್ತು ಬೆಂಗಳೂರಿನಲ್ಲಿ ಸ್ಥಾಪಿಸಿದರು.[೧] ಮೈಸೂರಿನ ವನಿತಾಸದನ ಮಹಿಳಾ ಸಮಾಜದ ಅಧ್ಯಕ್ಷೆಯಾಗಿ ಮೂರು ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಭಗಿನಿ ಸೇವಾ ಸಮಾಜದಲ್ಲಿ ಮಹಿಳೆಯರ ಏಳಿಗೆಗಾಗಿ ಶ್ರಮಿಸಿದರು. **'ಜಾಗೃತ ಮಹಿಳೆ'** ಎಂಬ ಸಂಸ್ಥೆಯನ್ನು ಸ್ಥಾಪಿಸಿ ಆ ಸಂಸ್ಥೆಯ ಮೂಲಕ ಅನೇಕ ರಚನಾತ್ಮಕ ಕಾರ್ಯಗಳನ್ನು ನಡೆಸಿದ್ದರು. ಮನೆಯಲ್ಲಿಯೇ 'ಮಹಿಳಾ ಮಂಡಲಿ'ಯನ್ನು ಪ್ರಾರಂಭಿಸಿ ಪ್ರತಿ ಶುಕ್ರವಾರದಂದು ಭಜನೆಯ ನಂತರ ಹೆಣ್ಣುಮಕ್ಕಳ ಯಾವುದಾದರೂ ಸಮಸ್ಯೆಯನ್ನು ಪ್ರಸ್ತಾಪಿಸುತ್ತ ಅದರ ಬಗ್ಗೆ ಅರಿವನ್ನು ಮೂಡಿಸುವ, ಪರಿಹಾರದ ಬಗ್ಗೆ ಸಮಾಲೋಚನೆ ಮಾಡುವ ಚಟುವಟಿಕೆ ನಡೆಸುತ್ತಿದ್ದರು. ಗುಡಿಸಲುವಾಸಿಗಳ ಬಳಿಗೆ ಹೋಗಿ ಅವರೊಂದಿಗೆ ಚರ್ಚಿಸುತ್ತ ಅನೇಕ ವಿಷಯಗಳ ಬಗೆಗೆ ಅರಿವು ಮೂಡಿಸಲು ಪ್ರಯತ್ನಿಸುತ್ತಿದ್ದರು.[೨] ಸಂಘಟನಾಚತುರೆಯಾಗಿದ್ದ ಲಕ್ಷಮ್ಮನವರು ಕ್ರಿಯಾಶೀಲ ಮಹಿಳೆಯರ ದೊಡ್ಡ ಗುಂಪನ್ನೇ ಭದ್ರ ಬುನಾದಿಯೊಂದಿಗೆ ಬೆಳೆಸಿದ್ದರು. ಮಹಿಳಾ ಮಂಡಳಿಗಳ ನೇತೃತ್ವದಲ್ಲಿ ಪ್ರತಿ ವರ್ಷವೂ ಮಹಿಳಾ ಸಮ್ಮೇಳನವು ನಡೆಯುತ್ತಿತ್ತು. ೧೯೨೬ ರಿಂದ ಮೈಸೂರು ಸಂಸ್ಥಾನದಲ್ಲಿ ಮಹಿಳಾ ಸಮ್ಮೇಳನಗಳು ನಡೆಯುತ್ತಿದ್ದವು. ಸ್ವಾತಂತ್ರ್ಯ

ಹೋರಾಟದ ಸಮಯದಲ್ಲಿ ಮಹಿಳೆಯರು ಕೂಡ ಚಳವಳಿಗಳಲ್ಲಿ ಭಾಗವಹಿಸುತ್ತಿದ್ದು ಮಹಿಳಾ ಮಂಡಲಿಗಳು ಗಾಂಧೀಜಿಯವರ ಪ್ರಭಾವದಿಂದ ರಚನಾತ್ಮಕ ಕಾರ್ಯಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಮೈಸೂರು ಸಂಸ್ಥಾನದ ಮಹಿಳಾ ಸಮ್ಮೇಳನದ ೨೦ನೇ ಅಧಿವೇಶನವು ದಿನಾಂಕ ೧೬.೧೧.೧೯೪೬ ರಂದು ಬೆಂಗಳೂರಿನ ಶಂಕರಪುರದ ಮಹಿಳಾ ಸಮಾಜದಲ್ಲಿ ಶ್ರೀಮತಿ ರಾಮಸ್ವಾಮಿ ಮೊದಲಿಯಾರ್‌ರವರ ಅಧ್ಯಕ್ಷತೆಯಲ್ಲಿ ಜರುಗಿತು. ಅಲ್ಲಿ ಮಹಿಳೆಯರ ವಿದ್ಯಾಭ್ಯಾಸ, ಸಾಮಾಜಿಕ ಸುಧಾರಣೆ, ವೈದ್ಯಕೀಯ ಸೌಲಭ್ಯಗಳನ್ನು ಕುರಿತು ಅನೇಕ ನಿರ್ಣಯಗಳ ಜೊತೆಗೆ ಮಹಿಳೆಯೊಬ್ಬರು ಮಂತ್ರಿಯಾಗಬೇಕು ಎನ್ನುವ ನಿರ್ಣಯವನ್ನು ತೆಗೆದುಕೊಳ್ಳಲಾಯಿತು.[೩] ಮಹಿಳಾ ಮಂಡಲಿಗಳು ದಾನಿಗಳಿಂದ ಹಣ ಸಂಗ್ರಹಿಸಿ, ಅವುಗಳನ್ನು ಮಹಿಳೆಯರ ಕಲ್ಯಾಣ ನಿಧಿಗಾಗಿ ವಿನಿಯೋಗಿಸಲು ತೀರ್ಮಾನಿಸಲಾಯಿತು. ಪಂಡಿತ ಸುಂದರಮ್ಮನವರು ಮೈಸೂರಿನ ಒಂಟಿಕೊಪ್ಪಲಿನಲ್ಲಿರುವ ೪೦,೦೦೦ ರೂಪಾಯಿ ಬೆಲೆಬಾಳುವ ಮನೆ ಮತ್ತು ಸೈಟನ್ನು ಮಹಿಳೆಯರ ಸಾಂಸ್ಕೃತಿಕ ಮತ್ತು ಆರ್ಥಿಕ ಬೆಳವಣಿಗೆಗೆ ಉದಾರವಾಗಿ ದಾನ ಮಾಡಿದರು. ಅಲ್ಲಿ ಒಂದು ಸಾಯಿಬಾಬಾ ಮಂದಿರ ಮತ್ತು ನಿರ್ಗತಿಕ ಮಹಿಳೆಯರ ಸದನ ಇವುಗಳನ್ನು ನಿರ್ಮಿಸಲು ನಿರ್ಧರಿಸಿದ್ದು ಮಹಿಳಾ ಅಧ್ಯಕ್ಷರಾದ ಎಂ.ಆರ್. ಲಕ್ಷಮ್ಮನವರು ನಿರ್ಗತಿಕ ಮಹಿಳೆಯರ ಸದನ ನಿರ್ಮಾಣಕ್ಕೆ ಮಹನೀಯರು ಉದಾರ ಧನಸಹಾಯ ಮಾಡಬೇಕೆಂದು ಮನವಿ ಮಾಡುತ್ತಾ, ಸಹಾಯ ಮಾಡುವವರು ಟಿ. ಸುನಂದಮ್ಮ, ಸ್ವರಾಜ್ಯ ಭವನ, ಒಂಟಿಕೊಪ್ಪಲ್, ಮೈಸೂರು ಎಂಬ ವಿಳಾಸಕ್ಕೆ ಕಳುಹಿಸಿಕೊಡಬೇಕೆಂದು ಮನವಿ ಮಾಡಿದ್ದರು.[೪]

೧೯೪೭ರ ನವೆಂಬರ್‌ನಲ್ಲಿ ಮೈಸೂರು ಸಂಸ್ಥಾನದ ಮಹಿಳಾ ಸಮ್ಮೇಳನದ ಮೈಸೂರು ಜಿಲ್ಲಾ ಶಾಖೆಗೆ ಎಂ.ಎನ್. ಸೀತಮ್ಮನವರು ಕಾರ್ಯದರ್ಶಿಯಾಗಿ, ಕಾರ್ಯಕಾರಿ ಸಮಿತಿಯ ಸದಸ್ಯೆಯಾಗಿ ಲಕ್ಷಮ್ಮನವರು ಆಯ್ಕೆಯಾಗಿದ್ದರು.[೫] ಅಧಿಕ ಸಂಖ್ಯೆಯಲ್ಲಿ ಮಹಿಳೆಯರನ್ನು ಸಂಘಟಿಸಿ, ಮಹಿಳಾ ಸಮ್ಮೇಳನ ಯಶಸ್ವಿಯಾಗಿ ನಡೆಯಲು ಲಕ್ಷಮ್ಮನವರು ಕಾರಣಕರ್ತರಾಗಿದ್ದ ಇವರು ಮಾತೃಮಂಡಳಿ ವಾರ್ಷಿಕೋತ್ಸವದಲ್ಲಿ ಸತ್ಯಾಗ್ರಹದಲ್ಲಿ ಭಾಗವಹಿಸಿದ ಮಹಿಳೆಯರನ್ನು ಸನ್ಮಾನಿಸುತ್ತಾ ಮಾತನಾಡಿ ಹೈದರಾಬಾದಿನ ಸತ್ಯಾಗ್ರಹಕ್ಕೆ ಮಹಿಳೆಯರ ಬೆಂಬಲ ಬೇಕೆಂದು ಕೋರಿದರು.[೬] ಅನೇಕ ಮಹಿಳಾ ಮಂಡಲಿಯ ಸೇವಾ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ಅವರು ಮಹಿಳೆಯರು ಸಮಾಜದ ಸೇವೆಯನ್ನು ಕೈಗೊಳ್ಳಬೇಕೆಂದು, ಕಷ್ಟದಲ್ಲಿ ಸಿಲುಕಿರುವ ಅಕ್ಕತಂಗಿಯರನ್ನು ಸಲಹಲು, ನಿರಾಶ್ರಿತ ಸ್ತ್ರೀಯರು ಹಾಗೂ ಮಕ್ಕಳ ಸೇವೆ ಮಾಡಬೇಕೆಂದು ಕರೆ ಕೊಟ್ಟರು. ಇವರ ಅಭ್ಯುದಯಕ್ಕಾಗಿ ದಾನಿಗಳು ಮುಂದಾಗಿ ಹಣ ಸಹಾಯವನ್ನು ಮಾಡಬೇಕೆಂದು ಕೋರಿಕೊಂಡರು.

ಲಕ್ಷ್ಮಮ್ಮನವರ ನೇತೃತ್ವದಲ್ಲಿ ಮಹಿಳಾ ಮಂಡಲಿಯಲ್ಲಿ ಅನೇಕ ವಿಶಿಷ್ಟ ಹಾಗೂ ನೂತನವಾದ ಕಾರ್ಯಕಲಾಪಗಳನ್ನು ಕೈಗೊಳ್ಳುತ್ತಿದ್ದು, ಸ್ತ್ರೀಯರ ಸರ್ವತೋಮುಖ ಅಭಿವೃದ್ಧಿಗಾಗಿ ಶ್ರಮಿಸುತ್ತಿದ್ದರು. ದಿನಾಂಕ ೨೦.೧.೧೯೪೮ರಂದು ಸಂಜೆ ಸಾಧ್ವಿ ಪತ್ರಿಕಾ ಕಛೇರಿಯಲ್ಲಿ ಮಹಿಳಾ ಮಂಡಲಿಯ ಸಭೆ ನಡೆದು ಶಾಸನಸಭಾ ಸದಸ್ಯೆ ಬೆಂಗಳೂರಿನ ಕಮಲಾಬಾಯಿಯವರು ಭಾಷಣ ಮಾಡಿ, ಸ್ತ್ರೀಯರಿಗೆ ಈಗಿನ ವಿದ್ಯಾಭ್ಯಾಸದಿಂದ ಪ್ರಯೋಜನವಿಲ್ಲವೆಂದು, ಆತ್ಮಾವಲಂಬನೆಗೆ ಸಾಧಕವಾದ ವಿದ್ಯೆಯನ್ನು ಕಲಿಯಬೇಕೆಂದು ಹೇಳಿದರು.[೭] ಮಹಿಳೆಯರಿಗೆ ಔದ್ಯೋಗಿಕ ಶಿಕ್ಷಣವನ್ನು ನೀಡುವುದರೊಂದಿಗೆ ಅವರು ಆರ್ಥಿಕ ಸ್ವಾವಲಂಬನೆ ಸಾಧಿಸಲು ಸಾಧ್ಯವಾಗುತ್ತದೆ ಎಂದು ಅಭಿಪ್ರಾಯಪಟ್ಟರು. ಲಕ್ಷ್ಮಮ್ಮನವರು ಮಹಿಳಾ ಮಂಡಳಿಯ ನೇತೃತ್ವದಲ್ಲಿ ಮಹಿಳೆಯರಿಗೆ ತರಬೇತಿಯನ್ನು ನೀಡಲು ಕಾರ್ಯಪ್ರವೃತ್ತರಾಗಿ, ಮೈಸೂರು ಸಂಸ್ಥಾನದಲ್ಲಿ ಮಹಿಳೆಯರಿಗಾಗಿ ಗೃಹ ಕೈಗಾರಿಕೆಗಳ ಬಗ್ಗೆ ತರಬೇತಿ ನೀಡಲು ಕಸ್ತೂರಿಬಾಯಿ ಶಿಬಿರಗಳನ್ನು ಏರ್ಪಡಿಸುತ್ತಿದ್ದು, ಅವರು ಅನೇಕ ಮಹಿಳಾ ಸಂಘಗಳು ಮತ್ತು ಯುವಕರ ಸಂಘಗಳ ನೇತೃತ್ವದಲ್ಲಿ ಕಾರ್ಯವನ್ನು ಕೈಗೊಳ್ಳುತ್ತಿದ್ದರು.

**೬.೨ ಮೈಸೂರು ರಾಜ್ಯದ ಸಮಾಜಕಲ್ಯಾಣ ಮಂಡಲಿಯ ಅಧ್ಯಕ್ಷೆಯಾಗಿ ಎಂ.ಆರ್. ಲಕ್ಷಮ್ಮ**

ಮಹಿಳೆಯರ ಬಗ್ಗೆ ವಿಶೇಷ ಕಾಳಜಿಹೊಂದಿದ್ದ ಲಕ್ಷಮ್ಮನವರು ಮಹಿಳೆಯರ ಅಭಿವೃದ್ಧಿಗಾಗಿ ಬಹಳಷ್ಟು ಶ್ರಮಿಸಿದರು. ಮಹಿಳೆಯರಿಗಾಗಿ ಮಹಿಳಾ ಮಂಡಲಿಗಳನ್ನು ಸ್ಥಾಪನೆ ಮಾಡುವುದರ ಜೊತೆಗೆ, ವಿಧಾನಪರಿಷತ್ತಿನ ಸದಸ್ಯೆಯಾಗಿದ್ದಾಗ ೧೯೫೪ರಲ್ಲಿ ಅಮೆರಿಕಾಕ್ಕೆ ಭೇಟಿ ನೀಡಿದರು. ಅಲ್ಲಿ ಮಹಿಳೆಯರ ಸ್ಥಿತಿಗತಿಗಳ ಬಗ್ಗೆ ಅಧ್ಯಯನ ಮಾಡಿದರು. ಅವರು ನಾಲ್ಕುವರೆ ತಿಂಗಳ ಕಾಲ ಅಮೆರಿಕಾದಲ್ಲಿ ಸಂಚರಿಸಿ ಅನೇಕ ಮುಖಂಡರನ್ನು ಭೇಟಿ ಮಾಡಿ ಮಹಿಳೆಯರ ಸ್ಥಾನಮಾನ, ಸೌಲಭ್ಯಗಳು, ಕೊರತೆಗಳು ಅವರ ಸಮಸ್ಯೆಗಳ ಬಗ್ಗೆ ಅಧ್ಯಯನ ಮಾಡಿದರು. ಅಮೆರಿಕಾದಿಂದ ಹಿಂತಿರುಗಿದ ಮೇಲೆ ಮೈಸೂರು ರಾಜ್ಯದ ಸಮಾಜಕಲ್ಯಾಣ ಮಂಡಲಿಯ ಪ್ರಥಮ ಅಧ್ಯಕ್ಷೆಯಾಗಿ ನೇಮಿಸಲ್ಪಟ್ಟರು.[೮] ಅವರ ಅಧ್ಯಕ್ಷತೆಯಲ್ಲಿ ಮೈಸೂರು ರಾಜ್ಯದಲ್ಲಿ ಅನೇಕ ಅಭಿವೃದ್ಧಿ ಯೋಜನೆಗಳು ಸಾಕಾರಗೊಂಡಿತು. ಸಮಾಜದ ದೀನದಲಿತ ಮಹಿಳೆಯರ, ಮಕ್ಕಳ ಅಭಿವೃದ್ಧಿಗಾಗಿ ಪ್ರಾರಂಭಿಸಲ್ಪಟ್ಟ ಸಮಾಜ ಕಲ್ಯಾಣ ಮಂಡಲಿಯ ಪ್ರಥಮ ಅಧ್ಯಕ್ಷೆಯಾಗಿ ಕಾರ್ಯೋನ್ಮುಖರಾದ ಅವರು ಮುಂದಿನ ಕಾರ್ಯಕಲಾಪ ಕಾರ್ಯವೈಖರಿಯನ್ನು ರೂಪಿಸಿದರು. ಸಮಾಜಕಲ್ಯಾಣದ ನೇತೃತ್ವವನ್ನು ವಹಿಸಿಕೊಂಡ ಅವರು ದಿನಕ್ಕೆ ಎಂಟರಿಂದ ಹತ್ತು ಗಂಟೆಗಳ ಕಾಲ ತಮ್ಮನ್ನು ತಾವು ತೊಡಗಿಸಿಕೊಂಡು ಮಹಿಳೆಯರ ಅಭಿವೃದ್ಧಿಗಾಗಿ ಶ್ರಮಿಸಿದರು.

೧೯೫೪ರಲ್ಲಿ ಭಾರತದಲ್ಲಿ ಒಟ್ಟು ೨೭ ಪ್ರಾಂತ್ಯಗಳಿದ್ದು, ಆ ಪ್ರಾಂತ್ಯಗಳಲ್ಲಿ ಸಾಮಾಜಿಕ ಹಿತರಕ್ಷಣಾ ಕೇಂದ್ರಗಳನ್ನು ಸ್ಥಾಪಿಸಿ, ಭಾರತದ ಆರು ಸಾವಿರ ಹಳ್ಳಿಗಳಲ್ಲಿ ಮಹಿಳೆಯರು ಮತ್ತು

ಮಕ್ಕಳ ಅಭಿವೃದ್ಧಿಯನ್ನು ಸಾಧಿಸಲು ಕೇಂದ್ರ ಸರ್ಕಾರವು ತನ್ನ ಮೊದಲನೇ ಪಂಚವಾರ್ಷಿಕ ಯೋಜನೆಯಲ್ಲಿ ಕೇಂದ್ರ ಸಮಾಜ ಕಲ್ಯಾಣ ಮಂಡಳಿಯನ್ನು ಪ್ರಾರಂಭಿಸಿತು. ೧೯೫೪ರ ಮಾರ್ಚ್ ತಿಂಗಳಲ್ಲಿ ಆರಂಭವಾದ ಸಂಸ್ಥೆಯ ಮುಖ್ಯಸ್ಥರು ದುರ್ಗಾಬಾಯಿ ದೇಶಮುಖ್‌ರವರಾಗಿದ್ದು, ಅದು ನಾಲ್ಕು ಅಂಗಸಂಸ್ಥೆಗಳನ್ನು ಹೊಂದಿತ್ತು. ಹದಿನೈದರಿಂದ ಇಪ್ಪತ್ತೈದು ಹಳ್ಳಿಗಳನ್ನು ಒಟ್ಟುಗೂಡಿಸಿ ಒಂದು ಕೇಂದ್ರವನ್ನಾಗಿ ಮಾಡಿ, ಆ ಕೇಂದ್ರದ ಮೂಲಕ ಶಿಕ್ಷಣ, ಆರೋಗ್ಯ, ಗ್ರಾಮೀಣಾಭಿವೃದ್ಧಿ ಮಹಿಳೆಯರಿಗೆ ಕಲೆ ಮತ್ತು ಕುಶಲ ಕೇಂದ್ರಗಳನ್ನು ಸ್ಥಾಪಿಸುವುದು ಇನ್ನೂ ಮುಂತಾದ ಕಾರ್ಯಕ್ರಮವನ್ನು ಹಮ್ಮಿಕೊಂಡು ರಾಷ್ಟ್ರೀಯ ಅಭಿವೃದ್ಧಿಯನ್ನು ಸಾಧಿಸುವುದು ಕೇಂದ್ರಿಯ ಸಮಾಜ ಕಲ್ಯಾಣ ಮಂಡಳಿಯ ಉದ್ದೇಶವಾಗಿತ್ತು. ಇದಕ್ಕಾಗಿ ಕೇಂದ್ರ ಸರ್ಕಾರವು ಒಂದು ಕೇಂದ್ರಕ್ಕೆ ೨೫,೦೦೦/- ರೂ.ಗಳ ಧನಸಹಾಯವನ್ನು ನೀಡುವುದು ಈ ಕಾರ್ಯದಲ್ಲಿ ಸ್ವಯಂಸೇವಾ ಸಂಸ್ಥೆಗಳು ತಮ್ಮನ್ನು ತೊಡಗಿಸಿಕೊಂಡು ಅರ್ಧದಷ್ಟು ಹಣವನ್ನು ಕೇಂದ್ರ ಸರ್ಕಾರದಿಂದ ಪಡೆದುಕೊಳ್ಳುವುದು. ಉಳಿದ ಅರ್ಧ ಭಾಗದ ಹಣವನ್ನು ರಾಜ್ಯ ಸರ್ಕಾರದಿಂದ ಹಾಗೂ ದಾನಿಗಳಿಂದ ಸಂಗ್ರಹಿಸಿ ಕಾರ್ಯ ನಿರ್ವಹಿಸುವ ಯೋಜನೆ ಇದಾಗಿದ್ದು, ಒಟ್ಟು ೫೦,೦೦೦/-ರೂ.ಗಳನ್ನು ಒಂದು ಕೇಂದ್ರಕ್ಕಾಗಿ ವೆಚ್ಚಮಾಡಲಾಗುವುದು. ಭಾರತದ ೨೭ ಪ್ರಾಂತ್ಯಗಳನ್ನು 'ಎ' ಗುಂಪಿನ ಪ್ರಾಂತ್ಯಗಳು ಹಾಗೂ 'ಬಿ' ಗುಂಪಿನ ಪ್ರಾಂತ್ಯಗಳೆಂದು ವಿಂಗಡಿಸಿದ್ದು, 'ಎ' ಗುಂಪಿನ ಪ್ರಾಂತ್ಯಗಳಿಗೆ ೧೭ ಯೋಜನೆಗಳನ್ನು ನೀಡಲಾಗಿದ್ದು 'ಬಿ' ಗುಂಪಿನ ಪ್ರಾಂತ್ಯಗಳಿಗೆ ೧೦ ಯೋಜನೆಗಳನ್ನು ನೀಡಲಾಯಿತು.[೯] ಮೈಸೂರು ರಾಜ್ಯವು 'ಬಿ' ಶ್ರೇಣಿಯ ಪ್ರಾಂತ್ಯವಾಗಿದ್ದು ೧೦ ಯೋಜನೆಗಳನ್ನು ಇಲ್ಲಿ ನೀಡಲಾಗಿದ್ದು ೧೯೫೪ರ ಅಕ್ಟೋಬರ್ ೨೧ ರಂದು ರಚನೆಯಾದ ರಾಜ್ಯ ಸಮಾಜಕಲ್ಯಾಣ ಸಲಹಾ ಸಮಿತಿಯು ಡಿಸೆಂಬರ್‌ನಲ್ಲಿ ತನ್ನ ಕಾರ್ಯಾರಂಭ ಮಾಡಿದ್ದು ಅದರ ಪ್ರಥಮ ಅಧ್ಯಕ್ಷೆಯಾಗಿ ಲಕ್ಷಮ್ಮನವರು ಅನೇಕ ಕಾರ್ಯಕ್ರಮಗಳನ್ನು ಕೈಗೊಂಡರು.[೧೦] ಪ್ರಾರಂಭದಲ್ಲಿ ಮೈಸೂರು ಪ್ರಾಂತ್ಯದಲ್ಲಿ ೩೦ ಕೇಂದ್ರಗಳನ್ನು ತೆರೆಯಲಾಗಿದ್ದು, ಮೈಸೂರು ಸರ್ಕಾರದವರು ೧,೦೮,೨೫೦/-ರೂ.ಗಳನ್ನು ಮಂಜೂರು ಮಾಡಿದ್ದರು. ಇನ್ನೂ ೬೦ ಕೇಂದ್ರಗಳನ್ನು ಮೈಸೂರು ಪ್ರಾಂತ್ಯದಲ್ಲಿ ತೆರೆಯಬೇಕಾಗಿದ್ದು ಕೇಂದ್ರದ ಧನಸಹಾಯ ಬಂದ ನಂತರ ತೆರೆಯಲಾಗುವುದೆಂದು ತಮ್ಮ ಸೋದರಿ ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ.

ಮೈಸೂರು ಸಂಸ್ಥಾನದ ಸಮಾಜ ಕಲ್ಯಾಣ ಮಂಡಲಿಯ ಅಧ್ಯಕ್ಷರಾಗಿ ಎಂ.ಆರ್. ಲಕ್ಷಮ್ಮನವರು ಕಾರ್ಯ ನಿರ್ವಹಿಸಿದ್ದು ಜೊತೆಗೆ ವಿವಿಧ ಭಾಗಗಳಿಂದ ಆಯ್ಕೆಯಾದ ಸದಸ್ಯರು ಮಂಡಲಿಯಲ್ಲಿದ್ದರು. ಮೈಸೂರು ವಿಭಾಗದಿಂದ ಯಶೋಧರಮ್ಮ ದಾಸಪ್ಪ ಮತ್ತು ಕಾಮೇಶ್ವರಮ್ಮ ಕುಪ್ಪಸ್ವಾಮಿ ಸದಸ್ಯರಾದರೆ ಬೆಂಗಳೂರು ವಿಭಾಗದಿಂದ ರತ್ನಬಾಯಿ ಚಿತ್ತೂರ್ ಮತ್ತು ಸಾವಿತ್ರಮ್ಮ ಇದ್ದರೆ, ಅಣ್ಣೇಗೌಡರು ಚಿಕ್ಕಮಗಳೂರಿನ ವಿಭಾಗದಿಂದ, ಸಾವಿತ್ರಮ್ಮ ರಾಮಶರ್ಮ ಎಂಬುವರು ಶಿವಮೊಗ್ಗ ವಿಭಾಗದಿಂದ ಆಯ್ಕೆಯಾಗಿದ್ದು, ಲಕ್ಷ್ಮಿ ಕೃಷ್ಣಪ್ಪ

ರೆಡ್‌ಕ್ರಾಸ್ ಸಂಸ್ಥೆಯಿಂದ ಹಾಗೂ ಶ್ರೀ ಸ್ವಾಮಿ ಯತೀಶ್ವರಾನಂದಜೀ ರಾಮಕೃಷ್ಣ ಮಠದಿಂದ ಪ್ರತಿನಿಧಿಸುವ ಸದಸ್ಯರಾಗಿದ್ದು ಬೆಂಗಳೂರು ನಗರದಿಂದ ಇಂದಿರಾಬಾಯಿ ವಾಸುದೇವಮೂರ್ತಿಯವರು ಸದಸ್ಯರಾಗಿದ್ದರು.[೧೧] ಕೇಂದ್ರ ಸಮಾಜ ಕಲ್ಯಾಣ ಮಂಡಲಿಯ ಸಭೆ ೧೯೫೪ ನವೆಂಬರ್ ೧೧ ರಿಂದ ೧೪ರವರೆಗೆ ದೆಹಲಿಯಲ್ಲಿ ನಡೆದಾಗ ಲಕ್ಷಮ್ಮನವರು ಆ ಸಭೆಯಲ್ಲಿ ಭಾಗವಹಿಸಿ ಅದನ್ನು ಮೈಸೂರು ಸಂಸ್ಥಾನದಲ್ಲಿ ಅನುಷ್ಠಾನಗೊಳಿಸಿದರು.[೧೨]

ಲಕ್ಷಮ್ಮನವರು ಮೈಸೂರು ಪ್ರಾಂತ್ಯದ ಅನೇಕ ಸ್ಥಳಗಳಿಗೆ ಭೇಟಿ ನೀಡಿ ಸಮಾಜ ಕಲ್ಯಾಣ ಕಾರ್ಯಗಳ ಬಗ್ಗೆ ಮಾಹಿತಿಯನ್ನು ಪಡೆದುಕೊಂಡು ತುಮಕೂರು ಮತ್ತು ಕೋಲಾರ ಜಿಲ್ಲೆಗಳಿಗೆ ಹೋಗಿ ಸ್ಥಳ ಪರಿಶೀಲನೆ ಮಾಡಿದರು. ತುಮಕೂರಿನ ಕುಣಿಗಲ್ ತಾಲ್ಲೂಕಿನ ನಾಗಸಂದ್ರದ ಸುತ್ತಲಿನ ೧೫ ಗ್ರಾಮಗಳನ್ನು ಸೇರಿಸಿ ಒಂದು ಕೇಂದ್ರವನ್ನಾಗಿ ಮಾಡಲಾಗಿತ್ತು. ಅದರ ಜೊತೆಗೆ ಕೋಲಾರ ಜಿಲ್ಲೆಯ ಚಿನ್ನದ ಗಣಿಯ ಸಮೀಪ ೧೫ ಹಳ್ಳಿಗಳನ್ನು ಆಯ್ಕೆಮಾಡಲಾಗಿದ್ದು, ಗ್ರಾಮಸೇವೆ ಮಾಡಲು ಸರ್ಕಾರದ ಅಧಿಕಾರಿಗಳು ಹಾಗೂ ಸಾರ್ವಜನಿಕರು ಆಸಕ್ತಿಯನ್ನು ತೋರುತ್ತಿದ್ದು ಗ್ರಾಮೀಣಾಭಿವೃದ್ಧಿ ಕಾರ್ಯಕಲಾಪಗಳು ಸುಗಮವಾಗಿ ನಡೆಯುತ್ತಿರುವ ಬಗ್ಗೆ ಲಕ್ಷಮ್ಮನವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದರು.[೧೩] ಮೈಸೂರು ಸಂಸ್ಥಾನದಲ್ಲಿ ಸಮಾಜ ಕಲ್ಯಾಣ ಮಂಡಲಿಯ ಕಾರ್ಯಕಲಾಪಗಳನ್ನು ವೀಕ್ಷಿಸಲು ಕೇಂದ್ರ ಸಮಾಜ ಕಲ್ಯಾಣ ಸಂಸ್ಥೆಯ ಎಂ.ಎಸ್. ಗೋರೆಯವರು ಭೇಟಿ ನೀಡಿದ್ದರು. ಅವರು ಮೂಲತಃ ಕನ್ನಡಿಗರಾಗಿದ್ದು ದೆಹಲಿಯ ಸ್ಕೂಲ್ ಆಫ್ ಸೋಶಿಯಲ್ ವರ್ಕ್ಸ್‌ನಲ್ಲಿ ೩೩ ವರ್ಷಗಳಿಂದ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದರು. ಜೊತೆಗೆ ಅವರು ಕೊಲಂಬಿಯಾ ವಿಶ್ವವಿದ್ಯಾನಿಲಯದಲ್ಲಿ ೨ ವರ್ಷಗಳ ಕಾಲ ಅಧ್ಯಯನ ಮಾಡಿದ್ದರು. ಎಂ.ಎಸ್. ಗೋರೆಯವರ ಜೊತೆಗೆ ಲಕ್ಷಮ್ಮನವರು ಮೈಸೂರು ನಗರದಲ್ಲಿ ಇರುವ ಮುಸ್ಲಿಂ ಅನಾಥಾಲಯ, ವನಿತಾಸದನ, ಬೆಂಗಳೂರು ನಗರದಲ್ಲಿನ ಸೆಂಟ್ರಲ್ ಜೈಲಿನಲ್ಲಿರುವ ಸೇವಾ ಸದನ, ಶಾಂತಿ ಸದನ, ಲಿಟಲ್ ಸಿಸ್ಟರ್ಸ್ ಹೋಂ ಮುಂತಾದ ಕಡೆಗೆ ಭೇಟಿ ನೀಡಿ ಸಮಾಜ ಕಲ್ಯಾಣ ಕಾರ್ಯಗಳ ಬಗ್ಗೆ ಮಾಹಿತಿಯನ್ನು ಪಡೆದುಕೊಂಡರು.[೧೪]

ಕೇಂದ್ರೀಯ ಸಮಾಜ ಕಲ್ಯಾಣ ಮಂಡಲಿಯ ಅಧ್ಯಕ್ಷರಾದ ದುರ್ಗಾಬಾಯಿ ದೇಶಮುಖರು ಮತ್ತು ಅವರ ಪತಿ ಚಿಂತಾಮಣಿ ದೇಶಮುಖರು ಮೈಸೂರು ರಾಜ್ಯದಲ್ಲಿ ಸಮಾಜ ಕಲ್ಯಾಣ ಮಂಡಲಿಯ ಕಾರ್ಯಕಲಾಪಗಳನ್ನು ವೀಕ್ಷಿಸಲು ಹತ್ತು ದಿನಗಳ ಕಾಲ ಭೇಟಿಮಾಡಿದರು. ಎಂ.ಆರ್. ಲಕ್ಷಮ್ಮನವರು ಅವರನ್ನು ಸ್ವಾಗತಿಸಿ ನಂಜನಗೂಡಿನ ದೇವನೂರಿನ ಸಮಾಜಸೇವಾ ಕೇಂದ್ರಕ್ಕೆ ಕರೆದುಕೊಂಡು ಹೋಗಿದ್ದರು. ಹಾಗೆಯೇ ಬೆಂಗಳೂರಿನಲ್ಲಿನ ಆವಲಹಳ್ಳಿಯ ಸಮಾಜಸೇವಾ ಕೇಂದ್ರಕ್ಕೆ ಭೇಟಿ ನೀಡಿ ಅಲ್ಲಿನ ಕಾರ್ಯ ವೈಖರಿಯನ್ನು ಗಮನಿಸಿದರು. ಮದ್ರಾಸಿನಲ್ಲಿ ಜನವರಿ ೧೮, ೧೯೫೫ ರಂದು ದಕ್ಷಿಣ ಭಾರತದ

ವಿವಿಧ ಪ್ರಾಂತ್ಯಗಳ ಸಮಾಜ ಕಲ್ಯಾಣ ಮಂಡಲಿಯ ಅಧ್ಯಕ್ಷರ ಸಮ್ಮೇಳನ ದುರ್ಗಾಬಾಯಿ ದೇಶಮುಖರ ನೇತೃತ್ವದಲ್ಲಿ ನಡೆಯಿತು. ಆ ಸಮ್ಮೇಳನದಲ್ಲಿ ಲಕ್ಷಮ್ಮನವರು ಭಾಗವಹಿಸಿದ್ದು ಅಲ್ಲಿ ಅನಾಥಮಕ್ಕಳ ರಕ್ಷಣೆ, ವಿಧವೆಯರ ಮತ್ತು ನಿರಾಶ್ರಿತ ಸ್ತ್ರೀಯರ ರಕ್ಷಣೆ, ಅನಾಥ ಮಹಿಳೆಯರ ರಕ್ಷಣೆ, ಸಾಮಾಜಿಕ ಶಿಕ್ಷಣದ ಮೂಲಕ ಜ್ಞಾನ ಪ್ರಸಾರ, ಅಂಗವಿಕಲರು ಹಾಗೂ ವೃದ್ಧರ ರಕ್ಷಣೆಯನ್ನು ಮಾಡುವ ಹೊಣೆಯನ್ನು ಸಮಾಜಕಲ್ಯಾಣ ಮಂಡಲಿ ವಹಿಸಬೇಕಾಗಿದ್ದು ಅನೇಕ ಸಮಾಜಸೇವಾ ಸಂಸ್ಥೆಗಳು ಕೈಜೋಡಿಸುತ್ತಿದ್ದು, ಇದರ ಜೊತೆಗೆ ದಾನಿಗಳು ಕೈಜೋಡಿಸಿದರೆ ಕಾರ್ಯವು ಸುಗಮವಾಗುತ್ತದೆಂದು ಸಮ್ಮೇಳನದಲ್ಲಿ ನಿರ್ಣಯಿಸಲಾಗಿದ್ದು ಸಮಾಜಸೇವಾಕಾರ್ಯದಲ್ಲಿ ಲಕ್ಷಮ್ಮನವರು ಸಂಪೂರ್ಣವಾಗಿ ತಮ್ಮನ್ನು ಅರ್ಪಿಸಿಕೊಂಡಿದ್ದರೆಂದು ತಿಳಿದುಬರುತ್ತದೆ.[೧೬] ಈ ಸಮ್ಮೇಳನದಲ್ಲಿ ದಕ್ಷಿಣ ಭಾರತದ ತಮಿಳುನಾಡು, ಆಂಧ್ರ, ಹೈದ್ರಾಬಾದ್, ಮೈಸೂರು, ತಿರುವಾಂಕೂರ್, ಕೊಚ್ಚಿನ್, ಕೊಡಗು ಮುಂತಾದ ಪ್ರಾಂತ್ಯಗಳಿಂದ ೫೦ ಸಂಚಾಲಕರು ಸಮ್ಮೇಳನಕ್ಕೆ ಬಂದಿದ್ದು ಅವರುಗಳು ತಮ್ಮ ಪ್ರಾಂತ್ಯದ ವೇಷಭೂಷಣಗಳನ್ನು ಧರಿಸಿ ಬಂದಿದ್ದರು. ಮೈಸೂರು ಪ್ರಾಂತ್ಯದಿಂದ ೧೦ ಸಂಚಾಲಕರುಗಳಲ್ಲಿ ೫ ಮಂದಿ ಸಮ್ಮೇಳನದಲ್ಲಿ ಭಾಗವಹಿಸಿದ್ದರು.[೧೭]

ಕೇಂದ್ರ ಸಮಾಜಕಲ್ಯಾಣ ಮಂಡಲಿಯು ಸ್ವಯಂ ಅಧಿಕಾರವುಳ್ಳ ಸಂಸ್ಥೆಯಾಗಿದ್ದು ಮೊದಲ ಪಂಚವಾರ್ಷಿಕ ಯೋಜನೆಗಳಲ್ಲಿ ನಾಲ್ಕು ಕೋಟಿ ರೂಪಾಯಿಗಳ ನಿಧಿಯನ್ನು ಮೀಸಲಾಗಿಡಲಾಗಿತ್ತು. ಸಮಾಜಸೇವಾಕಾರ್ಯವನ್ನು ಪ್ರಥಮ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಪ್ರಾರಂಭಿಸಿ ದ್ವಿತೀಯ ಪಂಚವಾರ್ಷಿಕ ಯೋಜನೆಯಡಿಯಲ್ಲಿಯೂ ಮುಂದುವರೆಸಲಾಗಿದ್ದು ದ್ವಿತೀಯ ಯೋಜನೆಯಲ್ಲಿ ಹದಿನಾಲ್ಕು ಕೋಟಿ ರೂಪಾಯಿಗಳನ್ನು ಮೀಸಲಾಗಿಡಲಾಗಿದೆ.[೧೮]

ಎರಡನೇ ಯೋಜನಾ ಅವಧಿಗೆ ಮೈಸೂರು ರಾಜ್ಯ ಸರ್ಕಾರವು ೨೫ ಲಕ್ಷ ರೂಪಾಯಿಗಳನ್ನು ಮೀಸಲಾಗಿಟ್ಟಿತ್ತು. ಲಕ್ಷಮ್ಮನವರು ೨ ವರ್ಷಗಳ ಕಾಲ ಮೈಸೂರು ರಾಜ್ಯ ಸಮಾಜಕಲ್ಯಾಣ ಮಂಡಲಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಅನಂತರ ಹೈದ್ರಾಬಾದ್ ಕರ್ನಾಟಕದ ಸಮಾಜಕಲ್ಯಾಣ ಮಂಡಲಿಯ ಅಧ್ಯಕ್ಷರಾಗಿ ಎರಡು ವರ್ಷಗಳ ಕಾಲ ಸೇವೆ ಸಲ್ಲಿಸಿದರು.[೧೯] ರಾಜ್ಯ ಸಮಾಜಕಲ್ಯಾಣ ಮಂಡಲಿಯ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ ಎಂ.ಆರ್. ಲಕ್ಷಮ್ಮನವರು ನಂತರದ ಕಾಲದಲ್ಲಿಯೂ ತಮ್ಮನ್ನು ಸಮಾಜಸೇವೆಯಲ್ಲಿ ತೊಡಗಿಸಿಕೊಂಡರು. ತಮ್ಮ ಜೀವನದ ಕೊನೆಯವರೆವಿಗೂ ಸಮಾಜಸೇವೆಯಲ್ಲಿ ಸಕ್ರಿಯವಾಗಿ ಭಾಗವಹಿಸಿದರು.

### ೬.೩ ಗ್ರಾಹಕರ ವೇದಿಕೆಯ ಕಾರ್ಯಾಧ್ಯಕ್ಷೆಯಾಗಿ ಎಂ.ಆರ್. ಲಕ್ಷಮ್ಮ

೧೯೭೫ನೇ ವರ್ಷದಲ್ಲಿ ಕರ್ನಾಟಕದಲ್ಲಿ 'ಕರ್ನಾಟಕ ರಾಜ್ಯ ಗ್ರಾಹಕರ ವೇದಿಕೆ' ಬೆಂಗಳೂರಿನಲ್ಲಿ ಪ್ರಾರಂಭವಾಯಿತು. ಮುಖ್ಯಮಂತ್ರಿ ದೇವರಾಜ ಅರಸುರವರು ಈ ವೇದಿಕೆಯನ್ನು ಉದ್ಘಾಟನೆ ಮಾಡಿದ್ದರು. ಬಿ.ಎಸ್. ಗುಪ್ತಾರವರು ಕರ್ನಾಟಕ ರಾಜ್ಯ ಗ್ರಾಹಕರ ವೇದಿಕೆಯ ಅಧ್ಯಕ್ಷರಾಗಿದ್ದು, ಲಕ್ಷಮ್ಮನವರು ಕಾರ್ಯಾಧ್ಯಕ್ಷೆಯಾಗಿ ಕಾರ್ಯ ನಿರ್ವಹಿಸಿದರು. ಗ್ರಾಹಕರಿಗೆ ಜಾಗೃತಿ ಮೂಡಿಸುವಲ್ಲಿ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡ ರಾಜ್ಯ ಗ್ರಾಹಕರ ವೇದಿಕೆ ಲಕ್ಷಮ್ಮನವರ ನೇತೃತ್ವದಲ್ಲಿ ನೂರಾರು ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಿತು. ಮಹಿಳಾ ಮಂಡಲಿಗಳಲ್ಲಿ, ಶಾಲಾ ಕಾಲೇಜುಗಳಲ್ಲಿ, ಕೊಳಗೇರಿ ಪ್ರದೇಶಗಳಲ್ಲಿ ಗ್ರಾಹಕರಿಗೆ ಜಾಗೃತಿ ಮೂಡಿಸಲು ಅನೇಕ ಉಪನ್ಯಾಸ ಮತ್ತು ಪ್ರಾತ್ಯಕ್ಷಿಕೆಗಳನ್ನು ನಡೆಸಿದರು. ತೂಕ ಮತ್ತು ಅಳತೆ, ಆಹಾರದ ಕಲಬೆರಕೆ, ಸಾರಿಗೆ ಸಂಪರ್ಕಗಳಲ್ಲಿ ನಮ್ಮ ಹಕ್ಕುಗಳು ಮತ್ತು ಜವಾಬ್ದಾರಿಗಳು, ಬ್ಯಾಂಕುಗಳಲ್ಲಿ ವ್ಯವಹರಿಸುವ ಮತ್ತು ಹಣ ನಿರ್ವಹಣೆ ಮಾಡುವ ಬಗ್ಗೆ, ವಿದ್ಯುಚ್ಛಕ್ತಿಯ ಬಳಕೆ ಮತ್ತು ಉಳಿತಾಯ, ಅಡುಗೆ ಅನಿಲ ಬಳಕೆಯ ಸುರಕ್ಷತೆಯ ಬಗ್ಗೆ ವಿಶೇಷ ಉಪನ್ಯಾಸವನ್ನು ನೀಡಿ ಜನಸಾಮಾನ್ಯರಿಗೆ ಅರಿವು ಮೂಡಿಸುವ ಕೆಲಸವನ್ನು ಲಕ್ಷಮ್ಮನವರು ಮಾಡುತ್ತಿದ್ದರು.[೨೦] ಪ್ರತಿ ಮೂರು ತಿಂಗಳಿಗೆ ಒಂದು ಸಾರಿ ಬೆಂಗಳೂರಿನ ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿ ಕರ್ನಾಟಕ ಗ್ರಾಹಕರ ವೇದಿಕೆಯ ಸಭೆ ನಡೆದು ಗ್ರಾಹಕರ ಸಮಸ್ಯೆಗಳು ಅವರ ಆಸಕ್ತಿಗಳ ಬಗ್ಗೆ ಚರ್ಚಿಸಲಾಗುತ್ತಿದ್ದು, ಅದರಲ್ಲಿ ಲಕ್ಷಮ್ಮನವರು ಪ್ರಮುಖವಾದ ಪಾತ್ರ ವಹಿಸುತ್ತಿದ್ದರು. ಗ್ರಾಹಕರ ವೇದಿಕೆಯಿಂದ ಅನೇಕ ವಸ್ತುಪ್ರದರ್ಶನವನ್ನು ಏರ್ಪಡಿಸಲಾಗಿದ್ದು, ಸಂಬಂಧಪಟ್ಟ ಇಲಾಖೆಗಳ ಸಹಯೋಗದೊಂದಿಗೆ ಮಹಿಳಾ ಮಂಡಲಿಗಳಲ್ಲಿ, ವನಿತಾಸಮಾಜಗಳಲ್ಲಿ ಕಾರ್ಯಕ್ರಮಗಳನ್ನು ಏರ್ಪಡಿಸಿ ಜನಸಾಮಾನ್ಯರಿಗೆ ತಿಳುವಳಿಕೆ ಮೂಡಿಸುವ ಕೆಲಸವನ್ನು ಮಾಡಲಾಗುತ್ತಿತ್ತು. ಹಾಲು, ಗೋಧಿ ಅವುಗಳ ಉತ್ಪನ್ನಗಳು, ಸಾಗರೋತ್ಪನ್ನಗಳು, ಮಕ್ಕಳ ಆಹಾರ, ಹಸಿರು ತರಕಾರಿಗಳು, ಮೊಳಕೆ ಬರುವಂತಹ ಕಾಳುಗಳು, ಸಾವಯವ ಆಹಾರೋತ್ಪನ್ನಗಳ ಬಗ್ಗೆ ವಸ್ತುಪ್ರದರ್ಶನವನ್ನು ಪ್ರದರ್ಶಿಸಲಾಗುತ್ತಿತ್ತು. ದಿನಬಳಕೆಯ ವಸ್ತುಗಳ ಗುಣಮಟ್ಟವನ್ನು ಪರೀಕ್ಷಿಸುವ ಸಲುವಾಗಿ ಅನೇಕ ಮಾರುಕಟ್ಟೆಗಳು, ದೊಡ್ಡ ದೊಡ್ಡ ಅಂಗಡಿಗಳ ಜೊತೆಗೆ ಸಣ್ಣಪುಟ್ಟ ಅಂಗಡಿಗಳಲ್ಲಿ ಅರಿಷಿಣ, ಖಾದ್ಯತೈಲ, ಕಾಫಿಪುಡಿ, ಟೀಪುಡಿ ಮುಂತಾದವುಗಳನ್ನು ಸಂಗ್ರಹಿಸಿ ಪರೀಕ್ಷೆ ಮಾಡುವ ಕಾರ್ಯವನ್ನು ಕರ್ನಾಟಕ ಗ್ರಾಹಕರ ವೇದಿಕೆ ಮಾಡುತ್ತಿತ್ತು. ಜೊತೆಗೆ ತೂಕ ಮತ್ತು ಮಾಪನ ಇಲಾಖೆಯ ಸಹಯೋಗದೊಂದಿಗೆ ವಸ್ತುಗಳನ್ನು ಗ್ರಾಹಕರಿಗೆ ಸರಿಯಾದ ಪ್ರಮಾಣದ ತೂಕದಲ್ಲಿ ನೀಡುತ್ತಿರುವ ಬಗ್ಗೆ ಕೂಡ ಕಾರ್ಯ ನಿರ್ವಹಿಸುತ್ತಿತ್ತು. ಅಂಗಡಿಗಳಲ್ಲಿ ಮಾರಾಟ ಮಾಡುತ್ತಿದ್ದ ಸರಕಿನ ಗುಣಮಟ್ಟವನ್ನು ಕಾಪಾಡುವ, ಕಲಬೆರಕೆಯಾಗಿದ್ದರ ಬಗ್ಗೆ

ಹಾಗೂ ತೂಕ ಮತ್ತು ಅಳತೆಗಳಲ್ಲಿ ಆಗುತ್ತಿದ್ದ ಮೋಸವನ್ನು ಕಂಡುಹಿಡಿದು ಸಮಸ್ಯೆಗಳನ್ನು ಪರಿಹರಿಸುವ ಕಾರ್ಯದಲ್ಲಿ ಗ್ರಾಹಕರ ವೇದಿಕೆಯ ಪಾತ್ರ ಮಹತ್ವವಾಗಿದೆ.[೨೧]

ಕರ್ನಾಟಕ ಗ್ರಾಹಕರ ವೇದಿಕೆ ಜನಸಾಮಾನ್ಯರು ಬಳಸುತ್ತಿದ್ದ ವಿದ್ಯುತ್ ಬಲ್ಬ್‌ಗಳ ಬಗ್ಗೆ ಅಧ್ಯಯನ ಮಾಡಿ ಅದರ ಸಮಸ್ಯೆಯನ್ನು ಬಗೆಹರಿಸಿತು. ಅವುಗಳು ೨೩೦ ವೋಲ್ಟ್‌ಗಳಾಗಿದ್ದು ಕಡಿಮೆ ಬಾಳಿಕೆ ಬರುತ್ತಿದ್ದು ಅವುಗಳನ್ನು ೨೫೦ ವೋಲ್ಟ್‌ಗೆ ಹೆಚ್ಚಿಸುವಲ್ಲಿ ಗ್ರಾಹಕರ ವೇದಿಕೆ ಅಧ್ಯಯನ ಮಾಡಿ ಸಮಸ್ಯೆಯನ್ನು ಬಗೆಹರಿಸಿತು. ಇದರ ಜೊತೆಗೆ ರೈತರಿಂದ ನೇರವಾಗಿ ಗ್ರಾಹಕರಿಗೆ ತಲುಪುವಂತೆ ಹಣ್ಣು, ತರಕಾರಿಗಳು ಮುಂತಾದ ವಸ್ತುಗಳನ್ನು ಮಾರಾಟ ಮಾಡುವ ವ್ಯವಸ್ಥೆಯನ್ನು ಮಾಡಿದ ಗ್ರಾಹಕರ ವೇದಿಕೆ, ರೈತರು ಮಧ್ಯವರ್ತಿಗಳಿಂದ ಶೋಷಣೆಗೆ ಒಳಗಾಗುವುದನ್ನು ತಪ್ಪಿಸಿತು. ಲಕ್ಷ್ಮಮ್ಮನವರ ನೇತೃತ್ವದಲ್ಲಿ ಕರ್ನಾಟಕ ಗ್ರಾಹಕರ ವೇದಿಕೆ ನಾಲ್ಕು ದಿನಗಳ ತರಬೇತಿಯನ್ನು ಆಯೋಜಿಸಿ ಆಹಾರ ಕಲಬೆರಕೆ ಮತ್ತು ತೂಕ ಅಳತೆಗಳ ಬಗ್ಗೆ ಅರಿವು ಮೂಡಿಸಲು ಕಾರ್ಯವನ್ನು ಕೈಗೊಂಡು ಅನೇಕ ಪುರುಷರಿಗೆ ಮತ್ತು ಮಹಿಳೆಯರಿಗೆ ಪ್ರಯೋಗಾಲಯದಲ್ಲಿ ಪ್ರಾತ್ಯಕ್ಷಿಕೆ ಮಾಡಿ ತೋರಿಸಿ, ಅವರಿಗೆ ಪ್ರಮಾಣಪತ್ರಗಳನ್ನು ನೀಡಲಾಯಿತು. ಆರೋಗ್ಯಾಧಿಕಾರಿಗಳ ಸಹಯೋಗದೊಂದಿಗೆ ಕಳಪೆ ಗುಣಮಟ್ಟದ ಪದಾರ್ಥಗಳನ್ನು ಮಾರಾಟ ಮಾಡುವ ಅಂಗಡಿಗಳ ಮೇಲೆ ದಾಳಿ ಮಾಡಿ ಅವುಗಳ ವಿರುದ್ಧ ಕಾನೂನು ಕ್ರಮವನ್ನು ಕೈಗೊಳ್ಳುವ ಕಾರ್ಯವನ್ನು ಗ್ರಾಹಕರ ವೇದಿಕೆಯು ನಿರ್ವಹಿಸುತ್ತಿತ್ತು. ನವೆಂಬರ್ ತಿಂಗಳಲ್ಲಿ ಅಪಾಯಕಾರಿ ಔಷಧಿಗಳ ಬಗ್ಗೆ ಮಾದಕವಸ್ತುಗಳ ಬಗ್ಗೆ ಅರಿವು ಮೂಡಿಸುವ ಕಾರ್ಯಕ್ರಮವನ್ನು ಹಮ್ಮಿಕೊಂಡಿತ್ತು.[೨೨]

**೬.೪ ಬಳಕೆದಾರ ಪತ್ರಿಕೆ**

ಕರ್ನಾಟಕ ರಾಜ್ಯ ಗ್ರಾಹಕರ ವೇದಿಕೆಯು 'ಬಳಕೆದಾರ' ಎನ್ನುವ ಪತ್ರಿಕೆಯನ್ನು ಪ್ರಕಟಿಸಿದ್ದು ೧೯೭೪ರ ಅಕ್ಟೋಬರ್ ತಿಂಗಳಲ್ಲಿ ಮೊದಲ ಸಂಚಿಕೆ ಪ್ರಕಟವಾಗಿದೆ. ಈ ಪತ್ರಿಕೆಯು ಮಾಸಪತ್ರಿಕೆಯಾಗಿದ್ದು, ಕರ್ನಾಟಕ ಗ್ರಾಹಕರ ವೇದಿಕೆಯ ಅಧ್ಯಕ್ಷರಾದ ಬಿ.ಎನ್. ಗುಪ್ತಾರವರು ಗ್ರಾಹಕರ ವೇದಿಕೆಯ ಉದ್ದೇಶವನ್ನು ಪತ್ರಿಕೆಯಲ್ಲಿ ತಿಳಿಸಿದ್ದಾರೆ. ಗ್ರಾಹಕರ ವೇದಿಕೆಯು ಯಾವುದೇ ರಾಜಕೀಯ ಪಕ್ಷದ ಸಂಘಟನೆಯಾಗಿರದೆ ಅಥವಾ ಯಾವುದೇ ಪಕ್ಷದ ಪರವಾಗಿರದೆ ಸಮಾಜದ ಎಲ್ಲ ವರ್ಗದ ಹಿತವನ್ನು ಕಾಪಾಡುವ ಮಾನವೀಯ ಸಂಸ್ಥೆಯಾಗಿದೆ. ಗ್ರಾಹಕರ ವೇದಿಕೆಯು ಪ್ರಜಾಪ್ರಭುತ್ವದ ಆಶಯಗಳನ್ನು ಎತ್ತಿಹಿಡಿಯುವ ಸಂಸ್ಥೆಯಾಗಿದ್ದು, ನಾಗರಿಕರು ತಮ್ಮ ಹಕ್ಕುಗಳನ್ನು ಪಡೆದುಕೊಳ್ಳಲು ಶ್ರಮಿಸುತ್ತದೆ. ಸರ್ಕಾರವು ಯಾವುದೇ ಪೂರ್ವಾಗ್ರಹಪೀಡಿತವಾಗಿರದೆ, ತಾರತಮ್ಯ ನೀತಿಯನ್ನು ಅನುಸರಿಸದೇ ನಾಗರಿಕರಿಗೆ ಜೀವನಕ್ಕೆ ಬೇಕಾದ ಅಗತ್ಯತೆಗಳನ್ನು ಒದಗಿಸಬೇಕು. ಗ್ರಾಹಕರ ವೇದಿಕೆಯನ್ನು ಎಂಬತ್ತರ ವಯಸ್ಸಿನಲ್ಲಿ ಪ್ರಾರಂಭಿಸಿದ ಬಿ.ಎನ್. ಗುಪ್ತಾರವರು, ಡಾ. ಹರ್ಡಿಕರ್‌ರವರ

ಪ್ರಭಾವಕ್ಕೆ ಒಳಗಾಗಿದ್ದು ಜನಸಾಮಾನ್ಯರಿಗೆ ಅನುಕೂಲವಾಗಲೆಂದು ಹೇಳಿದ್ದು ಗ್ರಾಹಕರ ವೇದಿಕೆ ಎಂಬುದು ಹೊಸ ಪ್ರಯತ್ನವಾಗಿದ್ದು, ತಕ್ಷಣದ ಬದಲಾವಣೆಯನ್ನು ನಿರೀಕ್ಷಿಸುವಂತಿಲ್ಲ. ಆದರೆ ಈ ಗ್ರಾಹಕರ ವೇದಿಕೆ ಹೊಸ ಬದಲಾವಣೆಯನ್ನು ಖಂಡಿತ ತರುವುದೆಂದು ತಮ್ಮ ಗುರಿ, ಉದ್ದೇಶ ಹಾಗೂ ಆಶಯಗಳನ್ನು ಬಳಕೆದಾರ ಪತ್ರಿಕೆಯಲ್ಲಿ ವ್ಯಕ್ತಪಡಿಸಿದ್ದಾರೆ.[೨೩]

ಎಂ.ಆರ್. ಲಕ್ಷಮ್ಮನವರು ಬಳಕೆದಾರ ಪತ್ರಿಕೆಯಲ್ಲಿ 'ಬೆಂಗಳೂರು ನಾಗರಿಕರಲ್ಲಿ ವಿನಂತಿ' ಎಂಬ ಲೇಖನವನ್ನು ಪ್ರಕಟಿಸಿದ್ದು, ಆ ಲೇಖನದಲ್ಲಿ ಬಳಕೆದಾರನ ಪರಿಸ್ಥಿತಿ ಹದಗೆಟ್ಟಿದ್ದು, ಬೆಲೆಗಳು ದಿನೇದಿನೇ ಏರುತ್ತಿರುವ ಬಗ್ಗೆ, ಜನಸಾಮಾನ್ಯರಿಗೆ ಎರಡು ಹೊತ್ತು ಊಟಕ್ಕೆ ಬೇಕಾಗುವ ದಿನಸಿಯ ಅಭಾವ, ರೇಷನ್ ಹಂಚಿಕೆಯಲ್ಲಿ ಅವ್ಯವಸ್ಥೆ, ದೊರಕುವ ಪದಾರ್ಥಗಳ ಗುಣಮಟ್ಟ ಕಳಪೆಯಾಗಿರುವ ಬಗ್ಗೆ ಅದರಿಂದ ಜನತೆಯ ಆರೋಗ್ಯದ ಮೇಲೆ ಬೀರುವ ಪರಿಣಾಮ ಇದಕ್ಕೆ ಕಾರಣ ಪ್ರಕೃತಿವಿಕೋಪ ಹಾಗೂ ಪ್ರಪಂಚದ ಪರಿಸ್ಥಿತಿಗಳು, ಸರ್ಕಾರ, ಉದ್ಯಮಗಳು, ವರ್ತಕರು, ಮಧ್ಯವರ್ತಿಗಳು, ರೈತರು, ನಾಗರಿಕರು ಮನಸ್ಸು ಮಾಡಿದರೆ ಈ ಎಲ್ಲ ಸಮಸ್ಯೆಗಳನ್ನು ಪರಿಹರಿಸಬಹುದೆಂದು ಹೇಳಿದ್ದಾರೆ. ಈ ಸಮಸ್ಯೆಗಳನ್ನು ಪರಿಹರಿಸಲು ಕರ್ನಾಟಕ ಗ್ರಾಹಕರ ವೇದಿಕೆ ರಚಿಸಲಾಗಿದ್ದು ಎಲ್ಲಾ ವರ್ಗದವರ ನೆರವು ಪಡೆದು ಜನಸಾಮಾನ್ಯರ ಸೇವೆಯಲ್ಲಿ ತೊಡಗುವುದು ಈ ವೇದಿಕೆಯ ಉದ್ದೇಶವಾಗಿದೆ. ಗ್ರಾಹಕರ ವೇದಿಕೆಯಲ್ಲಿ ಎರಡು ವರ್ಗದ ಸದಸ್ಯತ್ವವಿದ್ದು ವಾರ್ಷಿಕವಾಗಿ ೫೦೦/- ರೂ. ವಾರ್ಷಿಕ ಚಂದಾ ಕೊಟ್ಟು ಚಂದಾದಾರರು ವೇದಿಕೆಯ ಪ್ರಕಟನೆಗಳನ್ನು ಪಡೆಯಲು ಹಕ್ಕು ಪಡೆಯಬಹುದು. ಎರಡನೇ ವರ್ಗದ ಚಂದಾದಾರರು ೧೦೦/- ರೂಪಾಯಿಯ ವಾರ್ಷಿಕ ಚಂದಾ ನೀಡಿ ಪೋಷಕರಾಗಬಹುದು. ನಾವು ಬಳಸುವ ಆಹಾರಪದಾರ್ಥಗಳನ್ನು ಮಿತವಾಗಿ ಬಳಸುವ ಬಗ್ಗೆ, ಹಲವಾರು ಸಮಾರಂಭಗಳಲ್ಲಿ ಆಹಾರವನ್ನು ಉಳಿತಾಯ ಮಾಡುವ ಬಗ್ಗೆ, ದಲ್ಲಾಳಿಗಳ, ದುಷ್ಟ ಲಾಭಕೋರ ವರ್ತಕರ ವಿರುದ್ಧ ಸಂಘಟಿತರಾಗಿ ಗ್ರಾಹಕರು ಚಳವಳಿಯನ್ನು ಮಾಡಬೇಕು. ಭಾರತದಲ್ಲಿ ಬಡವರಿದ್ದು ಜೀವನದ ಅವಶ್ಯಕ ವಸ್ತುಗಳ ಉತ್ಪಾದನೆ ಮತ್ತು ಹಂಚಿಕೆಯನ್ನು ವ್ಯವಸ್ಥಿತವಾಗಿ ಮಾಡಬೇಕು. ಮನುಷ್ಯನಿಗೆ ಅಗತ್ಯವಾದ ಆಹಾರ, ಇತರ ವಸ್ತುಗಳು, ಬಟ್ಟೆ, ಔಷಧ, ಸಂಪರ್ಕಸಾಧನಗಳು, ವಿದ್ಯುಚ್ಛಕ್ತಿ ಇವುಗಳಿಂದ ಉಂಟಾಗುವ ಸಂಕಷ್ಟಗಳನ್ನು ಬಗೆಹರಿಸಲು ಗ್ರಾಹಕರ ವೇದಿಕೆ ರಚನೆಯಾಗಿದ್ದು, ಗ್ರಾಹಕರು ಕೈಜೋಡಿಸಬೇಕೆಂದು ತಮ್ಮ ಲೇಖನದಲ್ಲಿ ಮನವಿ ಮಾಡಿಕೊಂಡಿದ್ದರು.[೨೪]

ಲಕ್ಷಮ್ಮನವರು ಬಳಕೆದಾರ ಪತ್ರಿಕೆಯಲ್ಲಿ ಇನ್ನೊಂದು ಲೇಖನವನ್ನು ಪ್ರಕಟಿಸಿದ್ದು 'ಬಳಕೆದಾರನಿಗಾಗಿ ಅಪ್ರತಿಮ ಹೋರಾಟ ಮಾಡಿದ ರಾಲ್ಫ್ ನಾಡೆರ್' ಎಂಬ ಶೀರ್ಷಿಕೆಯ ಅಡಿಯಲ್ಲಿ ಅಮೆರಿಕಾದ ಹೋರಾಟಗಾರನಾದ ರಾಲ್ಫ್ ನಾಡೆರ್, ಹಾರ್ವರ್ಡ್ ವಿಶ್ವವಿದ್ಯಾಲಯದ ನ್ಯಾಯಶಾಸ್ತ್ರ ಪದವೀಧರ. ಹಲವು ವರ್ಷಗಳಿಂದ ಹೋರಾಟ

ಮಾಡುತ್ತಿರುವ ಬಗ್ಗೆ, ಜನಸಾಮಾನ್ಯರು ಸಂಘಟಿತರಾಗಿ ಹೋರಾಟ ಮಾಡಲು ಪ್ರೇರೇಪಿಸಿದ ಬಗ್ಗೆ, 'ಬಳಕೆದಾರರ ಲಾಯರು' ಎಂಬ ಅನ್ವರ್ಥನಾಮ ಹೊಂದಿದ ಈತ ೧೯೬೫ರಲ್ಲಿ ಚಳವಳಿಯನ್ನು ಪ್ರಾರಂಭಿಸಿದನು. ತನ್ನ ಹೋರಾಟದ ಫಲವಾಗಿ ಅಮೆರಿಕಾದ ಸಂಸತ್ತು ಕಾಂಗ್ರೆಸ್ ಗ್ರಾಹಕರ ಕಾಯ್ದೆಯನ್ನು ಮತ್ತು ಬಳಕೆದಾರರ ರಕ್ಷಣೆಗಾಗಿ ಮಹತ್ವದ ಕಾನೂನುಗಳನ್ನು ಜಾರಿಗೆ ತರುವಲ್ಲಿ ಯಶಸ್ವಿಯಾದನು. ಈತ ಅನೇಕ ಪುಸ್ತಕಗಳನ್ನು, ಪತ್ರಿಕೆಗಳಿಗೆ ಲೇಖನಗಳನ್ನು ಬರೆದು ಭಾಷಣಗಳನ್ನು ಮಾಡಿ ಸಾರ್ವಜನಿಕ ಅಭಿಪ್ರಾಯವನ್ನು ಮೂಡಿಸುವಲ್ಲಿ ಯಶಸ್ವಿಯಾದ ಬಗ್ಗೆ ಲಂಡನ್ ಟೈಮ್ಸ್ ಪತ್ರಿಕೆಯಲ್ಲಿ ಆತ ತನ್ನ ಧ್ಯೇಯೋದ್ದೇಶಗಳನ್ನು ತಿಳಿಸಿದ. ಆತ ಏಳು ಜನ ವಿದ್ಯಾರ್ಥಿಗಳ ಸಹಾಯದಿಂದ ಹೋರಾಟ ಪ್ರಾರಂಭಿಸಿದನು. ೧೯೭೦ರ ಹೊತ್ತಿಗೆ ೩೦೦ ವಿದ್ಯಾರ್ಥಿಗಳ ನೆರವು ಕೇಳಿದಾಗ ಮೂರು ಸಾವಿರ ಅರ್ಜಿಗಳು ಬಂದವು. ಬೇಸಿಗೆ ರಜೆಯಲ್ಲಿ ಗ್ರಾಹಕರ ವೇದಿಕೆಗೆ ಸಂಬಂಧಪಟ್ಟ ಸಂಶೋಧನೆಯಲ್ಲಿ ತೊಡಗಲು ಅನೇಕರು ಆಸಕ್ತರಾಗಿದ್ದರು. ಆಹಾರ, ಔಷಧಿ ಸಾಮಾಗ್ರಿ, ನದಿಗಳ ಅನ್ನೈರ್ಮಲೀಕರಣ, ಮಾರುಕಟ್ಟೆಯಲ್ಲಿನ ಸಮಸ್ಯೆಗಳ ಬಗ್ಗೆ ವಿದ್ಯಾರ್ಥಿಗಳು ಅಧ್ಯಯನ ಮಾಡುತ್ತಿದ್ದರು. ವಾರಕ್ಕೆ ಆತನಿಗೆ ೧೫೦೦ ಪತ್ರಗಳು ಬರುತ್ತಿದ್ದು ವಾಷಿಂಗ್‌ಟನ್ನಿನಲ್ಲಿ ಆತ 'ಸೆಂಟರ್ ಫಾರ್ ದಿ ಸ್ಟಡಿ ಆಫ್ ರೆಸ್ಪಾನ್‌ಸಿವ್ ಲಾ' ಎಂಬ ಕೇಂದ್ರವನ್ನು ಸ್ಥಾಪಿಸಿದ್ದು ಅಲ್ಲಿ ವಿದ್ಯಾರ್ಥಿಗಳು ಅಧ್ಯಯನ ಮಾಡುತ್ತಿದ್ದು 'ನಾಡೆರ್ಸ್ ರೇಡರ್ಸ್' ಎಂಬ ಹೆಸರಿನಿಂದ ಅವರನ್ನು ಕರೆಯಲಾಗುತ್ತಿತ್ತು. ಆತನ ಈ ಕಾರ್ಯಚಟುವಟಿಕೆಗಳಿಗೆ ಆತನ ವಕೀಲ ಕೆಲಸದಿಂದ ಬಂದ ಹಣ, ಲೇಖನದಿಂದ ಬಂದ ಹಣ, ದಾನಿಗಳಿಂದ ಕೊಡುಗೆಯಾಗಿ ಬಂದ ನೆರವಿನಿಂದ ಆತ ಕಾರ್ಯ ನಿರ್ವಹಿಸುತ್ತಿದ್ದು, ಪ್ರಜಾಪ್ರಭುತ್ವಕ್ಕೆ ಸಕ್ರಿಯವಾದ ಸಾಮಾಜಿಕ ವಿಕಸನ, ನಾಗರಿಕ ಪ್ರಜ್ಞೆ, ಇವನ್ನು ಮೂಡಿಸಲು ಬಹಳಷ್ಟು ಸ್ವಯಂ ಸೇವೆ ತ್ಯಾಗ ಅಗತ್ಯವಾಗಿದೆ ಎಂದು ನಾಡೆರ್‌ನ ಅಭಿಪ್ರಾಯವಾಗಿದೆ. ಲಕ್ಷಮ್ಮನವರು ನಮ್ಮಲ್ಲೂ ಕೂಡ ಅದೇ ರೀತಿಯ ಸಂಘಟನೆಗಳ ಅವಶ್ಯಕತೆ ಇದೆ ಎಂದು ಹೇಳಿದ್ದಾರೆ.[೨೫]

### ೬.೫ ಶಿಕ್ಷಣ ಕ್ಷೇತ್ರದಲ್ಲಿ ಎಂ.ಆರ್. ಲಕ್ಷಮ್ಮನವರ ಸೇವೆ

ಎಂ.ಆರ್. ಲಕ್ಷಮ್ಮನವರು ಪ್ರಥಮ ದರ್ಜೆಯೊಡನೆ ಚಿನ್ನದ ಪದಕವನ್ನು ಪಡೆದುಕೊಂಡು ತಮ್ಮ ಸ್ನಾತಕೋತ್ತರ ಪದವಿಯನ್ನು ಪೂರೈಸಿದ ನಂತರ ಸಮಾಜಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಹಾಗೆಯೇ ರಾಜಕೀಯ ಕ್ಷೇತ್ರಕ್ಕೂ ಕಾಲಿಟ್ಟರು. ಆದರೆ ಅವರಿಗೆ ಶೈಕ್ಷಣಿಕ ರಂಗದಲ್ಲಿ ಆಸಕ್ತಿ ಇದ್ದು, ಅನೇಕ ಶೈಕ್ಷಣಿಕ ಸುಧಾರಣೆಗೆ ಕಾರಣಕರ್ತರಾಗಿದ್ದಾರೆ. ೧೯೪೫ ರಲ್ಲಿ ನ್ಯಾಯವಿಧಾಯಕ ಸಭೆಯಿಂದ ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್ ಸದಸ್ಯರಾಗಿ ಆಯ್ಕೆಯಾಗಿ ೨ ವರ್ಷಗಳ ಕಾಲ ಸೇವೆ ಸಲ್ಲಿಸಿದರು. ೧೯೫೨ ರಲ್ಲಿ ಲಕ್ಷಮ್ಮನವರ ಪತಿ ನಾರಾಯಣಮೂರ್ತಿಯವರು ಬೆಂಗಳೂರಿನ ಹೆಚ್.ಎ.ಎಲ್. ಕಾರ್ಖಾನೆಯಲ್ಲಿ ಕೆಲಸ ನಿರ್ವಹಿಸಲು ನಿಯೋಜನೆಗೊಂಡಿದ್ದರು. ನಂತರ ಲಕ್ಷಮ್ಮನವರ ಕಾರ್ಯಕ್ಷೇತ್ರ ಮೈಸೂರಿನಿಂದ

ಬೆಂಗಳೂರಿಗೆ ವರ್ಗಾಯಿಸಲ್ಪಟ್ಟಿತು. ಬೋಧನಾ ವೃತ್ತಿಯಲ್ಲಿ ಆಸಕ್ತಿಯನ್ನು ಇಟ್ಟುಕೊಂಡಿದ್ದ ಅವರು ಬೆಂಗಳೂರು ನಗರದ ಪ್ರತಿಷ್ಠಿತ ವಿದ್ಯಾಸಂಸ್ಥೆಯಾದ ಆಚಾರ್ಯ ಪಾಠಶಾಲೆ ಮತ್ತು ಬಿ.ಎಂ.ಎಸ್. ಕಾಲೇಜುಗಳಲ್ಲಿ ಉಪನ್ಯಾಸಕಿಯಾಗಿ ಸೇವೆ ಸಲ್ಲಿಸಿದರು. ಆಚಾರ್ಯ ಪಾಠಶಾಲೆಯ ಸಂಜೆ ಕಾಲೇಜಿನ ಪ್ರಾಂಶುಪಾಲರಾಗಿ ನಾಲ್ಕು ವರ್ಷಗಳ ಕಾಲ ಸೇವೆ ಸಲ್ಲಿಸಿದ ಎಂ.ಆರ್. ಲಕ್ಷಮ್ಮನವರು ವಿಶ್ವವಿದ್ಯಾನಿಲಯದ ವಿವಿಧ ವಿಭಾಗಗಳಲ್ಲಿ ಸೇವೆ ಸಲ್ಲಿಸಿದ್ದಾರೆ. ಬೆಂಗಳೂರು ವಿಶ್ವವಿದ್ಯಾನಿಲಯದ ಶೈಕ್ಷಣಿಕ ಸಮಿತಿಯ ಸದಸ್ಯೆಯಾಗಿ ೪ ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಬೆಂಗಳೂರು ವಿಶ್ವವಿದ್ಯಾನಿಲಯದ ಪದವಿ ಉಪನ್ಯಾಸಕರ ಸಮಿತಿಯ ಅಧ್ಯಕ್ಷರಾಗಿ ೨ ವರ್ಷಗಳ ಕಾಲ ಕಾರ್ಯ ನಿರ್ವಹಿಸಿದರು. ಬೆಂಗಳೂರು ವಿಶ್ವವಿದ್ಯಾನಿಲಯದ ಇತಿಹಾಸ ವಿಭಾಗದ ಮುಖ್ಯ ಪರೀಕ್ಷಾಧಿಕಾರಿಯಾಗಿ ಕಾರ್ಯ ನಿರ್ವಹಿಸಿದರು. ಬೆಂಗಳೂರು ವಿಶ್ವವಿದ್ಯಾನಿಲಯದ ಅಧ್ಯಾಪಕರ ಸಂಘದ ಕಾರ್ಯಕಾರಿ ಸಮಿತಿಯ ಸದಸ್ಯೆಯಾಗಿ ಸೇವೆ ಸಲ್ಲಿಸಿದರು. ಆಚಾರ್ಯ ಪಾಠಶಾಲೆಯಲ್ಲಿ ಪ್ರಾಂಶುಪಾಲರಾಗಿದ್ದಾಗ ಕಲಾವಿಭಾಗದ ವಿಷಯಗಳನ್ನು ಕನ್ನಡ ಮಾಧ್ಯಮದಲ್ಲಿ ಬೋಧಿಸಲು ಪ್ರಾರಂಭಿಸಿದರು. ಲಕ್ಷಮ್ಮನವರು ಇತಿಹಾಸದ ವಿದ್ಯಾರ್ಥಿನಿಯಾಗಿದ್ದರಿಂದ ಶಾಸನಗಳನ್ನು ಸಂಶೋಧಿಸಿ ಇತಿಹಾಸ ಕ್ಷೇತ್ರಕ್ಕೆ ಕೊಡುಗೆಯಾಗಿ ನೀಡಿದ್ದಾರೆ. ಲಕ್ಷಮ್ಮನವರ ಪತಿಯವರು ಹಾಸನ ಜಿಲ್ಲೆಯ ಹಗರೆಯಲ್ಲಿ ಎಂಜಿನಿಯರ್ ಆಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಅಲ್ಲಿ ಸುತ್ತಮುತ್ತಲಿನ ಸ್ಥಳಗಳಲ್ಲಿ ೧೯ ಶಾಸನಗಳನ್ನು ಪತ್ತೆಹಚ್ಚಿ ಅವುಗಳನ್ನು ಪುರಾತತ್ವ ಇಲಾಖೆಗೆ ಹಸ್ತಾಂತರಿಸಿದರು. ಅವುಗಳು ಗಂಗ ವಂಶದ ರಾಜ ಶ್ರೀಪುರುಷನಿಗೆ ಸಂಬಂಧಪಟ್ಟಿದ್ದು. ಅವುಗಳು ೯ನೇ ಶತಮಾನದ ಕಾಲಕ್ಕೆ ಸಂಬಂಧಪಟ್ಟವೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೨] ಅವರು ಮೈಸೂರು ಸಂಸ್ಥಾನದ ಸಮಾಜ ಕಲ್ಯಾಣ ಇಲಾಖೆಯ ಅಧ್ಯಕ್ಷೆಯಾಗಿದ್ದಾಗ 'ಕಂಡೆನ್ಸ್‌ಡ್ ಕೋರ್ಸ್' ಎಂದು, ಶಾಲೆ ಬಿಟ್ಟ ಹೆಣ್ಣುಮಕ್ಕಳಿಗೆ ಲೋಯರ್ ಸೆಕೆಂಡರಿ ಮತ್ತು ಎಸ್.ಎಸ್.ಎಲ್.ಸಿ. ಪರೀಕ್ಷೆಗಳಿಗೆ ಕುಳಿತುಕೊಳ್ಳಲು ಅವಕಾಶ ಮಾಡಿಕೊಟ್ಟರು. ಜೊತೆಗೆ ಗ್ರಾಮ ಸೇವಿಕಾ ತರಬೇತಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ಕಳುಹಿಸುವ ವ್ಯವಸ್ಥೆಯನ್ನು ಮಾಡಿದರು. ಮಕ್ಕಳ ವಿದ್ಯಾಭ್ಯಾಸದಲ್ಲಿ ವಿಶೇಷ ಆಸಕ್ತಿವಹಿಸಿದ ಅವರು ಎಷ್ಟೋ ಮಕ್ಕಳಿಗೆ ತಾವೇ ಶುಲ್ಕವನ್ನು ಭರಿಸುತ್ತಿದ್ದರು ಹಾಗೂ ಶುಲ್ಕವನ್ನು ಕಡಿಮೆ ಮಾಡಿಸುತ್ತಿದ್ದರು. ಡಾ. ಎಂ. ಗೋಪಾಲಸ್ವಾಮಿ ಮೈಸೂರಿನಲ್ಲಿ ಮೊದಲ ಶಿಶುವಿಹಾರ ಮಾಡಿದ್ದ ಮಾದರಿಯಲ್ಲೇ ತಾವು ಬೆಂಗಳೂರಿನಲ್ಲಿ 'ಗೋಕುಲಂ ಗಾರ್ಡನ್ ಸ್ಕೂಲ್' ಅನ್ನು ಪ್ರಾರಂಭಿಸಿದರು.[೨] ಮಹಿಳೆಯರ ಮತ್ತು ಮಕ್ಕಳ ಕೇಂದ್ರಿಯ ಶೈಕ್ಷಣಿಕ ಮಂಡಳಿಯ ಸದಸ್ಯರಾಗಿ ೨ ವರ್ಷಗಳ ಕಾಲ ಸೇವೆ ಸಲ್ಲಿಸಿದರು.

**೬.೬ ಸಮಾಜಮುಖಿ ಸಂಘಟನೆಗಳಲ್ಲಿ ಎಂ.ಆರ್. ಲಕ್ಷಮ್ಮ ಅವರ ಪಾತ್ರ**

ಎಂ.ಆರ್. ಲಕ್ಷಮ್ಮನವರು ಕರ್ನಾಟಕ ಪಾನಸಂಯಮ ಮಂಡಲಿಯ ಪ್ರಥಮ ಅಧ್ಯಕ್ಷೆಯಾಗಿ ಪಾನವ್ಯಸನಗಳಿಂದ ಆಗುವ ಅನಾಹುತಗಳ ಬಗ್ಗೆ ಜನರಿಗೆ ಅರಿವು ಮೂಡಿಸಲು

ಶ್ರಮಿಸಿದರು. ಪಾನನಿರೋಧವನ್ನು ಜಾರಿಗೆ ತರುವ ಬಗ್ಗೆ, ಅವರು ವಿಧಾನಪರಿಷತ್ತಿನ ಸದಸ್ಯೆಯಾಗಿದ್ದಾಗಲೇ ಸರ್ಕಾರದ ಮೇಲೆ ಒತ್ತಡವನ್ನು ತಂದಿದ್ದರು. 'ಹೆಂಡ ಸಾರಾಯಿ ಸಹವಾಸ, ಹೆಂಡತಿ ಮಕ್ಕಳ ಉಪವಾಸ' ಎಂಬ ಘೋಷಣೆಯ ಭಿತ್ತಿಪತ್ರವನ್ನು ಕೈಯಲ್ಲಿ ಹಿಡಿದು ಸಭೆಗಳಲ್ಲಿ ಭಾಷಣ ಮಾಡುತ್ತಿದ್ದರು. ಅವರು ಬರೆದಿದ್ದ ಘೋಷಣೆಯ ಬಳಕೆ ಎಷ್ಟೋ ಕಡೆಗಳಲ್ಲಿ ಆಗುತ್ತಿದ್ದು, ಅದು ಇಂದಿಗೂ ಪ್ರಸ್ತುತವಾಗಿದೆ. ಸಾಮಾಜಿಕ ಪರಿವರ್ತನೆಯಾದರೆ ಮಾತ್ರ ಪಾನನಿರೋಧ ಯಶಸ್ವಿಯಾಗಿ ಜಾರಿಗೊಳಿಸಲು ಸಾಧ್ಯವೆಂದು ಲಕ್ಷಮ್ಮನವರ ಅಭಿಪ್ರಾಯ.

ಲಕ್ಷಮ್ಮನವರು ಮೈಸೂರು ಸಂಸ್ಥಾನದ ಮಕ್ಕಳ ಅಭಿವೃದ್ಧಿ ಸಮಿತಿಯ ಸ್ಥಾಪಕ ಸದಸ್ಯರಲ್ಲಿ ಒಬ್ಬರಾಗಿದ್ದರು. ಮಹಿಳಾ ಖಾದಿ ಸಹಕಾರ ಸಂಘದ ಅಧ್ಯಕ್ಷರಾಗಿ ಮೂರು ವರ್ಷಗಳ ಕಾಲ ಕಾರ್ಯ ನಿರ್ವಹಿಸಿದ ಲಕ್ಷಮ್ಮನವರು ೧೯೬೧ ರಲ್ಲಿ ನಡೆದ ಚೀನಾ-ಭಾರತ ಯುದ್ಧದ ಸಮಯದಲ್ಲಿ ರಾಜ್ಯ ರಕ್ಷಣಾ ಸಮಿತಿಯ ಸದಸ್ಯೆಯಾಗಿದ್ದು, ಚಿನ್ನವನ್ನು ದಾನಮಾಡಿದ ಪ್ರಥಮ ಮಹಿಳೆ ಇವರಾಗಿದ್ದರು. ಕೇಂದ್ರ ಗ್ರಂಥಾಲಯ ಸಮಿತಿಯ ಸದಸ್ಯೆಯಾಗಿ ಮೂರು ವರ್ಷಗಳ ಕಾಲ ಕಾರ್ಯ ನಿರ್ವಹಿಸಿದರು. ಇತಿಹಾಸದ ವಿದ್ಯಾರ್ಥಿನಿಯಾಗಿದ್ದ ಎಂ.ಆರ್. ಲಕ್ಷಮ್ಮನವರು ಮಿಥಿಕ್ ಸೊಸೈಟಿಯ ಉಪಾಧ್ಯಕ್ಷರಾಗಿ ೨ ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಭಾರತೀಯ ವಿದ್ಯಾಭವನದ ರಾಜ್ಯ ಶಾಖೆಯ ಕಾರ್ಯಕಾರಿ ಸಮಿತಿಯ ಸದಸ್ಯೆಯಾಗಿ ಕಾರ್ಯ ನಿರ್ವಹಿಸಿದರು. ವಾಣಿವಿಲಾಸ ಆಸ್ಪತ್ರೆಯ ಮೇಲ್ವಿಚಾರಣೆ ಸಮಿತಿಯ ಅಧ್ಯಕ್ಷೆಯಾಗಿ ಕಾರ್ಯ ನಿರ್ವಹಿಸಿದ್ದಾರೆ. ರಾಜ್ಯ ಹೆಣ್ಣುಮಕ್ಕಳ ಗೈಡ್ ಸಂಸ್ಥೆಯ ರಾಜ್ಯ ಕಮಿಷನರ್ ಆಗಿ ಮೂರು ಅವಧಿಗಳ ಕಾಲ ಸೇವೆ ಸಲ್ಲಿಸಿದ್ದಾರೆ. ಮೊದಲ ಅವಧಿಯಲ್ಲಿ ರಾಜ್ಯ ಹೆಣ್ಣುಮಕ್ಕಳ ಗೈಡ್ ಸಂಸ್ಥೆಗೆ ಚುನಾಯಿತರಾಗಿದ್ದ ಲಕ್ಷಮ್ಮನವರು ಎರಡನೇ ಬಾರಿಗೆ ಅವಿರೋಧವಾಗಿ ಆಯ್ಕೆಯಾದರು.

ಅವರ ಕಾರ್ಯದಕ್ಷತೆಯಿಂದ ಮೂರನೇ ಬಾರಿಗೆ ಅವರನ್ನು ನಾಮನಿರ್ದೇಶನ ಮಾಡಿದರು. ಕೇಂದ್ರ ಸ್ಕೌಟ್ ಮತ್ತು ಗೈಡ್ ಸಂಸ್ಥೆಯ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಚುನಾಯಿತರಾದರು. ಮೈಸೂರು ರಾಜ್ಯದ ಯುವಜನಸೇವಾ ಮಂಡಲಿಯ ಸದಸ್ಯರಾಗಿ ೨ ವರ್ಷಗಳ ಕಾಲ ಕಾರ್ಯ ನಿರ್ವಹಿಸಿದರು. ನೇತ್ರತಜ್ಞರಾದ ಡಾ. ಮೋದಿಯವರ ಶಿಬಿರದಲ್ಲಿ ಸ್ವಯಂಸೇವಕಿಯಾಗಿ ಸೇವೆ ಸಲ್ಲಿಸಿದ ಲಕ್ಷಮ್ಮನವರು ೧೯೭೦ರ ನಂತರ ರಾಜಕೀಯ ರಂಗದಿಂದ ನಿವೃತ್ತರಾಗಿ ಸಮಾಜಸೇವೆಯಲ್ಲಿ ತಮ್ಮ ಜೀವನದ ಕೊನೆಯ ಕ್ಷಣದವರೆಗೂ ಸೇವೆ ಸಲ್ಲಿಸಿದರು. ಜೀವನದ ಉದ್ದಕ್ಕೂ ಸಮಾಜಮುಖಿಯಾಗಿ, ಕ್ರಿಯಾಶೀಲ ಚಿಂತನೆಯನ್ನು ಮಾಡಿದ ಲಕ್ಷಮ್ಮನವರು ೧೯೮೮ ಜೂನ್ ೭ ರಂದು ಇಹಲೋಕ ತ್ಯಜಿಸಿದರು.

ನಾಲ್ಕು ದಶಕಗಳ ಕಾಲ ನಿರಂತರ ಸಾರ್ವಜನಿಕ ಸೇವೆಯಲ್ಲಿ ನಾಡಿನ ಸಾಮಾಜಿಕ, ರಾಜಕೀಯ, ಸಾಹಿತ್ಯಕ, ಶೈಕ್ಷಣಿಕ, ಪತ್ರಿಕೋದ್ಯಮ ಕ್ಷೇತ್ರಗಳಲ್ಲಿ ಅನುಪಮ ಸೇವೆ ಸಲ್ಲಿಸಿದ ಲಕ್ಷಮ್ಮನವರದ್ದು ಅತ್ಯಂತ ಸರಳ ಜೀವನ ವಿಧಾನವಾಗಿದೆ. ಸಮಾಜಸೇವೆಯ ಜೊತೆಗೆ ವೈಯಕ್ತಿಕ ಜೀವನದಲ್ಲಿಯೂ ಕೂಡ ತಮ್ಮ ಕರ್ತವ್ಯವನ್ನು ದಕ್ಷತೆಯಿಂದಲೇ ನಿರ್ವಹಿಸಿದ್ದರು. ಕಷ್ಟಕಾರ್ಪಣ್ಯ, ನೋವು ದುಃಖಗಳಿಂದ ಅವರ ಸಹಾನುಭೂತಿ ಅಪೇಕ್ಷಿಸಿ ಅನೇಕ ಜನ ಬರುತ್ತಿದ್ದರು. ಲಕ್ಷಮ್ಮನವರು ದೀನದಲಿತರ ಸಮಸ್ಯೆಗಳಿಗೆ ಬಹಳ ಬೇಗ ಸ್ಪಂದಿಸುತ್ತಿದ್ದರು. ಅವರ ಸಾಂತ್ವನದ ಮಾತುಗಳಿಂದ, ಅವರ ಕ್ರಿಯಾತ್ಮಕ ನೆರವಿನಿಂದ, ಅನೇಕ ಮಂದಿ ಉಪಕೃತರಾಗಿದ್ದರು. ನಿಸ್ವಾರ್ಥ ಸಾರ್ವಜನಿಕ ಸೇವಾಕರ್ತೆಯಾಗಿದ್ದ ಅವರು ಸಮರ್ಪಣಾ ಮನೋಭಾವ ಹೊಂದಿದ್ದರು.

ಸಾಹಿತಿಯಾಗಿ, ಪತ್ರಕರ್ತೆಯಾಗಿ, ರಾಜಕಾರಣಿಯಾಗಿ, ಸಮಾಜಸುಧಾರಕಿಯಾಗಿ, ಸ್ವಾತಂತ್ರ್ಯ ಹೋರಾಟಗಾರ್ತಿಯಾಗಿ, ಹತ್ತಾರು ಕ್ಷೇತ್ರಗಳಲ್ಲಿ ದಕ್ಷತೆಯಿಂದ ದುಡಿದ ಛಲಗಾರ್ತಿ ಮತ್ತು ಧೀಮಂತ ಮಹಿಳೆಯಾಗಿದ್ದ ಎಂ.ಆರ್. ಲಕ್ಷಮ್ಮನವರು ಸ್ತ್ರೀವಾದಿ ಎಂದರೆ ತಪ್ಪಾಗಲಾರದು. ವಿಶಿಷ್ಟ ವ್ಯಕ್ತಿತ್ವದ ಅವರು ವೈಯಕ್ತಿಕ ಜೀವನದಲ್ಲಿಯೂ ಕರ್ತವ್ಯಲೋಪ ಮಾಡದೆ ಸಾರ್ಥಕ ಜೀವನವನ್ನು ನಡೆಸಿದ್ದು ಇತರರಿಗೆ ಆದರ್ಶ ಹಾಗೂ ಅನುಕರಣೀಯರಾಗಿದ್ದಾರೆ.

**ಅಡಿಟಿಪ್ಪಣಿಗಳು**

೧) ಎಂ.ಆರ್. ಲಕ್ಷಮ್ಮ ಸ್ವವಿವರ, ವಿಭಾಗೀಯ ಪತ್ರಾಗಾರ ಕಛೇರಿ, ಮೈಸೂರು, ಪು. ೩.

೨) ನಾಗಲಕ್ಷ್ಮಿ, ನಂ. ಕನ್ನಡ ಪತ್ರಿಕಾಲೋಕದ ಧೀಮಂತರು – ೮, ಬೆಂಗಳೂರು, ಪು. ೮೮

೩) ಸಾಧ್ವಿ ದಿನಪತ್ರಿಕೆ, ದಿನಾಂಕ ೧೮.೧೧.೧೯೪೬

೪) ಅದೇ ದಿನಪತ್ರಿಕೆ, ದಿನಾಂಕ ೨೨.೧೧.೧೯೪೬

೫) ಅದೇ ದಿನಪತ್ರಿಕೆ, ದಿನಾಂಕ ೧೭.೧೨.೧೯೪೭

೬) ಅದೇ ದಿನಪತ್ರಿಕೆ, ದಿನಾಂಕ ೦೮.೧೨.೧೯೪೭

೭) ಅದೇ ದಿನಪತ್ರಿಕೆ, ದಿನಾಂಕ ೨೭.೦೧.೧೯೪೮

೮) ಲಕ್ಷಮ್ಮ ಎಂ.ಆರ್. ಪೂರ್ವೋಕ್ತ, ಪು. ೯

೯) ಲಕ್ಷಮ್ಮ ಎಂ.ಆರ್. (ಸಂ) ಸೋದರಿ ಪತ್ರಿಕೆ, ದಿನಾಂಕ ೦೬.೦೫.೧೯೫೫

೧೦) ಅದೇ ಪತ್ರಿಕೆ, ದಿನಾಂಕ ೨೪.೧೨.೧೯೫೪

೧೧) ಅದೇ ಪತ್ರಿಕೆ, ದಿನಾಂಕ ೨೨.೧೦.೧೯೫೪

೧೨) ಅದೇ ಪತ್ರಿಕೆ, ದಿನಾಂಕ ೧೯.೧೧.೧೯೫೪

೧೩) ಅದೇ ಪತ್ರಿಕೆ, ದಿನಾಂಕ ೧೭.೧೨.೧೯೫೪

೧೪) ಅದೇ ಪತ್ರಿಕೆ, ದಿನಾಂಕ ೨೯.೦೪.೧೯೫೫

೧೫) ಅದೇ ಪತ್ರಿಕೆ, ದಿನಾಂಕ ೨೭.೦೫.೧೯೫೫

೧೬) ಅದೇ ಪತ್ರಿಕೆ, ದಿನಾಂಕ ೨೧.೦೧.೧೯೫೫

೧೭) ಅದೇ ಪತ್ರಿಕೆ, ದಿನಾಂಕ ೦೪.೦೨.೧೯೫೫

೧೮) ಅದೇ ಮಾರ್ಚ್ ೧೯೫೭

೧೯) ಲಕ್ಷಮ್ಮ ಎಂ. ಆರ್, ಸ್ವವಿವರ, ವಿಭಾಗೀಯ ಪತ್ರಾಗಾರ ಕಛೇರಿ, ಮೈಸೂರು, ಪು. ೪

೨೦) ಅದೇ, ಪು. ೪.

೨೧) ಅದೇ, ಪು. ೬.

೨೨) ಅದೇ, ಪು. ೭.

೨೩) ಗುಪ್ತಾ ಬಿ.ಎನ್. (ಸಂ) ಬಳಕೆದಾರ ಪತ್ರಿಕೆ, ಪು. ೪.

೨೪) ಅದೇ ಪತ್ರಿಕೆ, ಪು. ೧.

೨೫) ಅದೇ ಪತ್ರಿಕೆ, ಪು. ೨.

೨೬) ಲಕ್ಷಮ್ಮ ಎಂ.ಆರ್., ಸ್ವವಿವರ, ವಿಭಾಗೀಯ ಪತ್ರಾಗಾರ ಕಛೇರಿ, ಪು. ೧.

೨೭) ನಂ. ನಾಗಲಕ್ಷ್ಮಿ, ಪೂರ್ವೋಕ್ತ, ಪು. ೮೯.

# ಅಧ್ಯಾಯ : ಏಳು

# ಎಂ.ಆರ್. ಲಕ್ಷಮ್ಮ ಅವರ ಚಿಂತನೆ ಮತ್ತು ವಿಚಾರಧಾರೆಗಳು

ಎಂ.ಆರ್. ಲಕ್ಷಮ್ಮ ತಮ್ಮ ಕಾಲದ ಸಾಮಾಜಿಕ, ರಾಜಕೀಯ ಸಾಂಸ್ಕೃತಿಕ ಸಂದರ್ಭಕ್ಕೆ ತಮ್ಮನ್ನು ಅರ್ಪಿಸಿಕೊಂಡವರು. ಸ್ವಾತಂತ್ರ್ಯಪೂರ್ವದಲ್ಲಿ ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯ 'ಬೆಳಕು' ವಾರಪತ್ರಿಕೆಯ ಸಂಪಾದಕಿಯಾಗಿ ನಂತರ ಮಹಿಳೆಯರ ಪ್ರಗತಿಗಾಗಿ 'ಸೋದರಿ' ವಾರಪತ್ರಿಕೆಯನ್ನು ಪ್ರಾರಂಭಿಸಿದ ಅವರು ಸಾಮಾಜಿಕ ಕಾರ್ಯಶೀಲತೆವುಳ್ಳವರಾಗಿದ್ದು, ವೈಚಾರಿಕ ಮನೋಭಾವವನ್ನು ತಮ್ಮ ಪತ್ರಿಕೆಗಳಲ್ಲಿ ಬಿಂಬಿಸಿದ್ದು ಅವರ ಚಿಂತನೆ ಮತ್ತು ವಿಚಾರಧಾರೆಗಳು ಸಾರ್ವಕಾಲಿಕ ಮೌಲ್ಯವನ್ನು ಹೊಂದಿದ್ದು ಸ್ತ್ರೀಯರ ಸುಧಾರಣೆಗೆ ಶ್ರಮಿಸಿದವರಾಗಿದ್ದಾರೆ. ಸಮಾನತೆ, ಸುಧಾರಣೆ, ಸರ್ವತೋಮುಖ ಅಭಿವೃದ್ಧಿ, ಸಾಮಾಜಿಕ ಸಾಂಸ್ಕೃತಿಕ ಪ್ರಗತಿ ಹೀಗೆ ಎಂ.ಆರ್. ಲಕ್ಷಮ್ಮನವರ ಬಹುಮುಖ ಪ್ರಕ್ರಿಯೆಗಳು ಅವರ ಚಿಂತನೆಗಳಲ್ಲಿ ಒಡಮೂಡಿದೆ.

### ೭.೧. ಬೆಳಕು ಮತ್ತು ಸೋದರಿ ವಾರಪತ್ರಿಕೆಯಲ್ಲಿ ಪ್ರಕಟಗೊಂಡ ಎಂ.ಆರ್. ಲಕ್ಷಮ್ಮನವರ ಮಹಿಳಾ ಪರ ಚಿಂತನೆಗಳು ಮತ್ತು ಬರಹಗಳು

ದಿನಾಂಕ ೦೮.೦೯.೧೯೪೫ರ ಸಂಚಿಕೆಯಲ್ಲಿ ಕಸ್ತೂರ ಬಾ ರಾಷ್ಟ್ರೀಯ ಸ್ಮಾರಕ ನಿಧಿ ಬಗ್ಗೆ ಸುದ್ದಿ ಪ್ರಕಟವಾಗಿದೆ. ಮಹಾತ್ಮ ಗಾಂಧೀಜಿಯವರ ಪತ್ನಿ ಕಸ್ತೂರಬಾ ಗಾಂಧೀಜಿಯವರು ಗ್ರಾಮೀಣ ಮಹಿಳೆಯರು ಮತ್ತು ಮಕ್ಕಳ ಬಗ್ಗೆ ಕಾಳಜಿ ಉಳ್ಳವರಾಗಿದ್ದು, ಅವರ ಸೇವೆಯನ್ನು ಸಲ್ಲಿಸುವ ಹೆಬ್ಬಯಕೆಯನ್ನು ಇಟ್ಟುಕೊಂಡಿದ್ದವರು. ಅವರ ಮರಣದ ನಂತರ ಅವರ ಹೆಸರಿನಲ್ಲಿ ರಾಷ್ಟ್ರೀಯ ಸ್ಮಾರಕ ನಿಧಿಯನ್ನು ಸ್ಥಾಪಿಸಲು ಗಾಂಧೀಜಿಯವರು ಪ್ರಾರಂಭಿಸಿದರು. ರಾಷ್ಟ್ರೀಯ ಸ್ಮಾರಕ ನಿಧಿಗೆ ದೇಣಿಗೆಯಾಗಿ ಒಂದು ಕೋಟಿ ಇಪ್ಪತ್ತೈದು ಲಕ್ಷ ರೂ.ಗಳು ದೇಶಾದ್ಯಂತ ಸಂಗ್ರಹವಾಯಿತು. ಮೈಸೂರು ಸಂಸ್ಥಾನದಲ್ಲಿ ೨,೭೫,೦೦೦ ರೂ.ಗಳು ನಿಧಿ ಸಂಗ್ರಹವಾಯಿತು. ಈ ಹಣವನ್ನು ಗ್ರಾಮೀಣ ಮಹಿಳೆಯರು ಮತ್ತು ಮಕ್ಕಳ ಸೇವೆಗೆ ಬಳಸಿಕೊಳ್ಳುವ ಉದ್ದೇಶದಿಂದ ಗ್ರಾಮಸೇವಕಿಯರಿಗೆ ಶಿಕ್ಷಣವನ್ನು ನೀಡಲಾಗುತ್ತಿತ್ತು. ಮೈಸೂರಿನ ಪಡುವಾರಹಳ್ಳಿಯಲ್ಲಿ ಕಸ್ತೂರ ಬಾ ರಾಷ್ಟ್ರೀಯ ಶಿಕ್ಷಣ ಶಾಲೆ ಪ್ರಾರಂಭವಾಯಿತು. ಇಲ್ಲಿ ೨೪ ಮಹಿಳೆಯರು ಶಿಕ್ಷಣವನ್ನು ಪಡೆಯುತ್ತಿದ್ದು, ಉತ್ತರ ಕರ್ನಾಟಕದ ೧೨ ಮಂದಿ ಹಾಗೂ ಮೈಸೂರಿನ ೧೨ ಮಂದಿ ಶಿಕ್ಷಣವನ್ನು ಪಡೆಯುತ್ತಿದ್ದು ಶಿಬಿರವಾಸಿಗಳು ಅಲ್ಲಿನ ಬಾಲವಾಡಿ ಮಕ್ಕಳ ಶಾಲೆಯಲ್ಲಿ ಮಕ್ಕಳಲ್ಲಿ ಸಾಮಾನ್ಯವಾಗಿ ಹರಡುವ ಚರ್ಮದ ತುರಿಕೆ ಮತ್ತು ಕಜ್ಜಿ ಕಾಯಿಲೆಗಳಿಗೆ ಚಿಕಿತ್ಸೆಯನ್ನು ನೀಡುತ್ತಿರುವುದರ ಜೊತೆಗೆ ಪಡುವಾರಹಳ್ಳಿ ಗ್ರಾಮದ ಮಹಿಳೆಯರಿಗೆ ಅಕ್ಷರಪ್ರಚಾರ ತರಗತಿಗಳನ್ನು ನಡೆಸುತ್ತಿದ್ದಾರೆ. ಈ ಸಂಸ್ಥೆಯ ಕಾರ್ಯದರ್ಶಿಗಳಾಗಿ ಕೃಷ್ಣಯ್ಯನವರು ಹಾಗೂ ಶ್ರೀಮತಿ ಯಶೋಧರಮ್ಮ ದಾಸಪ್ಪನವರು

ಹಾಗೂ ಉಪಾಧ್ಯಕ್ಷರಾಗಿ ಹೆಚ್.ಸಿ. ದಾಸಪ್ಪನವರು ಶಿಬಿರದಲ್ಲೇ ಇದ್ದುಕೊಂಡು ಶಿಕ್ಷಣದ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದಾರೆ. ಈ ಶಿಬಿರವು ಆರು ತಿಂಗಳ ಕಾಲ ನಡೆದು ಶಿಕ್ಷಣ ಪಡೆದ ಶಿಬಿರವಾಸಿಗಳು ಬೇರೆ ಬೇರೆ ಗ್ರಾಮಕ್ಕೆ ಹೋಗಿ ಸೇವೆ ಸಲ್ಲಿಸುವರು. ಈ ಲೇಖನ ಎಲ್ಲಾ ಗ್ರಾಮೀಣ ಮಹಿಳೆಯರಿಗೆ ತಲುಪುವಂತೆ ಪ್ರಕಟಿಸಲಾಗಿದೆ.[೧]

ದಿನಾಂಕ ೨೨.೦೯.೧೯೪೫ರ ಸಂಚಿಕೆಯಲ್ಲಿ ಕಸ್ತೂರಬಾ ಶಿಕ್ಷಣ ಶಿಬಿರದ ಪ್ರಾರಂಭೋತ್ಸವ ಕಾರ್ಯಕ್ರಮದಲ್ಲಿ ಎಂ.ಆರ್. ಲಕ್ಷಮ್ಮನವರು ಭಾಗವಹಿಸಿದ ಬಗ್ಗೆ ಅಲ್ಲಿನ ವ್ಯವಸ್ಥೆಗಳನ್ನು ತಿಳಿಸುವ ಲೇಖನವನ್ನು ಪ್ರಕಟಿಸಲಾಗಿದೆ. ಟಾಂಗಾ ಗಾಡಿಯಲ್ಲಿ ಕಸ್ತೂರಬಾ ಶಿಕ್ಷಣ ಶಿಬಿರಕ್ಕೆ ಬಂದಿಳಿದ ಎಂ.ಆರ್. ಲಕ್ಷಮ್ಮನವರಿಗೆ ಮಂಗಳವಾದ್ಯದ ಧ್ವನಿ ಕೇಳಿಬಂತು. ಸ್ವಯಂಸೇವಕಿಯರು ಇವರನ್ನು ಬರಮಾಡಿಕೊಂಡು ಶಿಕ್ಷಣ ಶಾಖೆ, ಬೌದ್ಧಿಕ ಶಾಖೆ ಎಂಬ ೨ ವಿಭಾಗಗಳಿಗೆ ಕರೆದೊಯ್ದರು. ಬೌದ್ಧಿಕ ಶಾಖೆಯಲ್ಲಿ ಉಪನ್ಯಾಸ, ಮಾತುಕತೆ, ಪ್ರಾರ್ಥನೆ, ಭಜನೆ ಏರ್ಪಟ್ಟರೆ, ಶಿಕ್ಷಣ ಶಾಖೆಯಲ್ಲಿ ಹತ್ತಿಯನ್ನು ಬಿಡಿಸುವ, ಹೊಸೆಯುವ, ಅದರಿಂದ ನೂಲನ್ನು ತೆಗೆಯುವ ಕೆಲಸವನ್ನು ಹಾಗೂ ಕತ್ತಾಳೆಯಿಂದ ನಾರನ್ನು ತೆಗೆಯುವ ಹಗ್ಗ ಹೊಸೆಯುವ, ಆಟದ ಸಾಮಾನುಗಳನ್ನು ತಯಾರಿಸುವ ಸ್ವಯಂಸೇವಕಿಯರನ್ನು ಭೇಟಿ ಮಾಡುತ್ತಾರೆ. ಆ ದಿನ ಶಿಬಿರಕ್ಕೆ ಲೇಡಿ ಲೋಕಸುಂದರಿ ರಾಮನ್‌ರವರು ಬಂದಿದ್ದು, ಸಾದಾ ಖಾದಿ ಸೀರೆಯನ್ನು ಧರಿಸಿ ಬಂದಿದ್ದು ಅವರು ಕನ್ನಡದಲ್ಲಿ ಭಾಷಣವನ್ನು ಮಾಡಿದರು. ಗಾಂಧೀಜಿಯವರು ಕಸ್ತೂರಬಾ ಶಿಬಿರವನ್ನು ಸ್ಥಾಪಿಸಿದ ಉದ್ದೇಶವನ್ನು ಮಾತನಾಡಿದ ಮಹನೀಯರ ಹೆಸರು ಹಾಗೂ ಸಿದ್ದವ್ವನಹಳ್ಳಿಯ ಕೃಷ್ಣಶರ್ಮರು ಉತ್ತಮವಾದ ಭಾಷಣವನ್ನು ಮಾಡಿದ ಬಗ್ಗೆ ದಾಖಲಿಸಿರುವ ಎಂ.ಆರ್. ಲಕ್ಷಮ್ಮನವರು ಗಾಂಧೀಜಿಯವರ ಆಶ್ರಮದಲ್ಲಿ ಸ್ವಲ್ಪ ಕಾಲ ಇದ್ದು ಬಂದ ಯಶೋಧರ ದಾಸಪ್ಪನವರು ಮಾತನಾಡಿದ್ದನ್ನು ದಾಖಲಿಸಿದ್ದಾರೆ. ಮೈಸೂರು ಸಂಸ್ಥಾನದಲ್ಲಿ ಕಸ್ತೂರಬಾ ಸ್ಮಾರಕ ಶಿಬಿರವನ್ನು ನಡೆಸುವ ಜವಾಬ್ದಾರಿಯನ್ನು ಯಶೋಧರಮ್ಮ ದಾಸಪ್ಪನವರಿಗೆ ಸ್ವತಃ ಗಾಂಧೀಜಿಯವರೆ ವಹಿಸಿದ ಬಗ್ಗೆ ಸುದ್ದಿ ಪ್ರಕಟವಾಗಿದೆ.[೨]

ದಿನಾಂಕ ೧೨.೦೧.೧೯೪೬ರ ಸಂಚಿಕೆಯಲ್ಲಿ ಅಖಿಲ ಭಾರತ ಮಹಿಳಾ ಸಮ್ಮೇಳನ ಹೈದರಾಬಾದಿನಲ್ಲಿ ನಡೆದ ಬಗ್ಗೆ, ಅಲ್ಲಿ ಮೈಸೂರು ಸಂಸ್ಥಾನದ ಮತ್ತು ಎಲ್ಲಾ ಪ್ರಾಂತ್ಯಗಳಿಂದ ಪ್ರತಿನಿಧಿಗಳು ಭಾಗವಹಿಸಿದ ಬಗ್ಗೆ, ಮಹಿಳೆಯರಿಗೆ ಪುರುಷರ ಸರಿಸಮನಾದ ಪೌರ ಹಕ್ಕುಗಳನ್ನು ನೀಡುವುದರ ಬಗ್ಗೆ ಸುದ್ದಿ ಪ್ರಕಟವಾಗಿದೆ. ಜತೆಗೆ ಕಾಶಿ ವಿಶ್ವವಿದ್ಯಾನಿಲಯದಲ್ಲಿ ಕಲ್ಯಾಣಿ ಎಂಬ ಬ್ರಾಹ್ಮಣೇತರ ವಿದ್ಯಾರ್ಥಿನಿಗೆ, ವೇದವನ್ನು ಕಲಿಯಲು ಅವಕಾಶ ನೀಡಿದ ಬಗ್ಗೆ ಬರ್ಮಾ ಮತ್ತು ಮಲಯಾದಲ್ಲಿ ಸ್ತ್ರೀಯರ ಸ್ಥಿತಿಗತಿಗಳು ಹೀನಾಯ ಸ್ಥಿತಿಯಲ್ಲಿರುವ ಬಗ್ಗೆ ಸುದ್ದಿ ಪ್ರಕಟವಾಗಿದ್ದು, ಬೆಳಕು ಪತ್ರಿಕೆ ಮಹಿಳೆಯ ಅಭ್ಯುದಯಕ್ಕೆ ಉತ್ತೇಜನ ನೀಡುತ್ತಿತ್ತು.[೩]

ದಿನಾಂಕ ೨೬.೦೧.೧೯೪೬ರ ಸಂಚಿಕೆಯಲ್ಲಿ ಸಂಸಾರದ ಹೊಣೆ ಹೊತ್ತ ಮಹಿಳೆಯರು ದೇಶಸೇವೆಯನ್ನು ಮಾಡಬಹುದೆ ಎಂದು ಗಾಂಧೀಜಿಯವರನ್ನು ಕೇಳಿದಾಗ, ಅವರು ಮನೆಕೆಲಸದ ಜತೆಗೆ ಸಂಸಾರದ ಯೋಗಕ್ಷೇಮವನ್ನು ನೋಡಿಕೊಂಡು ಬಿಡುವಾದಾಗ ನೂಲು ತೆಗೆಯುವುದು, ಹೊಲಿಗೆ ಕೆಲಸ ಮಾಡುವುದು, ಅರ್ಹರಾದ ಮಹಿಳೆಯರು ಹೊರಗೆ ಬಂದು ಇತರ ಕೆಲಸಗಳನ್ನು ಮಾಡುವುದರಿಂದ ಸಂಪಾದನೆಯನ್ನು ಗಳಿಸಿ ದೇಶ ಸೇವೆಯನ್ನು ಮಾಡಬಹುದು ಎಂಬ ಸುದ್ದಿ ಪತ್ರಿಕೆಯಲ್ಲಿ ಪ್ರಕಟವಾಗಿದ್ದು, ಗಾಂಧೀಜಿಯವರ ಪ್ರಭಾವ ಮಹಿಳೆಯರ ಮೇಲೆ ಉಂಟಾಗಿದ್ದು, ಸ್ವಾತಂತ್ರ್ಯ ಹೋರಾಟದಲ್ಲಿ ಮಹಿಳೆಯರು ತಮ್ಮನ್ನು ತೊಡಗಿಸಿಕೊಳ್ಳಲು ಅವರಿಂದ ಸ್ಫೂರ್ತಿಯನ್ನು ಪಡೆದರೆಂದು ಹೇಳಬಹುದು.[೪]

ದಿನಾಂಕ ೦೯.೦೨.೧೯೪೬ರ ಸಂಚಿಕೆಯಲ್ಲಿ ಮೇರಿಬಾಯಿ ಹಾರಗಹಳ್ಳಿ ಇವರು **'ಹೆಂಗಸರಿಗೇಕೆ ವಿದ್ಯೆ?'** ಎಂಬ ಸಂಭಾಷಣೆಯ ರೂಪದ ಬರಹದಲ್ಲಿ ಮಹಿಳೆಯರಿಗೆ ಶಿಕ್ಷಣದ ಅವಶ್ಯಕತೆಯ ಬಗ್ಗೆ ತಿಳಿಸಿದ್ದಾರೆ. ಸುಬ್ಬಮ್ಮನವರು ಊಟ ಮಾಡಿ ಜಗುಲಿಯ ಮೇಲೆ ಕುಳಿತಿದ್ದಂತಹ ಸಂದರ್ಭದಲ್ಲಿ ಸುಭದ್ರೆಯು ಅವಸರದಿಂದ ಹೊರಹೋಗುತ್ತಿದ್ದಾಗ ಇದು ಯಾವ ಹಬ್ಬ? ಅಲಂಕಾರ ಮಾಡಿಕೊಂಡು ಹೋಗುತ್ತಿದ್ದೀಯಾ ಎಂದು ಸುಬ್ಬಮ್ಮನವರು ಪ್ರಶ್ನಿಸುತ್ತಾರೆ. ನಮ್ಮ ಶಾಲೆಯಲ್ಲಿ ವಾರ್ಷಿಕೋತ್ಸವವಿದ್ದು, ಅದಕ್ಕೆ ಹೊರಟೆನೆಂದು ಸುಭದ್ರ ತಿಳಿಸಿದಾಗ ಹೆಣ್ಣುಮಕ್ಕಳು ಮನೆಗೆಲಸ ಕಲಿತು ಮದುವೆ ಮಾಡಿಕೊಂಡು ಗಂಡನ ಮನೆಗೆ ಹೋಗಬೇಕು, ಓದಿ ಗಂಡುಬೀರಿಯಾಗಬೇಕೆ ಎಂದು ಹೇಳಿದಾಗ ಸುಭದ್ರಮ್ಮ ನೀವು ಓದಲಿಲ್ಲವೆಂದು ಓದಿದ ಹೆಣ್ಣುಮಕ್ಕಳ ಮೇಲೆ ಕೋಪವೇಕೆ? ಎಂದು ಮರು ಪ್ರಶ್ನಿಸಿದಾಗ ನಾವು ಓದದಿದ್ದರು ೮-೧೦ ಮಕ್ಕಳನ್ನು ಹೊತ್ತು ಹೆತ್ತು ಸಂಸಾರ ಮಾಡಿಕೊಂಡಿಲ್ಲವೆ, ಚಿಕ್ಕವಳಾದ ನಿನ್ನ ಸಂಗಡ ಏನು ಮಾತು ನಿಮ್ಮ ತಾಯಿಯವರ ಬಳಿ ಮಾತನಾಡುತ್ತೇನೆ ಎಂದಾಗ ಅಲ್ಲಿಗೆ ಬಂದ ಮನೋರಮಾ ಎಂಬಾಕೆ ತಾಯಿ ಹೆಂಗಸು ವಿದ್ಯೆ ಕಲಿಯಬಾರದೆ? ಅವಳಿಗೂ ಮನುಷ್ಯತ್ವ ಇಲ್ಲವೆ? ಸ್ತ್ರೀಯರಿಗೆ ಇರುವ ಹೊಣೆಗಾರಿಕೆ ಎಷ್ಟೆಂಬುದು ನಿಮಗೆ ತಿಳಿಯದೆ, ಸ್ತ್ರೀಯರ ವಿದ್ಯಾಭ್ಯಾಸವೆಂದರೆ ಏನೆಂದು ತಿಳಿದುಕೊಂಡಿರುವಿರಿ ಎಂದಾಗ ಸುಬ್ಬಮ್ಮ ಏನಾದರು ಬರೆದು ತಿಳಿಸುವುದಕ್ಕೆ ಮತ್ತು ಎಲ್ಲಿ ಬೇಕಾದರು ಹೋಗುವುದಕ್ಕೆ ವಿದ್ಯಾಭ್ಯಾಸ ಬೇಕು ಅಷ್ಟೇ ತಾನೇ ಎಂದು ನುಡಿದಾಗ ಮನೋರಮಾ ವಿದ್ಯೆ ಕಲಿಯುವ ಅರ್ಥವನ್ನು ನೀವು ಸರಿಯಾಗಿ ತಿಳಿದಿಲ್ಲ. ಸಂಸಾರವನ್ನು ಸುಲಲಿತವಾಗಿ ಸಾಗಿಸಲು ಸ್ತ್ರೀಪುರುಷರಿಬ್ಬರು ವಿದ್ಯಾಭ್ಯಾಸ ಮಾಡಬೇಕು. ಓದುಬರಹ ಮಾತ್ರ ವಿದ್ಯೆಯಲ್ಲ, ಅನೇಕ ಕುಶಲ ವಿದ್ಯೆಗಳು ಇದ್ದು, ಗೃಹಿಣಿಯರಿಗೆ ಬೇಕಾದ ಕಸೂತಿ, ನಕ್ಷೆಯ ಕೆಲಸ ಉಡುಗೆ ತೊಡುಗೆಗಳನ್ನು ಹೊಲೆಯುವುದನ್ನು ಓದಿನ ಜತೆಗೆ ಕಲಿಸುತ್ತಿದ್ದು ಇದರಿಂದ ಸಂಸಾರವನ್ನು ಸುಖವಾಗಿ ನಡೆಸಬಹುದು. ಸುಬ್ಬಮ್ಮ ಯೋಚಿಸಿ ಹುಟ್ಟಿದಾಗಿನಿಂದ ಹೊರಗಿನ ಪ್ರಪಂಚವನ್ನು ತಿಳಿಯದೆ ಇರುವ ನನಗೆ ಇದರ ಅರಿವಿಲ್ಲ. ನಮ್ಮದಂತು ಕಥೆ ಮುಗಿಯಿತು, ನೀವು ಕಲಿತು ಸುಖವಾಗಿ

ಬಾಳಿ ಎಂದಾಗ ಮನೋರಮ ನಾವು ಸತಿ ಸಾವಿತ್ರಿಯಂತೆ, ವೀರಮಾತೆ ಲಕ್ಷ್ಮೀಬಾಯಿಯಾಗುವಂತೆ ಆಶೀರ್ವಾದ ಮಾಡಿ ಎಂದು ಸುಬ್ಬಮ್ಮನಿಂದ ಆಶೀರ್ವಾದವನ್ನು ಪಡೆದುಕೊಂಡ ಬಗ್ಗೆ ಈ ಸಂಭಾಷಣೆ ಇದ್ದು ಮಹಿಳೆಯರಿಗೆ ವಿದ್ಯೆಯ ಅವಶ್ಯಕತೆಯನ್ನು ಸಾರಿ ಹೇಳುವ ಮೂಲಕ ಬೆಳಕು ಪತ್ರಿಕೆಯು ಗ್ರಾಮೀಣ ಭಾಗದ ಮಹಿಳೆಯರಲ್ಲಿ ವಿದ್ಯೆಯ ಬಗ್ಗೆ ಜಾಗೃತಿ ಮೂಡಿಸುವ ಕೆಲಸವನ್ನು ಮಾಡುತ್ತಿತ್ತು.[೫]

ದಿನಾಂಕ ೨೪.೦೮.೧೯೪೬ರ ಸಂಚಿಕೆಯಲ್ಲಿ ದಿನಾಂಕ ೧೪.೦೮.೧೯೪೬ರಂದು ಮೈಸೂರಿನ ಬೆಳವಾಡಿಯಲ್ಲಿ ಕಸ್ತೂರಬಾ ಶಿಬಿರ ಪ್ರಾರಂಭವಾದ ಬಗ್ಗೆ, ಆ ಶಿಬಿರದಲ್ಲಿ ಸುಚೇತಾಕೃಪಲಾನಿ ಹಾಗೂ ಗಾಂಧೀಜಿಯವರ ಶಿಷ್ಯರಾದ ಮದ್ರಾಸಿನ ಜಿ. ರಾಮಚಂದ್ರನ್‌ರವರು ಭಾಗವಹಿಸಿದ್ದು ಕಸ್ತೂರಬಾ ಶಿಬಿರ ಪ್ರಾರಂಭವಾಗಲು ಮಹಿಳೆಯರ ಬಗ್ಗೆ ಕಸ್ತೂರಬಾರವರಿಗೆ ಇದ್ದಂತಹ ಕಾಳಜಿಯೇ ಕಾರಣ. ಆಕೆ ದಿನ ೫೦ ಜನರಿಗೆ ಊಟವನ್ನು ಬಡಿಸುತ್ತಿದ್ದು ಹೆಚ್ಚೇನು ವಿದ್ಯಾವಂತರಲ್ಲದ ಕಸ್ತೂರಬಾ ಗಾಂಧೀಜಿಯವರ ಜೀವನದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ ಮಹಿಳೆ ಎಂಬುದಾಗಿ ಇಂಗ್ಲಿಷ್‌ನಲ್ಲಿ ರಾಮಚಂದ್ರರವರು ಮಾಡಿದ ಭಾಷಣವನ್ನು ಯಶೋಧರ ದಾಸಪ್ಪನವರು ಕನ್ನಡಕ್ಕೆ ಭಾಷಾಂತರಿಸಿದರು. ಸುಚೇತಾ ಕೃಪಲಾನಿಯವರು ಮಾತನಾಡಿದರು. ಗಾಂಧೀಜಿಯವರಿಗೆ ಪ್ರಿಯವಾದ ಖಾದಿ ನೂಲಿನ ಹಾರವನ್ನು ಹಾಕಿ ಅವರನ್ನು ಸ್ವಾಗತಿಸಿದರು. ಈ ಕಾರ್ಯಕ್ರಮಕ್ಕೆ ಹಳ್ಳಿಯಿಂದ ಜನ ಗುಂಪುಗುಂಪಾಗಿ ಬಂದಿದ್ದವರ ಬಗ್ಗೆ ಸುದ್ದಿ ಪ್ರಕಟವಾಗಿದೆ.[೬]

ದಿನಾಂಕ ೩೧.೦೮.೧೯೪೬ರ ಸಂಚಿಕೆಯಲ್ಲಿ ಸುಚೇತಾ ಕೃಪಲಾನಿ ಮೈಸೂರಿನ ಕಸ್ತೂರಬಾ ಶಿಬಿರಕ್ಕೆ ಭೇಟಿ ನೀಡಿದ್ದು, ಭಾರತ ಹಳ್ಳಿಗಳ ದೇಶ, ಬಡತನವಿದ್ದು ಅಜ್ಞಾನ ಹೋಗಬೇಕಾದರೆ ಹೆಣ್ಣುಮಕ್ಕಳಿಂದಲೇ ಸಾಧ್ಯ. ಹೆಣ್ಣುಮಕ್ಕಳು ಮನೆಯಲ್ಲಿ ಕುಳಿತರೆ ಆಗದು. ಓದುಬರಹ ಮನೆಯ ಒಳಗೆ ಹೊರಗೆ ಮಕ್ಕಳಿಗೆ ತಿಳುವಳಿಕೆಯನ್ನು ಹೆಚ್ಚಿಸುತ್ತದೆ ಮತ್ತು ಮಕ್ಕಳನ್ನು ಬೆಳೆಸುವ ಜವಾಬ್ದಾರಿ ಹೆಣ್ಣುಮಕ್ಕಳಿಗಿರುವುದರಿಂದ ಅವರು ಕಲಿತು ಮುಂದೆ ಬರಬೇಕು. ಅದಕ್ಕಾಗಿ ಕಸ್ತೂರಬಾ ಸಂಸ್ಥೆ ಹೆಣ್ಣುಮಕ್ಕಳಿಗೆ ಮೀಸಲಾಗಿದ್ದು, ಅದರ ಸದುಪಯೋಗವನ್ನು ಪಡೆದುಕೊಳ್ಳಬೇಕೆಂದು ಭಾಷಣ ಮಾಡಿದ ಬಗ್ಗೆ, ಮೈಸೂರು ಸಂಸ್ಥಾನದಲ್ಲಿ ಯಶೋಧರ ದಾಸಪ್ಪನವರು, ಧಾರವಾಡದಲ್ಲಿ ಉಮಾಬಾಯಿ ಕುಂದಾಪುರರವರು ಈ ಕೆಲಸವನ್ನು ನಿರ್ವಹಿಸುವ ಬಗ್ಗೆ ಲೇಖನ ಪ್ರಕಟವಾಗಿದೆ.[೭]

ದಿನಾಂಕ ೨೩.೧೧.೧೯೪೬ರ ಸಂಪಾದಕೀಯದಲ್ಲಿ 'ಮೈಸೂರು ಮಹಿಳಾ ಸಮ್ಮೇಳನದ ರಚನೆ' ಎಂಬ ಶೀರ್ಷಿಕೆಯಡಿಯಲ್ಲಿ ಸಮ್ಮೇಳನ ಎಂದರೇನು? ೧೬, ೧೭ ನವೆಂಬರ್ ೧೯೪೫ ರಂದು ಸಮ್ಮೇಳನ ನಡೆಯಿತು. ೨೫ ಅಂಗಸಂಸ್ಥೆಗಳು ಭಾಗವಹಿಸಿದ್ದವು. ೧೦೬ ಪ್ರತಿನಿಧಿಗಳು ಕೂಡಿದ್ದರು ಎಂದರೆ ನಿಮಗೆ ಸರಿಯಾಗಿ ಅರ್ಥವಾಗುವುದೋ?

ಇಲ್ಲವೋ? ನಾಲ್ಕಾರು ಜನರು ಸೇವೆ ಮಾಡಬೇಕು ಅನ್ನುವ ಮನೋಭಾವವಿರುವ ಬೇರೆ ಬೇರೆ ಜಾತಿ ಮತದ ಹೆಣ್ಣುಮಕ್ಕಳು ಸೇರಿಕೊಂಡು, ಒಂದು ಸಂಘವನ್ನು ರಚಿಸಿಕೊಂಡು ಅದಕ್ಕೆ ತಿಂಗಳಿಗೆ ೮ ಆಣೆ ಕೊಟ್ಟು ಸದಸ್ಯತ್ವವನ್ನು ಪಡೆದುಕೊಂಡು, ಮಹಿಳಾ ಸಮಾಜ ಎಂದು ಕರೆದುಕೊಂಡು ಕೆಲಸವನ್ನು ನಿರ್ವಹಿಸುವುದು. ಈ ಸಮಾಜಗಳೆಲ್ಲ ಒಂದೆಡೆ ಸೇರಿ ಮಹಿಳೆಯರ ಅಭಿವೃದ್ಧಿಗಾಗಿ ಚರ್ಚಿಸುವುದನ್ನು ಸಮ್ಮೇಳನ ಎಂದು ಕರೆಯುವರು.

ಪ್ರತಿ ಮಹಿಳಾ ಸಮಾಜದಲ್ಲಿ ಹಿಂದಿ ಕಲಿಯುವುದು, ಹೊಲಿಗೆ ಕಲಿಯುವುದು, ಹಾಡನ್ನು ಕಲಿಯುವುದು, ಈ ರೀತಿ ಕಾರ್ಯಗಳನ್ನು ಹಮ್ಮಿಕೊಳ್ಳುವುದು, ಒಬ್ಬರ ನೇತೃತ್ವದಲ್ಲಿ ಸಮ್ಮೇಳನದಲ್ಲಿ ಮಹಿಳೆಯರ ಸಮಸ್ಯೆಗಳ ಬಗ್ಗೆ ಚರ್ಚಿಸುವ ನಿರ್ಣಯಗಳನ್ನು ಕಳುಹಿಸುವುದು. ಆ ಸಮ್ಮೇಳನದಲ್ಲಿ ಚರ್ಚಿತವಾದ ವಿಷಯಗಳು ನಿರ್ಣಯಗಳಾಗಿ ಅವುಗಳನ್ನು ಸರ್ಕಾರಕ್ಕೆ ಕಳುಹಿಸಿ ಸಮಸ್ಯೆಗಳನ್ನು ಬಗೆಹರಿಸಲು ಸರ್ಕಾರಕ್ಕೆ ಮನವಿ ಮಾಡುವುದು.

ಬೆಂಗಳೂರಿನಲ್ಲಿರುವ ಸಮಾಜವು ಅಕ್ಷರಪ್ರಚಾರ ಸಮಿತಿಯ ಸಹಕಾರದೊಂದಿಗೆ ಮಹಿಳೆಯರಿಗೆ ವಯಸ್ಕರ ಶಿಕ್ಷಣ ತರಗತಿಗಳನ್ನು ನಡೆಸಿದ ಬಗ್ಗೆ ಬೆಂಗಳೂರಿನಲ್ಲಿರುವ ಮಹಿಳಾ ಸಮಾಜವು ಅತ್ಯಂತ ಚಟುವಟಿಕೆಯ ಕೇಂದ್ರವಾಗಿದ್ದು, **'ತೊಟ್ಟಿಲು ತೂಗುವ ಕೈ ಜಗವನ್ನು ಆಳಬಲ್ಲದು. ಬಾರಿ ವ್ಯವಹಾರವನ್ನು ನಡೆಸಬಹುದು'** ಎಂಬುದಕ್ಕೆ ಸಾಕ್ಷಿಯಾಗಿದೆ.

ಬೆಂಗಳೂರಿನಲ್ಲಿ ೩೦ನೇ ಮಹಿಳಾ ಸಮ್ಮೇಳನ ನಡೆದು ಅದರ ಅಧ್ಯಕ್ಷರಾಗಿ ಶ್ರೀಮತಿ ಲೇಡಿ ರಾಮಸ್ವಾಮಿ ಮೊದಲಿಯರ್ ಅಧ್ಯಕ್ಷತೆ ವಹಿಸಿದ್ದು ಸಭೆಯನ್ನು ಉದ್ದೇಶಿಸಿ ಮಾತನಾಡಿದ ಅವರು, ಮಹಿಳಾ ಸಂಘಗಳು ಕೇವಲ ಶ್ರೀಮಂತರ, ಮಧ್ಯಮ ವರ್ಗದವರ ಸ್ವತ್ತಾಗಿದೆ ಎಂದು ಹೇಳಲಾಗುತ್ತಿದೆ. ಆದರೆ ಹಳ್ಳಿಗಾಡಿನ ಮಹಿಳೆಯು ಈ ಸಂಸ್ಥೆಗೆ ಸೇರಬೇಕು. ವಯಸ್ಕರ ಶಿಕ್ಷಣ ಹರಡುವಲ್ಲಿ ಮಹಿಳಾ ಸಂಘಗಳು ಪ್ರಮುಖ ಪಾತ್ರ ವಹಿಸುತ್ತಿದ್ದು ಹೆಂಗಸರಲ್ಲಿ ವಿದ್ಯಾಪ್ರಚಾರ ಹೇಗೆ ನಡೆಯಬೇಕು ಎಂದು ನಮ್ಮ ದೇಶದಲ್ಲಿ ಅನೇಕ ತೊಂದರೆಗಳಿದ್ದು ಬಹುಪಾಲು ಅಜ್ಞಾನದಿಂದ ಉಂಟಾಗಿದ್ದು, ಮೊದಲು ಸ್ತ್ರೀಯರಿಗೆ ವಿದ್ಯೆ ಕಲಿಸಬೇಕು. ವಿದ್ಯೆಯಿಂದ ಆರೋಗ್ಯ ಶುಚಿತ್ವ ಎಲ್ಲಾ ಲಭಿಸುತ್ತದೆ. ಈ ವಿದ್ಯೆಗಾಗಿ ನಾವೆಲ್ಲರೂ ಶ್ರಮಿಸೋಣ. ಸಮ್ಮೇಳನದಲ್ಲಿ ೫ ನಿರ್ಣಯಗಳು ಸರ್ವಾನುಮತದಿಂದ ಪಾಸಾಯಿತು. ಹೀಗೆ ನಿರ್ಣಯಿಸಿದ ಅಂಶಗಳೆಂದರೆ:

೧) ಸ್ತ್ರೀಯರ ಆಸ್ತಿಯ ಹಕ್ಕು, ರಾಜಕೀಯ ಹಕ್ಕು, ವಿವಾಹದ ವಿಷಯದಲ್ಲಿ ಹೆಂಗಸಿನ ಸ್ಥಾನಮಾನಗಳಿಗೆ ಅಗ್ನಿಸಾಕ್ಷಿಯಾಗಿ ಮದುವೆಯಾದ ಮೇಲೆ ಬೇರೆಯಾಗುವುದಕ್ಕೆ ಅವಕಾಶ ಉಂಟೆ? ವಿವಾಹಬಂಧನ ಪವಿತ್ರವಾಗಿದ್ದು ಬಿಡುಗಡೆಯಿಂದ ತೊಂದರೆಯಾಗುವುದರಿಂದ, ಅದು ನಮಗೆ ಬೇಡ ಎಂಬ ಅಭಿಪ್ರಾಯ, ಜತೆಗೆ ಎಲ್ಲಾ

ಹಕ್ಕುಬಾಧ್ಯತೆಗಳನ್ನು ಇತ್ಯರ್ಥ ಮಾಡಲು ಒಂದು ಸಮಿತಿಯ ನೇಮಕವಾಗಬೇಕೆಂಬ ನಿರ್ಣಯ ಕೈಗೊಳ್ಳಲಾಯಿತು.

೨) ಬಂಗಾಳ, ಬಿಹಾರಗಳಲ್ಲಿ ಮಹಿಳೆಯರಿಗೆ ಉಂಟಾಗಿರುವ ಕಷ್ಟನಷ್ಟಗಳಿಗೆ ಮರುಗಿ ನೊಂದವರಿಗೆ ಕೈಲಾದಷ್ಟು ಸಹಾಯ ಮಾಡಲು ಸಮ್ಮೇಳನದಲ್ಲಿ ತೀರ್ಮಾನಿಸಲಾಯಿತು.

೩) ಮಹಾರಾಜರಿಗೆ ಪುತ್ರರತ್ನ ಹುಟ್ಟಿದ್ದಕ್ಕೆ ಹಾಗೂ ಭಾರತದ ಪರವಾಗಿ ಅಮೆರಿಕಾದ ಸರ್ವರಾಷ್ಟ್ರ ಸಮ್ಮೇಳನದಲ್ಲಿ ವಾದಿಸಲು ಹೋಗಿರುವ ವಿಜಯಲಕ್ಷ್ಮೀಪಂಡಿತರಿಗೆ ಅಭಿನಂದನೆ ಸೂಚಿಸುವ ನಿರ್ಣಯವನ್ನು ಕೈಗೊಳ್ಳಲಾಯಿತು.

೪) ರಾಜ್ಯಾಂಗ ರಚನೆ ಸಭೆ ಡಿಸೆಂಬರ್ ೯ ರಂದು ನಡೆದು ಮೈಸೂರು ಸಂಸ್ಥಾನದಿಂದ ೭ ಜನ ಸದಸ್ಯರು ಆಯ್ಕೆಯಾಗುವ ಸೂಚನೆ ಇದ್ದು, ಅದರಲ್ಲಿ ಮಹಿಳೆಯರು ಇರಬೇಕೆಂದು ನಿರ್ಣಯವನ್ನು ಕೈಗೊಳ್ಳಲಾಯಿತು.

೫) ಹೆಂಗಸರಿಗೆ ರೈಲಿನಲ್ಲಿ ೩ ತರಗತಿಯಲ್ಲಿ ಹೆಚ್ಚಿಗೆ ಸೌಕರ್ಯ ಒದಗಿಸುವ ಬಗ್ಗೆ, ಉಪಾಧ್ಯಾಯಿನಿಯರ ಸಂಬಳ ಹೆಚ್ಚಿಸುವ ಬಗ್ಗೆ, ಅವರಿಗೆ ವಾಸಕ್ಕೆ ಮನೆ ಕಟ್ಟಿಸಿಕೊಡುವ ಬಗ್ಗೆ, ಆಸ್ಪತ್ರೆಗಳ ಸಂಖ್ಯೆ ಹೆಚ್ಚಿಸುವ ಬಗ್ಗೆ, ದಾದಿಯರಿಗೆ ಸಂಬಳ ವೇತನಗಳನ್ನು ಹೆಚ್ಚಿಸುವ ಬಗ್ಗೆ ಸಮ್ಮೇಳನದಲ್ಲಿ ನಿರ್ಣಯಿಸಲಾಯಿತು.[೮]

ದಿನಾಂಕ ೦೭.೧೨.೧೯೪೬ರ ಸಂಪಾದಕೀಯದಲ್ಲಿ 'ಮಹಿಳಾ ಸಮಿತಿಯ ಸಭೆ' ಶೀರ್ಷಿಕೆಯಡಿಯಲ್ಲಿ ದಿನಾಂಕ ೨೯.೧೧.೧೯೪೬ ರಂದು ಶುಕ್ರವಾರ ಸಂಜೆ ಮಹಿಳೆಯರ ಸಭೆ ನಡೆದು ಮೈಸೂರು ಸಂಸ್ಥಾನದಲ್ಲಿ ಮಹಿಳೆಯರ ತರಗತಿಗಳನ್ನು ಹೆಚ್ಚಿಸುವುದರ ಬಗ್ಗೆ ಚರ್ಚಿಸಲಾಯಿತು. ಈಗ ೨೫೦ ತರಗತಿಗಳು ಇದ್ದು, ಇನ್ನೂ ೩೦೦ ತರಗತಿಗಳನ್ನು ತೆರೆಯಲು ಅವಕಾಶ ಇದ್ದು, ಮಹಿಳೆಯರು ವಿದ್ಯಾವಂತರಾದರೆ ಇಡೀ ಸಂಸಾರವೇ ಉದ್ಧಾರವಾದಂತೆ. ಆದುದರಿಂದ ಹಳ್ಳಿಗಳಲ್ಲಿ ತರಗತಿಗಳು ತೆರೆಯುವುದು, ಅವರಿಗೆ ಈ ಬಗ್ಗೆ ತಿಳುವಳಿಕೆ ನೀಡಲು, ತರಗತಿಗಳನ್ನು ನಡೆಸಲು, ಉಪಾಧ್ಯಾಯರ ಅವಶ್ಯಕತೆ ಇದ್ದು, ಈ ಎಲ್ಲ ವಿಚಾರಗಳನ್ನು ಚರ್ಚಿಸಲು ಸಭೆ ಸೇರಲಾಯಿತು. ಮಹಾರಾಣಿಯವರಾದ ಶ್ರೀಲಕ್ಷ್ಮೀವಿಲಾಸ ಸನ್ನಿಧಾನರವರು ಸಂದೇಶವನ್ನು ಕಳುಹಿಸಿ ಶುಭ ಹಾರೈಸಿದರು.

ಎಂ.ಆರ್. ಲಕ್ಷಮ್ಮನವರು ವಯಸ್ಕರ ಶಿಕ್ಷಣ ಸಮಿತಿಯ ಪರವಾಗಿ, ಚಿಕ್ಕಮಗಳೂರಿನ ಮಹಿಳಾಶ್ರಮದ ಇಂದಿರಾಬಾಯಿ, ಹಾಸನದ ಮಹಿಳಾ ಸಮಾಜದ ನಂಜಮ್ಮ, ತುಮಕೂರಿನ ಹೈಸ್ಕೂಲು ಮುಖ್ಯ ಉಪಾಧ್ಯಾಯಿನಿ ಇಂದಿರಮ್ಮ, ದೊಡ್ಡಬಳ್ಳಾಪುರದ ಮಹಿಳಾ ಸಮಾಜದ ಭೀಮಕ್ಕ, ರುಕ್ಮಿಣಿಯಮ್ಮ ನರಸಿಂಹಯ್ಯ, ಬೆಂಗಳೂರಿನ ಕಮಲಾಬಾಯಿ, ಹೈಸ್ಕೂಲಿನ ಭಾಗೀರಥೀಬಾಯಿ, ಮೈಸೂರಿನ ತರಗತಿಗಳ ಸಂಚಾಲಕಿ ಎಂ.ಎನ್. ಸೀತಮ್ಮ, ನಗರದ ಅಕ್ಷರ

ಪ್ರಚಾರ ಸಮಿತಿಯ ಸದಸ್ಯೆ ಕಾಮೇಶ್ವರಮ್ಮ, ರೆಡ್‌ಕ್ರಾಸ್ ಸಂಸ್ಥೆಯ ಕಾರ್ಯದರ್ಶಿನಿ ಲಕ್ಷ್ಮಿಕೃಷ್ಣಪ್ಪ ಇವರನ್ನೆಲ್ಲಾ ಆಹ್ವಾನಿಸಿ, ಸಭೆ ನಡೆಯಲು ಕಾರಣಕರ್ತರಾದರು. ಸಭೆಯ ಅಧ್ಯಕ್ಷತೆಯನ್ನು ಲಕ್ಷ್ಮಿಕೃಷ್ಣಪ್ಪ ವಹಿಸಿದ್ದು ಮೂರು ಗಂಟೆಗಳ ಕಾಲ ಚರ್ಚೆ ನಡೆದು ಹಲವಾರು ನಿರ್ಣಯಗಳನ್ನು ಕೈಗೊಳ್ಳಲಾಯಿತು. ಸಭೆ ಸೇರಿರುವ ಸದಸ್ಯರೆಲ್ಲಾ ಸ್ಥಾಯಿ ಸಮಿತಿಯ ಸದಸ್ಯರಾಗಿದ್ದು ಒಂದೊಂದು ಜಿಲ್ಲೆಯಲ್ಲೂ ಮಹಿಳಾ ಸಮಿತಿ ಏರ್ಪಡಿಸಿ ತಾಲ್ಲುಕುಗಳಿಗೆ ಅಕ್ಷರಪ್ರಚಾರ ಮಾಡಲು ಮತ್ತು ತರಗತಿಗಳ ಮೇಲ್ವಿಚಾರಣೆ ಮಾಡಲು ಒಬ್ಬ ಮೇಲ್ವಿಚಾರಕರನ್ನು ನೇಮಿಸುವುದು ಹತ್ತು ವಿದ್ಯಾರ್ಥಿನಿಯರಿಗೆ ಒಂದು ತರಗತಿಯಂತೆ ಮೂವತ್ತು ವಿದ್ಯಾರ್ಥಿನಿಯರ ಮೂರು ತರಗತಿಗಳನ್ನು ನಡೆಸುವ ಉಪಾಧ್ಯಾಯಿನಿಗೆ ತಿಂಗಳಿಗೆ ೧೫ ರೂಪಾಯಿ ಸಂಬಳವನ್ನು ಹಾಗೂ ಆರು ತಿಂಗಳು ತರಗತಿ ಮುಗಿದ ಮೇಲೆ ಪರೀಕ್ಷೆ ನಡೆಸಿ ಪರೀಕ್ಷೆ ಮುಗಿದ ಮೇಲೆ ೩೦ ರೂಪಾಯಿಯನ್ನು ಉಪಾಧ್ಯಾಯಿನಿಗೆ ಕೊಡುವುದೆಂದು ನಿರ್ಣಯಿಸಲಾಯಿತು. ಮುತುವರ್ಜಿ ವಹಿಸಿ ಮಹಿಳೆಯರನ್ನು ಕೂಡಿಸಿ ಜ್ಞಾನಬೋಧೆ ಮಾಡುವ ಶಿಕ್ಷಕಿಗೆ ಬಹುಮಾನವನ್ನು ಕೊಡಲು ತೀರ್ಮಾನಿಸಲಾಯಿತು. ಅಕ್ಷರ ಕಲಿಕೆಯ ಜೊತೆಗೆ ಕುಶಲವಿದ್ಯೆ, ಹೊಲಿಗೆ, ಹೆಣಿಗೆ, ಇತ್ಯಾದಿಗಳನ್ನು ಕಲಿಸಲು ಸಾಧ್ಯವೇ ಎಂದು ಪರಿಶೀಲಿಸುವುದು, ರೆಡ್‌ಕ್ರಾಸ್ ಸಂಸ್ಥೆ ಕಸ್ತೂರಬಾ ಶಿಬಿರ, ರಾಮಕೃಷ್ಣಾಶ್ರಮ ಮುಂತಾದ ಸಂಘಸಂಸ್ಥೆಗಳ ಸಹಾಯವನ್ನು ಪಡೆದುಕೊಂಡು ಈ ಕಾರ್ಯವನ್ನು ನಿರ್ವಹಿಸುವುದು. ಅಧ್ಯಕ್ಷರು ಭಾಷಣದಲ್ಲಿ 'ಹಳ್ಳಿಗಳಲ್ಲಿ ತಾಲ್ಲೂಕುಗಳಲ್ಲಿ ಸಮಾಜಸೇವೆ ಮಾಡಲು ಹಾತೊರೆಯುವ ವಿದ್ಯಾವಂತರನ್ನು ಕಂಡುಹಿಡಿದು, ಈ ಕಾರ್ಯದಲ್ಲಿ ಬಳಸಿಕೊಂಡು ಮುಂದಿನ ವರ್ಷ ಎರಡು ಸಾವಿರ ತರಗತಿಗಳನ್ನು ಪ್ರಾರಂಭಿಸುವ ಗುರಿಯನ್ನು ಇಟ್ಟುಕೊಳ್ಳುವ ಬಗ್ಗೆ' ಮಾತನಾಡಿದರು. ಈ ಸಂಪಾದಕೀಯದಲ್ಲಿ ಎಂ.ಆರ್. ಲಕ್ಷಮ್ಮನವರು ಬರಿ 'ಬೆಳಕು' ಪತ್ರಿಕೆಯ ಸಂಪಾದಕಿಯಾಗಿ ಮಾತ್ರವಲ್ಲದೆ, ಮಹಿಳಾ ವರ್ಗದವರ ಅಭಿವೃದ್ಧಿಯ ಬಗ್ಗೆ ಕೂಡ ಚಿಂತಿಸುವ ಮಹಿಳಾ ಸುಧಾರಕಿಯಾಗಿದ್ದರೆಂದು ಹೇಳಬಹುದು.[೯]

ದಿನಾಂಕ ೧.೨.೧೯೪೭ರ ಸಂಚಿಕೆಯಲ್ಲಿ 'ಮಹಿಳಾ ತರಗತಿಗಳು' ಶೀರ್ಷಿಕೆಯಡಿಯಲ್ಲಿ ಸಂಪಾದಕೀಯ ಪ್ರಕಟವಾಗಿದ್ದು, ವಯಸ್ಕರ ಶಿಕ್ಷಣ ಸಮಿತಿಯವರು ಈ ವರ್ಷ ಆರು ಸಾವಿರ ಪುರುಷ ವಯಸ್ಕರ ತರಗತಿ ಹಾಗೂ ೬೦೦ ಮಹಿಳಾ ತರಗತಿಗಳನ್ನು ತೆರೆಯಲು ತೀರ್ಮಾನಿಸಿದ್ದು, ಕೇವಲ ೧೭೨ ಮಹಿಳಾ ವಯಸ್ಕರ ಶಿಕ್ಷಣ ಶಾಲೆಗಳು ಇರುವ ಬಗ್ಗೆ ಮಂಡ್ಯ ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ ಅತ್ಯಂತ ಕಡಿಮೆ ತರಗತಿಗಳು ಇರುವ ಬಗ್ಗೆ ವಯಸ್ಕರ ಶಿಕ್ಷಣ ಸಮಿತಿಯ ಸಭೆಯಲ್ಲಿ ಚರ್ಚಿತವಾಗಿ ಅನೇಕ ಸಲಹೆಗಳನ್ನು ನೀಡಲಾಯಿತು. ಮಹಿಳೆಯರ ತರಗತಿಗಳಿಗೆ ಬೇಕಾದ ಸೌಕರ್ಯಗಳನ್ನು ನೀಡುವ ಬಗ್ಗೆ ಸಭೆಯಲ್ಲಿ ಚರ್ಚಿತವಾಗಿ, ಅಡುಗೆಯ ಮನೆಗೆ ಅಕ್ಷರಪ್ರವೇಶ ಹೊರಳಲಿ, ಸೌಟು ಹಿಡಿಯುವ ಕೈಯಿಂದ ಪಾಠ ತಿದ್ದುವಂತಾಗಲಿ ಎಂಬ ಆಶಯವನ್ನು ಸಂಪಾದಕೀಯದಲ್ಲಿ ಪ್ರಕಟಿಸಲಾಗಿದೆ.[೧೦]

ದಿನಾಂಕ ೦೪.೧೧.೧೯೪೭ರ ಸಂಚಿಕೆಯಲ್ಲಿ 'ನಾಡಿನ ಸೇವೆಯಲ್ಲಿ ಹೆಚ್ಚು ಮಕ್ಕಳು ಮುನ್ನುಗ್ಗಬೇಕು' ಎಂಬ ಶೀರ್ಷಿಕೆಯಡಿಯಲ್ಲಿ ಬೆಂಗಳೂರಿನ ಮಹಾರಾಣಿ ಕಾಲೇಜಿನಲ್ಲಿ ನಡೆದ ವಾರ್ಷಿಕೋತ್ಸವದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾ ಪ್ರಸಕ್ತ ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಹೆಣ್ಣುಮಕ್ಕಳು ನಾಡಿನ ಸೇವೆಯಲ್ಲಿ ಮುಂದೆ ನುಗ್ಗಬೇಕು, ಕಾರ್ತಿಕ ಮಾಸದ ಹಣತೆಯಂತೆ ಬೆಳಗಬೇಕು. ಗಂಡಿಗೂ, ಹೆಣ್ಣಿಗೂ ಹೆಚ್ಚು ಹೋಲಿಕೆ ಇದೆ. ಕಾಳಿಗಿಂತ ಗಂಡು ಬೇಕೇ? ಕೃಷ್ಣನಿಗಿಂತ ಹೆಣ್ಣು ಬೇಕೇ? ದೇವರು ತಂದೆಯೂ ಹೌದು, ತಾಯಿಯೂ ಹೌದು. ನಾವುಗಳು ಕೇವಲ ಅಬಲೆಯರು ಎಂದು ಕೊರಗದೆ ತಪ್ಪು ಹಾದಿ ಹಿಡಿದ ಗಂಡಸರನ್ನು ಒಳ್ಳೆಯ ಹಾದಿಗೆ ತರಲು ನಮ್ಮ ನಾಡಿನ ಹೆಣ್ಣುಮಕ್ಕಳು ಕಂಕಣತೊಡಬೇಕು. ನಮ್ಮ ಭಾಷಾ, ಸಾಹಿತ್ಯ, ಜೀವನ ಮುಂತಾದವುಗಳನ್ನು ತಾಯಿಯರು ಮಕ್ಕಳಿಗೆ ತಿಳಿಸಬೇಕು ಮತ್ತು ಬೆಳೆಸಬೇಕು ಎಂಬ ಭಾಷಣವನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗಿದ್ದು, ಹೆಣ್ಣುಮಕ್ಕಳ ಬಗೆಗಿನ ಕಾಳಜಿಯನ್ನು ಇದು ಬಿಂಬಿಸುತ್ತದೆ.[೧೧]

ದಿನಾಂಕ ೧೯.೦೪.೧೯೪೭ರ ಸಂಚಿಕೆಯಲ್ಲಿ ಇಂಡೋನೇಷಿಯಾದಿಂದ ಅಖಿಲ ಏಷ್ಯಾ ಸಮ್ಮೇಳನದಲ್ಲಿ ಭಾಗವಹಿಸಲು ಬಂದಿದ್ದ ಇಂಡೋನೇಷಿಯಾದ ಪ್ರಧಾನಿ, ಆಹಾರ ಕಾರ್ಯದರ್ಶಿಯಾದ ಡಾ. ಥಾಂಜಿಲ್ ಮಹಿಳಾ ಪ್ರತಿನಿಧಿಯಾಗಿ ಬಂದಿದ್ದು, ಬೇಗಂ ಹಂದಾನಿ ಮತ್ತಿತರರು ಮೈಸೂರಿಗೆ ಭೇಟಿ ನೀಡಿದಾಗ 'ಬೆಳಕು' ಪತ್ರಿಕೆಯ ಸಂಪಾದಕಿ ಎಂ. ಆರ್. ಲಕ್ಷಮ್ಮನವರು ಬೇಗಂ ಹಂದಾನಿಯವರೊಡನೆ ನಡೆಸಿದ ಮಾತುಕಥೆಯನ್ನು 'ಬೆಳಕು' ಪತ್ರಿಕೆ ಮುಖ ಪುಟದಲ್ಲಿ ನೀಡಲಾಗಿದೆ. ಮೈಸೂರಿನ ಪರಿಸರವನ್ನು ಮೆಚ್ಚಿಕೊಂಡ ಬೇಗಂ ಹಂದಾನಿಯವರು ಹಳ್ಳಿಗಳು ಇದೇ ರೀತಿಯಿದೆ ಎಂದೂ ಪ್ರಶ್ನಿಸಿದಾಗ 'ಬೆಳಕು' ಪತ್ರಿಕೆಯ ಸಂಪಾದಕಿ ಹಳ್ಳಿಗಳು ಇನ್ನೂ ಅಭಿವೃದ್ಧಿಯಾಗಬೇಕಾಗಿದೆ ಎಂದು ಹೇಳುತ್ತಾರೆ. ಭಾರತದಲ್ಲಿ ಹೆಂಗಸರು ಕಛೇರಿಗಳಲ್ಲಿ ಕೆಲಸ ಮಾಡುವ ಬಗ್ಗೆ, ಮಹಿಳಾ ಸಮಾಜಗಳಲ್ಲಿ ಕಾರ್ಯ ನಿರ್ವಹಿಸುವ ಬಗ್ಗೆ, ಹಳ್ಳಿಯ ಮಹಿಳೆಯರನ್ನು ಮುನ್ನಡೆಸಲು ಮಾಡುತ್ತಿರುವ ಪ್ರಯತ್ನದ ಬಗ್ಗೆ ಎಂ.ಆರ್. ಲಕ್ಷಮ್ಮನವರನ್ನು ಕೇಳಿದಾಗ ಇವರು ಮಹಿಳಾ ಡಾಕ್ಟರ್‌ಗಳು, ಶಾಲಾ ಉಪಾಧ್ಯಾಯನಿಯರು, ಕಛೇರಿಯಲ್ಲಿ, ಆಕಾಶವಾಣಿಯಲ್ಲಿ ಸ್ತ್ರೀಯರು ಕೆಲಸ ನಿರ್ವಹಿಸುತ್ತಿರುವಾಗ ಮಹಿಳಾ ಸಮಾಜಗಳು ಕಾರ್ಯ ನಿರ್ವಹಿಸುತ್ತಿರುವ ಬಗ್ಗೆ, ಬೆಂಗಳೂರಿನಲ್ಲಿ ಅಖಿಲ ಭಾರತ ಮಹಿಳಾ ಸಮ್ಮೇಳನದ ಶಾಖೆ ಇರುವ ಬಗ್ಗೆ, ಹಳ್ಳಿ ಹಳ್ಳಿಗಳಲ್ಲಿ ಮಹಿಳೆಯರಿಗೆ ಅಕ್ಷರಪ್ರಚಾರ ನಡೆಯುತ್ತಿರುವ ಬಗ್ಗೆ ಕಸ್ತೂರಿಬಾ ಶಿಬಿರ ನಡೆಯುತ್ತಿರುವ ಬಗ್ಗೆ ಮಾಹಿತಿಯನ್ನು ನೀಡುತ್ತಾರೆ. ಅದಕ್ಕೆ ಪ್ರತಿಯಾಗಿ ಬೇಗಂ ಹಂದಾನಿಯವರು ಭಾರತ ದೇಶವನ್ನು ಚೆನ್ನಾಗಿ ತಿಳಿಯಲು ನನಗೆ ಅವಕಾಶ ದೊರೆತಿಲ್ಲ. ಆದರೆ ಸೂಕ್ಷ್ಮವಾಗಿ ನೋಡಿದರೆ ದುಡಿಯುವುದಕ್ಕಿಂತ ಮಾತನಾಡುವ ಮಹಿಳೆಯರು ಹೆಚ್ಚೆಂದು ತೋರುತ್ತದೆ. ಅದಕ್ಕೆ ಉತ್ತರಿಸಿದ ಎಂ.ಆರ್. ಲಕ್ಷಮ್ಮನವರು ಭಾರತ ದೊಡ್ಡ ದೇಶ. ಮಾಡಲು ಬಹಳ ಕೆಲಸವಿದೆ.

ನಿಮ್ಮಲ್ಲಿ ಮಹಿಳೆಯರ ಸ್ಥಿತಿಗತಿಗಳು ಹೇಗಿವೆ ಎಂದು ಪ್ರಶ್ನಿಸಿದಾಗ ಬೇಗಂ ಹಂದಾನಿಯವರು ನಮ್ಮಲ್ಲಿ ಒಗ್ಗಟ್ಟಿದೆ. ಜಾತಿಕೋಮಿನ ಕಲಹವಿಲ್ಲ, ಬೇರೆ ಪಕ್ಷಗಳವರು ಡಚ್ಚರ ವಿರುದ್ಧವಾಗಿ ಒಗ್ಗೂಡಿ ಒಮ್ಮನಸ್ಸಿನಿಂದ ಹೋರಾಟ ಮಾಡುತ್ತಾರೆ. ಹೆಂಗಸರ ಸೇವಾಸಂಸ್ಥೆ ಇದೆ. ನೂರಾರು ಹೆಂಗಸರು ಅಲ್ಲಿ ದುಡಿಯುತ್ತಿದ್ದು, ಯುದ್ಧರಂಗದಲ್ಲೂ ಹೋರಾಡಬಲ್ಲ ಮಹಿಳಾ ದಳವಿದ್ದು, ಇದರ ಜೊತೆಯಲ್ಲಿ ಮನೆ ಮತ್ತು ಮಕ್ಕಳನ್ನು ನೋಡಿಕೊಳ್ಳುತ್ತಾರೆ. ಫಲವತ್ತಾದಂತಹ ಜಾವ ದ್ವೀಪದಲ್ಲಿ ೪ ಕೋಟಿ ಜನರಿದ್ದು, ಜನಬಲವಿದೆ ಎಂದು ಅವರು ತಿಳಿಸಿದಾಗ ಎಂ.ಆರ್. ಲಕ್ಷ್ಮಮ್ಮನವರು ಜನಬಲ, ಧನಬಲಕ್ಕಿಂತ ಒಗ್ಗಟ್ಟಿನ ಬಲವಿರುವ ನಿಮ್ಮ ದೇಶಕ್ಕೂ ದಕ್ಷಿಣ ಭಾರತಕ್ಕೂ ಸಾವಿರಾರು ವರ್ಷಗಳ ಸ್ನೇಹಸಂಬಂಧವಿದ್ದು, ದಕ್ಷಿಣ ಭಾರತದ ಅನೇಕ ದೇವಾಲಯಗಳನ್ನು ದೇಶದಲ್ಲಿ ಕಾಣಬಹುದಾಗಿದ್ದು ಮುಂದೆಯೂ ಇದೇ ಸ್ನೇಹಸಂಬಂಧ ಮುಂದುವರಿಸಲೆಂದು ಬೇಗಂ ಹಂದಾನಿಯವರ ಜೊತೆ ನಡೆಸಿದ ಮಾತುಕತೆಯ ವಿವರಗಳು ಪತ್ರಿಕೆಯಲ್ಲಿ ಪ್ರಕಟವಾಗಿದ್ದು, ಎಂ.ಆರ್. ಲಕ್ಷ್ಮಮ್ಮನವರು ಮಹಿಳಾಪರವಾದ ಚಿಂತನೆಗಳನ್ನು ಹೊಂದಿದ್ದಾರೆಂಬುದು ಈ ಲೇಖನದಿಂದ ವೇದ್ಯವಾಗುತ್ತದೆ.[೧೨]

ದಿನಾಂಕ ೧೨.೦೨.೧೯೫೦ರ ಸಂಚಿಕೆಯಲ್ಲಿ ಬೆಂಗಳೂರು ನಗರ ಮುನ್ಸಿಪಲ್ ಚುನಾವಣೆಯಲ್ಲಿ ಸ್ತ್ರೀಯರ ಪಾತ್ರ ಎಂಬ ಶೀರ್ಷಿಕೆಯಡಿಯಲ್ಲಿ ಬೆಂಗಳೂರು ನಗರದಿಂದ ೬೨ ಸದಸ್ಯರು ನಗರಸಭೆಗೆ ಚುನಾಯಿತರಾಗುವರು. ಅದರಲ್ಲಿ ೫೦ ಮಂದಿ ಸಾಮಾನ್ಯ ಸದಸ್ಯರಾದರೆ ೬ ಮಂದಿ ಹರಿಜನರಾಗಿದ್ದು, ೬ ಮಂದಿ ಸ್ತ್ರೀಯರು ಎಂದು ಸ್ಥಾನಗಳನ್ನು ನಿಗದಿಪಡಿಸಲಾಗಿದೆ. ನಗರಸಭೆಯ ಚುನಾವಣೆಗೆ ಸ್ತ್ರೀಯರು ನಿಂತು ಆಯ್ಕೆಯಾಗಿ ಏನು ಮಾಡಬಲ್ಲರು? ಅವರಿಗೆ ಕಾರ್ಯ ನಿರ್ವಹಿಸಲು ಸರಿಯಾದ ಸೇವಾಕ್ಷೇತ್ರ ನಗರಸಭೆಯಾಗಿದ್ದು, ಈ ಸೇವಾಕ್ಷೇತ್ರದಲ್ಲಿ ಕಾಯ್ದಿರಿಸಲು ಸ್ತ್ರೀಯರು ಅರ್ಹತೆಯನ್ನು ಹೊಂದಿದ್ದು ಸ್ತ್ರೀಯರಿಗೆ ೧೦-೧೨ ಸ್ಥಾನಗಳನ್ನಾದರೂ ಮೀಸಲಿಡಬೇಕೆಂದು ಹಾಗೂ ಸಾಮಾನ್ಯ ಸ್ಥಾನಕ್ಕೆ ನಿಂತು ಪುರುಷರೊಂದಿಗೆ ಸಮಾನ ಸ್ಪರ್ಧೆಯನ್ನು ನೀಡುವ ಮಹಿಳೆಯರು ಇದ್ದಾರೆಯೇ ಎಂಬ ಪ್ರಶ್ನೆ ಮೂಡುವುದು ಸಹಜವಾಗಿದ್ದು ಅಂತಹ ಅರ್ಹತೆವುಳ್ಳ, ಸೇವಾ ಮನೋಭಾವವುಳ್ಳ ಮಹಿಳಾ ಉಮೇದುದಾರರನ್ನು ನಿಲ್ಲಿಸಲು ಮಹಿಳಾ ಸಂಸ್ಥೆಗಳು ಮಹಿಳಾ ಸಮ್ಮೇಳನಗಳು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕೆಂದು ತಮ್ಮ ಸಂಪಾದಕೀಯದಲ್ಲಿ ಅಭಿಪ್ರಾಯಪಟ್ಟರು. ಈ ಮೂಲಕ ಸ್ತ್ರೀಯರು ರಾಜಕೀಯರಂಗದಲ್ಲಿ ಸಕ್ರಿಯವಾಗಿ ತೊಡಗಿಸಿಕೊಳ್ಳಬೇಕೆಂದು ಕರೆಯಿತ್ತರು.[೧೩]

ದಿನಾಂಕ ೧೯.೦೨.೧೯೫೦ರ ಸೋದರಿ ಪತ್ರಿಕೆಯ ಸಂಚಿಕೆಯಲ್ಲಿ 'ಉಪ ಚುನಾವಣೆಯಲ್ಲಿ ಸ್ತ್ರೀಯರು' ಎಂಬ ಶೀರ್ಷಿಕೆಯಡಿಯಲ್ಲಿ ಮೈಸೂರು ಸಂಸ್ಥಾನದ

ಪ್ರಜಾಪ್ರತಿನಿಧಿ ಸಭೆ ಮತ್ತು ನ್ಯಾಯವಿಧಾಯಕ ಸಭೆಯನ್ನು ರದ್ದುಮಾಡಿ ಲೆಜಿಸ್ಲೆಟೀವ್ ಅಸೆಂಬ್ಲಿ ಎಂಬ ಏಕ ಪಕ್ಷ ಪ್ರದಾನವಾದ ಒಂದೇ ಸಭೆಯನ್ನು ಊರ್ಜಿತಗೊಳಿಸಿದ್ದು, ಇದರಲ್ಲಿ ಸ್ತ್ರೀಯರ ಪ್ರಾತಿನಿಧ್ಯ ಏನು? ಎಷ್ಟು ಮಂದಿ ಸ್ತ್ರೀಯರು ಸದಸ್ಯರಾಗಿದ್ದಾರೆ? ಎಂದು ಅವಲೋಕಿಸಿದಾಗ ಡಾ. ರತ್ನಮ್ಮ ಐಜಕ್ ಅವರು ಒಬ್ಬರೇ ಕೋಲಾರದಿಂದ ಆರಿಸಿಬಂದ ಪ್ರತಿನಿಧಿಯಾಗಿದ್ದು, ಬೆಂಗಳೂರು, ಮೈಸೂರು, ಮಲೆನಾಡು ಮುಂತಾದ ಕ್ಷೇತ್ರಗಳಿಂದ ಪ್ರತಿನಿಧಿಸುವ ಸ್ತ್ರೀಯರು ಒಬ್ಬರು ಇಲ್ಲ. ಮೈಸೂರು ಸಂಸ್ಥಾನದ ೩೫ ಲಕ್ಷ ಸ್ತ್ರೀ ಜನತೆಯನ್ನು ಪ್ರತಿನಿಧಿಸುವವರಾಗಿ ರತ್ನಮ್ಮ ಒಬ್ಬರು ಹೊರತುಪಡಿಸಿ ಬೇರೆ ಯಾರು ಇಲ್ಲ. ಮೈಸೂರು ಕಾಂಗ್ರೆಸ್ ಸಮಿತಿ ೭-೮ ಜನ ಸ್ತ್ರೀಯರನ್ನು ಆರಿಸಬೇಕೆಂದು ಚರ್ಚಿಸಿ ಕೊನೆಗೆ ಮೈಸೂರಿನಿಂದ ಶ್ರೀಮತಿ ಸುನಂದಮ್ಮ, ಮಂಡ್ಯದಿಂದ ತಾಯಮ್ಮ ವೀರಣ್ಣಗೌಡ, ಕೋಲಾರದಿಂದ ಡಾ. ರತ್ನಮ್ಮ ಐಜಕ್ ಈ ಮೂವರ ಹೆಸರನ್ನು ಅಂತಿಮಪಡಿಸಿದ್ದರು. ಯಾರೂ ತಮ್ಮ ಸ್ಥಾನವನ್ನು ಬಿಟ್ಟುಕೊಡದ ಪರಿಣಾಮ ಕೋಲಾರದ ರತ್ನಮ್ಮ ಐಜಕ್‌ರವರು ಮಾತ್ರ ಉಳಿದು ಇಬ್ಬರು ತಮ್ಮ ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳಲು ಸೂಚಿಸಲಾಯಿತು. ನಾಲ್ಕು ಜನರ ರಾಜೀನಾಮೆಯಿಂದಾಗಿ ಆಸ್ಥಾನ ತೆರವಾಗಿದ್ದು ಅಲ್ಲಿಗೆ ಮಹಿಳೆಯರನ್ನು ನಿಲ್ಲಿಸಿ ಅವಿರೋಧವಾಗಿ ಆರಿಸುವಂತಾಗಲಿ ಎಂಬ ಲೇಖನ ಪ್ರಕಟವಾಗಿದ್ದು ಇದು ಅಂದಿನ ಅವಧಿಯಲ್ಲಿ ಮಹಿಳಾ ರಾಜಕೀಯ ಪ್ರಾತಿನಿಧ್ಯತೆ, ರಾಜಕೀಯದಲ್ಲಿ ಮಹಿಳೆಯರು ಭಾಗವಹಿಸುವಿಕೆಯ ಬಗ್ಗೆ ಹಾಗೂ ಎಂ.ಆರ್. ಲಕ್ಷಮ್ಮನವರ ಮಹಿಳಾ ಪರವಾದ ವಿಚಾರಧಾರೆಗಳನ್ನು ತಿಳಿಸುತ್ತದೆ.[೧೪]

ದಿನಾಂಕ ೨೬.೦೨.೧೯೫೦ರ ಸಂಚಿಕೆಯಲ್ಲಿ 'ಮಹಿಳಾ ಪ್ರಯಾಣಿಕರಿಗೆ ರೈಲ್ವೆ ಸೌಕರ್ಯಗಳು' ಎಂಬ ಶೀರ್ಷಿಕೆಯಡಿಯಲ್ಲಿ ಕೇಂದ್ರ ಸರ್ಕಾರದವರು ಪ್ರಾಂತೀಯ ಸರ್ಕಾರದವರು ಮೂರನೇ ದರ್ಜೆಯಲ್ಲಿ ಪ್ರಯಾಣಿಸುವ ಪ್ರಯಾಣಿಕರಿಗೆ ಹೆಚ್ಚಿನ ಸೌಲಭ್ಯಗಳನ್ನು ರೈಲ್ವೆಗಾಡಿಯಲ್ಲಿ ಒದಗಿಸುವ ಬಗ್ಗೆ ಹಾಗೂ ಮಹಿಳೆಯರಿಗೆ ಮತ್ತು ಸಣ್ಣ ಪುಟ್ಟ ಮಕ್ಕಳನ್ನು ಕರೆದುಕೊಂಡು ಹೋಗುವ ಸಂದರ್ಭದಲ್ಲಿ ಬಿಸಿನೀರು, ಕುಡಿಯುವ ನೀರಿನ ಸೌಲಭ್ಯಗಳನ್ನು ತಿಂಡಿ-ಕಾಫಿಗಳನ್ನು ಮಕ್ಕಳಿಗೆ ಹಾಲು ಮುಂತಾದವುಗಳನ್ನು ಮೂರನೇ ದರ್ಜೆಯ ರೈಲ್ವೆ ಬೋಗಿಯ ಒಳಗೆ ಮಾರಾಟ ಮಾಡುವ ವ್ಯವಸ್ಥೆಯನ್ನು ಮಾಡಬೇಕು. ರೈಲ್ವೆ ನಿಲ್ದಾಣಗಳಲ್ಲಿ ಮಹಿಳಾ ನೌಕರರನ್ನು ನೇಮಿಸಿ ಅವರಿಗೆ ಟಿಕೇಟ್ ಪಡೆದುಕೊಳ್ಳುವ ಬಗ್ಗೆ, ಗಾಡಿ ಹತ್ತುವ ಬಗ್ಗೆ, ತಿಳುವಳಿಕೆ ನೀಡುವುದರ ಬಗ್ಗೆ ಹಾಗೂ ಸಾಮಾನು ಪಡೆದುಕೊಂಡು ಹೋಗುವ ಕೂಲಿ ಆಳುಗಳು ಹೆಣ್ಣುಮಕ್ಕಳಿಂದ ಹೆಚ್ಚಿನ ದರವನ್ನು ವಸೂಲು ಮಾಡುವುದನ್ನು ತಪ್ಪಿಸುವ ಕೆಲಸವಾಗಬೇಕು ಎಂದು ಅಭಿಪ್ರಾಯಿಸುವುದರ ಮೂಲಕ ಸಾಮಾನ್ಯ ಸ್ತ್ರೀಯರ ಬಗೆಗಿನ ಲಕ್ಷಮ್ಮ ಅವರ ಕಾಳಜಿಯ ಅನಾವರಣವಾಗಿದೆ ಎಂದು ತಿಳಿಯಬಹುದು.[೧೫]

ದಿನಾಂಕ ೦೫.೦೩.೧೯೪೬ ರ ಸಂಚಿಕೆಯಲ್ಲಿ 'ಸೋದರಿ' ಪತ್ರಿಕೆ ಪ್ರಕಟವಾದ ಒಂದು ತಿಂಗಳ ನಂತರ ೮ ರಿಂದ ೧೮ ಪುಟಗಳ ಪತ್ರಿಕೆಯನ್ನು ನೀಡಲು ಆಲೋಚಿಸಿದ ಬಗ್ಗೆ ಸಾಧ್ವಿ, ವಿಶ್ವಕರ್ಣಾಟಕ, ನವಯುಗ, ತಾಯಿನಾಡು ಪತ್ರಿಕೆಗಳು ಸೋದರಿಗೆ ಸ್ವಾಗತ ಬಯಸಿದ್ದರೆ ವಿಜಯ ಪತ್ರಿಕೆಯ ಸಂಪಾದಕರು ಸೋದರಿ ಸೋದರರೊಂದಿಗೆ ಕಲಾಪ ಮಾಡದಿರಲಿ ಎಂದು ಎಚ್ಚರಿಸಿದ್ದು ಅದಕ್ಕೆ ಉತ್ತರವಾಗಿ ವಿನಾಕಾರಣ ಅಥವಾ ಅಲ್ಪ ಕಾರಣವಾದರೆ ಅದು ಕಲಹ, ಸಕಾರಣವಾದರೆ ಅದು ಸತ್ಯಾಗ್ರಹ. ಸತ್ಯಾಗ್ರಹದಿಂದ ಪರಸ್ಪರ ಮೈತ್ರಿಗೆ ಲೋಪವಿಲ್ಲವೆಂದು ತಮ್ಮ ಸಂಪಾದಕೀಯದಲ್ಲಿ ಹೇಳಿದ್ದಾರೆ.[೧೬]

ದಿನಾಂಕ ೧೨.೦೨.೧೯೫೦ರ ಸಂಚಿಕೆಯಲ್ಲಿ ಲಕ್ಷಮ್ಮನವರು ಇಂಗ್ಲೆಂಡ್ ದೇಶ ಮುಂದುವರೆದಿದ್ದರೂ ಮಹಿಳೆಯರಿಗೆ ಯಾವುದೇ ಸ್ಥಾನಮಾನವನ್ನು ನೀಡದಿರುವ ಬಗ್ಗೆ, ಮೈಸೂರು ಕಾಂಗ್ರೆಸ್ ಅಧ್ಯಕ್ಷ ಪದವಿಗೆ ಯಶೋಧರ ದಾಸಪ್ಪನವರು ಸ್ಪರ್ಧಿಸುತ್ತಿರುವ ಬಗ್ಗೆ, ಅವರು ಆ ಪದವಿಗೆ ಅರ್ಹರೆಂದು ಹಾಗೂ ಮೈಸೂರು ಸಂಸ್ಥಾನದಲ್ಲಿ ಹೆಣ್ಣುಮಕ್ಕಳಿಗೆ ಗೃಹ ವಿಜ್ಞಾನ ಸಂಸ್ಥೆ ತೆರೆಯಲು ಒಂದು ಲಕ್ಷ ರೂಪಾಯಿಗಳನ್ನು ಶೇಟ್‌ಹರಿಜಗವಾನ್‌ದಾಸ್‌ರವರು ನೀಡಿರುವ ಬಗ್ಗೆ, ಹೆಣ್ಣುಮಕ್ಕಳಿಗೆ ಗೃಹವಿಜ್ಞಾನ ಶಿಕ್ಷಣದ ಅವಶ್ಯಕತೆಯ ಬಗ್ಗೆ ಹಾಗೂ ಸೋದರಿ ಪತ್ರಿಕೆಗೆ ಜಾಹಿರಾತು ನೀಡಲು ತಮ್ಮ ಸಂಪಾದಕೀಯದಲ್ಲಿ ಕೋರಿಕೊಂಡಿದ್ದಾರೆ.[೧೭]

ದಿನಾಂಕ ೧೯.೦೨.೧೯೫೦ ರ ಸಂಚಿಕೆಯಲ್ಲಿ ಎಂ.ಆರ್. ಲಕ್ಷಮ್ಮರವರು ಮೈಸೂರು ಸಂಸ್ಥಾನದ ಶಾಸನಸಭೆಯಲ್ಲಿ ಮಹಿಳೆಯರ ಅಭ್ಯುದಯಕ್ಕಾಗಿ ಮಕ್ಕಳ ಕ್ಷೇಮಕ್ಕಾಗಿ ವಿಶೇಷ ಕಾರ್ಯಕ್ರಮಗಳನ್ನು ಸರ್ಕಾರ ಜಾರಿಗೆ ತರುವುದನ್ನು ನಿರೀಕ್ಷೆ ಮಾಡುತ್ತಾ ಮದ್ರಾಸ್ ಸರ್ಕಾರದ ಮಾದರಿಯಲ್ಲಿ ಮಹಿಳೆಯರ ಹಿತ ರಕ್ಷಣೆಗಾಗಿ ಇಲಾಖೆಯನ್ನು ಪ್ರಾರಂಭಿಸಿದಂತೆ ಮೈಸೂರು ಸಂಸ್ಥಾನದಲ್ಲಿಯೂ ಒಂದು ಇಲಾಖೆಯನ್ನು ಸ್ಥಾಪಿಸಬೇಕೆಂದು ತಮ್ಮ ಸಂಪಾದಕೀಯದಲ್ಲಿ ಪ್ರಕಟಿಸಿರುವ ಲಕ್ಷಮ್ಮರವರು ಮಹಿಳೆಯರ ಅಭಿವೃದ್ಧಿಯ ಕಡೆಗೆ ತಮ್ಮ ಒಲವನ್ನು ವ್ಯಕ್ತಪಡಿಸಿದ್ದಾರೆ.[೧೮]

ದಿನಾಂಕ ೨೬.೦೩.೧೯೫೪ರ ಸಂಚಿಕೆಯಲ್ಲಿ 'ನಿವೇದನ' ಎಂಬ ಶೀರ್ಷಿಕೆಯಡಿಯಲ್ಲಿ 'ಸೋದರಿ' ಪತ್ರಿಕೆಯನ್ನು ಆರಂಭಿಸಿದ ಉದ್ದೇಶ ಮಹಿಳೆಯರು ಸುಸಂಘಟಿತರಾಗಿ ತಮ್ಮ ಮನೆಯ ತಮ್ಮ ದೇಶದ ಏಳಿಗೆಗೆ ಸಹಕಾರಿಯಾಗಲು ತಮ್ಮ ಭಾವನೆಗಳನ್ನು ಹಂಚಿಕೊಳ್ಳಲು ಪತ್ರಿಕೆಯನ್ನು ಪ್ರಕಟಿಸಲಾಗಿದ್ದು ಅನೇಕ ಅನಾನುಕೂಲದ ನಡುವೆಯು ಪತ್ರಿಕೆಯು ನಡೆಯುತ್ತಿದ್ದು ಲಕ್ಷಮ್ಮರವರಿಗೆ ಅಮೆರಿಕಾದ ಸರ್ಕಾರದಿಂದ ಒಂದು ಕರೆ ಬಂದಿತು. ಮಹಿಳೆಯರ ಬಗ್ಗೆ ಅಧ್ಯಯನ ಮಾಡಲು ಮೂರು ತಿಂಗಳುಗಳ ಕಾಲ ಅಮೆರಿಕಾಕ್ಕೆ ತೆರಳಬೇಕಾಗಿದ್ದರಿಂದ ಆ ಪತ್ರಿಕೆಯನ್ನು ನಡೆಸಲು ಸಲಹಾ ಸಮಿತಿಯನ್ನು ರಚಿಸಿ ತಾವು ಅಮೆರಿಕಾಕ್ಕೆ ತೆರಳಲು ಹಾಗೂ ಸೋದರಿಗೆ ಎಂದಿನಂತೆ ಸಹಕಾರವನ್ನು ನೀಡಬೇಕೆಂದು ತಮ್ಮ

ಸಂಪಾದಕೀಯದಲ್ಲಿ ಮನವಿ ಮಾಡಿಕೊಂಡಿದ್ದು, ಪತ್ರಿಕೆಯನ್ನು ನಿಲ್ಲಿಸಬೇಕೆಂಬ ತಮ್ಮ ಆಲೋಚನೆಯನ್ನು ಕೈಬಿಟ್ಟಿರುವ ಬಗ್ಗೆ ತಿಳಿಸಿರುವ ಲಕ್ಷಮ್ಮನವರು ಮಹಿಳೆಯರ ಅಭಿವೃದ್ಧಿಗಾಗಿ ಸದಾಕಾಲ ತಮ್ಮನ್ನು ಮುಡಿಪಾಗಿ ಇಟ್ಟಿದ್ದರೆಂದು ಅವರ ಸಂಪಾದಕೀಯದಲ್ಲಿ ತಿಳಿದುಬರುತ್ತದೆ.[೧೯]

ದಿನಾಂಕ ೧೪.೦೫.೧೯೫೪ರ ಸಂಚಿಕೆಯಲ್ಲಿ 'ಧರ್ಮದಾನಿ ಬಸವಣ್ಣನವರು' ಎಂಬ ಶೀರ್ಷಿಕೆಯಡಿಯಲ್ಲಿ ಸಮಾಜದ ಭದ್ರತೆಗೆ ಮೊದಲ ಹಂತ ಅಂತರಂಗ ಶುದ್ಧಿ ಮತ್ತು ಬಹಿರಂಗ ಶುದ್ಧಿಯ ಈ ಬಗ್ಗೆ ಹೇಳಿದ್ದ ಬಸವಣ್ಣ ದೇವನನ್ನು ಒಲಿಸುವ ಪರಿಯನ್ನು, ಸ್ತ್ರೀಯರ ವಿಚಾರವಾಗಿ ಬಸವಣ್ಣನವರಿಗೆ ಇದ್ದ ಗೌರವ ಸಮಾನತೆಯನ್ನು ಹಾಗೂ ಅಕ್ಕಮಹಾದೇವಿಯಂತವರನ್ನೂ, ಅನೇಕ ಸ್ತ್ರೀಯರು ಪುರುಷ ಸರಿಸಮಾನವಾಗಿ ಕುರಿತು ಚರ್ಚೆಗಳ ಬಗ್ಗೆ, ಭಾಗವಹಿಸಿದ್ದರ ಬಗ್ಗೆ ಜೀವನದ ಪ್ರತಿಯೊಂದು ನಿಲುವಿನಲ್ಲೂ ಮಾನವೀಯತೆಯನ್ನು ಬೋಧಿಸಿದ ಬಸವಣ್ಣನನ್ನು ನೆನೆದು ಅವರ ಚಿಂತನೆಗಳನ್ನು ಅಳವಡಿಸಿಕೊಳ್ಳುವ ಬಗ್ಗೆ ಸಂಪಾದಕೀಯದಲ್ಲಿ ಲೇಖನ ಪ್ರಕಟವಾಗಿದೆ.[೨೦]

ದಿನಾಂಕ ೧೬.೦೭.೧೯೫೪ರ ಸೋದರಿ ಪತ್ರಿಕೆಯ ಸಂಚಿಕೆಯಲ್ಲಿ 'ಝಾನ್ಸಿರಾಣಿ ಲಕ್ಷ್ಮೀಬಾಯಿ' ಎಂಬ ಶೀರ್ಷಿಕೆಯಡಿಯಲ್ಲಿ ಮನೋಬಾಯಿ ಎಂಬ ಬಾಲಕಿ ಮಹಾರಾಷ್ಟ್ರ ರಾಜ್ಯದ ಪೇಶ್ವೆಯ ಬಳಿ ಕೆಲಸ ನಿರ್ವಹಿಸುತ್ತಿದ್ದ ಮೋರೊಪಂತ್ ಎಂಬ ಮರಾಠಿ ಬ್ರಾಹ್ಮಣನ ಮಗಳಾಗಿದ್ದು ಆಕೆ ಝಾನ್ಸಿಯ ಮಹಾರಾಜ ಗಂಗಾಧರರಾಯನನ್ನು ವಿವಾಹವಾದಳು. ವಿವಾಹದ ನಂತರ ಆಕೆಗೆ ಲಕ್ಷ್ಮೀಬಾಯಿ ಎಂಬ ಹೆಸರಿಟ್ಟು ಗಂಗಾಧರರಾಯನ ಪಟ್ಟದ ರಾಣಿ ಝಾನ್ಸಿರಾಣಿ ಲಕ್ಷ್ಮೀಬಾಯಿಯಾದಳು. ಆಕೆಗೆ ಒಂದು ಗಂಡು ಮಗು ಜನಿಸಿ ಹುಟ್ಟಿದ ಮೂರು ತಿಂಗಳಲ್ಲಿ ಮರಣಹೊಂದಿತು. ಮಕ್ಕಳಿಲ್ಲದ ಲಕ್ಷ್ಮೀಬಾಯಿ ಮತ್ತು ಗಂಗಾಧರರಾಯರು ದಾಮೋದರ ಎಂಬ ದತ್ತುಮಗನನ್ನು ಪಡೆದುಕೊಂಡರು. ಆದರೆ ಇಂಗ್ಲಿಷರು ಗಂಗಾಧರ ರಾಯನ ಮರಣಾ ನಂತರ ಝಾನ್ಸಿಯನ್ನು ವಶಪಡಿಸಿಕೊಂಡ ಇಂಗ್ಲಿಷರ ವಿರುದ್ಧ ಹೋರಾಟ ಮಾಡಿದ ಲಕ್ಷ್ಮೀಬಾಯಿ ೧೮೫೭ರ ದಂಗೆಯಲ್ಲಿ ಭಾಗವಹಿಸಿದ್ದರು. ಝಾನ್ಸಿರಾಣಿ ಶೂರ ಸೈನಿಕಗಳಾಗಿದ್ದು ಝಾನ್ಸಿಯಲ್ಲಿ ಆಡಳಿತವನ್ನು ಪ್ರಾರಂಭಿಸಿ ಉತ್ತಮ ಆಡಳಿತವನ್ನು ನೀಡಿದ ಆಕೆ ತನ್ನ ದತ್ತುಮಗನಿಗೆ ಸಿಂಹಾಸನವನ್ನು ದೊರಕಿಸಿಕೊಡಲು ಇಂಗ್ಲಿಷರ ವಿರುದ್ಧ ಹೋರಾಟವನ್ನು ಮಾಡಿದಳು. ಯುದ್ಧದಲ್ಲಿ ಕೊನೆಯವರೆಗೂ ಕಾದಾಡಿ ತನ್ನ ಪ್ರಾಣವನ್ನು ಬಿಟ್ಟಳು ಎಂದು ಆಕೆಯ ಶೌರ್ಯವನ್ನು ಸಂಪಾದಕೀಯದಲ್ಲಿ ಹೇಳಿದ್ದಾರೆ.[೨೧]

ದಿನಾಂಕ ೨೬.೧೧.೧೯೫೪ರ ಸಂಚಿಕೆಯಲ್ಲಿ 'ಅಮೆರಿಕದಲ್ಲಿ ಸ್ತ್ರೀಯರ ದುಡಿಮೆ' ಎಂಬ ಶೀರ್ಷಿಕೆಯಲ್ಲಿ ಅಮೆರಿಕ ಸಂಯುಕ್ತ ಸಂಸ್ಥಾನ ಬೇರೆ ಎಲ್ಲ ದೇಶಗಳಿಗಿಂತಲೂ ಕೈಗಾರಿಕೆಯಲ್ಲಿ ಮುಂದಿದ್ದು, ಅಗ್ರಸ್ಥಾನವನ್ನು ಪಡೆದಿದ್ದು, ಕೈಗಾರಿಕೆಗಳಲ್ಲಿ ಹೆಚ್ಚು ಯಂತ್ರಗಳನ್ನ

ಬಳಸಿದ್ದಾರೆ. ಪ್ರಾರಂಭದಲ್ಲಿ ಅಮೆರಿಕ ದೇಶವು ಕೂಡ ವ್ಯವಸಾಯಪ್ರಧಾನ ದೇಶವಾಗಿದ್ದು, ಹೇರಳವಾದ ಪ್ರಕೃತಿಸಂಪತ್ತಿದ್ದು, ಗೃಹ ಕೈಗಾರಿಕೆಗಳ ಬಳಕೆ ಮಾಡುತ್ತಿದ್ದು, ನಂತರದ ಕಾಲದಲ್ಲಿ ಕೈಗಾರಿಕೆ ಬೆಳೆದು ಸ್ತ್ರೀಯರಿಗೆ ಉದ್ಯೋಗಾವಕಾಶಗಳು ದೊರೆತು ಜನತೆಯ ಜೀವನಮಟ್ಟ ಹೆಚ್ಚಾಯಿತು. ವಾಹನ, ಪತ್ರಿಕೆ, ಪುಸ್ತಕಗಳ ಅಗತ್ಯತೆಗಳಿಂದಾಗಿ ಸ್ತ್ರೀಯರಿಗೆ ಕೆಲಸ ಮಾಡಲು ಅವಕಾಶ ದೊರೆತವು. ಕಾರ್ಖಾನೆಗಳಲ್ಲೂ ಸ್ತ್ರೀಯರು ಕೆಲಸ ಮಾಡಲು ಪ್ರಾರಂಭಿಸಿದ್ದರು. ಹೀಗೆ ಸಂಪಾದನೆ ಮಾಡಲು ಹೊರಹೋದ ಸ್ತ್ರೀಯರು ಸ್ವಾವಲಂಬಿಗಳಾದರು. ಅಲ್ಲಿನ ಜನರ ನಡೆನುಡಿ, ಸಂಪ್ರದಾಯ ಎಲ್ಲವು ಬದಲಾಗಿ ೧೮ ವರ್ಷಗಳಾದ ಮೇಲೆ ಮಕ್ಕಳು ಕೆಲಸಕ್ಕೆ ಸೇರುವುದು ಸಾಮಾನ್ಯವಾಗಿದ್ದು, ಪ್ರತಿಯೊಬ್ಬರು ಮನೆಯ ಹೊರಗಡೆ ಹೆಚ್ಚಾಗಿ ಕಾಲ ಕಳೆಯುತ್ತಿದ್ದು ಒಬ್ಬರಿಗೊಬ್ಬರು ಅಧೀನರಾಗದೆ ಸ್ವಾವಲಂಬಿಗಳಾಗಿದ್ದಾರೆ. ಅಲ್ಲಿಯು ಕೂಡ ಸ್ತ್ರೀಯರಿಗೆ ಕೆಲವು ಉದ್ಯೋಗಗಳು ಸೂಕ್ತವಾಗಿಲ್ಲ ಎಂಬ ಭಾವನೆ ಇದ್ದು, ಸ್ತ್ರೀಯರು ಬೇರೆ ಬೇರೆ ಉದ್ಯೋಗಗಳಲ್ಲಿ ತೊಡಗಿಕೊಳ್ಳಲು ಅನೇಕ ಅಡ್ಡಿಗಳಿದ್ದು ಕೆಲವು ಹೊಸ ಯಂತ್ರಗಳ ಶೋಧ'ನೆಯಿಂದ ಕಷ್ಟಕರವಾದ ಕೆಲಸಗಳು ಸುಲಭವಾಗಿ ನಡೆಯಲು ಸಾಧ್ಯವಾಗಿದೆ. ಯುದ್ಧವು ಸ್ತ್ರೀಯರಿಗೆ ಉದ್ಯೋಗಾವಕಾಶಗಳನ್ನು ಒದಗಿಸಿಕೊಟ್ಟಿದೆ. ಅಮೆರಿಕದ ಅಂತರ್‌ಯುದ್ಧ ಮತ್ತು ಮೊದಲನೇ ಮಹಾಯುದ್ಧಗಳಲ್ಲಿ ಪುರುಷರು ಭಾಗವಹಿಸುವ ಸಂದರ್ಭದಲ್ಲಿ, ಕಾರ್ಖಾನೆಗಳಲ್ಲಿ ಕೆಲಸ ನಿರ್ವಹಿಸಲು ಮಹಿಳೆಯರ ಅವಶ್ಯಕತೆ ಹೆಚ್ಚಾಗಿ ಉದ್ಯೋಗಾವಕಾಶಗಳು ದೊರೆತವು. ಎರಡನೇ ಮಹಾಯುದ್ಧವು ಇನ್ನೂ ಹೆಚ್ಚಿನ ಉದ್ಯೋಗಾವಕಾಶಗಳನ್ನು ಕಲ್ಪಿಸಿಕೊಟ್ಟಿತು. ಸ್ತ್ರೀಯರಿಗೆ ದೊರೆತ ಶಿಕ್ಷಣ ಅವರಿಗೆ ಉದ್ಯೋಗಾವಕಾಶಗಳು ಕಲ್ಪಿಸಿಕೊಡಲು ಸಾಧ್ಯವಾಯಿತು. ಹಿಂದಿನ ಕಾಲದಲ್ಲಿ ಮನೆಯ ಹೊರಗೆ ಕೆಲಸ ನಿರ್ವಹಿಸುವ ವಿದ್ಯಾವಂತ ಮಹಿಳೆಯರ ಸಂಖ್ಯೆ ಬಹಳ ಕಡಿಮೆ ಇದ್ದು, ಅನೇಕ ಸಾಮಾಜಿಕ ನಿರ್ಬಂಧಗಳು ಇದ್ದವು. ಆದರೆ ಇಂದು ಜನಸಂಖ್ಯೆ ಹೆಚ್ಚಿದಂತೆ ಮಕ್ಕಳ ಶಿಕ್ಷಣದ ಅವಶ್ಯಕತೆ ಹೆಚ್ಚಿದ್ದು ಕುಟುಂಬಕ್ಕೆ ಸಹಾಯವಾಗಲೂ ಸ್ತ್ರೀಯರು ಕೂಡ ಉದ್ಯೋಗಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಬಹುಸಂಖ್ಯೆಯ ಮಹಿಳೆಯರು ಕಛೇರಿಯ ಕೆಲಸಗಳಲ್ಲಿ ತೊಡಗಿಕೊಂಡಿದ್ದು, ಕಾರ್ಖಾನೆ ಕೆಲಸಕ್ಕಿಂತ ಸುಲಭವಾಗಿದ್ದು ಅಮೆರಿಕದಲ್ಲಿ ಹೆಚ್ಚಿನ ಮಹಿಳೆಯರು ಉದ್ಯೋಗಗಳಲ್ಲಿ ತೊಡಗಿಕೊಂಡಿರುವ ಬಗ್ಗೆ ಲೇಖನ ಪ್ರಕಟವಾಗಿದ್ದು, ಭಾರತದಲ್ಲಿಯೂ ಸ್ತ್ರೀಯರಿಗೆ ಉದ್ಯೋಗಾವಕಾಶಗಳು ದೊರೆಯಬೇಕು ಮತ್ತು ಮಹಿಳೆಯರು ಮನೆಯಿಂದ ಹೊರಗೆ ದುಡಿಯಲು ಶಕ್ತರಾಗಬೇಕೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸುವ ಲೇಖನವು ಇದಾಗಿದೆ.[೨೨]

ದಿನಾಂಕ ೦೩.೧೨.೧೯೫೪ರ ಸಂಚಿಕೆಯಲ್ಲಿ 'ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಸ್ತ್ರೀಯರಿಂದ ಆಗಿರುವ ಮತ್ತು ಆಗಬೇಕಾದ ಸೇವೆ' ಎಂಬ ಶೀರ್ಷಿಕೆಯಡಿಯಲ್ಲಿ ಭಾರತದಲ್ಲಿ ಪಾಶ್ಚಿಮಾತ್ಯ ವಿದ್ಯಾಭ್ಯಾಸ ಪದ್ಧತಿ ಸಮಕಾಲೀನ ಘಟನೆಗಳಾದ ಅಮೆರಿಕಾ ಮತ್ತು ಫ್ರಾನ್ಸ್‌ನ ಕ್ರಾಂತಿಗಳು

ಅನೇಕ ಚಳವಳಿಗಳು ಭಾರತದ ಮೇಲೆ ಕೂಡ ಪ್ರಭಾವ ಬೀರಿತು. ಭಾರತದಲ್ಲಿ ನಡೆದ ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣಾ ಚಳವಳಿಗಳು ಭಾರತದಲ್ಲಿ ನೂತನ ಸಾಹಿತ್ಯವನ್ನು ಸೃಷ್ಟಿಸಿತು. ಮೊದಲು ಬಂಗಾಳ ಪ್ರಾಂತ್ಯದಲ್ಲಿ ಬಂಕಿಮಚಂದ್ರಚಟರ್ಜಿ, ಘೋರುದತ್, ರವೀಂದ್ರನಾಥ ಠಾಗೂರ್ ಮುಂತಾದವರು ಸಾಹಿತ್ಯಕೃಷಿಯಲ್ಲಿ ತೊಡಗಿದರು. ಬಂಗಾಳಿ ಸಾಹಿತ್ಯದ ಪ್ರಭಾವ ಭಾರತದ ಇತರೆ ಕಡೆಗಳಲ್ಲಿಯೂ ವ್ಯಾಪಿಸಿ ಸಾಹಿತ್ಯ ಸೃಷ್ಟಿಯಾಯಿತು. ಭಾರತದಲ್ಲಿ ಸ್ತ್ರೀಯರ ಸ್ಥಾನವು ಬಹಳ ಹಿಂದುಳಿದಿದ್ದು, ಬ್ರಿಟಿಷರ ಕಾಲದಲ್ಲಿ ಸತಿಸಹಗಮನ ನಿಷೇಧ, ಹೆಣ್ಣು ಶಿಶುಹತ್ಯೆ ನಿಷೇಧ ಮುಂತಾದ ಕಾನೂನುಗಳು ಇಂಗ್ಲಿಷ್ ವಿದ್ಯಾಭ್ಯಾಸ, ವೃತ್ತಪತ್ರಿಕೆಗಳು, ಸಾರಿಗೆ ಸಂಪರ್ಕಗಳು ಸ್ತ್ರೀಯರಲ್ಲಿ ವಿದ್ಯಾಭ್ಯಾಸವನ್ನು ಪಡೆಯಲು ಸಹಕಾರಿಯಾಯಿತು. ಕರ್ನಾಟಕದಲ್ಲಿ ಮೈಸೂರು ರಾಜ್ಯವನ್ನು ಬಿಟ್ಟು ಉಳಿದ ಪ್ರದೇಶಗಳು ಬೇರೆ ಬೇರೆ ಕಡೆ ಹಂಚಿ ಹೋಗಿದ್ದರಿಂದ ಉತ್ತರ ಕರ್ನಾಟಕದಲ್ಲಿ ಮರಾಠಿ, ಉರ್ದು, ಪರ್ಶಿಯನ್ ಭಾಷೆಗಳ ಪ್ರಭಾವ, ಬಳ್ಳಾರಿ ಪ್ರಾಂತ್ಯದಲ್ಲಿ ತೆಲುಗಿನ ಪ್ರಭಾವ, ನೀಲಗಿರಿ ಪ್ರಾಂತ್ಯದಲ್ಲಿ ತಮಿಳಿನ ಪ್ರಭಾವ ಹೆಚ್ಚಾಗಿದ್ದು, ಮೈಸೂರು ರಾಜ್ಯದಲ್ಲಿ ಮಾತ್ರ ಕನ್ನಡಕ್ಕೆ ಹೆಚ್ಚು ಪ್ರಾಶಸ್ತ್ಯ ದೊರೆತು, ಕನ್ನಡ ಭಾಷೆ ಮತ್ತು ಸಂಸ್ಕೃತಿಯ ರಕ್ಷಣೆಗೆ ೧೯೧೫ರಲ್ಲಿ ಕನ್ನಡ ಸಾಹಿತ್ಯ ಪರಿಷತ್ ರಚನೆಯಾಗಿ ಕನ್ನಡದ ಏಳಿಗೆಯನ್ನು ಮತ್ತು ಜಾಗೃತಿಯನ್ನು ಮೂಡಿಸುವ ಪ್ರಯತ್ನವನ್ನು ಮಾಡುತ್ತಿದ್ದು, ಅದಕ್ಕೂ ಹಿಂದೆ ಅನೇಕ ಕ್ರೈಸ್ತಮಿಷನರಿಗಳು ಕನ್ನಡ ಸೇವೆಯನ್ನು ಮಾಡಿದ್ದು ಸ್ಮರಣೀಯರಾಗಿದ್ದಾರೆ. ಪ್ರಾಚೀನಕಾಲದಲ್ಲಿ ಸುಮಾರು ೨೧೫ ಸ್ತ್ರೀ ಗ್ರಂಥಕಾರರು 'ಕವಿಚರಿತ್ರೆ'ಯಲ್ಲಿ ಉಲ್ಲೇಖಿತರಾಗಿದ್ದು, ಕವಿರಾಜಮಾರ್ಗದಲ್ಲಿ ಹೇಳಿರುವಂತೆ ಅನೇಕ ಸ್ತ್ರೀಯರು ಕಾವ್ಯವನ್ನು ರಚಿಸುವವರಾಗಿದ್ದು ಗಂಗರು, ರಾಷ್ಟ್ರಕೂಟರು, ಚಾಳುಕ್ಯ, ಹೊಯ್ಸಳರು, ವಿಜಯನಗರ ಸಾಮ್ರಾಜ್ಯಗಳಲ್ಲಿ ಅನೇಕರು ಸಾಹಿತ್ಯಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರೆಂದು ತಿಳಿದುಬರುತ್ತದೆ. ಅಕ್ಕಮಹಾದೇವಿ, ಕಂತಿ, ಚಲುವಾಂಬೆ, ಸಂಚಿ ಹೊನ್ನಮ್ಮ, ಹೆಳವನಕಟ್ಟೆ ಗಿರಿಯಮ್ಮ, ಶ್ರೀರಂಗಮ್ಮ ಮುಂತಾದವರು ಸಾಹಿತ್ಯವನ್ನು ರಚಿಸಿದ್ದರು. ಕನ್ನಡದ ೧೨೦೦ ವರ್ಷದ ಸಾಹಿತ್ಯವನ್ನು ಪರಿಶೀಲಿಸಿದರೆ, ನಲವತ್ತು ಮಂದಿ ಮಹಿಳಾ ಸಾಹಿತಿಗಳ ಹೆಸರು ದೊರೆಯುವುದಿಲ್ಲ. ಹತ್ತೊಂಬತ್ತನೆ ಶತಮಾನದಿಂದ ಈಚೆಗೆ ೧೮೫೦ ರಿಂದ ೧೯೨೦ ರವರೆಗಿನ ಕಾಲದಲ್ಲಿ ಏಳು-ಎಂಟು ಮಂದಿ ಮಹಿಳಾ ಗ್ರಂಥಕಾರರು 'ಕವಿಚರಿತ್ರೆ'ಯಲ್ಲಿ ಉಲ್ಲೇಖಿತರಾಗಿದ್ದಾರೆ. ಸಿ.ಆರ್. ಚೆಲ್ಲಮ್ಮ, ತುಳಸಿಬಾಯಿ, ಮೇಲುಕೋಟೆ ರಾಜಮ್ಮ, ವೆಂಕಟಲಕ್ಷಮ್ಮ, ರಂಗಮ್ಮ, ವೆಂಕಟಸುಬ್ಬಮ್ಮ ಮುಂತಾದವರು ೧೯೨೦ರ ನಂತರ ಮೈಸೂರು ರಾಜ್ಯದಲ್ಲಿ ಸ್ತ್ರೀಯರ ವಿದ್ಯಾಭ್ಯಾಸ ಪ್ರಚಾರವಾಗಿ ಅನೇಕರು ಸಾಹಿತ್ಯ ಮತ್ತು ಪತ್ರಿಕೋದ್ಯಮದಲ್ಲಿ ತೊಡಗಿಕೊಂಡಿದ್ದಾರೆ. ನಂಜನಗೂಡು ತಿರುಮಲಾಂಬ ಅವರು 'ಕರ್ನಾಟಕ ಮಾತೃ ನಂದಿನಿ' ಎಂಬ ಪತ್ರಿಕೆಯನ್ನು ನಂಜನಗೂಡಿನಿಂದ ನಡೆಸುತ್ತಿದ್ದರು. ಅವರು ಅನೇಕ ಕಥೆಗಳನ್ನು, ಚರಿತ್ರೆಯ ಪುಸ್ತಕಗಳನ್ನು ರಚಿಸಿದ್ದು ಮಹಿಳಾ ಪತ್ರಿಕೋದ್ಯಮಕ್ಕೆ

ಮುನ್ನುಡಿಯನ್ನು ಬರೆದರು. ಅವರ ನಂತರ ಕಲ್ಯಾಣಮ್ಮನವರು 'ಸರಸ್ವತಿ' ಎಂಬ ಪತ್ರಿಕೆಯನ್ನು ಹೊರಡಿಸಿದ್ದು ಅನೇಕ ಸಾರ್ವಜನಿಕ ಸಂಸ್ಥೆಗಳಲ್ಲಿ ಸದಸ್ಯರಾಗಿದ್ದು ಸಾಹಿತ್ಯ ಸೇವೆ, ಪ್ರಜಾಸೇವೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಬಗ್ಗೆ ಇನ್ನೂ ಅನೇಕ ಸ್ತ್ರೀಯರು ಸಾಹಿತ್ಯ ಸೇವೆಯಲ್ಲಿ ತೊಡಗಿಕೊಂಡಿದ್ದು ಎಸ್. ಜಯಲಕ್ಷ್ಮಿ, ಶ್ಯಾಮಲಾದೇವಿ, ಗೌರಮ್ಮ, ಕೆ.ವಿ. ರತ್ನಮ್ಮ, ಚಂಪಾಬಾಯಿ, ಸಾವಿತ್ರಮ್ಮ, ಚನ್ನಾಜಮ್ಮಣ್ಣಿ, ಜಯಲಕ್ಷ್ಮಿ ಶ್ರೀನಿವಾಸನ್, ಕುಂತಳಾಮ್ಮ, ಶ್ರೀಮತಿ ಪಡುಕೋಣೆ, ಸೀತಾದೇವಿ, ಸರಸ್ವತಿಬಾಯಿ ರಾಜವಾಡೆ, ಕನಕಾಂಬರ ಮುಂತಾದ ಮಹಿಳೆಯರು ಕನ್ನಡ ಸಾಹಿತ್ಯದ ಏಳಿಗೆಗೆ ಕಾರಣರಾಗಿದ್ದಾರೆ.

ಸುಮಾರು ೧೫೦೦ ವರ್ಷಗಳ ಕನ್ನಡ ಸಾಹಿತ್ಯ ಚರಿತ್ರೆಯನ್ನು ಅವಲೋಕಿಸಿದಾಗ ಸ್ತ್ರೀಯರ ಪಾತ್ರವು ಅತ್ಯಲ್ಪವಾಗಿದ್ದು, ಭಾರತದ ಸ್ವಾತಂತ್ರ್ಯನಂತರ ಕನ್ನಡನಾಡು ಜಾಗೃತಿಗೊಂಡು ಏಕೀಕರಣಕ್ಕಾಗಿ ಶ್ರಮಿಸುತ್ತಿದ್ದು ಕನ್ನಡ ಸಾಹಿತ್ಯದಲ್ಲಿ ಕ್ರಾಂತಿಕಾರಕ ಸಾಹಿತ್ಯವು ಪ್ರಾರಂಭವಾಗಬೇಕಾಗಿದ್ದು ಶಿಕ್ಷಣ ಪದ್ಧತಿ ವಯಸ್ಕರ ಶಿಕ್ಷಣ ಮಾತೃಭಾಷೆಯಲ್ಲಿ ಶಿಕ್ಷಣ ಇವೆಲ್ಲವೂ ಜಾರಿಗೆ ಬಂದು, ಸ್ತ್ರೀಯರು ಮಾತೃಭಾಷೆಯಲ್ಲಿ ಸಹಜವಾಗಿ ಸಾಹಿತ್ಯ ರಚಿಸುವುದು ಸುಲಭವಾಗಿದ್ದು ವಿದ್ಯಾವಂತ ಸ್ತ್ರೀಯರು ಹೆಚ್ಚು ಜವಾಬ್ದಾರಿಯಿಂದ ಪ್ರಜಾಪ್ರಭುತ್ವದ ಧ್ಯೇಯಗಳನ್ನು ಕಾರ್ಯರೂಪಕ್ಕೆ ತರಬೇಕೆಂದು ಈ ಲೇಖನದಲ್ಲಿ ಹೇಳಲಾಗಿದ್ದು ಸ್ತ್ರೀಯರ ಶಿಕ್ಷಣದ ಮಹತ್ವವನ್ನು ಸಾರುವಂತಾಗಿದೆ.[೨೩]

ದಿನಾಂಕ ೧೦.೧೨.೧೯೫೪ರ ಸಂಚಿಕೆಯಲ್ಲಿ ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಸ್ತ್ರೀಯರ ಸಾಹಿತ್ಯಸೇವೆಯ ಬಗ್ಗೆ, ಸ್ತ್ರೀಯರಿಗೆ ಸ್ವಾತಂತ್ರ್ಯ ಅವಶ್ಯಕತೆ ಇಲ್ಲವೆಂದು ಹೇಳುವ ಜನರ ನಡುವೆ ಸಮಾಜ ಏಳಿಗೆಗೆ ಸ್ತ್ರೀಯರು ಕಾರಣೀಭೂತರಾಗಿದ್ದು ಅವರಿಗೆ ಶಿಕ್ಷಣವನ್ನು ನೀಡಿದ್ದರೆ ದೇಶದ ಉನ್ನತಿಗೆ ಕಾರಣವಾಗುವುದು ಎಂಬ ನಿಲುವು ಹಾಗೂ ವಿದ್ಯಾವಂತರಾದ ಸ್ತ್ರೀಯರು ಇತರರ ಏಳಿಗೆಗೆ ಕೂಡ ಕಾರಣಕರ್ತರಾಗುವ ಬಗ್ಗೆ ಗೃಹಕೃತ್ಯದ ಜೊತೆಜೊತೆಗೆ ಪ್ರಪಂಚದ ಹಾಗುಹೋಗುಗಳ ಬಗ್ಗೆ ಸ್ತ್ರೀಯರು ಕೂಡ ಭಾಗವಹಿಸಬೇಕಾದ ಅಗತ್ಯತೆಯ ಬಗ್ಗೆ, ತಮ್ಮ ವಿಕಾಸದ ದಾರಿಯನ್ನು ತಾವು ಕಂಡುಕೊಳ್ಳುವ ಬಗ್ಗೆ, ಈ ಲೇಖನದಲ್ಲಿ ಹೇಳಲಾಗಿದ್ದು 'ನಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂಬ ಸಂಸ್ಕೃತ ವಾಕ್ಯವು ಸ್ತ್ರೀಯರ ಸ್ವಾತಂತ್ರ್ಯವನ್ನು ಕಿತ್ತುಕೊಂಡು, ಆಕೆಯನ್ನು ಆಶ್ರಿತಳಾಗಿ ಮಾಡಿದ್ದು, ಸ್ತ್ರೀಯರಿಗೆ ಅನ್ಯಾಯ ನಡೆದಿರುವುದರ ಬಗ್ಗೆ ಸಮಾಜದಲ್ಲಿ ಎಲ್ಲರೂ ಸಮಾನರು, ಪುರುಷರಿಗಿಂತ ಮಾನಸಿಕವಾಗಿ ಸ್ತ್ರೀಯರು ಸಬಲರು, ಪುರುಷರಿಗೆ ಸಮಾನವಾಗಿ ದುಡಿಯಲು ಸಿದ್ಧರಿರುವಂತಹ ಸ್ತ್ರೀಯರು ಎಷ್ಟೋ ಜನರಿದ್ದು, ಗಾಂಧೀಜಿಯವರು ಹರಿಜನ ಪಂಗಡಕ್ಕೆ ಸೇರಿದ ಮಹಿಳೆಯನ್ನು ಭಾರತದ ನಾಯಕಿಯನ್ನಾಗಿ ಮಾಡುವೆನು ಎಂಬ ಹೇಳಿಕೆಯನ್ನು ಲೇಖನದಲ್ಲಿ ಹೇಳಿದ್ದು ಹರಿಜನ ಹೆಣ್ಣೆಂದರೆ ಇನ್ನೂ ಕೀಳು ಎಂಬ ಮನೋಭಾವ ಮತ್ತು ಹೆಣ್ಣನ್ನು ಕೇವಲ ಉಪಭೋಗದ ವಸ್ತುವಾಗಿ ನೋಡುವ

ದೃಷ್ಟಿಕೋನ ಇನ್ನೂ ಪೂರ್ಣವಾಗಿ ತಮ್ಮ ಸಮಾಜದಿಂದ ಹೋಗಿಲ್ಲ ಮತ್ತು ಸಮಾಜದಲ್ಲಿ ಹೆಣ್ಣು ಮುಖ್ಯ ಪಾತ್ರವನ್ನು ವಹಿಸುವಲ್ಲಿ ದೇಶದ ಜನಾಂಗದಲ್ಲಿ ಮಹಿಳೆಯರು ಅರ್ಧದಷ್ಟಿದ್ದು ಆಕೆಗೆ ಸಮಾನವಾದ ಅವಕಾಶ ದೊರೆತಾಗ ಮಾತ್ರ ಸ್ವಾತಂತ್ರ್ಯ ಹೆಚ್ಚು ಅರ್ಥಪೂರ್ಣವಾಗುತ್ತದೆ. ಮಹಿಳೆಯರಿಗೆ ಶಿಕ್ಷಣವು ಅತ್ಯವಶ್ಯಕವಾಗಿದ್ದು ಮೈಸೂರು ರಾಜ್ಯದಲ್ಲಿ ಮಹಿಳಾ ಶಿಕ್ಷಣಕ್ಕೆ ಹೆಚ್ಚು ಪ್ರೋತ್ಸಾಹ ನೀಡಿದ್ದರು ಕೂಡ ಅವರ ಸೌಲಭ್ಯವನ್ನು ಹೆಚ್ಚಿನವರು ಬಳಸಿಕೊಂಡಿಲ್ಲ. ಮೈಸೂರು ಸಂಸ್ಥಾನದಲ್ಲಿ ಕೆಲವು ಮಹಿಳೆಯರು ಸೇರಿ ಮಹಿಳಾ ಸಂಸ್ಥೆಗಳನ್ನು ಸ್ಥಾಪಿಸಿಕೊಂಡು, ಮಹಿಳೆಯರ ಏಳಿಗೆಗಾಗಿ ದುಡಿಯುತ್ತಿದ್ದು ಮೈಸೂರು ಸಂಸ್ಥಾನದ ಮಹಿಳಾ ಸಮ್ಮೇಳನವು ನಡೆಯುತ್ತಿರುವ ಬಗ್ಗೆ ಮಹಿಳೆಯರ ಉನ್ನತಿಯನ್ನು ಸಾಧಿಸಲು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿರುವ ಮಹಿಳಾ ಶಾಖೆ ಪ್ರಯತ್ನಿಸುತ್ತಿದ್ದು, ಮಹಿಳೆಯರು ತಮ್ಮ ಸಮಸ್ತ ಶಕ್ತಿಯನ್ನು ರೂಢಿಸಿಕೊಂಡು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಕಾರ್ಯ ನಿರ್ವಹಿಸಬೇಕು. ಶಿಕ್ಷಣ ಪಡೆದ ಮಹಿಳೆ ಉದ್ಯೋಗದಲ್ಲಿ ತೊಡಗಿಸಿಕೊಂಡು, ತಮ್ಮ ಸಂಸಾರ ಮಾತ್ರವಲ್ಲದೆ ಸಮಾಜಕ್ಕೂ ಕೂಡ ಕೊಡುಗೆಯನ್ನು ಕೊಡುವ ಬಗ್ಗೆ ಸ್ತ್ರೀಯರು ಆಲೋಚಿಸಿ ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಳ್ಳಬೇಕು. ತಾನು ಅಬಲೆ ಎಂಬುದನ್ನು ಮರೆತು ಆತ್ಮವಿಶ್ವಾಸದಿಂದ ಪುರುಷನ ಸಮಾನಳಾಗಿ, ಸ್ವತಂತ್ರಳಾಗಿ ನಡೆಯಬೇಕು. ಸ್ತ್ರೀಗೂ ಕೂಡ ತನ್ನದೇ ಆದ ವ್ಯಕ್ತಿತ್ವವಿದೆ ಎಂಬುದು ಪುರುಷರಿಗೆ ಅರ್ಥವಾಗಬೇಕು. ದೇಹಕ್ಕೆ ಜೀವಸತ್ವಗಳ ಅವಶ್ಯಕತೆ ಇರುವಂತೆ ಮಹಿಳೆಗೆ ಶಿಕ್ಷಣದ ಅವಶ್ಯಕತೆ ಇದ್ದು ಮಹಿಳೆಯರು ಸಾಹಿತ್ಯ ಹಾಗೂ ಸಮಾಜಸುಧಾರಣೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಸಾಮಾಜಿಕ ರಚನೆಯಲ್ಲಿ ತಮ್ಮ ನಿರ್ಣಯ ಅಧಿಕಾರವನ್ನು ಹೊಂದುವ ವ್ಯಕ್ತಿಯನ್ನು ಶಕ್ತಿಯನ್ನು ರೂಪಿಸುವ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕು ಎಂಬ ಲೇಖನವು ಪ್ರಕಟವಾಗಿದ್ದು ಸ್ತ್ರೀಯರ ಶಿಕ್ಷಣ ಸಮಾಜದ ಹೇಳಿಕೆಯಲ್ಲಿ ಅವರ ಪಾತ್ರವನ್ನು ಈ ಲೇಖನವು ವಿವರಿಸುತ್ತದೆ.[೨೪]

ದಿನಾಂಕ ೦೭.೦೧.೧೯೫೫ರ ಸಂಚಿಕೆಯಲ್ಲಿ 'ಮನೆಯಾಳುಗಳು ಮತ್ತು ಚಿಲ್ಲರೆ ಉದ್ಯಮಗಳಲ್ಲಿ ಸ್ತ್ರೀಯರು' ಎಂಬ ಶೀರ್ಷಿಕೆಯಡಿಯಲ್ಲಿ ಭಾರತ ದೇಶದಲ್ಲಿ ಪ್ರತಿಯೊಬ್ಬ ಕೆಳವರ್ಗಕ್ಕೆ ಸೇರಿರುವ ಸ್ತ್ರೀಯು ಕೆಲಸಗಾರ್ತಿ ಆಗಿದ್ದು, ಮನೆಯಿಂದ ಹೊರಗೆ ಉದ್ಯೋಗದಲ್ಲಿ ಇಲ್ಲದೇ ಇರುವ ಸ್ತ್ರೀಯರು ಕೂಡ ಪ್ರತಿದಿನ ತಮ್ಮ ಮನೆಯ ಗೃಹಕೃತ್ಯದ ಕೆಲಸದಲ್ಲಿ ತಮ್ಮನ್ನು ತೊಡಗಿಕೊಂಡಿರುತ್ತಾರೆ. ಆದರೆ ಜನಗಣತಿಯ ಪ್ರಕಾರ ಅವರು ಕೆಲಸವಿಲ್ಲದವರೆಂದು ಕರೆದರು ಕೂಡ, ಸ್ತ್ರೀಯರು ತಮ್ಮನ್ನು ತಾವು ದುಡಿಮೆಗಾರರೆಂದು ಭಾವಿಸಿಕೊಂಡಿದ್ದಾರೆ. ೧೯೩೧ರ ಜನಗಣತಿಯಲ್ಲಿ ಮನೆಗೆಲಸವನ್ನು ಆದಾಯ ವಿಭಾಗದ ಪಟ್ಟಿಯಲ್ಲಿ ಸೇರಿಸಲಾಗಿದ್ದು, ಮನೆಗಳಲ್ಲಿ ಹೆಂಗಸರು ಅಥವಾ ಆಯಾ ಎಂದು ಕರೆಯಲ್ಪಡುವ ಸ್ತ್ರೀಯರನ್ನು ಈ ಪಟ್ಟಿಯಲ್ಲಿ ಸೇರಿಸಲಾಗಿಲ್ಲ. ೧೯೪೦ರ ರಾಷ್ಟ್ರೀಯ ಯೋಜನಾ ಸಮಿತಿಯ ಅಂಗವಾದ ಕಾರ್ಮಿಕ ಉಪಸಮಿತಿಯ ವರದಿಯಲ್ಲಿ ಮನೆಕೆಲಸದಾಳುಗಳ ಹಿತರಕ್ಷಣೆಗಾಗಿ ಅನೇಕ ಸೂಚನೆ ಮತ್ತು

ಶಿಫಾರಸ್ಸುಗಳು ಇದ್ದು, ಮನೆಯಲ್ಲಿ ವೈಯಕ್ತಿಕ ಹಾಗೂ ಗೃಹಕೃತ್ಯವನ್ನು ನಿರ್ವಹಿಸುವ ಕೆಲಸಗಾರರ ಹಿತರಕ್ಷಣೆಯ ಕಾನೂನುಗಳನ್ನು ಮಾಡಬೇಕಾಗಿದೆ. ಕಾರ್ಮಿಕ ಉಪಸಮಿತಿಯ ವರದಿಯಲ್ಲಿ ಅನೇಕ ಸೂಚನೆಗಳನ್ನು ಶಿಫಾರಸ್ಸು ಮಾಡಲಾಗಿದ್ದು ಈ ಕೆಳಕಂಡ ವರದಿಯನ್ನು ನೀಡಲಾಗಿದ್ದು, ೧೫ ವರ್ಷದ ಕೆಳಗಿನ ಮಕ್ಕಳು ಕೆಲಸ ಮಾಡಬಾರದು. ಪ್ರತಿಯೊಬ್ಬರಿಗೂ ೯ ಗಂಟೆಗಳ ವಿಶ್ರಾಂತಿ ನೀಡಬೇಕು. ಭಾನುವಾರ ಅರ್ಧ ದಿನ ರಜಾವನ್ನು ನೀಡಬೇಕು. ಮಧ್ಯಾಹ್ನ ೧ ಗಂಟೆಯಿಂದ ೫ ಗಂಟೆಯತನಕ ವಿರಾಮದ ಜೊತೆಗೆ, ವಸತಿ ಸೌಲಭ್ಯ ಊಟವನ್ನು ನೀಡುವುದರ ಜೊತೆಗೆ ಹೆಚ್ಚಿನ ಸಂಬಳವನ್ನು ನೀಡಬೇಕು. ಭಾರತದಲ್ಲಿ ಮನೆಕೆಲಸದವರಿಗೆ ಅಂದರೆ ಅಡುಗೆಯಾಳುಗಳು, ಕಸಗುಡಿಸುವರು ಮುಂತಾದ ಕೆಲಸವನ್ನು ನಿರ್ವಹಿಸುವುದರ ಜೊತೆಗೆ ಹೆಚ್ಚು ಸೌಲಭ್ಯವನ್ನು ನೀಡಲಾಗಿಲ್ಲ. ಆದರೆ ಪಾಶ್ಚಿಮಾತ್ಯ ದೇಶಗಳಲ್ಲಿ ಇಂತಹ ಕೆಲಸಗಾರ್ತಿಯರಿಗೆ ಹೆಚ್ಚಿನ ಸೌಲಭ್ಯಗಳು ದೊರಕುತ್ತವೆ. ಆದರೆ ಭಾರತದ ಕೆಲಸಗಾರರು ನಂಬಿಕೆಗೆ ಅರ್ಹರು ಮತ್ತು ಪ್ರೀತಿಯಿಂದ ಕಾರ್ಯವನ್ನು ನಿರ್ವಹಿಸುವಳು ಆಗಿದ್ದು, ಇಂತಹ ಅಸಂಖ್ಯಾತ ಮಹಿಳೆಯರು ಸಂಘಟಿತವಲ್ಲದ ಉದ್ಯಮಗಳಲ್ಲಿ ಕೇವಲ ಜೀವನ ನಡೆಸುವುದಕ್ಕೆ ದುಡಿಯುತ್ತಿದ್ದು, ಭಾರತದಲ್ಲಿ ವಿಶೇಷವಾಗಿ ಡೈರಿ ಉದ್ಯಮದಲ್ಲಿ ಹೆಚ್ಚು ಮಹಿಳೆಯರು ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇವರಿಗೆ 'ವರ್ಕರ್ಸ್ ಕಾಂಪನ್‌ಸೇಷನ್ ಆಕ್ಟ್' ಹಾಗೂ 'ಸೋಷಿಯಲ್ ಇನ್ಸೂರೆನ್ಸ್' ಸೌಲಭ್ಯಗಳು ದೊರೆಯಬೇಕು. ಹಳ್ಳಿಗಳಲ್ಲಿ ಉರುವಲುಗಳನ್ನು ಸಂಗ್ರಹಿಸಲು ಅರಣ್ಯಕ್ಕೆ ಹೋದಂತಹ ಹೆಣ್ಣುಮಕ್ಕಳು ಪ್ರಾಣಿಗಳ ದಾಳಿಗೆ ಸಿಲುಕಿರುವ ಬಗ್ಗೆ, ಭತ್ತವನ್ನು ಕುಟ್ಟಿ ಅಕ್ಕಿಯನ್ನು ತಯಾರಿಸುವ ಮಹಿಳೆಯರು ಹಾಗೂ ಇನ್ನೂ ಅನೇಕ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಮಹಿಳೆಯರಿಗೆ ಮೊದಲ ಪಂಚವಾರ್ಷಿಕ ಯೋಜನೆಯಲ್ಲಿ ಹಾಗೂ ಅವರನ್ನು ಸಂಘಟಿಸುವ ಯೋಜನೆ ಹಾಕಿಕೊಳ್ಳಲಾಗಿದೆ. ಈ ರೀತಿಯಾಗಿ ಮನೆಯಲ್ಲಿಯೇ ಕುಳಿತು ಕಾರ್ಯ ನಿರ್ವಹಿಸುವ ಮಹಿಳೆಯರು ಜಾಣ್ಮೆಯಿಂದ, ಕೌಶಲ್ಯದಿಂದ ಕಾರ್ಯ ನಿರ್ವಹಿಸುತ್ತಿದ್ದು ಗ್ರಾಮ, ಗುಡಿಕೈಗಾರಿಕೆಗಳಿಗೆ ಇಂದು ಹೆಚ್ಚಿನ ಗಮನವನ್ನು ನೀಡಲಾಗುತ್ತಿದ್ದು, ಮಹಿಳೆಯರು ಮನೆಕೆಲಸದ ಜೊತೆಗೆ ಇತರ ಕೆಲಸ ಮಾಡಲು ಸಮರ್ಥರು ಎಂಬ ಲೇಖನ ಪ್ರಕಟವಾಗಿದ್ದು, ಎಂ.ಆರ್. ಲಕ್ಷಮ್ಮನವರು ಅಂದಿನ ಕಾಲದಲ್ಲಿಯೇ ಮನೆಗೆಲಸದ ಮಹಿಳೆಯರ ಶ್ರಮವನ್ನು ಗುರುತಿಸಬೇಕು ಹಾಗೂ ರಾಷ್ಟ್ರೀಯ ಆದಾಯದಲ್ಲಿ ಅವರ ಪಾತ್ರವನ್ನು ಗಣನೆಗೆ ತೆಗೆದುಕೊಳ್ಳಬೇಕೆಂದು ಈ ಲೇಖನದಲ್ಲಿ ಹೇಳಿದ್ದು ಆಧುನಿಕೋತ್ತರ ಚಿಂತನೆಗಳನ್ನು ಹೊಂದಿದವರಾಗಿದ್ದಾರೆ.[೨೫]

ದಿನಾಂಕ ೦೭.೦೧.೧೯೫೫ ರ ಸಂಚಿಕೆಯಲ್ಲಿ 'ಸ್ತ್ರೀಯರು ಮತ್ತು ಕಾರ್ಮಿಕರ ಸುಕ್ಷೇಮ' ಎಂಬ ಶೀರ್ಷಿಕೆಯಡಿಯಲ್ಲಿ ಕೈಗಾರಿಕಾ ಕಾರ್ಮಿಕರ ಕಲ್ಯಾಣದ ಬಗ್ಗೆ ಪ್ರಾಚೀನ ಕಾಲದಲ್ಲಿ ಚಿಂತನೆ ಮಾಡುವಂತಿರಲಿಲ್ಲ. ಅಂದು ಯಜಮಾನನೇ ಸಣ್ಣ ಪ್ರಮಾಣದ

ಕೈಗೆಲಸಗಳನ್ನು ಮಾಡಿಕೊಳ್ಳುತ್ತಿದ್ದು, ಸುಸಂಘಟಿತ ಕಾರ್ಮಿಕ ಬಲವಿರಲಿಲ್ಲ. ಆದರೆ ಕೈಗಾರಿಕಾ ಕ್ರಾಂತಿಯ ಪರಿಣಾಮವಾಗಿ ಕಾರ್ಖಾನೆಗಳು ಸ್ಥಾಪಿತವಾದ ಮೇಲೆ ಮನೆ ಕೆಲಸಗಾರರು ಮೂಲೆಗುಂಪಾಗಿ ಕಾರ್ಮಿಕ ತಂಡಗಳು ಕೆಲಸ ನಿರ್ವಹಿಸುವಂತಾಗಿ ಕೈಗಾರಿಕೆಯಲ್ಲಿ ಕಾರ್ಯ ನಿರ್ವಹಿಸುವ ಕಾರ್ಮಿಕರ ಯೋಗಕ್ಷೇಮದ ಬಗ್ಗೆ ಮಾಲೀಕರು ಆಲೋಚಿಸಬೇಕಾಯಿತು. ಅವರ ಆರೋಗ್ಯ, ವಸತಿಸೌಕರ್ಯ, ಅವರ ಮಕ್ಕಳ ವಿದ್ಯಾಭ್ಯಾಸ, ಸಾಮಾಜಿಕ ಸುಧಾರಣೆ, ಅವರ ಜೀವನಮಟ್ಟದ ಸುಧಾರಣೆಯ ಬಗ್ಗೆ ಮತ್ತು ದುಡಿಯುವ ಕಾರ್ಮಿಕ ಯಂತ್ರದಲ್ಲಿ ಮಾಲೀಕನಿಗೋಸ್ಕರ ದುಡಿಯುವ ವರ್ಗ ಕಾರ್ಮಿಕವರ್ಗವಾಗಿದ್ದು ಅವ'ರ ಯೋಗಕ್ಷೇಮದ ಬಗ್ಗೆ ಮತ್ತು ಅವರ ಸಮಸ್ಯೆಗಳನ್ನು ನಿರ್ವಹಿಸುವ ಬಗ್ಗೆ ಪ್ರತಿಯೊಂದು ದೇಶವು ಚಿಂತಿಸಬೇಕಾಗಿದೆ. ಸ್ವಾತಂತ್ರ್ಯಾ ನಂತರ ಭಾರತವು ಕಾರ್ಮಿಕರ ಸಮಸ್ಯೆಗಳನ್ನು ಬಗೆಹರಿಸಲು ಮುಂದಾಗಿದೆ. ಕಾರ್ಮಿಕರ ಒಕ್ಕೂಟ ಮತ್ತು ಸಾಮಾಜಿಕ ಕಾರ್ಯಕರ್ತರು ಅದಕ್ಕಾಗಿ ಶ್ರಮಿಸಬೇಕಾಗಿದ್ದು, ಅವರ ಜೊತೆಗೆ ಯೋಗಕ್ಷೇಮ ಅಧಿಕಾರಿಯ ಅವಶ್ಯಕತೆಯಿದ್ದು, ಮಾಲೀಕ ಮತ್ತು ದುಡಿಮೆಗಾರರ ನಡುವೆ ಉತ್ತಮ ಸಂಬಂಧವನ್ನು ಏರ್ಪಡಿಸಲಾಗುತ್ತದೆ. ಭಾರತದ ಸರ್ಕಾರವು 'ನ್ಯೂ ಫ್ಯಾಕ್ಟರಿಸ್ ಆಕ್ಟ್' ಎಂಬ ಕಾನೂನನ್ನು ಜಾರಿಗೆ ತಂದಿದ್ದು ಕಾರ್ಮಿಕರಿಗೆ ಕಾರ್ಯ ನಿರ್ವಹಿಸುವ ಸ್ಥಳದಲ್ಲಿ ಉತ್ತಮ ಸನ್ನಿವೇಶ, ಶುಚಿಯಾದ ಫಲಹಾರ ಮಂದಿರ, ಶೌಚಾಲಯಗಳ ವ್ಯವಸ್ಥೆ, ಮಕ್ಕಳ ಯೋಗಕ್ಷೇಮ ಕ್ಷೇತ್ರ, ವೈದ್ಯಕೀಯ ಸೌಲಭ್ಯ, ಶುದ್ಧ ಕುಡಿಯುವ ನೀರಿನ ವ್ಯವಸ್ಥೆ, ವಿಶ್ರಾಂತಿಕೊಠಡಿ ಇವೆಲ್ಲವೂ ಲಭ್ಯವಾಗಬೇಕು ಹಾಗೂ ೧೪ ವಯಸ್ಸಿನ ಒಳಗಿರುವವರನ್ನು ಕಾರ್ಖಾನೆಯಲ್ಲಿ ಕೆಲಸ ಮಾಡಕೂಡದೆಂದು ನಿರ್ಬಂಧಿಸುತ್ತದೆ. ಈ ಕಾನೂನುಗಳಲ್ಲದೆ ಕಾರ್ಮಿಕರ ಹಿತವನ್ನು ಕಾಪಾಡುವ ಪ್ರಾಂತೀಯ ವಿವಾಹ ಕಾನೂನುಗಳು ದೆಹಲಿ ಮತ್ತು ಕಾನ್ಪುರದಲ್ಲಿ ಜಾರಿಗೆ ಬಂದಿದ್ದು ಭಾರತದ ಇತರೆ ಕಡೆಗೂ ಈ ಕಾನೂನು ಜಾರಿಗೆ ಬರುವುದು. ಇದರೊಂದಿಗೆ ಕಾರ್ಮಿಕನ ಆರೋಗ್ಯಸ್ಥಿತಿ ಉತ್ತಮಗೊಳ್ಳುವುದರ ಜೊತೆಗೆ ಪಂಚವಾರ್ಷಿಕ ಯೋಜನೆಯಲ್ಲಿ ವಸತಿ ಸೌಕರ್ಯ ಮತ್ತು ಸಬಲೀಕರಣ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ.

ಭಾರತದ ವಿವಿಧ ಕೈಗಾರಿಕಾ ಕ್ಷೇತ್ರದಲ್ಲಿ ದುಡಿಯುತ್ತಿರುವ ಮಹಿಳೆಯರ ಸಂಖ್ಯೆ ಸುಮಾರು ೫೦ ಮಿಲಿಯನ್‌ನಷ್ಟಿದ್ದು ಮಹಿಳೆಯರ ಹಿತರಕ್ಷಣೆಗೆ ಮಾತೃತ್ವ ರಕ್ಷಣಾ ಮಸೂದೆ, ರಾತ್ರಿವೇಳೆ ಕೆಲಸದ ಅವಧಿಯನ್ನು ನೀಡದೆ ಇರುವುದು, ಅವರಿಗೆ ವಿಶ್ರಾಂತಿ ಕೊಠಡಿ, ಶೌಚಾಲಯದ ಜೊತೆಗೆ ಸಮಾನ ವೇತನ ನೀಡಬೇಕೆಂಬ ತತ್ವ, ಇದ್ದರೂ ಗಣಿಗಳಲ್ಲಿ ಕೆಲಸ ಮಾಡಲು ನಿರ್ಬಂಧ, ಇವೆಲ್ಲವನ್ನು ಕಾನೂನಿನಲ್ಲಿ ಅಳವಡಿಸಿದ್ದು ಮಹಿಳಾ ಕಾರ್ಮಿಕರ ಪರಿಸ್ಥಿತಿ ಸ್ವಲ್ಪಮಟ್ಟಿಗೆ ಸುಧಾರಿತವಾಗಿದೆ. ಆದರೆ ಸಂಪೂರ್ಣವಾಗಿ ಸ್ತ್ರೀಯರ ಸಮಸ್ಯೆಗಳನ್ನು ಬಗೆಹರಿಸಲಾಗಿಲ್ಲ. ಸರ್ಕಾರವಷ್ಟೆ ಅಲ್ಲದೆ ಪ್ರತಿಯೊಂದು ಕಾರ್ಖಾನೆಯ ಮಾಲೀಕರು ಕೂಡ ಮಹಿಳಾ ಕಾರ್ಮಿಕ ಯೋಗಕ್ಷೇಮ ಅಧಿಕಾರಿಯನ್ನು ನೇಮಿಸುವುದು. ವಿದ್ಯಾಭ್ಯಾಸದ ಮಟ್ಟ

ಹೆಚ್ಚಾದಂತೆ ಸ್ತ್ರೀಯರು ಕೈಗಾರಿಕೆಗಳಲ್ಲಿ ದುಡಿಯುವುದರಿಂದ ಮಹಿಳಾ ಕಾರ್ಮಿಕರ ಯೋಗಕ್ಷೇಮದ ಹೊಣೆ ಹೊರಲು ಸಿದ್ಧರಿಲ್ಲದ ಮಾಲೀಕರು ಮಹಿಳೆಯನ್ನು ನೇಮಿಸಿಕೊಳ್ಳುವುದರಲ್ಲಿ ಹಿಂದೇಟುಹಾಕುತ್ತಿರುವ ಬಗ್ಗೆ, ಹೆಣ್ಣುಮಕ್ಕಳು ಸಂಪ್ರದಾಯ ಬದ್ಧವಾಗಿದ್ದು, ಆಧುನಿಕ ಪರಿಕರಗಳ ಜೊತೆ ಕಾರ್ಖಾನೆಗಳಲ್ಲಿ ದುಡಿಯುವ ಮಟ್ಟಕ್ಕೆ ಏರಿರುವುದು ಸ್ವಾಗತಾರ್ಹವಾಗಿದ್ದು, ಮಹಿಳೆಯರು ದೈಹಿಕವಾಗಿ, ಬೌದ್ಧಿಕವಾಗಿ, ಸಾಮಾಜಿಕ ವರ್ಗ ವೈಶಿಷ್ಟವನ್ನು ಹೊಂದಿರುವುದರಿಂದ ಅವರ ಯೋಗಕ್ಷೇಮ ಪುರುಷ ಕಾರ್ಮಿಕರಿಗಿಂತ ಭಿನ್ನವಾಗಿ ಯಾವುದೇ ಒಂದು ಪರಿಸ್ಥಿತಿಯಲ್ಲಿ ಸ್ತ್ರೀಯರು ದೈಹಿಕವಾಗಿ ಪುರುಷರಿಗಿಂತ ಕಠಿಣವಾದ ಕಾರ್ಯವನ್ನು ಮತ್ತು ಉದ್ಯೋಗವನ್ನು ನಿರ್ವಹಿಸಲು ಸಾಧ್ಯವಿಲ್ಲ. ಅಲ್ಲದೆ ಆಕೆ ಮಾತೃಸ್ಥಾನದಲ್ಲಿ ಇರುವುದರಿಂದ ಗರ್ಭಿಣಿ ಮತ್ತು ಬಾಣಂತಿಯ ಸಮಯದಲ್ಲಿ ಆಕೆಗೆ ಸಂಪೂರ್ಣ ವಿಶ್ರಾಂತಿ ಬೇಕು. ಶಿಶುವನ್ನು ಪೋಷಿಸಲು ಆಕೆ ಬಹಳ ಕಾಲವನ್ನು ವಿನಿಯೋಗಿಸಬೇಕು. ತಾಯಿಯಲ್ಲದೆ. ಆಕೆ ಗೃಹಿಣಿಯಾಗಿ, ಗಂಡನಿಗೆ ಸಂಗಾತಿಯಾಗಿ ಸಂಸಾರದ ಸದಸ್ಯರು ಅನಾರೋಗ್ಯ ಪೀಡಿತರಾದರೆ ಅವರ ಕಾಳಜಿ ಮುಂತಾದ ಕೆಲಸದಲ್ಲಿ ಅವಳು ತೊಡಗಿಸಿಕೊಳ್ಳುವುದರಿಂದ ಕಾರ್ಖಾನೆಗಳಲ್ಲಿ ಕೆಲಸ ನಿರ್ವಹಿಸಿದ ಮೇಲೆ, ಮನೆಯಲ್ಲಿಯೂ ಕೆಲಸ ಕಾರ್ಯಗಳನ್ನು ಕೈಗೊಳ್ಳಬೇಕಾಗಿರುವುದರಿಂದ ಮಹಿಳಾ ಕಾರ್ಮಿಕರಿಗೆ ಹೆಚ್ಚು ಗಮನವನ್ನು ನೀಡಬೇಕು. ಆದರೆ ಪುರುಷ ಕಾರ್ಮಿಕರಿಗೆ ಹೆಚ್ಚು ಕಾನೂನು ಅನ್ವಯವಾಗುತ್ತಿದ್ದು, ಹೆಣ್ಣು ಮಕ್ಕಳಿಗಾಗಿ ಯೋಗಕ್ಷೇಮ ಅಧಿಕಾರಿಗಳ ಕೊರತೆ ಇದೆ. ಒಂದೇ ಸಮನೆ ಒಂದೇ ವಿವಿಧ ಯಾಂತ್ರಿಕ ದುಡಿತ, ನಿಂತು ಕೊಂಡೇ ಕೆಲಸ ನಿರ್ವಹಿಸುವುದು ವಿಶ್ರಾಂತಿ ಗೃಹಗಳಿಲ್ಲದೆ ಇರುವುದು, ಕಾರ್ಖಾನೆಗಳಲ್ಲಿ ಮಹಿಳೆಯರ ಆಸಕ್ತಿ ಕಡಿಮೆಯಾಗುತ್ತಿದೆ. ಭಾರತದಲ್ಲಿ ಕಾರ್ಖಾನೆಗಳಲ್ಲಿ ದುಡಿಯುತ್ತಿರುವ ವರ್ಗಕ್ಕೆ ಮನರಂಜನೆಯ ಅವಶ್ಯಕತೆ ಇದೆ. ಯಂತ್ರಗಳ ಬಾರೀ ಸದ್ದು ನಿಂತು ಕೆಲಸ ಮಾಡುವ ಹಾಗೂ ಕಸ ದೂಳುಗಳ ನಡುವೆ ನಿಂತುಕೆಲಸ ನಿರ್ವಹಿಸುವ ಮಹಿಳೆಯರಿಗೆ ಆರೋಗ್ಯದ ಸಮಸ್ಯೆಗಳು ಕಾಣಿಸುತ್ತಿದ್ದು, ಇದರ ಜೊತೆಗೆ ದುಡಿಯುವ ಹೆಣ್ಣು ಮಕ್ಕಳು ಹೊಗೆಸೊಪ್ಪು ಮುಂತಾದವುಗಳನ್ನು ತಿನ್ನುವುದರಿಂದ ಹಲವಾರು ತೊಂದರೆಗಳು ಉಂಟಾಗುತ್ತವೆ. ಮಹಿಳಾ ಕಾರ್ಮಿಕರು ಕಾರ್ಖಾನೆಯ ಯಂತ್ರಗಳಿಂದ ಅಂಗವೈಫಲ್ಯವನ್ನು ಅನುಭವಿಸುವುದರಿಂದ, ಸ್ತ್ರೀಯರು ಕಾರ್ಖಾನೆಗಳಲ್ಲಿ ಒಡವೆಗಳನ್ನು, ಲೋಹದ ಬಳೆಗಳನ್ನು ಧರಿಸಬಾರದೆಂಬ ನಿಯಮಗಳನ್ನು ಮಾಡುವುದಕ್ಕಿಂತ ಕಾರ್ಮಿಕ ಕಲ್ಯಾಣ ಅಧಿಕಾರಿಗಳು ಮಹಿಳಾ ಕಾರ್ಮಿಕರ ಬಗ್ಗೆ ಅಗತ್ಯವಾದ ಕ್ರಮವನ್ನು ತೆಗೆದುಕೊಳ್ಳಬೇಕು. ಮಹಿಳಾ ಕಾರ್ಮಿಕರ ಮಾತೃರಕ್ಷಣೆಯ ಹಕ್ಕುಗಳನ್ನು, ಅವರ ಆರೋಗ್ಯವನ್ನು ರಕ್ಷಿಸುವುದರ ಜೊತೆಗೆ ಪೌಷ್ಠಿಕ ಆಹಾರದ ಸೌಲಭ್ಯ, ಸಹಕಾರ ಸಂಘಗಳ ಮೂಲಕ ಹಣದ ಸಹಾಯ ಮತ್ತು ಮನರಂಜನೆ ಕೇಂದ್ರಗಳನ್ನು ಸ್ಥಾಪಿಸಿ ಅವರನ್ನು ಉತ್ಸಾಹಿತರನ್ನಾಗಿ ಮಾಡಬೇಕು. ಕಾರ್ಮಿಕರಲ್ಲಿ ಪ್ರೀತಿ ವಿಶ್ವಾಸದ ಮಾನವೀಯ

ಮೌಲ್ಯಗಳನ್ನು ಬೆಳೆಸುವ ಕಾರ್ಮಿಕ ಕಲ್ಯಾಣ ಅಧಿಕಾರಿಯ ಪಾತ್ರ ಮಹತ್ವ ವಾದುದು ಎಂದು ಈ ಲೇಖನದಲ್ಲಿ ಹೇಳಲಾಗಿದ್ದು, ಮಹಿಳಾ ಕಾರ್ಮಿಕರ ಸ್ಥಿತಿಗತಿಗಳನ್ನು ವಿವರಿಸಲಾಗಿದ್ದು, ಎಂ.ಆರ್. ಲಕ್ಷಮ್ಮರವರು ಮಹಿಳಾ ಕಾರ್ಮಿಕರ ಬಗ್ಗೆ ಇರುವ ಕಾಳಜಿಯನ್ನು ಈ ಲೇಖನವು ವ್ಯಕ್ತಪಡಿಸುತ್ತದೆ.[೨೬]

ದಿನಾಂಕ ೧೮.೦೨.೧೯೫೫ರ ಸಂಚಿಕೆಯಲ್ಲಿ 'ನಮ್ಮ ಸ್ತ್ರೀಯರಲ್ಲಿ ಸರ್ವತೋಮುಖ ಪ್ರಗತಿ' ಎಂಬ ಶೀರ್ಷಿಕೆಯಡಿಯಲ್ಲಿ ಭಾರತೀಯ ಸ್ತ್ರೀಯರು ಜಗತ್ತಿಗೆ ಅಚ್ಚರಿ ಮೂಡಿಸುವಷ್ಟು ಮುನ್ನಡೆಯುತ್ತಿದ್ದು, ಆಂಧ್ರಪ್ರದೇಶದ ಚುನಾವಣೆಯಲ್ಲಿ ಅತ್ಯಧಿಕ ಸಂಖ್ಯೆಯ ಸ್ತ್ರೀಯರು ಮತದಾನ ಮಾಡಿದ್ದು, ಮತದಾನ ತಮ್ಮ ಹಕ್ಕೆಂದು ಭಾವಿಸಿದ್ದಾರೆ. ಮೈಸೂರು ಸಂಸ್ಥಾನದಲ್ಲಿಯೂ ಮಹಿಳೆಯರು, ಬೆಂಗಳೂರಿನ ಮಹಾನಗರ ಪಾಲಿಕೆಯ ಚುನಾವಣೆಯಲ್ಲಿ ಅತ್ಯಧಿಕ ಸಂಖ್ಯೆಯಲ್ಲಿ ಭಾಗವಹಿಸಿ ರುಕ್ಮಿಣಿಯಮ್ಮ ನರಸಿಂಹಯ್ಯ, ಇಂದಿರಮ್ಮ, ಟಿ.ಕೆ. ಸರಸ್ವತಮ್ಮ ಇವರುಗಳು ಅನೇಕ ಸಮಿತಿಗಳಲ್ಲಿ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುತ್ತಿರುವ ಬಗ್ಗೆ ಮತ್ತು ಮೈಸೂರು ಸಂಸ್ಥಾನದ ಅನೇಕ ಗ್ರಾಮಗಳಲ್ಲಿ ಗ್ರಾಮಪಂಚಾಯಿತಿ ಚುನಾವಣೆಗೆ ಮಹಿಳೆಯರು ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದು, ಕೆಲವು ಗ್ರಾಮಗಳಲ್ಲಿ ಮಹಿಳೆಯರು ಗೆಲುವನ್ನು ಸಾಧಿಸಿರುವ ಬಗ್ಗೆ, ದೇಶದ ಆಡಳಿತದ ತಳಹದಿ ಗ್ರಾಮಪಂಚಾಯಿತಿ ಆಗಿದ್ದು, ಇಂತಹ ಗ್ರಾಮಪಂಚಾಯಿತಿಯಲ್ಲಿ ಸ್ತ್ರೀಯರು ಚುನಾವಣೆಗೆ ಸ್ಪರ್ಧಿಸುತ್ತಿರುವ ಬಗ್ಗೆ ಹಾಸನ ಜಿಲ್ಲೆಯ ಮೂವರು ಮತ್ತು ತುಮಕೂರು ಜಿಲ್ಲೆಯ ಇಬ್ಬರು ಚುನಾವಣಾ ಅಭ್ಯರ್ಥಿಗಳಾಗಿ ಸ್ಪರ್ಧಿಸಿದ್ದು, ದೇಶದ ಸರ್ವಾಂಗೀಣ ಪ್ರಗತಿಯ ಸೂಚಕವಾಗಿದೆ. ಗ್ರಾಮಪಂಚಾಯಿತಿಗೆ ಚುನಾವಣೆಯಲ್ಲಿ ಸ್ಪರ್ಧಿಸುವುದು ಕಷ್ಟಸಾಧ್ಯವೇ ಎಂದು ತಮ್ಮ ಸಂಪಾದಕೀಯದಲ್ಲಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುವ ಎಂ.ಆರ್. ಲಕ್ಷಮ್ಮನವರು ಮಹಿಳೆಯರ ಸರ್ವಾಂಗೀಣ ಪ್ರಗತಿಗೆ ಶ್ರಮಿಸುತ್ತಿದ್ದರೆಂಬುದು ತಿಳಿದುಬರುತ್ತದೆ.[೨೭]

ದಿನಾಂಕ ೨೮.೦೧.೧೯೫೫ ರ ಸಂಚಿಕೆಯಲ್ಲಿ 'ಕಾನೂನಿನ ದೃಷ್ಟಿಯಲ್ಲಿ ಭಾರತದಲ್ಲಿನ ಸ್ತ್ರೀಯರ ಮತ್ತು ಮಕ್ಕಳ ಸ್ಥಾನಮಾನ' ಎಂಬ ಶೀರ್ಷಿಕೆಯ ಅಡಿಯಲ್ಲಿ ಭಾರತದ ರಾಜ್ಯಾಂಗದಲ್ಲಿ ಮೂಲಭೂತ ಹಕ್ಕುಗಳು ಸ್ತ್ರೀಯರಿಗೂ ಪುರುಷರಿಗೂ ಸಮಾನವಾಗಿದ್ದು, ಸ್ತ್ರೀಯರಿಗೆ ಮತದಾನದ ಹಕ್ಕು ದೊರೆತಿದೆ. ಕೇಂದ್ರ ಮತ್ತು ರಾಜ್ಯಗಳ ಆಡಳಿತದಲ್ಲಿ ಅನೇಕ ಕೆಲವು ಸಚಿವರು ಕಾರ್ಯ ನಿರ್ವಹಿಸುತ್ತಿರುವುದನ್ನು ಕಾಣಬಹುದು. ಭಾರತದಲ್ಲಿ ಹಿಂದೂ ಧರ್ಮಕ್ಕೆ ಸೇರಿದ ಸ್ತ್ರೀಯರು ಹೆಚ್ಚಿನ ಸಂಖ್ಯೆಯಲ್ಲಿ ಇದ್ದು, ಅವರಿಗೆ ಆಸ್ತಿಯ ಹಕ್ಕು ದೊರೆತಿಲ್ಲ. ವಿವಾಹ ವಿಚ್ಛೇದನಕ್ಕೆ ಅವಕಾಶವಿಲ್ಲ, ಮರು ವಿವಾಹಕ್ಕೆ ಅವಕಾಶವಿಲ್ಲ. ಆದರೆ ೧೯೫೩ರ ಕಾನೂನು ಹಿಂದೂ ವಿಧವೆಯರ ಪುನರ್‌ವಿವಾಹವನ್ನು ಪುರಸ್ಕರಿಸಿ ಶಾಸನವನ್ನು ರಚಿಸಲಾಗಿದೆ. ೧೯೩೮ರ ಕಾನೂನಿನ ಪ್ರಕಾರ ವಿಧವೆಯು ತನ್ನ ಗಂಡನ ಆಸ್ತಿಯಲ್ಲಿ ಸಮಭಾಗ

ಹೊಂದಲು ಶಾಸನದ ಮಾನ್ಯತೆ ದೊರೆಯಿತು. ೧೯೪೬ ಕಾನೂನಿನಂತೆ ಕೆಲವು ಪರಿಸ್ಥಿತಿಗಳಲ್ಲಿ ಸ್ತ್ರೀಯು ಗಂಡನಿಂದ ಪ್ರತ್ಯೇಕವಾಗಿರಲು ಹಕ್ಕು ದೊರಕಿತು. ಆಕೆಗೆ ಜೀವನ ಪೋಷಣೆಗೆ ಅನುಕೂಲವನ್ನು ಗಂಡ ಮಾಡಿಕೊಡಬೇಕೆಂದು ಕಾನೂನಿನಲ್ಲಿ ಅವಕಾಶ ಮಾಡಿಕೊಳ್ಳಲಾಯಿತು. ೧೯೨೯ ರಲ್ಲಿ ಕಾನೂನು ವಿಶೇಷ ವಿವಾಹ ಕಾಯ್ದೆ ಜಾರಿಗೆ ಬಂದು ಎಲ್ಲಾ ಪಂಗಡಗಳ ನಡುವೆ ಅಂತರ್ ವಿವಾಹಕ್ಕೆ ಅವಕಾಶವನ್ನು ಮಾಡಿಕೊಡಲಾಯಿತು. ಕೆಲವು ಪ್ರಾಂತ್ಯಗಳಲ್ಲಿ ಬಹುಪತ್ನಿತ್ವವನ್ನು ನಿಷೇಧಿಸುವ ಕಾನೂನುಗಳು ಹಾಗೂ ಪುನರ್ ವಿವಾಹ ಕಾಯ್ದೆಯನ್ನು ಜಾರಿಗೆ ತರಲಾಗಿದ್ದು, ಇಡೀ ಭಾರತಕ್ಕೆ ಅನ್ವಯಿಸುವ ಕಾನೂನನ್ನು ಜಾರಿಗೆ ತರಲು ಶಾಸನಸಭೆಯಲ್ಲಿ ಮಸೂದೆಯನ್ನು ಮಂಡಿಸಲಾಗಿದೆ. ನಮ್ಮ ದೇಶದ ಕೆಲವು ಭಾಗಗಳಲ್ಲಿ ಇನ್ನು ದೇವದಾಸಿ ಪದ್ಧತಿ ಜಾರಿಯಲ್ಲಿದ್ದು, ಮದ್ರಾಸ್ ಮತ್ತು ಮುಂಬೈ ಸರ್ಕಾರಗಳಲ್ಲಿ ದೇವದಾಸಿ ಪದ್ಧತಿಯನ್ನು ತಡೆಗಟ್ಟುವ ಕಾನೂನು ಜಾರಿಗೆ ಬಂದಿರುತ್ತದೆ. ಕೈಗಾರಿಕೆಗಳಲ್ಲಿ ತೋಟಗಳಲ್ಲಿ ಗಣಿಗಳಲ್ಲಿ ಕಾರ್ಮಿಕರಾಗಿ ದುಡಿಯುವ ಸ್ತ್ರೀಯರಿಗೆ ಕಾನೂನುಗಳು ಜಾರಿಗೆ ಬಂದಿವೆ. ಆದರೆ, ಇನ್ನೂ ಸಮಾನ ಕೆಲಸಕ್ಕೆ ಸಮಾನ ವೇತನ ಜಾರಿಗೆ ಬಂದಿರುವುದಿಲ್ಲ. ಮಕ್ಕಳ ದುಡಿಮೆಗೆ ನಿಷೇಧ ಏರುವ ಕಾನೂನುಗಳು ಜಾರಿಗೆ ಬಂದಿದ್ದು, ೧೯೩೩ರ ಕಾನೂನು ಮಕ್ಕಳ ಜೀತವನ್ನು ನಿಷೇಧಿಸುತ್ತದೆ. ೧೯೩೮ರ ಕಾನೂನು ೧೨ ವರ್ಷದ ಒಳಗಿನ ಮಕ್ಕಳು, ಸಿಮೆಂಟ್, ಕಡ್ಡಿಪೆಟ್ಟಿಗೆ, ಸಿಡಿಮದ್ದು ಮುಂತಾದ ಕೈಗಾರಿಕೆಯಲ್ಲಿ ಕೆಲಸ ಮಾಡುವುದನ್ನು ನಿಷೇಧಿಸುತ್ತದೆ. ೧೯೫೦ರ ಕಾನೂನು ಬಡ ಮಕ್ಕಳಿಗೆ ವ್ಯಾಪಾರ ಮತ್ತು ವೃತ್ತಿ ಕೈಕೆಲಸವನ್ನು ಕೊಡಿಸುವ ಅವಕಾಶ ಮಾಡಿಕೊಡಲಾಗಿದೆ. ೧೨ ವರ್ಷದ ಮಕ್ಕಳನ್ನು ತಂದೆತಾಯಿಗಳು ತೊರೆಯುವಂತಿಲ್ಲ. ೧೮೯೭ರ ಕಾನೂನು ಬಾಲಾಪರಾಧಿಗಳಿಗೆ ಸಂಬಂಧಪಟ್ಟಿದ್ದು, ಅವರನ್ನು ಸುಧಾರಿಸುವ. ಬಗೆಗಿನ ಕಾನೂನನ್ನು ಜಾರಿಗೆ ತಂದಿದೆ. ಸ್ತ್ರೀಯರ ಮತ್ತು ಮಕ್ಕಳ ಹಿತದೃಷ್ಟಿಯಿಂದ ೧೯೫೪ ಆಗಸ್ಟ್ ತಿಂಗಳಿನಲ್ಲಿ ಕೇಂದ್ರ ಸಮಾಜ ಕಲ್ಯಾಣ ಮಂಡಳಿಯು ಸ್ಥಾಪಿತವಾಗಿ ಸಮಾಜದ ಎಲ್ಲಾ ಅಗತ್ಯಗಳನ್ನು ಪೂರೈಸಲು ಮಹಿಳೆಯರ ಮತ್ತು ಮಕ್ಕಳ ಕಲ್ಯಾಣಕ್ಕೆ ಶ್ರಮಿಸುತ್ತಿರುವ ಬಗ್ಗೆ ವಿವರವಾದ ಲೇಖನ ಪ್ರಕಟವಾಗಿದೆ.

ದಿನಾಂಕ ೨೮.೦೧.೧೯೫೫ರ ಸಂಚಿಕೆಯಲ್ಲಿ 'ಸ್ತ್ರೀ ಶಿಕ್ಷಣ' ಎಂಬ ಶೀರ್ಷಿಕೆಯಲ್ಲಿ ಲೇಖನ ಪ್ರಕಟವಾಗಿದ್ದು, ಮಹಿಳೆಯರಿಗೆ ಹೆಚ್ಚಿನ ಶಿಕ್ಷಣದ ಅಗತ್ಯತೆಯ ಬಗ್ಗೆ ಹೇಳಿರುವ ಲೇಖನವು ಪ್ರಾಚೀನಕಾಲದಿಂದಲೂ, ಸ್ತ್ರೀಯರಿಗೆ ನಿರ್ಬಂಧವನ್ನು ವಿಧಿಸಲಾಗಿರುವ ಬಗ್ಗೆ ಅದರಿಂದಾಗಿ ಮಹಿಳೆಯರ ಪ್ರಗತಿ ಕುಂಠಿತವಾಗಿರುವುದರಿಂದ ಇಂದು ಶಿಕ್ಷಣದ ಅಗತ್ಯತೆ, ಸಾಮಾಜಿಕ ಜೀವನದಲ್ಲಿ ತೊಡಗಿಕೊಳ್ಳುವಿಕೆಯ ಅಗತ್ಯತೆ ಇದ್ದು, ಗಂಡಸು ಹೆಂಗಸು ಎಂಬ ಭೇದಭಾವವನ್ನು ಬಿಡಬೇಕು. ಹಿಂದಿನಿಂದಲೂ ಕೆಲವು ಮಹಿಳೆಯರು ಉನ್ನತ ಮಟ್ಟದ ಸಾಧನೆಯನ್ನು ಮಾಡಿದ್ದು ಎಂದು ವಿದ್ಯಾಭ್ಯಾಸದ ಮೂಲತತ್ವವಾದ ಆತ್ಮಜ್ಞಾನದ ಅಗತ್ಯವಿದೆ.

ಸ್ತ್ರೀಯರು ಯಾವುದಾದರೂ ಒಂದು ಭಾಷೆಯಲ್ಲಿ ಆಳವಾದ ಜ್ಞಾನವನ್ನು ಪಡೆದುಕೊಳ್ಳಬೇಕು. ಹೆಣ್ಣುಮಕ್ಕಳ ವಿವಾಹದ ವಯಸ್ಸನ್ನು ಏರಿಸಬೇಕು ಹೆಣ್ಣುಮಕ್ಕಳು ವಿದ್ಯೆ, ಸಮಾಜ ಸೇವಾ ಕಾರ್ಯ ಇವುಗಳಲ್ಲಿ ತೊಡಗಿಸಿಕೊಳ್ಳಬೇಕು. ಈ ಲೇಖನವು ಮಹಿಳೆಯರಿಗೆ ಶಿಕ್ಷಣದ ಅವಶ್ಯಕತೆಯನ್ನು ಒತ್ತಿ ಹೇಳುವ ಲೇಖನವಾಗಿದ್ದು, ಮಹಿಳೆಯರು ಉನ್ನತ ಶಿಕ್ಷಣವನ್ನು ಪಡೆದು ಸಮಾಜ ಸೇವಾ ಕಾರ್ಯದಲ್ಲಿ ತೊಡಗಿಸಿಕೊಳ್ಳಲು ಪ್ರೇರೇಪಿಸುತ್ತದೆ.[೨೮]

ದಿನಾಂಕ ೦೪.೦೨.೧೯೫೫ರ ಸಂಚಿಕೆಯಲ್ಲಿ 'ಪ್ಲಾಂಟೇಷನ್‌ಗಳಲ್ಲಿ ಸ್ತ್ರೀಯರು' ಎಂಬ ಶೀರ್ಷಿಕೆಯ ಅಡಿಯಲ್ಲಿ ತೋಟಗಳಲ್ಲಿ ಕೆಲಸ ಮಾಡುವ ಸ್ತ್ರೀಯರ ಬಗ್ಗೆ ಲೇಖನದಲ್ಲಿ ಪ್ರಸ್ತಾಪಿಸಲಾಗಿದ್ದು, ಹಳ್ಳಿಯ ಮಹಿಳೆಯರು ಕಾರ್ಖಾನೆಗಳಲ್ಲಿ ಕೆಲಸ ನಿರ್ವಹಿಸಲು ಸಾಧ್ಯವಿಲ್ಲದಿರುವುದರಿಂದ ಹಾಗೂ ಈ ಕೆಲಸಕ್ಕೆ ಹೆಚ್ಚಿನ ನೈಪುಣ್ಯತೆ ಅಗತ್ಯವಿಲ್ಲದ್ದರಿಂದ ವ್ಯವಸಾಯ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಈ ಕೆಲಸಗಳಲ್ಲಿ ಕಡಿಮೆ ಕೂಲಿ ಇದ್ದು, ಸ್ತ್ರೀಯರು ಹೆಚ್ಚಾಗಿ ಪ್ಲಾಂಟೇಷನ್ ಕೆಲಸಕ್ಕೆ ನೇಮಕವಾಗಿದ್ದು ಟೀ ಎಲೆಗಳನ್ನು ಬಿಡಿಸುವುದು, ಕಾಫಿ ಹಣ್ಣುಗಳನ್ನು ಆರಿಸುವುದು, ಕಾಫಿ, ಟೀ ಮತ್ತು ರಬ್ಬರ್ ತೋಟಗಳಲ್ಲಿ ಕಳೆಕೀಳುವ ಕೆಲಸವನ್ನು ಮಾಡುತ್ತಾರೆ. ಪ್ಲಾಂಟೇಷನ್‌ಗಳು ಪಶ್ಚಿಮ ಬಂಗಾಳ ಮತ್ತು ಅಸ್ಸಾಂ ರಾಜ್ಯದಲ್ಲಿ ಟೀ ತೋಟಗಳು ಹೆಚ್ಚಾಗಿ ಇದ್ದು, ದಕ್ಷಿಣ ಭಾರತದಲ್ಲಿ ಟೀ, ಕಾಫಿ, ರಬ್ಬರ್ ಮತ್ತು ಏಲಕ್ಕಿ ತೋಟಗಳೆಲ್ಲವೂ ಇದ್ದು, ಹೆಚ್ಚಿನ ಕಾರ್ಮಿಕರು ಕೆಲಸವನ್ನು ನಿರ್ವಹಿಸುತ್ತಿದ್ದಾರೆ. ೧೯೫೧ರ 'ಪ್ಲಾಂಟೇಷನ್ ಲೇಬರ್ ಆ್ಯಕ್ಟ್'ನಲ್ಲಿ ಕಾರ್ಮಿಕರಿಗೆ ಸೌಲಭ್ಯವನ್ನು ಮಾಲೀಕರು ನೀಡಬೇಕೆಂದು ಹೇಳಿದ್ದರೂ, ಅವರಿಗೆ ಕೆಲಸ ಮಾಡುವ ವಾತಾವರಣದಲ್ಲಿ ಪೌಷ್ಠಿಕ ಆಹಾರದ ಕೊರತೆ ಜೊತೆಗೆ ಸಾಂಕ್ರಾಮಿಕ ರೋಗಗಳ ಬಾಧೆ, ಮಹಿಳೆಯರಿಗೆ ಹೆರಿಗೆಯ ರಜಾದ ಸೌಲಭ್ಯ ಇನ್ನೂ ಮುಂತಾದ ಅನೇಕ ಸಮಸ್ಯೆಗಳ ನಡುವೆ ಕೆಲಸ ನಿರ್ವಹಿಸುವ ತೋಟದ ಕಾರ್ಮಿಕರ ಪರಿಸ್ಥಿತಿ ದುಸ್ಥಿತಿಯಲ್ಲಿದ್ದು, ಅವರಿಗೆ ಸಕಲ ಸೌಲಭ್ಯಗಳನ್ನು ಕಾನೂನಿನ ಮೂಲಕ ಒದಗಿಸಿಕೊಡಬೇಕೆಂದು ಈ ಲೇಖನದಲ್ಲಿ ಪ್ರಕಟವಾಗಿದ್ದು ಎಂ.ಆರ್. ಲಕ್ಷಮ್ಮನವರು ಮಹಿಳಾ ಕಾರ್ಮಿಕರ ಬಗ್ಗೆ ಕಾಳಜಿ ಹೊಂದಿದವರಾಗಿದ್ದು, ಪ್ರತಿಯೊಂದು ಕ್ಷೇತ್ರದಲ್ಲಿಯೂ ಆಸಕ್ತಿ ಮತ್ತು ಜ್ಞಾನವನ್ನು ಹೊಂದಿರುವುದು ಸ್ಪಷ್ಟವಾಗುತ್ತದೆ.[೨೯]

ದಿನಾಂಕ ೧೧.೦೨.೧೯೫೫ ರ ಸಂಚಿಕೆಯಲ್ಲಿ 'ಅಂತಾರಾಷ್ಟ್ರೀಯ ಕಾರ್ಮಿಕ ಸಂಸ್ಥೆ ಮತ್ತು ಸ್ತ್ರೀಯರು' ಎಂಬ ಶೀರ್ಷಿಕೆಯಡಿಯಲ್ಲಿ ಕೈಗಾರಿಕೆಗಳಲ್ಲಿ ದುಡಿಯುವ ಸ್ತ್ರೀಯರ ಕಷ್ಟನಷ್ಟಗಳನ್ನು ಸುಧಾರಿಸುವ ಸಲುವಾಗಿ ಅಂತಾರಾಷ್ಟ್ರೀಯ ಕಾರ್ಮಿಕ ಸಂಸ್ಥೆಯು ಕಾರ್ಯ ನಿರ್ವಹಿಸುತ್ತಿದ್ದು ಕಾರ್ಮಿಕ ಮತ್ತು ಮಾಲೀಕರ ನಡುವೆ ಉದ್ಭವಿಸುವ ಸಮಸ್ಯೆಗಳನ್ನು ಬಗೆಹರಿಸುವ ಸಲುವಾಗಿ ಈ ಸಂಸ್ಥೆಯು ಮಾರ್ಗದರ್ಶಕವಾಗಿ ಕಾರ್ಯ ನಿರ್ವಹಿಸುತ್ತಿದೆ. ಭಾರತದಲ್ಲಿ ಮಹಿಳಾ ಕಾರ್ಮಿಕರಿಗೆ ಸಂಬಂಧಪಟ್ಟಂತೆ ಕಾನೂನು ರಚಿಸಲು ಈ ಸಂಸ್ಥೆಯು

ಮಾರ್ಗ ತೋರಿಸಿದ್ದು, ಸ್ತ್ರೀ ಪುರುಷರ ಸಮಾನತೆಯನ್ನು ಅಂಗೀಕರಿಸಿ ಸ್ತ್ರೀಯರ ಹಕ್ಕುಬಾಧ್ಯತೆಗಳನ್ನು ಸಂರಕ್ಷಿಸುತ್ತಿವೆ. ಪ್ರಾಚೀನಕಾಲದಿಂದಲೂ ಸ್ತ್ರೀಯರ ವಿಷಯದಲ್ಲಿ ಭೇದಭಾವವನ್ನು ಆಚರಿಸುತ್ತಿದ್ದು ಅಂತಾರಾಷ್ಟ್ರೀಯ ಕಾರ್ಮಿಕ ಸಂಸ್ಥೆಯು ಪುರುಷರಿಗೆ ಸಮಾನರಾದ ನಾಗರಿಕ ಎಂದು ಸ್ತ್ರೀಯರನ್ನು ಅಂಗೀಕರಿಸಿ ಸ್ತ್ರೀಯರಿಗೆ ಕುಟುಂಬದ ಜವಾಬ್ದಾರಿಯ ಜೊತೆಗೆ ಆಕೆಗೆ ಇರುವ ತೊಂದರೆಗಳನ್ನು ನಿವಾರಿಸಲು ಮತ್ತು ಸಾಮಾಜಿಕ ಮತ್ತು ಆರ್ಥಿಕ ಜೀವನದಲ್ಲಿ ಪರಿಣಾಮಕಾರಿಯಾದ ಪಾತ್ರವನ್ನು ನಿರ್ವಹಿಸಲು ಈ ಸಂಸ್ಥೆಯು ಶ್ರಮಿಸುತ್ತಿದೆ. ಜನಸಂಖ್ಯೆ ಹೆಚ್ಚಿರುವ ದೇಶದಲ್ಲಿ ಬಡತನವನ್ನು ನಿರ್ಮೂಲನೆ ಮಾಡುವುದು ಸುಲಭವಲ್ಲ. ಆದರೂ ಈ ಸಂಸ್ಥೆ ತನ್ನ ಪ್ರಯತ್ನವನ್ನು ಮುಂದುವರಿಸುತ್ತಿದೆ. ಮಹಿಳೆಯರಿಗೆ ಸಂಬಂಧಿಸಿದಂತೆ ಆದೇಶ ಮತ್ತು ಕಾನೂನುಗಳನ್ನು ಜಾರಿಗೆ ತಂದಿದ್ದು, ಎಲ್ಲಾ ಮಹಿಳಾ ಕಾರ್ಮಿಕರಿಗೆ ಅನ್ವಯಿಸುವ ಕಾನೂನುಗಳಿದ್ದು ಅಂತಾರಾಷ್ಟ್ರೀಯ ಮಟ್ಟದಲ್ಲಿ ಹಿಂದುಳಿದ ಮತ್ತು ಅಭಿವೃದ್ಧಿಯಲ್ಲಿ ಕೆಳಮಟ್ಟದಲ್ಲಿರುವ ರಾಷ್ಟ್ರಗಳೆಲ್ಲವೂ ಒಂದೇ ಸಮನಾದ ಪ್ರಗತಿಯನ್ನು ಸಾಧಿಸಲು ಈ ಸಂಸ್ಥೆ ಶ್ರಮಿಸುತ್ತಿದೆ. ಹೆರಿಗೆಗೆ ಸಂಬಂಧಪಟ್ಟ ರಜೆಯನ್ನು ನೀಡುವ ಬಗ್ಗೆ, ರಾತ್ರಿ ವೇಳೆಯಲ್ಲಿ ಸ್ತ್ರೀಯರನ್ನು ಕೆಲಸಕ್ಕೆ ನೇಮಕ ಮಾಡಿಕೊಳ್ಳುವ ಬಗ್ಗೆ, ಗಣಿಗಳಲ್ಲಿ ಕೆಲಸ ನಿರ್ವಹಿಸುವ ಬಗ್ಗೆ ಕಾನೂನುಗಳನ್ನು ಮಾಡಲಾಗಿದ್ದು, ಅನೇಕ ಸಮ್ಮೇಳನಗಳನ್ನು ಬೇರೆ ಬೇರೆ ದೇಶಗಳಲ್ಲಿ ಹಮ್ಮಿಕೊಂಡು ಅನೇಕ ನಿಪುಣರು ಇವುಗಳ ಬಗ್ಗೆ ಚರ್ಚಿಸುತ್ತಾರೆ. ಅಂತಾರರಾಷ್ಟ್ರೀಯ ಕಾರ್ಮಿಕ ಸಂಸ್ಥೆಯು ಸಮಾನ ಕೆಲಸಕ್ಕೆ ಸಮಾನ ವೇತನವನ್ನು ನೀಡುವ ಬಗ್ಗೆ, ಮಹಿಳಾ ಕಾರ್ಮಿಕರ ಬಗ್ಗೆ, ಆರೋಗ್ಯ ಮತ್ತು ಅವರ ಯೋಗಕ್ಷೇಮಕ್ಕೆ ಸಂಬಂಧಪಟ್ಟಂತೆ ಕಾನೂನು ರಚಿಸುವಲ್ಲಿ ಈ ಸಂಸ್ಥೆಯು ದುಡಿಯುತ್ತಿದ್ದು, ಸ್ತ್ರೀಯರಿಗೆ ಸ್ಥಾನಮಾನಗಳನ್ನು ದೊರಕಿಸುವುದೇ ಅಂತಾರಾಷ್ಟ್ರೀಯ ಕಾರ್ಮಿಕ ಸಂಸ್ಥೆಯ ಗುರಿಯಾಗಿದೆ ಎಂಬ ಲೇಖನವು ಪ್ರಕಟವಾಗಿದ್ದು, ಮಹಿಳಾ ಕಾರ್ಮಿಕರ ಸ್ಥಿತಿಗತಿಗಳ ಮೇಲೆ ಬೆಳಕು ಚೆಲ್ಲುವಂತಿದೆ.[೩೦]

ದಿನಾಂಕ ೨೫.೦೨.೧೯೫೫ ರ ಸಂಚಿಕೆಯಲ್ಲಿ 'ಗೃಹಿಣಿಯಿಂದ ನಡೆಸಲ್ಪಟ್ಟಿರುವ ಜಯಪ್ರದ ಪತ್ರಿಕೆ' ಎಂಬ ಶೀರ್ಷಿಕೆಯಡಿಯಲ್ಲಿ ಅಮೆರಿಕದ ಮಿಚಿಗನ್ ರಾಜ್ಯದ ಗ್ರಾಮೀಣ ಪ್ರದೇಶದಲ್ಲಿ ಅನೇಕ ಪತ್ರಿಕೆಗಳು ಅಲ್ಲಿನ ಜನರಿಗೆ ದೊರೆಯುತ್ತಿದ್ದು, ಸ್ಥಳೀಯ ವಿಚಾರಗಳನ್ನು ತಿಳಿಸುವ ಪತ್ರಿಕೆ ಇರಲಿಲ್ಲ. ಬೆಟ್ಟಿ ಮತ್ತು ಮೇರಿಯನ್ ವೈಟ್ ಎಂಬ ಗೃಹಿಣಿಯರು ಒಂದು ಪತ್ರಿಕೆಯನ್ನು ಪ್ರಾರಂಭಿಸಿದ್ದು ಹತ್ತು ಪುಟಗಳ 'ಫೋರ್ ಕಾರ್ನರ್ಸ್ ಕ್ರಾಸ್' ಎಂಬ ಪತ್ರಿಕೆ ೪೦೦೦ ಕ್ಕೂ ಹೆಚ್ಚು ಪ್ರತಿಗಳು ಮಾರಾಟವಾಗುತ್ತಿದ್ದು, ಸ್ಥಳೀಯ ವಿಷಯಗಳ ಸಂಪೂರ್ಣ ವಿವರಗಳನ್ನು ಒಳಗೊಂಡ ಪತ್ರಿಕೆಯಾಗಿದ್ದು, ಆ ಪತ್ರಿಕೆ ರಾಷ್ಟ್ರೀಯ ಸುದ್ದಿಗಳಿಗೆ ಹೆಚ್ಚಿನ ಮಹತ್ವವನ್ನು ನೀಡಿದೆ. ಸ್ಥಳೀಯ ಸುದ್ದಿಗೆ ಹೆಚ್ಚಿನ ಮಹತ್ವ ನೀಡಿ ಸ್ಥಳೀಯ ಚುನಾವಣೆಯಲ್ಲಿ ಈ ಪತ್ರಿಕೆ ಬೆಂಬಲಿಸಿದ ಪಕ್ಷವು ಚುನಾವಣೆಯಲ್ಲಿ ಗೆದ್ದ ಬಗ್ಗೆ ಮತ್ತು ಹೆಚ್ಚಿನ ಸಂಖ್ಯೆಯ ನಾಗರಿಕರು ಮತದಾನ ಮಾಡಲು ಪತ್ರಿಕೆ ಕರೆಕೊಟ್ಟಿದ್ದರಿಂದ ಹೆಚ್ಚಿನ ಸಂಖ್ಯೆಯ ಜನರು

ತಮ್ಮ ಹಕ್ಕನ್ನು ಚಲಾಯಿಸುವ ಬಗ್ಗೆ ಪ್ರಚಾರ ಮಾಡಿದ್ದು ಪತ್ರಿಕೆಯು ತಮ್ಮ ಮತದಾನದ ಹಕ್ಕನ್ನು ಚಲಾಯಿಸಿದವರಿಗೆ ಬಹುಮಾನವನ್ನು ನೀಡಿತು. ಹೀಗೆ ಮಹಿಳೆಯರಿಂದ ಆರಂಭಿಸಲ್ಪಟ್ಟ ಪತ್ರಿಕೆ ಸಮಾಜದ ಸುಧಾರಣೆಗಳಲ್ಲಿ ಪ್ರಮುಖ ಪಾತ್ರವಹಿಸಿದ ಬಗ್ಗೆ ಈ ಲೇಖನದಲ್ಲಿ ಪ್ರಕಟವಾಗಿದ್ದು ಮಹಿಳೆಯರು ಯಾವ ಕ್ಷೇತ್ರದಲ್ಲಿಯೂ ಹಿಂದುಳಿದಿಲ್ಲವೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ ಎಂ.ಆರ್. ಲಕ್ಷಮ್ಮನವರು ರಾಜಕೀಯ ಕ್ಷೇತ್ರದಲ್ಲಿ ಜನಾಭಿಪ್ರಾಯ ಮೂಡಿಸುವುದರ ಜೊತೆಗೆ ದೇಶದ ಅರ್ಧದಷ್ಟಿರುವ ಮಹಿಳೆಯರು ನಿರ್ವಹಿಸಬೇಕಾದ ಪಾತ್ರದ ಬಗ್ಗೆ ವಿವರಿಸಿದ್ದಾರೆ.೩೧

ದಿನಾಂಕ ೧೧.೦೩.೧೯೫೫ ರ ಸಂಚಿಕೆಯಲ್ಲಿ 'ಸ್ತ್ರೀಯರಿಗಾಗಿ ಸಾಮಾಜಿಕ ಹಿತರಕ್ಷಣಾ ಕಾರ್ಯ' ಎಂಬ ಶೀರ್ಷಿಕೆಯಡಿಯಲ್ಲಿ ಸ್ವಾತಂತ್ರ್ಯದ ಉದಯವಾಗಿ ಏಳು ವರ್ಷಗಳು ಕಳೆದ ಬಗ್ಗೆ ರಾಜಕೀಯ ಸ್ವಾತಂತ್ರ್ಯ, ಆರ್ಥಿಕ ಸ್ವತಂತ್ರ್ಯ ದೊರೆತ ಬಗ್ಗೆ, ಇಂದಿನ ಸನ್ನಿವೇಶದಲ್ಲಿ ಭಾರತದ ಪುರುಷರು ಮತ್ತು ಮಹಿಳೆಯರು ದೇಶದ ಅಭಿವೃದ್ಧಿಗಾಗಿ ಹೊಣೆಗಾರಿಕೆಯನ್ನು ತೆಗೆದುಕೊಳ್ಳಬೇಕಾದ ಬಗ್ಗೆ ಈ ಲೇಖನದಲ್ಲಿ ಚರ್ಚಿಸಲಾಗಿದೆ. ಭಾರತದ ಸಮಾಜವು ಸ್ತ್ರೀಯರಿಗೆ ಗೌರವದ ಸ್ಥಾನಮಾನ ನೀಡಿದ್ದು, ಅನೇಕ ಮಹಿಳೆಯರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದಾರೆ. ಮೂವತ್ತು ವರ್ಷಗಳ ಹಿಂದೆ ಸ್ತ್ರೀಯರು ಮನೆ ಒಳಗಿನಿಂದ ಹೊರ ಬಂದು ಪುರುಷರೊಂದಿಗೆ ಕೆಲಸ ಮಾಡುವುದು ಮತ್ತು ರಾಷ್ಟ್ರ ಪುನರ್‌ರಚನೆಯಲ್ಲಿ ಪಾಲ್ಗೊಳ್ಳುವುದು ಸಾಧ್ಯವಿಲ್ಲದ ಮಾತಾಗಿತ್ತು. ನಂತರದ ಕಾಲದಲ್ಲಿ ಅನೇಕ ಸಾಮಾಜಿಕ ಸುಧಾರಣಾಕಾರರ ಪ್ರಯತ್ನದ ಫಲವಾಗಿ ಹೆಣ್ಣುಮಕ್ಕಳಿಗೆ ಶಿಕ್ಷಣ ದೊರೆತು ಪರದಾ ಪದ್ಧತಿಯನ್ನು ತ್ಯಜಿಸಿ ಮನೆಯಿಂದ ಹೊರಬಂದರು. ಮಹಾತ್ಮ ಗಾಂಧಿಯವರು ಭಾರತದ ರಾಜಕೀಯದ ಆಂದೋಲನದ ನೇತೃತ್ವವನ್ನು ವಹಿಸಿಕೊಂಡು ಸಾಮಾನ್ಯ ಜನತೆಗೆ ಅಹಿಂಸಾತ್ಮಕ ಚಳವಳಿಯನ್ನು ಶಸ್ತ್ರವನ್ನಾಗಿ ಅನುಗ್ರಹಿಸಿ, ಚಳವಳಿಯಲ್ಲಿ ಪುರುಷರ ಸರಿಸಮಾನರಾಗಿ ಮಹಿಳೆಯರು ಭಾಗವಹಿಸಬೇಕೆಂದು ಕರೆಕೊಟ್ಟರು. ಇದೇ ಸಮಯದಲ್ಲಿ ಸ್ತ್ರೀಯರ ಪಾವಿತ್ರ್ಯತೆ ಮತ್ತು ಪರಿಶುದ್ಧತೆಯನ್ನು ಎತ್ತಿಹಿಡಿಯಲು ಸೂಚಿಸಿದ ಗಾಂಧೀಜಿಯವರು ಪ್ರಯತ್ನಿಸಿದರು. ಸ್ವತಂತ್ರ್ಯಭಾರತದಲ್ಲಿ ಪ್ರತಿ ಮಹಿಳೆಯರು ಪೂರ್ಣ ಪ್ರಜೆಯಾಗಿ ಬಾಳಲು, ಸಂಸಾರದೊಳಗೆ ಯಜಮಾನಿಕೆಯನ್ನು ನಿರ್ವಹಿಸಲು ಶಿಕ್ಷಣ ಮತ್ತು ತಿಳುವಳಿಕೆಯನ್ನು ಕೊಡಬೇಕು. ಭಾರತದಲ್ಲಿ ಸ್ತ್ರೀಪುರುಷರು ಹೊಣೆಗಾರಿಕೆಯನ್ನು ಸಮಾನವಾಗಿ ನಿರ್ವಹಿಸಿದ್ದು, ಬೇರೆ ಬೇರೆ ದೇಶಗಳಲ್ಲಿ ದೀರ್ಘಕಾಲದಿಂದ ಮಹಿಳಾ ಚಳವಳಿಗಳ ಮತ್ತು ಹೋರಾಟದ ಪರಿಣಾಮವಾಗಿ ಅಲ್ಲಿನ ಮಹಿಳೆಯರಿಗೆ ರಾಜಕೀಯ ಸ್ಥಾನಮಾನಗಳು ದೊರೆತವು. ಆದರೆ ಭಾರತದಲ್ಲಿ ಸ್ವಾತಂತ್ರ್ಯಚಳವಳಿಯ ಆಂದೋಲನ ಮತ್ತು ತ್ಯಾಗದ' ಫಲವಾಗಿ ಸಮಾನಾವಕಾಶಗಳು ದೊರೆತವು. ಸ್ವಾತಂತ್ರ್ಯಪೂರ್ವದಲ್ಲಿ ಮಹಿಳೆಯರಿಗೆ ಸಮಾಜಸೇವೆ ಮಾಡುವುದು ಸುಲಭದ ಮಾತಾಗಿರಲಿಲ್ಲ. ಸ್ತ್ರೀಯರಲ್ಲಿ ಸಾಮಾಜಿಕ

ಜಾಗೃತಿಯನ್ನು ಉಂಟುಮಾಡುವುದು ಮಹತ್ವದ ಜವಾಬ್ದಾರಿಯಾಗಿದ್ದು, ಸಾಮಾಜಿಕ ಯೋಗಕ್ಷೇಮವೆಂದರೆ ವ್ಯಕ್ತಿಗಳ ಬಗ್ಗೆ ದಯೆ ಅಥವಾ ಸಹಾಯ ಮಾಡುವ ಮನೋಭಾವನೆಯಿಂದ ಕೂಡಿ ನೆರವು ನೀಡುವುದು ಎಂದು ಜನರಿಗೆ ಅರ್ಥವಾಗಿದೆ. ಆಂಧ್ರದಲ್ಲಿ ಮೂವರು ಮಹಿಳೆಯರು ಚುನಾವಣೆಯಲ್ಲಿ ಗೆದ್ದ ಬಗ್ಗೆ ಈ ಲೇಖನದಲ್ಲಿ ಪ್ರಕಟಿಸಿದ್ದು, ಮಹಿಳೆಯರ ಏಳಿಗೆಗೆ ಶಿಕ್ಷಣದ ಅಗತ್ಯತೆಯ ಬಗ್ಗೆ ಹೇಳಿದ್ದಾರೆ.[೩೨]

ದಿನಾಂಕ ೨೨.೦೪.೧೯೫೫ ರ ಸಂಚಿಕೆಯಲ್ಲಿ 'ಪಂಚವಾರ್ಷಿಕ ಯೋಜನೆ ಮತ್ತು ಸ್ತ್ರೀಯರು' ಎಂಬ ಶೀರ್ಷಿಕೆಯಡಿಯಲ್ಲಿ ಜಾತ್ಯಾತೀತ ರಾಷ್ಟ್ರವಾದ ಭಾರತದಲ್ಲಿ ಸ್ತ್ರೀ ಪುರುಷರಿಗೆ ಸಮಾನ ಅವಕಾಶವಿದ್ದು, ರಾಷ್ಟ್ರದ ಅಭ್ಯುದಯದಲ್ಲಿ ಮಹಿಳೆಯರ ಪಾತ್ರ ಬಹು ಮುಖ್ಯವಾಗಿದ್ದು, ಸಮಾಜಸುಧಾರಣಾ ಕಾರ್ಯದಲ್ಲಿ ಮಹಿಳೆಯರ ಪಾತ್ರ ವಿಶೇಷವಾಗಿದೆ. ವಿದ್ಯಾಭ್ಯಾಸ ಕ್ಷೇತ್ರದಲ್ಲಿ, ಆರೋಗ್ಯ ಕ್ಷೇತ್ರದಲ್ಲಿ ಮಹಿಳೆಯರ ಪಾತ್ರ ಮಹತ್ವವಾದದ್ದು 'ತಾಯಿಯೇ ಮೊದಲ ಗುರು' ಎಂಬ ಗಾದೆ ಮಾತಿನಂತೆ ವಿದ್ಯಾಕ್ಷೇತ್ರದಲ್ಲಿ ದುಡಿಯಲು ಮಹಿಳೆಯರು ಶಿಕ್ಷಕ ವೃತ್ತಿಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕು. ಹಾಗೆಯೇ ಶಿಶುಸಂರಕ್ಷಣಾ ಕೇಂದ್ರಗಳಲ್ಲಿ ವೈದ್ಯರಾಗಿ, ದಾದಿಯರಾಗಿ, ಸೂಲಗಿತ್ತಿಯರಾಗಿ ಕೆಲಸ ನಿರ್ವಹಿಸಲು ವಿದ್ಯಾವಂತ ಮಹಿಳೆಯರು ಮುಂದೆ ಬರಬೇಕು. ಆಹಾರ ಸಮಸ್ಯೆಯನ್ನು ಹೋಗಲಾಡಿಸಲು ಸ್ತ್ರೀಯರ ಪಾತ್ರ ಬಹುಮುಖ್ಯವಾಗಿದ್ದು ಮನೆಯ ಅವಶ್ಯಕತೆಗೆ ಬೇಕಾದ ಸೊಪ್ಪು ತರಕಾರಿಗಳನ್ನು ಮನೆಯ ಕೈತೋಟದಲ್ಲಿಯೇ ಬೆಳೆಯುವುದರಿಂದ ಹೆಚ್ಚಿನ ಅನುಕೂಲವಾಗಬಹುದು. ಅದರ ಜೊತೆಗೆ ಮಿತಸಂತಾನ ಯೋಜನೆಯನ್ನು ಜಾರಿಗೆ ತರುವುದರಿಂದ ಹೆಚ್ಚುತ್ತಿರುವ ಜನಸಂಖ್ಯೆಯನ್ನು ತಡೆಗಟ್ಟಬಹುದು. ಮಿತಸಂತಾನ ಯೋಜನೆಗೆ ಸಂಬಂಧಪಟ್ಟ ತಿಳುವಳಿಕೆ ಮೊದಲು ಮಹಿಳೆಯರಿಗೆ ಪ್ರಚಾರವಾಗಿ ಮಹಿಳೆಯರಲ್ಲಿ ಜಾಗೃತಿ ಉಂಟಾಗಬೇಕು. ಒಟ್ಟಾರೆಯಾಗಿ ರಾಷ್ಟ್ರದ ಅಭಿವೃದ್ಧಿಯಲ್ಲಿ ಮಹಿಳೆಯರ ಪಾತ್ರ ಬಹು ಮುಖ್ಯವಾದುದೆಂದು ಈ ಲೇಖನದಲ್ಲಿ ತಿಳಿಸಲಾಗಿದೆ.[೩೩]

ದಿನಾಂಕ ೨೨.೦೪.೧೯೫೫ರ ಸಂಚಿಕೆಯಲ್ಲಿ 'ಕಾಗದದ ಕಾರ್ಖಾನೆ ಮತ್ತು ಸ್ತ್ರೀಯರು' ಎಂಬ ಶೀರ್ಷಿಕೆಯಡಿಯಲ್ಲಿ ಮೈಸೂರು ಕಾಗದ ಕಾರ್ಖಾನೆ ಅಂತಾರಾಷ್ಟ್ರೀಯ ಮಟ್ಟದ ಉತ್ತಮ ಕಾಗದವನ್ನು ತಯಾರಿಸುತ್ತಿದ್ದು, ಅದಕ್ಕೆ ಬೇಕಾದ ಕಚ್ಚಾವಸ್ತು ಬಿದಿರು ಸಮೃದ್ಧವಾಗಿದ್ದು, ಕಾಗದದ ರಸವನ್ನು ಬೇಯಿಸಲು, ತೊಳೆಯಲು ಭದ್ರಾನದಿಯ ನೀರನ್ನು ಬಳಸಲಾಗುವುದು. ದಿನಕ್ಕೆ ಹತ್ತು ಟನ್ ಕಾಗದ ತಯಾರಾಗುವುದರಿಂದ ಬಿದಿರಿನ ಜೊತೆಗೆ ಹಳೆಯ ತುಂಡುಬಟ್ಟೆ, ಉಪಯೋಗಿಸಿದ ಕಾಗದಗಳು, ಉಪಯೋಗಿಸಿ ಬಳಸಿದ ರಟ್ಟುಗಳು ಇವುಗಳನ್ನು ಬಳಸಿಕೊಂಡು ಕೂಡ ಕಾಗದವನ್ನು ತಯಾರಿಸಲಾಗುತ್ತಿತ್ತು. ಮಹಿಳೆಯರು ಮನೆಯಲ್ಲಿ ದೊರೆಯುವ ಹಳೆ ಕಾಗದವನ್ನು ಒಲೆಗೆ ಹಾಕುವುದರ ಬದಲು ಕೂಡಿಟ್ಟು

ಕಾರ್ಖಾನೆಗೆ ಕಳುಹಿಸಿ ಕಸದಿಂದ ರಸ ತಯಾರಿಸುವ ಕೆಲಸದಲ್ಲಿ ಕೈಜೋಡಿಸಬಹುದು. ಕಾರ್ಖಾನೆಯಲ್ಲಿ ಒಟ್ಟು ೧೦೦೦ ಕಾರ್ಮಿಕರು ಇದ್ದು ಕೇವಲ ೩೦ ರಿಂದ ೪೦ ಜನ ಮಹಿಳೆಯರು ಮಾತ್ರ ಕೆಲಸ ನಿರ್ವಹಿಸುತ್ತಿದ್ದು, ಕಾಗದದ ಎಣಿಕೆ ವಿಭಾಗ, ಕವರುಗಳನ್ನು ಜೋಡಿಸುವುದು ಮುಂತಾದ ಕೆಲಸಗಳಲ್ಲಿ ಹೆಂಗಸರನ್ನು ನೇಮಕ ಮಾಡಿಕೊಳ್ಳಲು ಅವಕಾಶವಿದ್ದು, ನೂತನವಾದ ಅಚ್ಚಿನ ಯಂತ್ರದಲ್ಲಿ ಮೊಳೆ ಜೋಡಿಸುವ ಕೆಲಸವನ್ನು ಮಹಿಳೆಯರಿಗೆ ಮಾಡಲು ಅವಕಾಶ ನೀಡಬೇಕು. ಸರ್ಕಾರದಿಂದ ಪಠ್ಯಪುಸ್ತಕಗಳನ್ನು, ಇತರ ಪುಸ್ತಕಗಳನ್ನು ಈ ಕಾರ್ಖಾನೆಯಲ್ಲಿ ಅಚ್ಚು ಹಾಕಿಸಿದರೆ ಹೆಚ್ಚಿನ ಉದ್ಯೋಗಾವಕಾಶಗಳು ಮಹಿಳೆಯರಿಗೆ ದೊರೆಯುತ್ತದೆ. ಭದ್ರಾವತಿಯ ಕಾರ್ಖಾನೆಯಲ್ಲಿ ಮಹಿಳೆಯರ ಮನರಂಜನೆಗಾಗಿ ಕ್ಲಬ್ ಹಾಗೂ ಮಕ್ಕಳ ಕೂಟ ಇದ್ದು ಜೊತೆಗೆ ಅಲ್ಲಿ ಮಹಿಳೆಯರಿಗೆ ಶಿಕ್ಷಣ ನೀಡಲು ವಯಸ್ಕರ ಶಿಕ್ಷಣ ಸಮಿತಿಯ ಕೇಂದ್ರವು ಇದ್ದು, ಮಹಿಳೆಯರ ಏಳಿಗೆಗಾಗಿ ಈ ಕಾರ್ಖಾನೆ ಶ್ರಮಿಸುತ್ತಿದೆ. ಕಾರ್ಖಾನೆಯಲ್ಲಿ ದುಡಿಯುತ್ತಿರುವ ಕಾರ್ಮಿಕರ ಮಕ್ಕಳಿಗೆ ಶಿಶುವಿಹಾರವನ್ನು ಅಲ್ಲಿ ತೆರೆಯಬೇಕಾಗಿದ್ದು ಅಲ್ಲಿ ಇನ್ನೂ ಹೆಚ್ಚಿನ ಅನುಕೂಲಗಳನ್ನು ಮಾಲೀಕರು ಕಲ್ಪಿಸಿಕೊಡಬೇಕೆಂದು ತಮ್ಮ ಸಂಪಾದಕೀಯದಲ್ಲಿ ಹೇಳಿರುವ ಎಂ.ಆರ್. ಲಕ್ಷಮ್ಮನವರು ಕಾರ್ಖಾನೆಯಲ್ಲಿನ ಮಹಿಳೆಯರ ಬಗ್ಗೆ ಅವರ ಮಕ್ಕಳ ಬಗ್ಗೆ ಕಾಳಜಿಯನ್ನು ವ್ಯಕ್ತಪಡಿಸಿದ್ದು ಅವರ ಸಂಪಾದಕೀಯವು ಎಂ.ಆರ್. ಲಕ್ಷಮ್ಮನವರು ಒಬ್ಬ ಸಮಾಜಸುಧಾರಕಿ ಎಂಬ ಆಶಯವನ್ನು ವ್ಯಕ್ತಪಡಿಸುವುದು.[೩೪]

ದಿನಾಂಕ ೨೯.೦೪.೧೯೫೫ರ ಸಂಚಿಕೆಯಲ್ಲಿ 'ಅಂತಾರಾಷ್ಟ್ರೀಯ ಕಾರ್ಮಿಕ ಸಂಘ ಮತ್ತು ಸ್ತ್ರೀಯರು' ಎಂಬ ಶೀರ್ಷಿಕೆಯಲ್ಲಿ ಲೇಖನ ಪ್ರಕಟವಾಗಿದ್ದು, ಅಂತಾರಾಷ್ಟ್ರೀಯ ಮಟ್ಟದಲ್ಲಿ ಜಾರಿಗೆ ಬಂದಿರುವ ಅನೇಕ ಕಾನೂನುಗಳಿಗೆ ಅಂತಾರಾಷ್ಟ್ರೀಯ ಕಾರ್ಮಿಕ ಸಂಘವು ಕಾರಣವಾಗಿದ್ದು, ಮಹಿಳಾ ಕಾರ್ಮಿಕರಿಗೆ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ೧೯೫೩ರಲ್ಲಿ ಏಷ್ಯಾ, ಲ್ಯಾಟಿನ್ ಅಮೆರಿಕ, ಆಫ್ರಿಕಾ, ಮಧ್ಯಏಷ್ಯಾ ಮುಂತಾದ ಕಡೆಗಳಲ್ಲಿ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದು ಕಾರ್ಮಿಕರಲ್ಲಿನ ಮೌಢ್ಯತೆಯನ್ನು ಹೋಗಲಾಡಿಸಿ ನ್ಯಾಯಯುತವಾಗಿ ಕಾರ್ಮಿಕರು, ಮಾಲೀಕರು ಮತ್ತು ಸರ್ಕಾರವನ್ನು ಜಾಗೃತಗೊಳಿಸುವ ಕಾರ್ಯವನ್ನು ಈ ಸಂಸ್ಥೆ ಮಾಡುತ್ತಿದ್ದು, ಆದೇಶವನ್ನು ಮಾಡುವ ಕೆಲಸ ಮಾಡದೇ ಮಾರ್ಗದರ್ಶನ ನೀಡುವ ಕೆಲಸ ಮಾಡುತ್ತಿದೆ. ಈ ಸಂಸ್ಥೆಯಿಂದಾಗಿ ಅನೇಕ ಕಾರ್ಖಾನೆಗಳಲ್ಲಿ ಮಹಿಳೆಯರಿಗೆ ಅವರ ಕೆಲಸದ ಪರಿಸ್ಥಿತಿ ಉತ್ತಮಗೊಂಡಿದ್ದು, ಅನೇಕ ಕಲ್ಯಾಣ ಯೋಜನೆಗಳ ಜೊತೆಗೆ ಸ್ತ್ರೀ ಪುರುಷರ ಸಮಾನತೆಯ ತತ್ವಗಳ ಬಗ್ಗೆ, ಮೂಲಭೂತ ಹಕ್ಕುಗಳಿಗಾಗಿ ಅಂತಾರಾಷ್ಟ್ರೀಯ ಕಾರ್ಮಿಕ ಸಂಸ್ಥೆಯು ಶ್ರಮಿಸುತ್ತಿದೆ. ಸ್ವಾತಂತ್ರ್ಯ, ಆರ್ಥಿಕ, ಭದ್ರತೆ, ಸಮಾನಾವಕಾಶ ಇದರ ಧ್ಯೇಯವಾಗಿದ್ದು ವಿಶ್ವದ ಎಲ್ಲಾ ಜನಾಂಗಗಳನ್ನು ಎಚ್ಚರಿಸಿ ಮಹಿಳೆಯು ಒಬ್ಬ ಮನುಷ್ಯಳು, ದೇಶದ ಸಾಮಾಜಿಕ ಮತ್ತು ಆರ್ಥಿಕ ಜೀವನದಲ್ಲಿ ಅವಳಿಗೆ

ಭಾಗವಹಿಸಲು ಅವಕಾಶವಿರಬೇಕು ಎಂಬ ಭಾವನೆಯನ್ನು ಮೂಡಿಸಿದೆ. ಭಾರತದಂತ ಜನಭರಿತ ಮತ್ತು ಬಡರಾಷ್ಟ್ರಗಳಲ್ಲಿ ಇನ್ನಷ್ಟು ಹೆಚ್ಚಿನ ಕೆಲಸಗಳು ನಡೆಯಬೇಕಿದ್ದು ಅಂತಾರಾಷ್ಟ್ರೀಯ ಮಟ್ಟದಲ್ಲಿ ಮಹಿಳೆಯರಿಗೆ ಸಂಬಂಧಿಸಿದಂತೆ ೧೦ ಒಪ್ಪಂದಗಳು ಆಗಿದ್ದು, ಹೆರಿಗೆ ಕಾಲದಲ್ಲಿ ರಕ್ಷಣೆ, ರಾತ್ರಿಯ ಪಾಳಿಯ ಕೆಲಸ, ಸಮಾನ ಸಂಬಳ ಇವುಗಳಿಗೆ ಸಂಬಂಧಿಸಿದಂತೆ ಅನೇಕ ಕಾನೂನುಗಳನ್ನು ಭಾರತದಲ್ಲಿ ಜಾರಿಗೆ ತರಲಾಗಿದೆ. ಸ್ತ್ರೀಯರು ಭೂಗರ್ಭದಲ್ಲಿ ಕೆಲಸ ನಿರ್ವಹಿಸುವ ಬಗ್ಗೆ ನಿಷೇಧವನ್ನು ತರಲಾಗಿದೆ. ಈ ಸಂಘವು ಅನೇಕ ಸಭೆಗಳನ್ನು ನಡೆಸುವುದರ ಜೊತೆಗೆ ಪ್ರಾದೇಶಿಕ ಮಟ್ಟದಲ್ಲಿ ಕೂಡ ಸಭೆಗಳು ನಡೆಯುತ್ತಿವೆ.

ಸ್ತ್ರೀ ಪುರುಷರ ಭೇದವಿಲ್ಲದೆ ಉದ್ಯೋಗಾವಕಾಶ ಕಲ್ಪಿಸುವುದರ ಜೊತೆಗೆ ಅವರ ಆರೋಗ್ಯ ರಕ್ಷಣೆಯ ಜೊತೆಗೆ ಆರ್ಥಿಕ, ಸಾಮಾಜಿಕ ಕ್ಷೇತ್ರದಲ್ಲಿ ಮಹಿಳೆಯೂ ಮುನ್ನಡೆಯುವ ಕಡೆಗೆ ಅನುಕೂಲತೆಯನ್ನು ಮಾಡಿಕೊಡುವ ಉದ್ದೇಶದಿಂದ ಈ ಸಂಸ್ಥೆ ಸ್ಥಾಪಿತವಾಗಿದೆ ಎಂಬುದು ಈ ಲೇಖನದ ಉದ್ದೇಶವಾಗಿದ್ದು 'ಸೋದರಿ' ಪತ್ರಿಕೆಯ ಮಹಿಳೆಯರಿಗಾಗಿ ಇರುವ ವಾರಪತ್ರಿಕೆಯಾಗಿದ್ದು ಮಹಿಳೆಯರ ಪ್ರಗತಿ ಮಹಿಳಾ ಕಾರ್ಮಿಕರ ಸ್ಥಿತಿಗತಿ, ಮಕ್ಕಳ ಕಲ್ಯಾಣ, ದುರ್ಬಲ ದೀನದಲಿತರ ಏಳಿಗೆ ಇವುಗಳನ್ನು ಕೂಡ ಗಮನದಲ್ಲಿಟ್ಟುಕೊಂಡು ಪ್ರಕಟವಾಗುತ್ತಿದ್ದ ಪತ್ರಿಕೆಯಾಗಿದ್ದು, ಎಂ.ಆರ್. ಲಕ್ಷಮ್ಮರವರ ಆಶಯಗಳು ಮತ್ತು ಅಭಿಪ್ರಾಯಗಳು 'ಸೋದರಿ' ಪತ್ರಿಕೆಯ ಎಲ್ಲಾ ಲೇಖನದಲ್ಲಿ ವ್ಯಕ್ತವಾಗಿದೆ.[೩೫]

ದಿನಾಂಕ ೦೩.೦೬.೧೯೫೫ರ ಸಂಚಿಕೆಯಲ್ಲಿ 'ಕಾಂಗ್ರೆಸ್ ಮಹಿಳಾ ಸಮ್ಮೇಳನ' ಎಂಬ ಶೀರ್ಷಿಕೆಯಡಿಯಲ್ಲಿ ದೆಹಲಿಯಲ್ಲಿ ಮೇ ೩೦ ರಂದು ಮಹಿಳಾ ಸಮ್ಮೇಳನ ನಡೆದ ಬಗ್ಗೆ, ಕಾಂಗ್ರೆಸ್‌ನಲ್ಲಿ ಮಹಿಳೆಯರ ಪ್ರಾತಿನಿಧ್ಯವನ್ನು ಹೆಚ್ಚಿಸುವ ಬಗ್ಗೆ, ಪ್ರಧಾನಿ ನೆಹರುರವರು ಮಹಿಳೆಯರಿಗೆ ಅನೇಕ ಕಾರ್ಯಕ್ರಮವನ್ನು ನೀಡಿದ ಬಗ್ಗೆ ಸಂಪಾದಕೀಯದಲ್ಲಿ ಪ್ರಕಟಿಸಿದ್ದು, ದೇಶದ ನಾನಾ ಭಾಗದಿಂದ ಬಂದ ೫೦ ಜನ ಮಹಿಳೆಯರು ಆ ಸಭೆಯಲ್ಲಿ ಹಾಜರಿದ್ದು ಅನೇಕ ವಿಚಾರಗಳನ್ನು ಚರ್ಚಿಸಲಾಯಿತು. ಸುಖೀ ರಾಜ್ಯದ ಕನಸು ಸಫಲವಾಗಬೇಕಾದರೆ ಸ್ತ್ರೀಯರ ಕಲ್ಯಾಣ ಅವಶ್ಯಕ. ದೇಶದ ಅರ್ಧಭಾಗದಷ್ಟಿರುವ ಮಹಿಳೆಯರು ತಟಸ್ಥವಾಗಿದ್ದಾರೆ. ಕಲ್ಯಾಣಕಾರ್ಯ ಮುಂದುವರಿಯುವುದು ಅಸಾಧ್ಯ. ಸ್ವಾತಂತ್ರ್ಯಸಮರದಲ್ಲಿ ಭಾಗವಹಿಸಿದ ಮಹಿಳೆಯರು ಮನೆ ಮಠ ಬಿಟ್ಟು ಜೀವನದ ಹಂಗು ತೊರೆದು ಹೋರಾಟ ಮಾಡಿದರು. ಅದೇ ದೇಶಪ್ರೇಮ. ಈಗ ಹೊಸ ರೂಪ ತಾಳಿ ದೇಶದ ಅಭಿವೃದ್ಧಿಯಲ್ಲಿ ಮಹಿಳೆಯರು ಭಾಗವಹಿಸಬೇಕು. ಸ್ವಾತಂತ್ರ್ಯ ಬಂದ ಮಾತ್ರಕ್ಕೆ ಕರ್ತವ್ಯ ಮುಗಿಯಲಿಲ್ಲ. ರಾಜಕೀಯ ಸ್ವಾತಂತ್ರ್ಯದ ಜೊತೆಗೆ ಆರ್ಥಿಕ ಪ್ರಗತಿಯನ್ನು ಸಾಧಿಸಬೇಕು. ರಾಜ್ಯಾಂಗದಲ್ಲಿ ಸ್ತ್ರೀಯರಿಗೆ ಸಮಾನ ಹಕ್ಕುಗಳು ದೊರೆತಿದ್ದರೂ, ಅವಿದ್ಯಾವಂತ ಮಹಿಳೆಯರಿಗೆ ತಿಳುವಳಿಕೆ ಕೊಡುವುದು ವಿದ್ಯಾವಂತ ಮಹಿಳೆಯ ಕರ್ತವ್ಯವಾಗಿದೆ. ಮಹಿಳೆಯರು ಸಮಾಜಕಲ್ಯಾಣ ಯೋಜನೆಯಲ್ಲಿ

ತೊಡಗಿಕೊಳ್ಳುವುದರ ಜೊತೆಗೆ ಕಾಂಗ್ರೆಸ್‌ನ ಚಟುವಟಿಕೆಯಲ್ಲಿ ತೊಡಗಿಸಿಕೊಂಡು ರಾಜಕೀಯ ಶಿಕ್ಷಣವನ್ನು ಪಡೆದುಕೊಳ್ಳಬೇಕು. ಪಾಶ್ಚಿಮಾತ್ಯ ದೇಶಗಳಲ್ಲಿ ಮಹಿಳೆಯರಲ್ಲಿ ರಾಜಕೀಯ ಜಾಗೃತಿ ಮೂಡಿಸಲು ಅನೇಕ ಸಂಸ್ಥೆಗಳಿದ್ದು ಎಲ್ಲಾ ರಾಜಕೀಯ ಪಕ್ಷಗಳಲ್ಲಿಯೂ ಮಹಿಳಾ ವಿಭಾಗವಿದೆ. ಅಮೆರಿಕದಲ್ಲಿ ಯಾವ ಪಕ್ಷಕ್ಕೂ ಸೇರದ 'ಲೀಗ್ ಆಫ್ ವುಮೆನ್ ವೋಟರ್ಸ್' ಎಂಬ ಸಂಸ್ಥೆಯಿದೆ. ಅಮೆರಿಕನ್ ಮಹಿಳೆಯರು ತಮ್ಮ ಜವಾಬ್ದಾರಿಯನ್ನು ಅರಿತು ಮತದಾನ ಮಾಡಲು ನ್ಯಾಯಯುತವಾಗಿ ಚುನಾವಣೆ ನಡೆಯಲು ಈ ಸಂಸ್ಥೆ ಸಹಾಯ ಮಾಡುತ್ತದೆ. ಈ ದೃಷ್ಟಿಯಿಂದ ದೆಹಲಿಯಲ್ಲಿ ನಡೆದ ಕಾಂಗ್ರೆಸ್‌ನ ಮಹಿಳಾ ಸಮ್ಮೇಳನವು ಮಹತ್ವವಾಗಿದ್ದು, ಮಹಿಳೆಯರಿಗೆ ಹೆಚ್ಚಿನ ಪ್ರಾತಿನಿಧ್ಯ ಒದಗಿಸಿ ರಾಷ್ಟ್ರೀಯ ಜೀವನದಲ್ಲಿ ಸ್ತ್ರೀಯರ ಆಸಕ್ತಿ ಜೀವಂತವಾಗಿದ್ದ'ಲ್ಲಿ ಮಾತ್ರ ದೇಶ ಮುಂದುವರಿಯಲು ಸಾಧ್ಯ. ಮಹಿಳಾ ಸಮ್ಮೇಳನವು ಸಾಮಾನ್ಯ ಮಹಿಳೆಯ ಆಸೆ, ಅಭಿಲಾಷೆಯನ್ನು ರೂಪಿಸಿ, ಪ್ರತಿನಿಧಿಸಿ ದೇಶದ ಪ್ರಗತಿಯನ್ನು ಸಾಧಿಸಲೆಂಬ ಅಭಿಪ್ರಾಯವನ್ನು ತಮ್ಮ ಸಂಪಾದಕೀಯದಲ್ಲಿ ಹೇಳಿರುವ ಎಂ.ಆರ್. ಲಕ್ಷಮ್ಮನವರು, ಮಹಿಳಾ ಪರ ಚಿಂತಕಿಯಾಗಿ ಕಾರ್ಯೋನ್ಮುಖರಾಗಿದ್ದಾರೆಂದು ತಿಳಿಯಬಹುದು.[೩೬]

ದಿನಾಂಕ ೨೪.೦೬.೧೯೫೫ ರ ಸಂಚಿಕೆಯಲ್ಲಿ 'ಸ್ಥಳೀಯ ಸಂಸ್ಥೆಗಳಲ್ಲಿ ಮಹಿಳೆಯ ಸ್ಥಾನ' ಎಂಬ ಶೀರ್ಷಿಕೆಯಡಿಯಲ್ಲಿ ಭಾರತದ ಸಂವಿಧಾನದ ಪ್ರಕಾರ ಎ ಮತ್ತು ಬಿ ರಾಜ್ಯಗಳ ಶಾಸನಸಭಾ ಸದಸ್ಯರಿಗೆ ಸ್ಥಳೀಯ ಆಡಳಿತದ ಬಗ್ಗೆ ಶಾಸನಗಳನ್ನು ಮಾಡಲು ಅಧಿಕಾರವಿದ್ದು, ಪುರಸಭೆ, ಮಹಾನಗರ ಪಾಲಿಕೆ, ಜಿಲ್ಲಾಬೋರ್ಡ್‌ಗಳು, ಪಂಚಾಯ್ತಿಗಳು ಮುಂತಾದ ಸ್ಥಳೀಯ ಸರ್ಕಾರದ ಬಗ್ಗೆ ಕಾನೂನು ಮಾಡಬಹುದಾಗಿದೆ. ರಾಜ್ಯಗಳ ಬಗ್ಗೆ ಕೇಂದ್ರಸರ್ಕಾರ ಕಾನೂನನ್ನು ಮಾಡುತ್ತದೆ. ಇಡೀ ದೇಶದ ಸರ್ಕಾರ ಸ್ಥಳೀಯಸರ್ಕಾರವೆಂಬ ಬುನಾದಿಯ ಮೇಲೆ ನಿಂತಿದ್ದು, ಬುನಾದಿ ಸುಭದ್ರವಾಗಿದ್ದರೆ ಎಲ್ಲಾ ಸುಗಮವಾಗಿರುವುದು. ನಮ್ಮ ಮುಂದಿರುವ ಹಲವಾರು ಸಮಸ್ಯೆಗಳನ್ನೆಲ್ಲ ಬಗೆಹರಿಸಲು ಸಾಧ್ಯವಿಲ್ಲ. ಸ್ಥಳೀಯಸಂಸ್ಥೆಗಳಲ್ಲಿ ಕೆಲಸ ಮಾಡಲು ಸ್ತ್ರೀ-ಪುರುಷರು ಮುಂದೆ ಬರಬೇಕು. ಸಾಮಾನ್ಯ ಜನರು ಕೂಡ ರಾಷ್ಟ್ರದ ಆಗುಹೋಗುಗಳಲ್ಲಿ ಹೆಚ್ಚಿನ ಪಾತ್ರವಹಿಸಿ ಸಹಕಾರವನ್ನು ನೀಡಬೇಕು. ಸ್ಥಳೀಯಸಂಸ್ಥೆಗಳಲ್ಲಿ ಮಹಿಳೆಯರು ಮಹತ್ತರ ಕಾರ್ಯವನ್ನು ನಡೆಸಲು ಹೆಚ್ಚುಹೆಚ್ಚು ಮಹಿಳೆಯರಿಗೆ ಉತ್ತೇಜನ ನೀಡಬೇಕು.

ಸ್ಥಳೀಯಸಂಸ್ಥೆಗಳು ಹಿತರಕ್ಷಣೆ ಸಮಿತಿಗಳಾಗಿದ್ದು ಅವುಗಳು ಸೂಕ್ತವಾಗಿ ಕಾರ್ಯ ನಿರ್ವಹಿಸಿದರೆ ಸುಖಿರಾಜ್ಯ ಉಂಟಾಗುವುದು. ಜನತೆಯ ಸಹಾಯವಿಲ್ಲದೆ ಯಾವುದೇ ಯೋಜನೆಯಾಗಲಿ, ಸಾಮುದಾಯಿಕ ಕೇಂದ್ರವಾಗ'ಲಿ ಯಶಸ್ವಿಯಾಗುವುದಿಲ್ಲ. ಜನತೆಯ ಸಹಕಾರ ಮತ್ತು ಉತ್ಸಾಹವಿದ್ದರೆ ಮಾತ್ರ ಸಾಧ್ಯ. ಅಧಿಕಾರ ಆಸೆಯಿಂದ, ಸ್ಥಳೀಯಸಂಸ್ಥೆಗಳ

ಸದಸ್ಯರಾಗದೆ ದೀನದಲಿತರ ಸೇವೆಗಾಗಿ ಸಾಮಾಜಿಕ ಹೊಣೆಗಾರಿಕೆಯಿಂದ ಕೆಲಸನಿರ್ವಹಿಸುವ ವ್ಯಕ್ತಿಗಳು ಸದಸ್ಯರಾದರೆ ಮಾತ್ರ ಕಲ್ಯಾಣ ಕಾರ್ಯ ಯಶಸ್ವಿಯಾಗಲು ಮತ್ತು ದೇಶದ ಪ್ರಗತಿಯಾಗಲು ಸಾಧ್ಯವೆಂಬ ಲೇಖನವು ಈ ಸಂಚಿಕೆಯಲ್ಲಿ ಪ್ರಕಟವಾಗಿದೆ.೩೬

ಜನವರಿ ೧೯೫೭ರ ಸಂಚಿಕೆಯಲ್ಲಿ 'ನೂತನ ಸಮಾಜ ನಿರ್ಮಾಣದಲ್ಲಿ ಸ್ತ್ರೀಯರ ಪಾತ್ರ' ಎಂಬ ಶೀರ್ಷಿಕೆಯಡಿಯಲ್ಲಿ ಲೇಖನ ಪ್ರಕಟವಾಗಿದ್ದು, ಭಾರತ ದೇಶದಲ್ಲಿ ಸ್ತ್ರೀಯರಿಗೆ ಒಂದು ಮಹತ್ವ ಮತ್ತು ಪ್ರಾಮುಖ್ಯತೆಯಿದ್ದು, ಹಿಂದೂಧರ್ಮದ ಪ್ರಕಾರ ಯಾವ ಪುರುಷನು ಸ್ತ್ರೀಯನ್ನು ಬಿಟ್ಟು ಶುಭಕಾರ್ಯವನ್ನು ಮಾಡುವಂತಿಲ್ಲ. ಮನೆಯ ಕಾರ್ಯಗಳಲ್ಲಿ ಮಕ್ಕಳ ಬೇಕುಬೇಡಗಳನ್ನು ಗಮನಿಸುವಲ್ಲಿ ಮಹಿಳೆಯರು ಪ್ರಥಮ ಸ್ಥಾನದಲ್ಲಿದ್ದು, ಪ್ರೀತಿ, ಉದಾರತೆ, ಸಹನೆ, ಕನಿಕರ, ಧೈರ್ಯಸ್ಥೈರ್ಯಗಳಿಂದ ಕೂಡಿದ ಮೂರ್ತ ಸ್ವರೂಪವೇ ಸ್ತ್ರೀಯಾಗಿದ್ದಾಳೆ. ಆದರೆ ಆಕೆಯಲ್ಲಿರುವ ಈ ಹಿರಿಮೆಯ ಗುಣಗಳನ್ನು ವಿಕಾಸಗೊಳಿಸಲು ಸಾಧ್ಯವಾಗದೆ ಅವಳು ಕೇವಲ ಒಂದು ಸಂಕುಚಿತ ಚೌಕಟ್ಟಿನಲ್ಲಿ ಕೆಲಸ ಮಾಡುವ ಅನಿವಾರ್ಯತೆ ಸೃಷ್ಟಿಮಾಡಲಾಯಿತು. ಸ್ತ್ರೀಯರ ಈ ಸ್ಥಿತಿಗೆ ಪುರುಷರು ಕೂಡ ಹೊಣೆಯಾಗಿದ್ದು, ಮಹಿಳೆಯರಿಗೆ ಸ್ವಾತಂತ್ರ್ಯ ಕೊಟ್ಟರೆ ಕೆಡಕು ಎಂಬ ತಪ್ಪು ಭಾವನೆ ಇದ್ದು, ಆಕೆಗೆ ಸರಿಯಾಗಿ ವಿದ್ಯಾಭ್ಯಾಸ ದೊರಕದೆ ಪ್ರಪಂಚಜ್ಞಾನ ಸಿಗುತ್ತಿರಲಿಲ್ಲ. ಆದರೆ ಇಂದು ಮಹಿಳೆಯರ ವಿದ್ಯಾಭ್ಯಾಸ ಪ್ರಗತಿಯಲ್ಲಿದ್ದು ಸಮಾಜದ ಮೇಲೆ ಉತ್ತಮ ಪರಿಣಾಮಗಳನ್ನು ಬೀರುತ್ತಾ, ಜನಸಂಖ್ಯೆಯ ಅರ್ಧದಷ್ಟಿರುವ ಮಹಿಳೆಯರು ಭವ್ಯ ಸಮಾಜ ನಿರ್ಮಿಸಲು ತಮ್ಮ ಜವಾಬ್ದಾರಿಯನ್ನು ಅರಿತು, ಪುರುಷರ ಸರಿಸಮಾನವಾಗಿ ಕೆಲಸ ಮಾಡಿ, ಪ್ರಗತಿಪರ ಸಮಾಜ ಕಟ್ಟಬಹುದು. ಸಮಾಜಸುಧಾರಣೆಯಲ್ಲಿ ಕೆಲಸ ಮಾಡುವ ಮಹಿಳೆಯರು ತಮ್ಮ ಸಂಸಾರದ ಹೊಣೆಗಾರಿಕೆಯನ್ನು ಬಿಡದೆ, ಆಡಂಬರಕ್ಕೆ ಹಣಗಳಿಸುವುದಕ್ಕೆ, ಪ್ರಾಮುಖ್ಯತೆ ನೀಡಬಾರದು. ನಮ್ಮ ರಾಜ್ಯಾಂಗದ ಪ್ರಕಾರ ಮಹಿಳೆಯರಿಗೆ ಸರಿಸಮಾನವಾದ ಹಕ್ಕು ದೊರೆತಿದ್ದು, ಮಹಿಳೆಯರು ಸಮಾಜಕ್ಕೆ ತಾವು ಮಾಡಬೇಕಾದ ಕರ್ತವ್ಯಗಳ ಬಗ್ಗೆ ಅರಿವನ್ನು ಮೂಡಿಸಿಕೊಳ್ಳಬೇಕು. ನಮ್ಮ ದೇಶಕ್ಕೆ ರಾಜಕೀಯ ಸ್ವಾತಂತ್ರ್ಯ ದೊರಕಿದೆಯೇ ಹೊರತು ಆರ್ಥಿಕ ಸ್ವಾತಂತ್ರ್ಯ ಪೂರ್ಣವಾಗಿ ಬಂದಿಲ್ಲ. ಬರಿ ರಾಜಕೀಯ ಸ್ವಾತಂತ್ರ್ಯದಿಂದ ನಮ್ಮ ದೇಶ ಸುಖೀರಾಜ್ಯವಾಗಲಾರದು. ಪ್ರತಿಯೊಬ್ಬ ವ್ಯಕ್ತಿಯು ತಮ್ಮತಮ್ಮ ಕ್ಷೇತ್ರಗಳಲ್ಲಿ ನಿಸ್ವಾರ್ಥ ಮನೋಭಾವನೆಯಿಂದ ದುಡಿದಾಗ ಮಾತ್ರ ನಮ್ಮ ಕನಸು ನನಸಾಗುವುದು. ಮಕ್ಕಳು ದೇಶದ ಸಂಪತ್ತಾಗಿದ್ದು, ಮಕ್ಕಳನ್ನು ಸತ್ಪ್ರಜೆಗಳಾಗಿ ಮಾಡುವುದು ನಮ್ಮೆಲ್ಲರ ಕರ್ತವ್ಯವಾಗಿದೆ. ಮಕ್ಕಳನ್ನು ದೈಹಿಕವಾಗಿ ಮತ್ತು ಮಾನಸಿಕವಾಗಿ ಆದರ್ಶರೀತಿಯಲ್ಲಿ ಬೆಳೆಸಲು ತಾಯಿಯಿಂದ ಮಾತ್ರ ಸಾಧ್ಯ. ನಮ್ಮ ಸ್ತ್ರೀಯರು ಅನ್ನಪೂರ್ಣೆಯರೆಂದು ಹೆಸರಾಗಿದ್ದು, ಬಡವರ, ಅನಾಥರ ಮತ್ತು ಕಷ್ಟದಲ್ಲಿರುವವರ ಸೇವೆಯನ್ನು ಮಾಡುವುದರ ಜೊತೆಗೆ ಪ್ರತಿಯೊಬ್ಬರು ಸಮಾಜಸೇವೆಯಲ್ಲಿ ತೊಡಗಿಕೊಂಡು ನವಸಮಾಜ ನಿರ್ಮಾಣದಲ್ಲಿ ಭಾಗವಹಿಸಿದರೆ ರಾಮರಾಜ್ಯವನ್ನು

ಕಾಣುವುದರಲ್ಲಿ ಸಂದೇಹವಿಲ್ಲ. 'ಶಾಸನಸಭೆಗಳಲ್ಲಿ ಸ್ತ್ರೀಯರ ಪ್ರಾತಿನಿಧ್ಯ' ಎಂಬ ಶೀರ್ಷಿಕೆಯಡಿಯಲ್ಲಿ ಸರ್ಕಾರಿ ಮತ್ತು ಸಾರ್ವಜನಿಕ ಸಂಸ್ಥೆಗಳಲ್ಲಿ ಸ್ತ್ರೀಯರನ್ನು ನಿರ್ಲಕ್ಷಿಸಲಾಗಿದ್ದು ಕಾಂಗ್ರೆಸ್ ಪಕ್ಷದಲ್ಲಿಯೂ ಕೂಡ ಶೇ. ೧೦ ರಷ್ಟು ಸ್ತ್ರೀಯರಿಗೆ ಅವಕಾಶ ಇಲ್ಲದ ಬಗ್ಗೆ, ಸಾರ್ವಜನಿಕ ಸಭೆಗಳಲ್ಲಿ ಭಾಗವಹಿಸಲು ಮತ್ತು ಸ್ವಯಂಸೇವಕರಾಗಿ ಕೆಲಸಮಾಡಲು, ಮತದಾನದ ಸಮಯದಲ್ಲಿ ಮಹಿಳಾ ಮತದಾರರನ್ನು ಕರೆತರಲು ಮಹಿಳಾ ಸದಸ್ಯರನ್ನು ಬಳಸಿಕೊಳ್ಳುವ ಕಾಂಗ್ರೆಸ್ ಪಕ್ಷ ಚುನಾವಣೆಯಲ್ಲಿ ಸ್ಪರ್ಧಿಸಲು ಮಹಿಳಾ ಉಮೇದುವಾರರನ್ನು ಚುನಾವಣೆಗೆ ಅಭ್ಯರ್ಥಿಯಾಗಿ ನಿಲ್ಲಿಸದ ಬಗ್ಗೆ ಈ ಲೇಖನದಲ್ಲಿ ಹೇಳಲಾಗಿದ್ದು, ಮಹಿಳೆಯರನ್ನು ಎರಡನೇ ದರ್ಜೆ ಪ್ರಜೆಯನ್ನಾಗಿ ನೋಡುವುದನ್ನು ಎಂ.ಆರ್. ಲಕ್ಷ್ಮಮ್ಮನವರು ಈ ಲೇಖನದ ಮೂಲಕ ಪ್ರಶ್ನಿಸಿದ್ದಾರೆ.[೩೮]

ಫೆಬ್ರವರಿ ೧೯೫೭ರ ಸಂಚಿಕೆಯಲ್ಲಿ 'ಇಂದಿನ ಸಾರ್ವಜನಿಕ ಚುನಾವಣೆಯಲ್ಲಿ ಮಹಿಳೆಯರ ಪ್ರಾತಿನಿಧ್ಯ'ವೆಂಬ ಶೀರ್ಷಿಕೆಯಡಿಯಲ್ಲಿ ಕಳೆದ ಚುನಾವಣೆಯಲ್ಲಿ ೧೭೦೦ ಲಕ್ಷ ಜನರು ಪಾಲ್ಗೊಂಡಿದ್ದು, ಸುಮಾರು ಎಂಟು ಲಕ್ಷ ಮಹಿಳೆಯರು ತಮ್ಮ ಮತವನ್ನು ಚಲಾಯಿಸಿದ್ದಾರೆ. ಈ ಸಾರಿ ೧೯೦೦ ಲಕ್ಷ ಮತದಾರರಿದ್ದು ೯೦೦ ಲಕ್ಷ ಮಹಿಳೆಯರು ಮತದಾನ ಮಾಡಲಿದ್ದಾರೆ. ಮೈಸೂರು ರಾಜ್ಯದ ಚುನಾವಣೆಗಳ ಅಂಕಿಅಂಶಗಳನ್ನು ಗಮನಿಸಿದರೆ ಲೋಕಸಭೆಗೆ ೫೦ ಅರ್ಜಿಗಳಿದ್ದು, ಒಬ್ಬರು ಮಹಿಳಾ ಸ್ಪರ್ಧಿ ಇದ್ದು, ಪಕ್ಷದ ಒತ್ತಾಯದ ಮೇರೆಗೆ ತಮ್ಮ ಉಮೇದುವಾರಿಕೆಯನ್ನು ವಾಪಸ್ಸು ತೆಗೆದುಕೊಂಡರು. ರಾಜ್ಯಸಭೆಗೆ ೧೭ ಮಂದಿ ಉಮೇದುದಾರರ ಪೈಕಿ ಒಬ್ಬರೂ ಮಹಿಳಾ ಸ್ಪರ್ಧಿಗಳು ಇರಲಿಲ್ಲ. ವಿಧಾನಸಭೆಯ ೫೭೪ ಅಭ್ಯರ್ಥಿಗಳಲ್ಲಿ ಐದು ಜನ ಮಹಿಳೆಯರು ಸ್ಪರ್ಧಿಸಿದ್ದು, ಮೂರು ಜನರು ಚುನಾವಣೆಯಲ್ಲಿ ಗೆದ್ದು ಬಂದರು. ವಿಧಾನಪರಿಷತ್ತಿನಲ್ಲಿ ೧೮ ಸದಸ್ಯರಿದ್ದು, ವಿಧಾನಸಭೆಯಿಂದ ಒಬ್ಬರು, ಪದವೀಧರರ ಕ್ಷೇತ್ರದಿಂದ ಒಬ್ಬರು ಚುನಾವಣೆಗೆ ನಿಂತಿದ್ದು, ವಿಧಾನಸಭೆಯಿಂದ ಒಬ್ಬರು ಗೆದ್ದು ಬಂದರು. ಹರಿಜನರಿಗೆ ಮೀಸಲಿಟ್ಟ ಸ್ಥಾನದಿಂದ ಯಾವ ಪಕ್ಷವು ಮಹಿಳೆಯರನ್ನು ಸ್ಪರ್ಧಾಳುವಾಗಿ ನಿಲ್ಲಿಸಲಿಲ್ಲ. ಸ್ವತಂತ್ರವಾಗಿ ಸ್ಪರ್ಧಿಸಿದ್ದ ಮುಸ್ಲಿಂ ಮಹಿಳೆ ಚುನಾವಣೆಯಲ್ಲಿ ಪರಾಜಿತಗೊಂಡರು. ಗೆದ್ದ ಮೂವರು ಮಹಿಳೆಯರು ಕಾಂಗ್ರೆಸ್ ಪಕ್ಷದವರಾಗಿದ್ದಾರೆ. ಜನಸಂಖ್ಯೆಯ ಅರ್ಧದಷ್ಟಿರುವ ಮಹಿಳೆಯರು ತಮ್ಮ ಮತದಾನದ ಹಕ್ಕನ್ನು ಚಲಾಯಿಸಿರುವ ಬಗ್ಗೆ ನಿರ್ದಿಷ್ಟ ವಿವರಗಳು ದೊರೆತಿರುವುದಿಲ್ಲ. ಕಾಂಗ್ರೆಸ್ ಪಕ್ಷದ ಪರವಾಗಿ ಸ್ತ್ರೀಯರು ವಿಧಾನಸಭೆಗೆ ಸ್ಪರ್ಧಿಸಿದ್ದು, ಇಬ್ಬರು ಹರಿಜನರಾಗಿದ್ದು ಇಬ್ಬರು ಸ್ವತಂತ್ರ ಅಭ್ಯರ್ಥಿಗಳಿದ್ದು ಲೋಕಸಭೆಗೆ ಯಾವುದೇ ಸ್ತ್ರೀಯರು ಉಮೇದುದಾರರಾಗಿರುವುದಿಲ್ಲ. ಪ್ರಗತಿಪರ ಮೈಸೂರು ರಾಜ್ಯವು ಮುಂದಿನ ಬಾರಿಯಾದರೂ ಲೋಕಸಭೆಗೆ ಸ್ತ್ರೀಪ್ರಾತಿನಿಧ್ಯ ಕಲ್ಪಿಸುವಂತಾಗಬೇಕು. ಇಂದು ೧೧ ಜನ ಸದಸ್ಯರು ಮುಂದಿನ ಆಯ್ಕೆಯ ಸಮಯದಲ್ಲಿ ಇನ್ನೂ ಹೆಚ್ಚಾಗಲೆಂದು ಹಾಗೂ ಟಿಕೆಟ್ ಕೊಟ್ಟರು ಅದನ್ನು ಕಡೆಗಳಿಗೆಯಲ್ಲಿ ವಾಪಸ್ಸು ಮಾಡಿ,

ಸ್ತ್ರೀ ಪ್ರಾತಿನಿಧ್ಯಕ್ಕೆ ಕೆಲವರು ಕುಂದು ತಂದಿದ್ದಕ್ಕಾಗಿ ವಿಷಾದವನ್ನು ಸೂಚಿಸಿ, ಮುಂದಿನ ಚುನಾವಣೆಯಲ್ಲಿ ಹೆಚು ಹೆಚ್ಚು ಸ್ತ್ರೀಯರು ಸ್ಪರ್ಧಿಸಬೇಕೆಂಬ ಆಶಯವನ್ನು ವ್ಯಕ್ತಪಡಿಸಿದ ಎಂ.ಆರ್. ಲಕ್ಷಮ್ಮನವರು ತಮ್ಮ ಸಂಪಾದಕೀಯದಲ್ಲಿ ರಾಜಕೀಯ ಕ್ಷೇತ್ರದಲ್ಲಿಯೂ ಮಹಿಳೆಯರಿಗೆ ಪ್ರಾತಿನಿಧ್ಯ ದೊರಕಬೇಕೆಂದು ಹೇಳಿದ್ದಾರೆ.

೧೯೫೬ ಡಿಸೆಂಬರ್ ೨೬ ರಿಂದ ೨೮ ರವರೆಗೆ ೩ ದಿನಗಳ ಕಾಲ ಅಖಿಲ ಭಾರತ ಮಹಿಳಾ ಸಮ್ಮೇಳನದ ೨೬ನೇ ಅಧಿವೇಶನವು ಮಧ್ಯಪ್ರದೇಶದ ಇಂದೋರ್ ನಗರದಲ್ಲಿ ನಡೆಯಿತು. ಈ ಸಮ್ಮೇಳನದ ಗೋಷ್ಠಿಯಲ್ಲಿ ಮಧ್ಯಮ ವರ್ಗದ ಸ್ತ್ರೀಯರಿಗೆ ಉದ್ಯೋಗ ದೊರಕಿಸಿಕೊಡಲು ಮತ್ತು ಉದ್ಯೋಗಗಳಿಗೆ ಅನುಕೂಲವಾಗುವಂತೆ ತರಬೇತು ಕೊಡಲು ಉದ್ದೇಶಿಸಿದ್ದು, ಆ ಸಮ್ಮೇಳನದ ಅಧ್ಯಕ್ಷತೆಯನ್ನು ಲಕ್ಷ್ಮಿ ಮೆನನ್‌ರವರು ವಹಿಸಿದ್ದರು. ಅಖಿಲ ಭಾರತ ಗೃಹ ಕೈಗಾರಿಕಾ ಬೋರ್ಡ್‌ನ ಅಧ್ಯಕ್ಷರಾದ ಕಮಲಾದೇವಿ ಚಟ್ಟೋಪಾಧ್ಯಾಯರವರು ಮಾತನಾಡಿ ಭಾರತದಲ್ಲಿ ಮಹಿಳೆಯರಿಗೆ ಉದ್ಯೋಗ ಕಲ್ಪಿಸಿ, ಜೊತೆಗೆ ಅವುಗಳನ್ನು ಮಾರಾಟಮಾಡಲು ಅನುಕೂಲ ಕಲ್ಪಿಸಿಕೊಡಬೇಕು ಹಾಗೂ ಖಾಸಗೀ ಸಂಸ್ಥೆಗಳು ಮತ್ತು ಸರ್ಕಾರ ಹೆಚ್ಚಿನ ಉತ್ತೇಜನ ನೀಡಬೇಕು. ಭಾರತದ ಗೃಹ ಕೈಗಾರಿಕೆಗಳಿಗೆ ಪ್ರಪಂಚದಲ್ಲಿ ಬೇಡಿಕೆ ಇದ್ದು ವಸ್ತುಗಳ ಮಾರಾಟಕ್ಕೆ ತೊಂದರೆ ಇರುವುದಿಲ್ಲವೆಂದು ಸ್ಪಷ್ಟಪಡಿಸಿದರು. ಉದ್ಯೋಗ ಮಾಡುವ ಮಹಿಳೆಯರನ್ನು ೨ ಗುಂಪುಗಳನ್ನಾಗಿ ಮಾಡಬಹುದು. ಸಂಬಳಕ್ಕಾಗಿ ಕೆಲಸ ಮಾಡುವವರು ಮತ್ತು ಮನೆಯ ಕೆಲಸದ ನಡುವೆ ಸಂಪಾದನೆಯನ್ನು ಮಾಡುವ ಮತ್ತೊಂದು ವರ್ಗವಿದ್ದು, ಕೆಲಸ ಮಾಡುವ ಮಹಿಳೆಯರು ಜೀವವಿಮೆಯನ್ನು ತೆಗೆದುಕೊಳ್ಳಬೇಕು. ಮಹಿಳೆಯರು ಇಂಟಿರಿಯರ್ ಡಿಜೈನಿಂಗ್, ರಾಸಾಯನಿಕ ಕಾರ್ಯೋದ್ಯೋಗ, ಆಹಾರ ಸಂಸ್ಕರಣೆ, ಔದ್ಯೋಗಿಕ ಶಿಕ್ಷಣ, ವೈದ್ಯಕೀಯ ಕ್ಷೇತ್ರ, ಸೌಂದರ್ಯ ಚಿಕಿತ್ಸಾಲಯ, ರೋಗಿಗಳಿಗೆ ವಿಶ್ರಾಂತಿಗೃಹ, ಪತ್ರಿಕಾವೃತ್ತಿ, ಸಮಾಜಸೇವೆ, ನ್ಯಾಯಾಂಗವೃತ್ತಿ, ಸೇತುವೆ ಮತ್ತು ಕಾಮಗಾರಿ ಕೆಲಸಗಳಲ್ಲಿ ತೊಡಗಿಕೊಳ್ಳಬಹುದು ಮತ್ತು ಅದಕ್ಕೆ ಬೇಕಾದ ತರಬೇತಿಯ ಬಗ್ಗೆ ಈ ಲೇಖನದಲ್ಲಿ ವಿವರವಾಗಿ ತಿಳಿಸಲಾಗಿದೆ.[೫೯]

### ೭.೨ ಬೆಳಕು ಮತ್ತು ಸೋದರಿ ವಾರಪತ್ರಿಕೆಯಲ್ಲಿ ಬಿಂಬಿತಗೊಂಡ ಸಾಮಾಜಿಕ ಸುಧಾರಣಾ ಚಿಂತನೆಗಳು

ದಿನಾಂಕ ೨೫.೦೮.೧೯೪೫ ರ ಪತ್ರಿಕೆಯಲ್ಲಿ ಹರಿಜನ ಸೇವಕ ಸಂಘ ಆಗಸ್ಟ್ ೧೫ ರಂದು ವಾರ್ಧಾದಲ್ಲಿ ಸಭೆ ಸೇರಿ ಒಂದು ಠರಾವನ್ನು ಅಂಗೀಕರಿಸಿ ಮೈಸೂರು ಸರ್ಕಾರಕ್ಕೆ ಕಳುಹಿಸಿಕೊಟ್ಟ ಬಗ್ಗೆ ಸುದ್ದಿ ಪ್ರಕಟವಾಗಿದೆ. 'ತಿರುವಾಂಕೂರ್ ಸಂಸ್ಥಾನದಲ್ಲಿ ಎಲ್ಲಾ ಮುಜರಾಯಿ ದೇವಾಲಯಗಳಿಗೆ ಹರಿಜನರಿಗೆ ಪ್ರವೇಶವನ್ನು ನೀಡಲಾಗಿದ್ದು, ಮೈಸೂರು ಸಂಸ್ಥಾನದಲ್ಲಿಯೂ ಕೂಡ ಹರಿಜನರಿಗೆ ದೇವಾಲಯದ ಪ್ರವೇಶವನ್ನು ನೀಡಬೇಕೆಂದು ಮೈಸೂರು ಸರ್ಕಾರವನ್ನು

ಕೋರಿಕೊಳ್ಳುವ ಪತ್ರವನ್ನು ಪ್ರಕಟಿಸಿದ್ದು' ಸಾಮಾಜಿಕ ಸುಧಾರಣೆಯಲ್ಲಿ 'ಬೆಳಕು' ಪತ್ರಿಕೆಯು ಅರಿವು ಮೂಡಿಸುವ ಕಾರ್ಯವನ್ನು ಮಾಡಿರುವುದು ಶ್ಲಾಘನೀಯವಾದುದು.[೪೦]

ದಿನಾಂಕ ೦೧.೦೯.೧೯೪೫ರ ಸಂಪಾದಕೀಯದಲ್ಲಿ ಹಿಂದೆ ಗಾಂಧೀಜಿಯವರು ೨೧ ದಿನ ಉಪವಾಸ ಮಾಡಿದ ಬಗ್ಗೆ, ಗಾಂಧೀಜಿಯವರು ಹರಿಜನರ ಸಲುವಾಗಿ ಉಪವಾಸ ವ್ರತವನ್ನು ಮಾಡುವ ಬಗ್ಗೆ ಲೇಖನ ಬರೆದಿದ್ದು, ಅಸ್ಪೃಶ್ಯತೆ ನಿವಾರಣೆಗಾಗಿ ದುಡಿಯುತ್ತಿದ್ದಾರೆ. ದೇವಾಲಯಗಳಲ್ಲಿ ಹರಿಜನರಿಗೆ ಪ್ರವೇಶ ನೀಡಲು, ಶಾಲೆಗಳಲ್ಲಿ ಮಕ್ಕಳಿಗೆ ಪ್ರವೇಶ ಕಲ್ಪಿಸಲು, ಸಾರ್ವಜನಿಕ ಕೊಳದಲ್ಲಿ ನೀರು ತೆಗೆದುಕೊಳ್ಳುವಂತಿಲ್ಲ. ಈ ಎಲ್ಲಾ ಸಾಮಾಜಿಕ ಅನಿಷ್ಟಗಳನ್ನು ನಿವಾರಿಸುವಲ್ಲಿ ಗಾಂಧೀಜಿಯವರ ಜತೆಯಲ್ಲಿ ಪ್ರತಿಯೊಬ್ಬರು ಕೈಜೋಡಿಸಬೇಕು. ಇಲಿ ಬೆಕ್ಕು ಓಡಾಡುವ ದೇವಾಲಯದಲ್ಲಿ ಮನುಷ್ಯರಿಗೆ ಅವಕಾಶವಿಲ್ಲ. ಎಲ್ಲರಂತೆ ವಿದ್ಯೆ ಕಲಿಯಲು ಹಕ್ಕಿರುವ ಶಾಲೆಗಳಲ್ಲಿ ಮಕ್ಕಳಿಗೆ ಅವಕಾಶವಿಲ್ಲ. ನಾಯಿ, ನರಿಗಳು ನೀರು ನೆಕ್ಕುವ ಕೊಳಗಳಲ್ಲಿ ಮನುಷ್ಯರು ನೀರು ಕುಡಿಯಲು ಅವಕಾಶವಿಲ್ಲ. ನಾವು ಇತರರಿಗೆ ಅನುಕೂಲ ಕಲ್ಪಿಸಿಕೊಡುವ ಬಾಧ್ಯತೆ ಇಲ್ಲದಿದ್ದರೆ ನಾವು ಇತರರಿಗೆ ಸಮ ಎನ್ನುವ ಹಕ್ಕು ನಮಗಿಲ್ಲ ಎಂಬ ಸಂಪಾದಕೀಯ ಲೇಖನದಲ್ಲಿ ದಲಿತರ ಬಗೆಗಿನ ಕಾಳಜಿಯನ್ನು ವ್ಯಕ್ತಪಡಿಸಿರುವ ಎಂ.ಆರ್. ಲಕ್ಷ್ಮಮ್ಮನವರು ಸಮಾಜವನ್ನು ಪ್ರಶ್ನಿಸುವ ಪ್ರಾಣಿಗಳಿಗಿಂತ ನಮ್ಮ ನಡುವಿನ ಮನುಷ್ಯರನ್ನು ಕೀಳಾಗಿ ಕಾಣುವ ಸಮಾಜವನ್ನು ಖಂಡಿಸಿದ್ದಾರೆ.[೪೧]

ದಿನಾಂಕ ೦೬.೧೦.೧೯೪೫ರ ಸಂಚಿಕೆಯಲ್ಲಿ ಮೈಸೂರು ಸಂಸ್ಥಾನದಲ್ಲಿ ಹರಿಜನರಿಗೆ ದೇವಾಲಯ ಪ್ರವೇಶವನ್ನು ನೀಡಬೇಕೆಂದು ಅನೇಕ ಮುಖಂಡರು ಚಳವಳಿಯನ್ನು ಪ್ರಾರಂಭಿಸುವ ಬಗ್ಗೆ ತಿರುವಾಂಕೂರ್ ಮತ್ತು ಬರೋಡ ಸಂಸ್ಥಾನದಲ್ಲಿ ಹರಿಜನರಿಗೆ ಈಗಾಗಲೇ ಗುಡಿಗಳ ಪ್ರವೇಶ ನೀಡಿರುವ ಬಗ್ಗೆ ಸುದ್ದಿ ಪ್ರಕಟವಾಗಿದೆ.[೪೨]

ದಿನಾಂಕ ೨೭.೧೦.೧೯೪೫ರ ಸಂಪಾದಕೀಯದಲ್ಲಿ 'ಹರಿಜನರ ಸೇವೆ' ಎನ್ನುವ ಶೀರ್ಷಿಕೆಯಡಿಯಲ್ಲಿ ಹರಿಜನರನ್ನು ಕೆಳದರ್ಜೆಗೆ ನೂಕಿದ ಬಗ್ಗೆ, ಶ್ರೀರಾಮಾನುಜಾಚಾರ್ಯರು ಬೇಲೂರಿನ ದೇವಾಲಯ, ಮೇಲುಕೋಟೆಯ ದೇವಾಲಯಕ್ಕೆ ವರ್ಷಕ್ಕೆ ೩ ದಿನ ದೇವಾಲಯಕ್ಕೆ ಪ್ರವೇಶ ನೀಡಿರುವ ಬಗ್ಗೆ, ದಾಸರು, ಬಸವಣ್ಣನವರು ಅಸ್ಪೃಶ್ಯತೆಯನ್ನು ಖಂಡಿಸಿದ ಬಗ್ಗೆ, ಯುರೋಪಿನಿಂದ ಬಂದ ಪಾಶ್ಚಿಮಾತ್ಯರು ಹರಿಜನರನ್ನು ಕ್ರೈಸ್ತ ಧರ್ಮಕ್ಕೆ ಮತಾಂತರ ಮಾಡಿದ ಬಗ್ಗೆ, ಯೇಸುವಿನ ಎದುರಲ್ಲಿ ಎಲ್ಲರು ಸಮಾನರೆಂಬ ಭಾವವನ್ನು ಹರಿಜನರಿಗೆ ಇದ್ದರೂ ಸೌಹಾರ್ದ ಮತ್ತು ಅಂತಃಕರಣವನ್ನು ನೀಡಬಾರದೆ, ವಿದ್ಯಾವಂತ ನಾಗರಿಕ ಉತ್ಸಾಹಿ ಹರಿಜನರು ದೇವಾಲಯದ ಹೊರಭಾಗದಲ್ಲಿ ನಿಲ್ಲುವ ಅಪರಾಧ ಮಾಡಿರುವುದಾದರು ಏನು? ದೇವರು ಎಲ್ಲರಿಗೂ ಸೇರಿದವನಲ್ಲವೆ? ಎಲ್ಲರ ತಂದೆ ಅವನೇ ಅಲ್ಲವೆ? ಉತ್ತಮ ಜಾತಿಯವರ ಮೊದಲ ಕರ್ತವ್ಯವೆಂದರೆ ಹರಿಜನರ ತೊಂದರೆಯನ್ನು

ನಿವಾರಿಸುವುದು ಮತ್ತು ಅವರನ್ನು ಬಂಧುವಾತ್ಸಲ್ಯದಿಂದ ಕಾಣುವುದು ಎಂಬ ಸಂಪಾದಕೀಯ ಇಂದಿಗೂ ಕೂಡ ಪ್ರಸ್ತುತವಾಗಿರುವ ವಿಚಾರಧಾರೆಗಳನ್ನು ಎಂ.ಆರ್. ಲಕ್ಷ್ಮಮ್ಮನವರು ವ್ಯಕ್ತಪಡಿಸಿದ್ದು ದೀನದಲಿತರ ಬಗೆಗಿನ ಅವರ ಕಾಳಜಿಯನ್ನು ಈ ಲೇಖನ ಎತ್ತಿಹಿಡಿಯುತ್ತದೆ.[೪೩]

ದಿನಾಂಕ ೨೪.೧೧.೧೯೪೫ರ ಸಂಚಿಕೆಯಲ್ಲಿ ಮೈಸೂರು ಸಂಸ್ಥಾನದ ಹರಿಜನ ಸೇವಕ ಸಂಘದ ಅಧ್ಯಕ್ಷರು ಪಿ. ಸುಬ್ಬರಾಮಶೆಟ್ಟಿ, ಪಿ.ಆರ್. ರಾಮಯ್ಯ ಮುಂತಾದವರು ದಿವಾನರಾದ ಎನ್. ಮಾಧವರಾಯರನ್ನು ಭೇಟಿಯಾಗಿ ಹರಿಜನರಿಗೆ ಮೈಸೂರು ಸಂಸ್ಥಾನದಲ್ಲಿ ದೇವಾಲಯ ಪ್ರವೇಶಕ್ಕೆ ಅವಕಾಶವನ್ನು ನೀಡಬೇಕೆಂದು ಹಾಗೂ ಹರಿಜನ ಸೇವಕ ಸಂಘವು ಹರಿಜನರ ಉದ್ಧಾರಕ್ಕಾಗಿ ಹಮ್ಮಿಕೊಂಡಿರುವ ಕಾರ್ಯಗಳನ್ನು ದಿವಾನರ ಗಮನಕ್ಕೆ ತಂದ ಬಗ್ಗೆ ಸುದ್ದಿ ಪ್ರಕಟವಾಗಿದ್ದು, ಮೈಸೂರು ಸಂಸ್ಥಾನದಲ್ಲಿ ಹರಿಜನ ಅಭಿವೃದ್ಧಿಗೆ ಬೆಳಕು ಪತ್ರಿಕೆಯ ಓದುಗರು ಕೂಡ ಕೈ ಜೋಡಿಸಬೇಕೆಂದು ಎಂ.ಆರ್. ಲಕ್ಷ್ಮಮ್ಮನವರ ಕಾಳಜಿಯಾಗಿದೆ.[೪೪]

ದಿನಾಂಕ ೦೬.೦೪.೧೯೪೬ರ ಪತ್ರಿಕೆಯಲ್ಲಿ 'ಹರಿಜನಕೇರಿ' ಎಂಬ ಶೀರ್ಷಿಕೆಯಲ್ಲಿ ಸಂಭಾಷಣೆಯ ರೂಪದಲ್ಲಿ ಮಹಾತ್ಮ ಗಾಂಧೀಜಿಯವರು ಹರಿಜನಕೇರಿಯಲ್ಲಿ ತಂಗುವ ಬಗ್ಗೆ ಉತ್ತಮ ಜಾತಿಯವರಾದ ಅವರು ಮೇಲು ಕೀಳು ಎನ್ನುವ ಭೇದಭಾವವಿಲ್ಲದೆ ಸರ್ವ ಜಾತಿಗೂ ಸೇರುವರಾಗಿದ್ದು ಹರಿಜನರನ್ನು ಹಿಂದೂ ಧರ್ಮದಿಂದ ದೂರವಿರುವ ಬಗ್ಗೆ ಹರಿಜನರು ಕೂಡ ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಪೂಜಿಸುತ್ತ ಕರ್ಮಮುಕ್ತಿಗಳಲ್ಲಿ ನಂಬಿಕೆಯಿಟ್ಟಿರುವ ಹಿಂದೂ ಧರ್ಮಕ್ಕೆ ಸೇರಿದವರು ಇನ್ನು ಮುಂದೆ ಅವರನ್ನು ಕೀಳಾಗಿ ಕಾಣುವುದನ್ನು ಬಿಡಬೇಕೆಂದು ತಾವೇ ಸ್ವತಃ ಹರಿಜನರ ಉದ್ಧಾರಕ್ಕಾಗಿ ಶ್ರಮಿಸುತ್ತಿರುವ ಗಾಂಧೀಜಿಯವರು ಹಿಂದೂ ಧರ್ಮದ ಒಳಗಡೆಯೇ ಹರಿಜನರು ಇರಬೇಕೆಂದು ಚಿಂತಿಸುವ ಲೇಖನ ಪ್ರಕಟವಾಗಿದ್ದು ಸಾಮಾಜಿಕ ಕಳಕಳಿಯನ್ನು ಬೆಳಕು ಪತ್ರಿಕೆಯು ಹೊಂದಿತ್ತೆಂದು ಹೇಳಬಹುದು.[೪೫]

ದಿನಾಂಕ ೧೦.೦೮.೧೯೪೬ರ ಸಂಚಿಕೆಯಲ್ಲಿ 'ಮದರಾಸಿನಲ್ಲಿ ಪಾನನಿರೋಧ' ಜಾರಿಗೆ ಬಂದ ಬಗ್ಗೆ ಆದಾಯ ಕಡಿಮೆಯಾದರೂ ಜನತೆಯ ಹಿತದೃಷ್ಟಿಯಿಂದ ಪ್ರಜೆಗಳ ಸೌಖ್ಯಕ್ಕಾಗಿ ಪಾನನಿರೋಧ ಜಾರಿಗೆ ಬಂದ ಸುದ್ದಿ ಪ್ರಕಟವಾಗಿದೆ.[೪೬]

ದಿನಾಂಕ ೧೬.೧೧.೧೯೪೬ರ ಸಂಚಿಕೆಯಲ್ಲಿ 'ಹರಿಜನರ ಉದ್ಧಾರ' ಎಂಬ ಶೀರ್ಷಿಕೆಯಡಿಯಲ್ಲಿ ಎಸ್.ಎಂ. ಸಿದ್ದಯ್ಯ ಮೈಸೂರು ನಗರದಲ್ಲಿ ವಕೀಲರಾಗಿ ಕಾರ್ಯ ನಿರ್ವಹಿಸುತ್ತಿರುವ ಇವರು ಹರಿಜನ ಉದ್ಧಾರ ಕಾರ್ಯದಲ್ಲಿ ತುಂಬ ಆಸಕ್ತಿ ಇದ್ದು, ನಮ್ಮ ಪತ್ರಿಕೆಯಲ್ಲಿ ಹರಿಜನರ ಉದ್ಧಾರದ ಮೇಲೆ ಲೇಖನವನ್ನು ಬರೆದಿದ್ದರು. ಸಾರ್ವಜನಿಕ ಸೇವೆಗಾಗಿ ಸಹಕರಿಸಲು ಮುಂದೆ ಬಂದಿರುವ ಶ್ರೀಯುತರಿಗೆ ವಯಸ್ಕರ ಶಿಕ್ಷಣ ಸಮಿತಿಯು

ವಂದನೆಗಳನ್ನು ಅರ್ಪಿಸುತ್ತಿದೆ ಎಂದು ಸಂಪಾದಕರಾದ ಎಂ.ಆರ್. ಲಕ್ಷ್ಮಮ್ಮನವರು ಲೇಖನದ ಕೆಳಭಾಗದಲ್ಲಿ ಪ್ರಕಟಿಸಿದ್ದಾರೆ. ಲೇಖನದಲ್ಲಿ ಹರಿಜನರು ತೀರ ಬಡವರಾಗಿದ್ದು ಅವರು ಏಳಿಗೆಗೆ ಬರಬೇಕಾದರೆ ವಿದ್ಯೆ, ಉದ್ಯೋಗ ಮಾತ್ರ ಸಾಲದು, ಬಡತನ ತೊಲಗಬೇಕು, ಜೀವನಮಟ್ಟ ಹೆಚ್ಚಬೇಕು, ಇತರ ಜಾತಿಯವರ ಸಂಗಡ ಸರಿಸಮಾನರಂತೆ ಗೌರವಯುತವಾಗಿ ಬೆರೆಯುವಂತೆ ಮಾಡಬೇಕು, ಶಾಲಾ ಕಾಲೇಜುಗಳಲ್ಲಿ ಜಾತಿಭೇದ ಬಿಟ್ಟರೆ ಸಾಲದು ವಾಸದ ಮನೆಗಳಲ್ಲಿ ಸರಿಸಮಾನತೆ ಕೊಡಬೇಕೆಂದು ಮಹಾರಾಜರು ಬೆಂಗಳೂರಿನಲ್ಲಿ ಹರಿಜನರಪುರದ ಅಸ್ತಿಭಾರ ಶಿಲೆಯಲ್ಲಿ ನಿವಾರಿಸುವ ಸಮಯದಲ್ಲಿ ಧನಿಕರಾಗಿರುವವರು ಹರಿಜನರ ಸೇವೆಯನ್ನು ಮಾಡಬೇಕು. ಈ ಮೂಲ ತತ್ವಗಳನ್ನು ಪ್ರಜೆಗಳು ಅರಿತು ಉದಾರ ಧನಸಹಾಯ ಮಾಡಿದರೆ ಹರಿಜನ ಉದ್ಧಾರ ಕಾರ್ಯ ತ್ವರಿತವಾಗಿ ಆಗುವುದೆಂದು ಮಹಾರಾಜರ ಅಮೃತವಾಣಿಯಂತೆ ಧನಿಕರು ತಮ್ಮ ಕರ್ತವ್ಯವನ್ನು ಮಾಡುವರೆ. ನಮ್ಮ ಮಹಾರಾಜರು ತಮ್ಮ ಅರಮನೆಗೆ ಹರಿಜನರಿಗೆ ಅವಕಾಶವನ್ನು ಕೊಟ್ಟಿರುವುದು ತಮಗೆ ಗೊತ್ತೆ? ಈ ಲೇಖನದಲ್ಲಿ ಹರಿಜನರ ಉದ್ಧಾರ ಅದಕ್ಕಾಗಿ ಕೈಗೊಳ್ಳಬೇಕಾಗಿರುವ ಕ್ರಮಗಳ ಬಗ್ಗೆ ಜನರು ತೆಗೆದುಕೊಳ್ಳಬೇಕಾದಂತಹ ನಿರ್ಧಾರಗಳ ಬಗ್ಗೆ ವಿವರವಾಗಿ ಇದ್ದು, ಎಂ.ಆರ್. ಲಕ್ಷ್ಮಮ್ಮನವರು ಸಂಪಾದಕರಾಗಿ ಅವರ ಸಾರಥ್ಯದಲ್ಲಿ ಬೆಳಕು ಪತ್ರಿಕೆಯ ಮೂಲಕ ಸಮಾಜ ಸುಧಾರಣೆಯ ಮಹತ್ಕಾರ್ಯವನ್ನು ಹಮ್ಮಿಕೊಂಡು ಜನರಲ್ಲಿ ಚಿಂತನೆಗಳನ್ನು ಮೂಡಿಸುವ ಲೇಖನಗಳನ್ನು ಪ್ರಾರಂಭಿಸಿರುವುದು ನಿಜಕ್ಕೂ ಪ್ರಶಂಸನೀಯವಾದುದು.[೪೭]

ದಿನಾಂಕ ೨೩.೧೧.೧೯೪೬ರ ಸಂಚಿಕೆಯಲ್ಲಿ 'ಹರಿಜನರ ಏಳಿಗೆ ಜಾತಿಭೇದ ಮಾಡಿದರೆ ಶಿಕ್ಷೆ' ಎಂಬ ಶೀರ್ಷಿಕೆಯಲ್ಲಿ ಎಸ್.ಎಂ. ಸಿದ್ದಯ್ಯನವರು ಬರೆದ ಲೇಖನ ಪ್ರಕಟವಾಗಿದ್ದು, ಬೊಂಬಾಯಿ ಸರ್ಕಾರದಲ್ಲಿ ಜಾರಿಗೆ ತಂದಿರುವ ಕಾನೂನಿನ ಬಗ್ಗೆ ಚರ್ಚಿಸಿದ್ದು ಹರಿಜನರಿಗೆ ಆಜನ್ಮಹಕ್ಕುಗಳು ದೊರೆತಿದ್ದು ಹಿಂದುಗಳು ಉಪಯೋಗಿಸುವ ಕೆರೆ ಬಾವಿಗಳಲ್ಲಿ ನೀರು ತೆಗೆದುಕೊಳ್ಳುವ ಹಕ್ಕು ಹರಿಜನರಿಗೂ ಇದ್ದು, ಸ್ಮಶಾನ, ಸ್ನಾನಘಟ್ಟವನ್ನು ಉಪಯೋಗಿಸಬಹುದು, ರಸ್ತೆಯಲ್ಲಿ ಮೆರವಣಿಗೆ ಹೋಗಬಹುದು, ಹೋಟೆಲ್‌ಗಳಿಗೆ ಹೋಗಿ ತಿಂಡಿ ತಿನ್ನಬಹುದು, ಎಲ್ಲಾ ಹಕ್ಕುಗಳು ಹರಿಜನರಿಗೆ ದೊರೆತಿದ್ದು ಸಾರ್ವಜನಿಕ ಜೀವನದಲ್ಲಿ ಹಿಂದೂಗಳು, ಹರಿಜನರು ಸಮಾನರಾಗಿರುವರು. ಇದಕ್ಕೆ ಯಾರಾದರು ಅಡ್ಡಿ ತಂದರೆ ಅವರಿಗೆ ಶಿಕ್ಷೆಯಾಗುವುದು. ಮೊದಲ ತಪ್ಪಿಗೆ ೩ ತಿಂಗಳು ಸಜೆ, ಅಥವಾ ೩೦೦ ರೂಪಾಯಿ ಜುಲ್ಮಾನೆ. ಎರಡನೇ ಸಲ ತಪ್ಪು ಮಾಡಿದರೆ, ೬ ತಿಂಗಳ ಸಜೆ, ೫೦೦ ರೂಪಾಯಿ ಜುಲ್ಮಾನೆ. ಮೂರನೇ ಸಲ ತಪ್ಪು ಮಾಡಿದರೆ ೧ ವರ್ಷ ಸಜೆ, ೧೦೦೦ ರೂಪಾಯಿ ದಂಡ ಅಥವಾ ಸಜೆ ಮತ್ತು ದಂಡ ಒಟ್ಟಿಗೆ ನೀಡಬಹುದು. ಈ ಕಾನೂನಿನಿಂದ ಸಾವಿರಾರು ವರ್ಷಗಳಿಂದ ಮುಟ್ಟಬಾರದವರಾಗಿದ್ದ ಹರಿಜನರಿಗೆ ಸಮಾಜದಲ್ಲಿ ಸರಿಸಮಾನತೆಯನ್ನು ಕೊಡುವ ಅವಕಾಶ ದೊರೆತಿದೆ.

ಮದರಾಸು ಸರ್ಕಾರದವರು ಇಂತಹ ಕಾನೂನನ್ನು ಸದ್ಯದಲ್ಲಿ ಹೊರತರಲಿದ್ದು ಮೈಸೂರಿನಲ್ಲೂ ಇಂತಹ ಕಾನೂನು ಬೇಗ ಜಾರಿಗೆ ಬರಬೇಕಲ್ಲವೆ? ಎಂಬ ಕೆಳಭಾಗದಲ್ಲಿ ಸಂಪಾದಕರಾದ ಎಂ.ಆರ್. ಲಕ್ಷಮ್ಮನವರು 'ಮೈಸೂರು ಜನರ ಮನಸ್ಸಿಗೆ ಬರಬೇಕು. ಈ ಅನ್ಯಾಯ ಸಹಿಸತಕ್ಕದ್ದಲ್ಲ. ಹರಿಜನ ಬಂಧುವೂ ನಮ್ಮ ಬಾವಿಗೆ ಬರಲಿ, ಆತನೂ ದೇವಾಲಯಕ್ಕೆ ಬಂದು ದೇವರ ದರ್ಶನ ಪಡೆಯಲಿ, ಎಲ್ಲರೂ ಒಂದೇ ದೇವರ ಮಕ್ಕಳಲ್ಲವೇ? ಎಂಬ ಈ ಭಾವನೆಯಿಂದ ಜನ ತಾವಾಗಿ ಆದರ ತೋರಿಸಿದರೆ, ಕಾನೂನಿನ ಅವಶ್ಯಕತೆಯೇ ಇರುವುದಿಲ್ಲ. ಆ ದಿನ ಬೇಗ ಬರಬಾರದೆ' ಈ ಲೇಖನದಲ್ಲಿ ಎಂ.ಆರ್. ಲಕ್ಷಮ್ಮನವರು ದೀನದಲಿತರ ಬಗ್ಗೆ ಸಾಮಾಜಿಕ ಅನಿಷ್ಟಗಳ ಬಗ್ಗೆ ಚಿಂತಿಸಿ ಸಾಮಾಜಿಕ ಸುಧಾರಣೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದನ್ನು ಅವರ ಲೇಖನದ ಮೂಲಕ ತಿಳಿದುಕೊಳ್ಳಬಹುದು.[೫೮]

ದಿನಾಂಕ ೩೦.೧೧.೧೯೪೬ರ ಸಂಚಿಕೆಯಲ್ಲಿ ತಿರುಪತಿ ದೇವಾಲಯದ ಸಮಿತಿಯವರು ಕಳೆದ ವಾರ ಸಭೆ ಸೇರಿ ಹರಿಜನರಿಗೆ ತಿರುಪತಿ ದೇವಾಲಯದಲ್ಲಿ ಪ್ರವೇಶ ಮಾಡಲು ಇನ್ನೂ ಅವಕಾಶ ಕೊಡದೆ ಇರುವುದು ಸರಿಯಿಲ್ಲ. ಆ ಕೆಲಸ ಅಗತ್ಯವಾಗಿ ಆಗಬೇಕಾಗಿದೆ ಎಂದು ನಿರ್ಣಯ ತೆಗೆದುಕೊಂಡ ಸುದ್ದಿ ಪತ್ರಿಕೆಯಲ್ಲಿ ಪ್ರಕಟವಾಗಿದೆ.

ಇದೇ ಸಂಚಿಕೆಯಲ್ಲಿ ಎಸ್.ಎಂ. ಸಿದ್ದಯ್ಯನವರು ಬರೆದಿರುವ 'ಕೀಳೆಂಬ ಭಾವನೆ ಹೋಗಬೇಕು' ಎಂಬ ಶೀರ್ಷಿಕೆಯಡಿಯಲ್ಲಿ ಹಿಂದೆ ಇದ್ದು ಸಮಾಜ ಪದ್ಧತಿಯಲ್ಲಿ ಹರಿಜನರು ವಿದ್ಯೆಯನ್ನು ಕಲಿಯಲು ಅವಕಾಶವಿರಲಿಲ್ಲ, ಅದು ಬ್ರಾಹ್ಮಣರಿಗೆ ಮಾತ್ರ ಸೇರಿದ್ದು, ತಮ್ಮ ರಕ್ಷಣೆಗಾಗಿ ಕತ್ತಿ ಹಿಡಿದು ಯುದ್ಧ ಮಾಡುವ ಅನುಕೂಲ ಅವರಿಗೆ ಇರಲಿಲ್ಲ. ಅದು ಕ್ಷತ್ರಿಯರ ಕೆಲಸವಾಗಿತ್ತು. ವ್ಯಾಪಾರ ಮತ್ತು ವ್ಯವಸಾಯ ಮಾಡುವ ಅವಕಾಶವು ಇವರಿಗೆ ಇರಲಿಲ್ಲ. ಏಕೆಂದರೆ ಅವು ವೈಶ್ಯರ ಮತ್ತು ಶೂದ್ರ ಕಸುಬುಗಳಾಗಿದ್ದವು. ಹರಿಜನರು ಗುಡಿಸುವುದು ಜೀತಮಾಡುವುದು ಇತ್ಯಾದಿ ಕೀಳಾದ ಕೆಲಸಗಳಿಗೆ ಊರ ಹೊರಗೆ ವಾಸಮಾಡುವ ಇವರು ಮುಟ್ಟಬಾರದವರು, ನೋಡಬಾರದವರು ಎಂಬುದಾಗಿ ಇವರಿಗೆ ಸಮಾಜದ ಸಂಪರ್ಕವೇ ಇರದೆ ಮೂಢರಾಗಿ, ಅಸಹಾಯಕರಾಗಿ ಅನಾಗರಿಕರಾಗಿ ಉಳಿದಂತಹ ಇರುವ ೬ ಲಕ್ಷ ಜನಸಂಖ್ಯೆಯನ್ನು ಹೊಂದಿದ್ದು ಸವರ್ಣೀಯ ಹಿಂದೂಗಳು ಇದನ್ನೆಲ್ಲಾ ನೋಡಿ ಹಿಂದಿನ ಜನ್ಮದಲ್ಲಿ ಮಾಡಿದ ಪಾಪದ ಫಲ ಸವರ್ಣೀಯ ಹಿಂದೂಗಳಿಗಾಗಿ ದುಡಿಯುವುದರಿಂದ ಅವರಿಗೆ ಮುಕ್ತಿ. ಇದು ದೇವರ ನಿಯಮ ಎಂದು ಭಾವಿಸಿ ಅದನ್ನೇ ಹರಿಜನರಿಗೂ ಬೋಧಿಸಿದರು. ಅವರು ಸತ್ಯವೆಂದು ನಂಬಿದ್ದು ಸಾವಿರಾರು ವರ್ಷಗಳು ಹೀಗೆ ಕಳೆದು ಕೆಲವು ವರ್ಷಗಳಿಂದೀಚೆಗೆ ವಿದ್ಯೆಯು ಒಬ್ಬರ ಸ್ವತ್ತಾಗಿರದೆ ಎಲ್ಲಾ ಜಾತಿಯವರಿಗೂ ದೊರಕಿ ಹರಿಜನರು ವಿದ್ಯೆಯನ್ನು ಕಲಿತರು. ಮೈಸೂರು ಸಂಸ್ಥಾನದಲ್ಲಿ ೬೦ ಜನ ಹರಿಜನರು ಪದವೀಧರರಾಗಿ, ಸರ್ಕಾರಿ ಹುದ್ದೆಗಳಲ್ಲಿ ಸೇರಿ ದಕ್ಷತೆಯಿಂದ ಕಾರ್ಯ ನಿರ್ವಹಿಸುತ್ತಿದ್ದು

ಭಾರತದಲ್ಲಿ ಡಾ. ಅಂಬೇಡ್ಕರ್ ಹರಿಜನ ಕೋಮಿಗೆ ಸೇರಿದವರಾಗಿದ್ದು, ತಾತ್ಕಾಲಿಕ ಸರ್ಕಾರದಲ್ಲಿ ಮಂತ್ರಿಗಳಾಗಿರುವ ಜಗಜೀವನ್‌ರಾಮ್, ಜೋಗೇಂದ್ರನಾಥ ಮಂಡಲ್, ಇಬ್ಬರೂ ಹರಿಜನರೆ. ಬಂಗಾಳ, ಮದ್ರಾಸ್, ಬೊಂಬಾಯಿ ಇಲ್ಲಿಯೂ ಕೂಡ ಹರಿಜನ ಮಂತ್ರಿಗಳಿದ್ದಾರೆ. ಇದರಿಂದ ಹರಿಜನರು ಹಿಂದೆ ಉಳಿಯಲು ಕಾರಣ ಅವರ ಪಾಪದ ಫಲದಿಂದಲ್ಲ ಅಥವಾ ಬುದ್ಧಿಶಕ್ತಿ ಇಲ್ಲದೆ ಅಲ್ಲ, ಅವಕಾಶವನ್ನು ಕೊಡದೇ ಇದ್ದುದರಿಂದ. ಹರಿಜನರು ಕೀಳೆಂಬ ಭಾವನೆಯನ್ನು ಬಿಟ್ಟು ಅವರಿಗೆ ಸಹಾಯ ಮಾಡಿ ಏಳಿಗೆಗೆ ತರಬೇಕು, ಅದರಂತೆ ಹರಿಜನರೂ ತಾವು ಕೀಳೆಂಬ ಭಾವನೆಯನ್ನು ಬಿಡಬೇಕು. ಸರ್ಕಾರದವರು, ವಯಸ್ಕರ ಶಿಕ್ಷಣ ಸಮಿತಿಯವರು ವಿದ್ಯೆ ಕಲಿಯಲು ಅವಕಾಶ ಮತ್ತು ಅನುಕೂಲವನ್ನು ಕಲ್ಪಿಸಿದ್ದು, ಈ ಸದವಕಾಶವನ್ನು ಕಳೆದುಕೊಳ್ಳದೆ ಎಲ್ಲರೂ ವಿದ್ಯಾವಂತರಾಗಿ, ಏಳಿಗೆ ಹೊಂದಿ. ಹಾಗಾದರೆ ಇಡೀ ದೇಶವೇ ಏಳಿಗೆಗೆ ಬರುವುದು, ಹಾಗೆ ಮಾಡುವಿರಾ? ಎಂಬ ಲೇಖನವು ಸಮಾಜದ ಕಣ್ಣನ್ನು ತೆರೆಸುವ ಪ್ರಯತ್ನವನ್ನೂ ಮಾಡಿದ್ದು, ಮಲಗಿದ್ದ ಜನರನ್ನು ಬಡಿದೆಬ್ಬಿಸಿ ಬೆಳಕು ಪತ್ರಿಕೆಯ ಮೂಲಕ ಅವರ ಜೀವನದಲ್ಲಿ ಬೆಳಕನ್ನು ಮೂಡಿಸುವ ಮಹತ್ಕಾರ್ಯವನ್ನು ಮಾಡಿದೆ ಎಂದರೆ ತಪ್ಪಾಗಲಾರದು.[೪೯]

ದಿನಾಂಕ ೦೭.೧೨.೧೯೪೬ರ ಸಂಚಿಕೆಯಲ್ಲಿ ಮೈಸೂರು ಸಂಸ್ಥಾನದಲ್ಲಿ ಪಾನನಿರೋಧ ಜಾರಿಗೆ ತರಲು ಏಳು ಸದಸ್ಯರ ಒಂದು ಸಮಿತಿಯನ್ನು ರಚಿಸುವ ಬಗ್ಗೆ ಅದರಿಂದ ವರಮಾನ ಕಡಿಮೆಯಾದರೆ ಅದನ್ನು ತುಂಬಿಕೊಳ್ಳಲು ಕೈಗೊಳ್ಳುವ ಕ್ರಮದ ಬಗ್ಗೆ ಚರ್ಚಿಸಲು ಸಚಿವರಾಗಿದ್ದ ಶ್ರೀ ಮಹಮ್ಮದ್ ಇಮಾಂರವರ ನೇತೃತ್ವದಲ್ಲಿ ರಚಿತವಾಗುವ ಸಮಿತಿಯ ಬಗ್ಗೆ ಸುದ್ದಿ ಪ್ರಕಟವಾಗಿದೆ.[೫೦]

ದಿನಾಂಕ ೧೪.೧೨.೧೯೪೬ ರ ಸಂಚಿಕೆಯಲ್ಲಿ ಕೆ. ನರಸಯ್ಯ ಎಂಬುವರು ವಯಸ್ಕರ ಶಿಕ್ಷಣ ತರಗತಿಯ ಮೇಲ್ವಿಚಾರಕರು. 'ಇದು ಸರಿಯೇ?' ಎಂಬ ಶೀರ್ಷಿಕೆಯ ಅಡಿಯಲ್ಲಿ ಮಂಡ್ಯ ಜಿಲ್ಲೆಯ ಶಿವಳ್ಳಿ ಎಂಬ ಊರಿಗೆ ವಯಸ್ಕರ ಶಿಕ್ಷಣ ತರಗತಿಯನ್ನು ನೋಡಲು ಹೋದ ಇವರನ್ನು ಮನೆಗೆ ಕರೆದರು. ಉಪಾಧ್ಯಾಯರ ಮನೆಗೆ ಹೋಗಿ 'ನಾನು ಆದಿಕರ್ನಾಟಕದವನು. ಒಳಕ್ಕೆ ಬರಬಹುದೆ?' ಎಂದು ಕೇಳಿದಾಗ ಉಪಾಧ್ಯಾಯರು ಇಲ್ಲವೆಂದು ಹೇಳಿದರು. ಮೇಲ್ವಿಚಾರಕರು ಉಪಾಧ್ಯಾಯರಿಗೆ 'ಕೆಲವು ಹಿಂದಿನ ಕಾಲದ ಆಚಾರ–ವಿಚಾರಗಳು ಈಗ ಮಾಯವಾಗಿದೆ ನಮಗೆ ತಪ್ಪಾಗಿ ಕಂಡ ಪದ್ಧತಿಗಳನ್ನು ನಾವು ಬಿಟ್ಟಿಲ್ಲವೆ' ಎಂದಾಗ ಅವರ ಮಾತಿಗೆ 'ಗಾಂಧಿಯಂಥಹವರೇ ಹರಿಜನರ ಸಂಗಡ ಊಟ ಮಾಡುವಾಗ ನಮ್ಮಂತವರೇನು ಹೋಟೆಲುಗಳಲ್ಲಿ ಎಲ್ಲರೂ ಬರೋದಿಲ್ವೆ ಎಲ್ಲರ ಮೈಯಲ್ಲೂ ರಕ್ತ ಮಾಂಸನೇ ಇರೋದು' ಎಂದು ವಯಸ್ಕರ ಶಾಲೆಯಲ್ಲಿ ಕಲಿಯುವ ವಿದ್ಯಾರ್ಥಿಗಳು ಹೇಳುತ್ತಾರೆ. ಆದರೂ ಕೂಡ ಮೇಲ್ವಿಚಾರಕರು ಉಪಾಧ್ಯಾಯರ ಮನೆಗೆ ಹೋಗದೆ ಅಲ್ಲಿಂದ ಹೊರಟು ಬರುತ್ತಾರೆ. ಈ ರೀತಿ

ತನಗಾದ ಅನುಭವವನ್ನು ಬರೆದು ಕಳುಹಿಸುವುದರ ಮೂಲಕ ಹಾಗೂ ಆ ಪತ್ರವನ್ನು ಪ್ರಕಟಿಸುವುದರ ಮೂಲಕ 'ಬೆಳಕು' ಪತ್ರಿಕೆಯು ಜನರಲ್ಲಿ ಸಾಮಾಜಿಕ ಸುಧಾರಣೆಯ ಚಿಂತನೆಗಳನ್ನು ಮೂಡಿಸುತ್ತಿತ್ತು ಎಂದರೆ ತಪ್ಪಾಗಲಾರದು.

ದಿನಾಂಕ ೧೪.೧೨.೧೯೪೬ರ ಸಂಚಿಕೆಯಲ್ಲಿ ಎಸ್.ಎಂ. ಸಿದ್ದಯ್ಯನವರು ಬರೆದ 'ಹರಿಜನ ಮಕ್ಕಳ ದತ್ತು' ಲೇಖನದಲ್ಲಿ ಕಳೆದ ಸಾಲಿನಲ್ಲಿ ೫,೫೩೦ ವಯಸ್ಕರ ಶಿಕ್ಷಣ ಶಾಲೆಗಳನ್ನು ಮೈಸೂರು ಸಂಸ್ಥಾನದಲ್ಲಿ ತೆರೆದಿದ್ದು ಅದರಲ್ಲಿ ೧೪೩ ಹರಿಜನರಿಗೆ ತೆರೆದ ಶಾಲೆಗಳಾಗಿದ್ದು ತರಗತಿಗಳ ಸಂಖ್ಯೆಯನ್ನು ಹೆಚ್ಚಿಸುವ ವಿಷಯವಾಗಿ ವಯಸ್ಕರ ಶಿಕ್ಷಣ ಸಮಿತಿಯ ಉಪಾಧ್ಯಕ್ಷರಾದ ಡಾ. ಟಿ.ಎ. ಪುರುಷೋತ್ತಮ್‌ರವರ ಅಧ್ಯಕ್ಷತೆಯಲ್ಲಿ ಸಭೆ ನಡೆದು ಭಾರತದಲ್ಲಿ ಇನ್ನೂ ಅಸ್ಪೃಶ್ಯತೆ ಜಾರಿಯಲ್ಲಿದ್ದು, ಅದನ್ನು ನಿರ್ಮೂಲನೆ ಮಾಡಬೇಕು. ವಯಸ್ಕರ ಶಿಕ್ಷಣ ಸಮಿತಿಯವರು ಬರೀ ಅಕ್ಷರಸ್ಥರನ್ನಾಗಿ ಮಾಡಿದರೆ ಸಾಲದು, ಈ ಕಳಂಕವನ್ನು ತೊಡೆದುಹಾಕುವ ಕೆಲಸವನ್ನು ನಿರ್ವಹಿಸಬೇಕು. ಪ್ರತಿಯೊಬ್ಬ ಸವರ್ಣೀಯನನ್ನು ಒಂದು ಹರಿಜನ ಮಗುವನ್ನು ದತ್ತು ತೆಗೆದುಕೊಂಡು ಅದನ್ನು ತನ್ನ ಸಂಸಾರಕ್ಕೆ ಸೇರಿದ ಮಗುವಿನಂತೆ ಸಾಕಿದರೆ ಅಸ್ಪೃಶ್ಯತಾ ನಿವಾರಣೆಗೆ ಸರಿಯಾದ ಮಾರ್ಗವಾಗಿದ್ದು ನಾನು ಕೂಡ ಒಂದು ಮಗುವನ್ನು ದತ್ತು ತೆಗೆದುಕೊಳ್ಳುವೆನೆಂದು ಹಾಗೂ ಗಾಂಧೀಜಿಯವರು ಈ ಕೆಲಸವನ್ನು ಮಾಡಿದರು. ಆದರೆ ಕಾಂಗ್ರೆಸ್‌ನ ಸದಸ್ಯರು ಅವರ ಬೆಂಬಲಿಗರು ಈ ಕಾರ್ಯವನ್ನು ನಿರ್ವಹಿಸಿದ್ದಾಗ ಗಾಂಧೀಜಿಯವರು ಅವರನ್ನು ಒತ್ತಾಯಪಡಿಸಲಿಲ್ಲ. ಕಾಂಗ್ರೆಸ್ಸಿನ ರಚನಾತ್ಮಕ ಕಾರ್ಯದಲ್ಲಿ ಅಸ್ಪೃಶ್ಯತಾ ನಿವಾರಣೆಯೂ ಒಂದು ಮುಖ್ಯವಾದ ಭಾಗ. ಅಸ್ಪೃಶ್ಯತೆಯು ಹೋಗದ ಹೊರತು ಸ್ವರಾಜ್ಯ ಲಭಿಸಲಾರದೆಂದೂ, ಹಿಂದು ಮತಕ್ಕೆ ಉಳಿಗಾಲವಿಲ್ಲವೆಂದು ಸಾರಿದ ಗಾಂಧೀಜಿಯವರು ಕಾಂಗ್ರೆಸ್ ಭಕ್ತರ ಮೇಲೆ ಇದನ್ನು ಒತ್ತಾಯಪಡಿಸದೆಹೋದುದು ಆಶ್ಚರ್ಯವೇ ಸರಿ. ಹಾಗೆ ಮಾಡಿದ್ದರೆ ಈ ದಿನ ಅಸ್ಪೃಶ್ಯತೆಯ ಸಮಸ್ಯೆಯೇ ಇರುತ್ತಿರಲಿಲ್ಲ ಎಂದು ಎಸ್.ಎಂ. ಸಿದ್ದಯ್ಯನವರು ತಮ್ಮ ಲೇಖನದಲ್ಲಿ ಹೇಳಿದ್ದು, 'ಬೆಳಕು' ಪತ್ರಿಕೆ ಅಸ್ಪೃಶ್ಯತೆಯನ್ನು ಪ್ರಬಲವಾಗಿ ವಿರೋಧಿಸುತ್ತಿತ್ತು ಹಾಗೂ ಆರೋಗ್ಯಕರ ಸಮಾಜ ನಿರ್ಮಾಣದಲ್ಲಿ ಪ್ರಮುಖ ಪಾತ್ರ ವಹಿಸುತ್ತಿತ್ತು ಎಂದು ಹೇಳಬಹುದು.[೫೧]

ದಿನಾಂಕ ೦೪.೦೧.೧೯೪೭ರ ಸಂಚಿಕೆಯಲ್ಲಿ 'ಹರಿಜನರ ಏಳಿಗೆ' ಶೀರ್ಷಿಕೆಯ ಅಡಿಯಲ್ಲಿ ಒಬ್ಬ ವಕೀಲರು ಹರಿಜನರ ಏಳಿಗೆಗೆ ದುಡಿಯುತ್ತಿದ್ದು, ಅದಕ್ಕೆ ವಿರುದ್ಧವಾದ ಸ್ವಭಾವದ ಅವರ ತಂದೆಯವರು ಗೊಡ್ಡು ಆಚಾರವಂತರಾಗಿದ್ದರು. ಅವರ ಮನೆಯಲ್ಲಿ ಇದ್ದ ಕುದುರೆಯನ್ನು ನೋಡಿಕೊಳ್ಳುತ್ತಿದ್ದ ಕೆಲಸದವನು ರಜೆ ಹಾಕಿದಾಗ ಆದಿಕರ್ನಾಟಕದ ಕೆಲಸದವನು ಕುದುರೆಗೆ ಹುಲ್ಲನ್ನು ಮತ್ತು ಹುರುಳಿಯನ್ನು ತಿನ್ನಿಸಿದ್ದು, ಅದನ್ನು ತಿಳಿದ ವಕೀಲರ ತಂದೆಯವರು ಮಗನ ಮೇಲೆ ರೇಗಾಡಿ ಹರಿಜನರ ಕೈಯಲ್ಲಿ ಕುದುರೆಗೆ ಆಹಾರ

ತಿನ್ನಿಸಿದ್ದರಿಂದ ಅದು ಮೈಲಿಗೆಯಾಯಿತು. ಆ ಕುದುರೆಯನ್ನು ಇನ್ನು ಮುಂದೆ ಹತ್ತುವುದಿಲ್ಲವೆಂದು ತಮಗೆ ಇಷ್ಟವಾದ ಕುದುರೆ ಸವಾರಿಯನ್ನೇ ತ್ಯಜಿಸಿದ ಬಗ್ಗೆ ಲೇಖನ ಪ್ರಕಟಿಸಿದ್ದು 'ಬೆಳಕು' ಪತ್ರಿಕೆಯು ಸಾಮಾಜಿಕ ಸುಧಾರಣೆಯ ಬಗ್ಗೆ ತನ್ನ ಕಾಳಜಿಯನ್ನು ವ್ಯಕ್ತಪಡಿಸಿದೆ.[೫೨]

ದಿನಾಂಕ ೧೧.೦೧.೧೯೪೭ರಲ್ಲಿ ಸಂಚಿಕೆಯಲ್ಲಿ ಪ್ರಕಟವಾದ ಲೇಖನದಲ್ಲಿ ಎಂ.ಆರ್. ಲಕ್ಷಮ್ಮನವರು ಬೇಜಾವಾಡದಿಂದ ಗೂಡೂರಿನ ಕಡೆಗೆ ರೈಲಿನಲ್ಲಿ ಪ್ರಯಾಣಿಸುವ ಸಂದರ್ಭದಲ್ಲಿ ಸಿಕ್ಕಿದಂತಹ ತೆಲುಗು ಮಾತನಾಡುವ ಒಬ್ಬ ಮಹಿಳೆ ತಿರುಪತಿಗೆ ಪ್ರಯಾಣ ಮಾಡುತ್ತಿರುವ ಬಗ್ಗೆ, ಹರಿಜನರು ತಿರುಪತಿ ಬೆಟ್ಟವನ್ನು ಹತ್ತುತ್ತಿರುವುದನ್ನು ನೋಡಿ ಆಕೆ ಧನ್ಯಳಾಗುವುದನ್ನು ನೋಡಿ, ಆಕೆ ತಿರುಪತಿಗೆ ಹೋಗುವುದಾಗಿ ತಿಳಿಸಿ, ಜೀವನದಲ್ಲಿ ನಾನು ತುಂಬಾ ನೊಂದಿದ್ದೇನೆ. ಹರಿಜನರ ಸೇವೆ ಮಾಡಿ ನೋವು ನೀಗಿಸಲು ತೀರ್ಮಾನಿಸಿರುವ ಆಕೆ ಬ್ರಾಹ್ಮಣಮತದವಳಾಗಿದ್ದು, ಹರಿಜನರ ಬಗ್ಗೆ ಕಾಳಜಿವುಳ್ಳ ಆಕೆಯಿಂದ ಪ್ರೇರೇಪಿತರಾದ ಲೇಖಕಿಯು ತಿರುಪತಿಗೆ ಹೋದ ಬಗ್ಗೆ ಲೇಖನದಲ್ಲಿ ತಿಳಿಸಿದ್ದಾರೆ.

ವೈಕುಂಠ ಏಕಾದಶಿಯು ವಿಷ್ಣುಭಕ್ತರು ಉಪವಾಸಮಾಡಿ ದೇವರನ್ನು ಭಜಿಸುವ ದಿನವಾಗಿದ್ದು, ಆ ದಿನ ಮೊಟ್ಟಮೊದಲ ಬಾರಿಗೆ ತಿರುಪತಿ ಬೆಟ್ಟ ಹತ್ತಲು ಅವಕಾಶ ನೀಡಲಾಗಿದ್ದು, ಆದರೆ ದೇವಾಲಯದ ಒಳಗೆ ಪ್ರವೇಶಿಸಲು ಅವಕಾಶವಿರಲಿಲ್ಲ. ಹಾಗೂ ೮೦೦, ೯೦೦ ವರ್ಷಗಳಿಂದ ಹರಿಜನರಿಗೆ ತಿರುಪತಿ ಬೆಟ್ಟವನ್ನು ಹತ್ತುವ ಅವಕಾಶವಿರಲಿಲ್ಲ. ಈಗ ಬೆಟ್ಟ ಹತ್ತುವ ಅವಕಾಶ ನೀಡಲಾಗಿದೆ. ಮುಂದೆ ದೇವಾಲಯದ ಒಳಗೂ ಪ್ರವೇಶ ದೊರೆಯಬಹುದೆಂಬ ನಿರೀಕ್ಷೆಯನ್ನು ಈ ಲೇಖನದಲ್ಲಿ ಪ್ರಕಟಿಸಲಾಗಿದೆ. ತಮಿಳುನಾಡಿನ ತಿರುನಲ್‌ವೇಲಿಯಲ್ಲಿರುವ ೨ ದೇವಾಲಯಗಳಲ್ಲೂ ಜನವರಿ ೨, ೧೯೪೭ ರಲ್ಲಿ ಪ್ರವೇಶ ನೀಡಲಾಯಿತು. ಹಾಗೆಯೇ ತಿರುವಾರೂರಿನ ತ್ಯಾಗರಾಜಸ್ವಾಮಿ, ನೀಲಗಿರಿಯ ವಿನಾಗರ್ ಮಾರಿಯಮ್ಮ ದೇವಾಲಯಗಳಲ್ಲಿಯೂ ಪ್ರವೇಶ ನೀಡಲಾಗಿದ್ದು ಇದರಿಂದ ಸನಾತನ ಧರ್ಮಕ್ಕೆ ಚ್ಯುತಿ ಉಂಟಾಗುವುದೆಂಬ ಪ್ರಶ್ನೆಗೆ ಖಂಡಿತವಾಗಿಯೂ ಇಲ್ಲ ಎನ್ನಲೇಬೇಕು. ಏಕೆಂದರೆ ಹಿಂದೂ ಧರ್ಮ ಉದಾರತೆಯಿಂದ, ವಿಶಾಲತೆಯಿಂದ ಕೂಡಿದ್ದು, ಕಾಲಕ್ಕೆ ತಕ್ಕಂತೆ ಅದು ಪರಿಶುದ್ಧತೆ ಹೊಂದುತ್ತದೆ. ಇಷ್ಟು ಕಾಲ ಉಂಟಾದ ಅನ್ಯಾಯವನ್ನು ತಿದ್ದಿಕೊಳ್ಳುವ ಕಾಲ ಬಂದಿದ್ದು, ಭಾರತದ ಜನರು ಒಗ್ಗಟ್ಟಾಗುವ ಸಂದರ್ಭ ಸೃಷ್ಟಿಯಾಗಿದೆ ಎಂಬುದನ್ನು ಲೇಖನದಲ್ಲಿ ಹೇಳಿರುವ ಎಂ.ಆರ್. ಲಕ್ಷಮ್ಮನವರು ಸಮಾಜಸುಧಾರಣೆಯ ಬಗ್ಗೆ ಹರಿಜನರ ಉದ್ಧಾರದ ಬಗ್ಗೆ ಚಿಂತನೆಯನ್ನು ಇಟ್ಟುಕೊಂಡಿದ್ದರೆಂಬುದು ತಿಳಿದುಬರುತ್ತದೆ.[೫೩]

ದಿನಾಂಕ ೦೮.೦೨.೧೯೪೭ರ ಸಂಚಿಕೆಯಲ್ಲಿ ಎಸ್.ಎಂ. ಸಿದ್ದಯ್ಯನವರು 'ಬೆಳಕು' ಪತ್ರಿಕೆಗೆ 'ಗ್ರಾಮಪಂಚಾಯಿತಿಗೆ ಒಂದು ಸಲಹೆ' ಎಂಬ ಪತ್ರವನ್ನು ಕಳುಹಿಸಿಕೊಟ್ಟಿದ್ದು,

ಪತ್ರವನ್ನು ಪ್ರಕಟಿಸುವಂತೆ ಕೋರಿರುತ್ತಾರೆ. ಅದರ ಪ್ರಕಾರ ಭಾರತ ರಕ್ಷಣಾ ಕಾನೂನು ಬಂದಿದ್ದು ಈ ಕಾನೂನಿನ ಕೆಲವು ಅಂಶಗಳನ್ನು ಕೊಡಲಾಗಿದೆ. ಅಲ್ಲಿ ೧೦೮ನೇ ಸೆಕ್ಷನ್ ಪ್ರಕಾರ ರೋಗದ ಪ್ರಾಣಿಯನ್ನು ಸತ್ತ ಪ್ರಾಣಿಯನ್ನು ಯಾರೂ ಮಾರಾಟ ಮಾಡಬಾರದು. ಸತ್ತ ಪ್ರಾಣಿಗಳ ಮಾಂಸವನ್ನು ಯಾರೂ ತಿನ್ನಬಾರದು. ಮಾಂಸವನ್ನು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸಾಗಿಸಕೂಡದು ಎಂಬ ಕಾನೂನು ಮಾಡಿದ್ದರೂ ಕೂಡ ಹರಿಜನರಲ್ಲಿ ಕೆಲವರು ಸತ್ತ ದನ ಮತ್ತು ಎಮ್ಮೆಗಳನ್ನು ತಿನ್ನುವ ದುರಭ್ಯಾಸವನ್ನು ಇಟ್ಟುಕೊಂಡಿರುತ್ತಾರೆ. ಕೆಲವರು ಪ್ರಾಣಿಗಳನ್ನು ಬಲಿಕೊಡುವುದು ಉಂಟು. ಇದನ್ನು ತಪ್ಪಿಸಲು ಕಾನೂನಿನಿಂದ ಸಾಧ್ಯವಿಲ್ಲ. ಆದ್ದರಿಂದ ಗ್ರಾಮಪಂಚಾಯಿತಿಯವರು ಹರಿಜನರು ಇದನ್ನು ತ್ಯಜಿಸುವಂತೆ ಒತ್ತಾಯ ಮಾಡಬೇಕು. ತಪ್ಪಿದ್ದಲ್ಲಿ ಅವರಿಗೆ ಶಿಕ್ಷೆಯಾಗುವಂತೆ ಮಾಡಬೇಕು. ಹೀಗೆ ಎಲ್ಲಾ ಗ್ರಾಮಪಂಚಾಯಿತಿಗಳು ಈ ಕೆಲಸವನ್ನು ಮಾಡಿದ್ದಲ್ಲಿ ಹರಿಜನರು ಈ ಕೆಟ್ಟ ಕೆಲಸವನ್ನು ಬಿಟ್ಟುಬಿಡುವರು. ಗ್ರಾಮಪಂಚಾಯಿತಿಯವರು ಹಾಗೆ ಮಾಡುವರೇ?.[೫೪]

ದಿನಾಂಕ ೦೮.೦೩.೧೯೪೭ರ ಸಂಚಿಕೆಯಲ್ಲಿ 'ಹರಿಜನರ ಕೇರಿಗೆ ಪ್ರಭುಗಳ ಭೇಟಿ' ಎಂಬ ಶೀರ್ಷಿಕೆಯಡಿಯಲ್ಲಿ, ಮಹಾರಾಜರು ಮೈಸೂರಿನ ಆದಿಕರ್ನಾಟಕಪುರಕ್ಕೆ ಭೇಟಿಕೊಟ್ಟಿದ್ದರು ಹಾಗೂ ಇವರ ಜೊತೆ ದಿವಾನ್ ಬಹದ್ದೂರ್ ಟಿ.ಸಿ.ಎಂ. ರಾಯನ್‌ರವರು ಸಹ ಇದ್ದರು. ಮಹಾರಾಜರು ಹರಿಜನರ ಸ್ಥಿತಿಯನ್ನು ತಾವೇ ನೋಡಿ ಅವರ ಕುಂದು ಕೊರತೆಗಳನ್ನು ಪರಿಶೀಲಿಸಲು ಹೋಗಿದ್ದರು. ಈ ಸಂಚಿಕೆಯಲ್ಲಿ ಎಸ್.ಎಂ. ಸಿದ್ದಯ್ಯನವರು ಬರೆದ ಲೇಖನ ಪ್ರಕಟವಾಗಿದ್ದು, ಒಂದು ಸಭೆಯಲ್ಲಿ ಎಲ್ಲಾ ವರ್ಗದವರು ಇದ್ದು ಸಭೆ ಮುಗಿದ ನಂತರ ಉಪಾಹಾರದ ವ್ಯವಸ್ಥೆ ಇದ್ದು, ಎಲ್ಲರಿಗೂ ತಿಂಡಿ ತಟ್ಟೆಯನ್ನು ಕೊಡುತ್ತಿದ್ದ ಹೋಟೆಲ್ ಹುಡುಗನು, ಆದಿಕರ್ನಾಟಕದವರಿಗೆ ಎಲೆಯಲ್ಲಿ ತಿಂಡಿಯನ್ನು ಹಾಕಿಕೊಟ್ಟನು. ತಿಂಡಿ ತಿಂದ ಮೇಲೆ ಕಾಫಿಯನ್ನು ನೀಡದೆ ಇದ್ದಾಗ ಒಬ್ಬ ಅಧಿಕಾರಿ ಆದಿಕರ್ನಾಟಕದವರ ಕಡೆ ಕೈತೋರಿಸಿ ಇವರಿಗೂ ಕಾಫಿ ಕೊಡಿ ಎಂದಾಗ, ಹೋಟೆಲಿನವನು ಕಾಫಿಯನ್ನು ಕೊಟ್ಟನು. ಉಪಾಹಾರ ಮುಗಿದ ನಂತರ ಹರಿಜನರಿಗೆ ನೀಡಿದ್ದ ಲೋಟಗಳನ್ನು ತೆಗೆದುಕೊಳ್ಳಲು ಹೋಟೆಲಿನವನು ನಿರಾಕರಿಸಿದ. ಹರಿಜನರು ಮುಟ್ಟಿದ್ದು, ಹರಿಜನರಿಗೆ ಸೇರಬೇಕೆಂದು ಬೇರೆ ಊರಿನ ಹರಿಜನರಿಗೆ ಅವುಗಳನ್ನು ನೀಡಲಾಗಿತ್ತು. ಇವುಗಳನ್ನು ಆತ್ಮಗೌರವವುಳ್ಳ ಯಾವ ನಾಗರಿಕನು ಸಹಿಸತಕ್ಕದ್ದಲ್ಲ. ಸಮಾಜ ಸಭೆಗಳಲ್ಲಿ ಎಲ್ಲರೂ ಸರಿಸಮಾನರು ಎಂಬ ಭಾವನೆ ನಮ್ಮ ಜನರಲ್ಲಿ ಬರಬೇಕಾಗಿದೆ. ಮೈಸೂರಿನಲ್ಲಿಯೂ ಅಂತಹ ಕಾನೂನು ಜಾರಿಗೆ ಬರಬೇಕು. ಕಾನೂನು ಮಾಡುವುದಕ್ಕಿಂತ ಮೊದಲೇ ಸವರ್ಣೀಯ ಹಿಂದುಗಳು ತಮ್ಮ ಮನೋಭಾವವನ್ನು ಬದಲಾಯಿಸಿದರೆ ಉತ್ತಮವಲ್ಲವೆ? ಎಂಬ ಲೇಖನವೂ ಸಮಾಜಸುಧಾರಣೆಯ ನಿಟ್ಟಿನಲ್ಲಿ 'ಬೆಳಕು' ಪತ್ರಿಕೆಯು ಅವಿರತವಾಗಿ ಶ್ರಮಿಸುತ್ತಿತ್ತೆಂದು ತಿಳಿದುಬರುತ್ತದೆ.[೫೫]

## ೭.೩ ಎಂ.ಆರ್. ಲಕ್ಷಮ್ಮ ಅವರ ಸೋದರಿ ಪತ್ರಿಕೆಯ ಜನಪರ ನಿಲುವುಗಳು ಹಾಗೂ ದೇಶೀಯ ಚಿಂತನೆಗಳು

ದಿನಾಂಕ ೧೨.೦೨.೧೯೫೪ರ ಸಂಚಿಕೆಯಲ್ಲಿ 'ಜನಮರಳೋ' ಎಂಬ ಶೀರ್ಷಿಕೆಯಡಿಯಲ್ಲಿ 'ಕ್ರೈಸ್ತಮಿಷನರಿಗಳು ಪ್ರಾರ್ಥನೆಯಿಂದ ಕಣ್ಣು ಕೈಕಾಲುಗಳು ತೊಂದರೆ ಇರುವ ಅಂಗವಿಕಲರಿಗೆ ಸರಿ ಹೋಗುವುದೆಂಬ' ಜಾಹೀರಾತನ್ನು ನೀಡಿ, ಅಲ್ಲಿಯ ಪ್ರಾರ್ಥನಾ ಸಭೆಯಲ್ಲಿ ಈ ರೀತಿ ಪ್ರೇರೇಪಿಸಲ್ಪಟ್ಟ ಹತ್ತಾರು ಮಂದಿ ವೇದಿಕೆಯ ಮೇಲೆ ಬಂದು ಪ್ರಾರ್ಥನೆ ಮಾಡಿದೊಡನೆ ನಮ್ಮ ಅಂಗಾಂಗಗಳು ಸರಿಯಾದವು ಎಂದು ಹೇಳಿದ ಬಗ್ಗೆ ಇದನ್ನು ಪರೀಕ್ಷಿಸಲು ಲಕ್ಷಮ್ಮನವರು ಸ್ವತಃ ಪ್ರಾರ್ಥನಾ ಸಭೆಯಲ್ಲಿ ಭಾಗವಹಿಸಿ, ಒಬ್ಬ ಅಂಧ ಮಹಿಳೆ ತನಗೆ ಕಣ್ಣು ಬರಲಿಲ್ಲವೆಂದು ಹೇಳಿದ ಬಗ್ಗೆ ಹಾಗೂ ಆ ಸ್ಥಳದಲ್ಲಿ ಅಜ್ಞಾನಿಗಳನ್ನು ಮರುಳುಗೊಳಿಸಿ ಕಾಣಿಕೆಯನ್ನು ಪಡೆಯುವ ಬಗ್ಗೆ, ಕ್ರೈಸ್ತ ಧರ್ಮಕ್ಕೆ ಮತಾಂತರ ಮಾಡುತ್ತಿರುವ ಬಗ್ಗೆ ಲೇಖನ ಪ್ರಕಟಿಸಿರುವ ಲಕ್ಷಮ್ಮನವರು ನಮ್ಮ ಜನತೆ ಇದಕ್ಕೆ ಮರುಳಾಗಬಾರದು. ವಿದ್ಯಾವಂತರಾದ ಸಹೋದರಿಯರು ತಿಳಿಸಿಹೇಳಬೇಕೆಂದು ತಮ್ಮ ಲೇಖನದಲ್ಲಿ ಹೇಳಿದ್ದು ಅನಕ್ಷರತೆಯಿಂದ ಅಜ್ಞಾನ ಉಂಟಾಗುವ ಬಗ್ಗೆ ತಮ್ಮ ಲೇಖನದಲ್ಲಿ ತಿಳಿಸಿರುತ್ತಾರೆ.[೫೬]

ದಿನಾಂಕ ೩೦.೦೪.೧೯೫೪ರ ಸಂಚಿಕೆಯಲ್ಲಿ 'ಶಿಕ್ಷಕರ ಸಮ್ಮೇಳನ' ಎಂಬ ಶೀರ್ಷಿಕೆಯಡಿಯಲ್ಲಿ ದಿನಾಂಕ ೨೫.೦೩.೧೯೫೪ರಂದು ಬೆಂಗಳೂರಿನಲ್ಲಿ ಶಿಕ್ಷಕರ ಸಮ್ಮೇಳನ ನಡೆದು ಶಾಲೆ, ಶಿಕ್ಷಣ, ಶಿಕ್ಷಕ, ಶಿಷ್ಯ, ಪೋಷಕರು ಇವೆಲ್ಲವುಗಳನ್ನು ತಮ್ಮ ಸೂಕ್ಷ್ಮ ದೃಷ್ಟಿಯಿಂದ ಅವಲೋಕಿಸಿ ಅವರ ಸಮಸ್ಯೆಗಳು ಮತ್ತು ಅದಕ್ಕೆ ಪರಿಹಾರಗಳನ್ನು ಕಂಡುಹಿಡಿಯುವ ಸಲುವಾಗಿ ಸಮ್ಮೇಳನ ಏರ್ಪಡಿಸಲಾಗಿದ್ದು, ಸಾಮಾನ್ಯವಾಗಿ ರಾಷ್ಟ್ರೀಯ ಉನ್ನತಿಗೆ ಕಾರಣರಾದ ಬೋಧಕ ವರ್ಗದ ಬಗ್ಗೆ ಅನಾದರಣೆ, ಅನಾಸಕ್ತಿಗಳನ್ನು ಕಾಣುತ್ತಿದ್ದ ಮಕ್ಕಳ ಮಾನಸಿಕ ಪ್ರವೃತ್ತಿಯನ್ನು ಉತ್ತಮಗೊಳಿಸುವ ಶಿಲ್ಪಿ ಉಪಾಧ್ಯಾಯರಾಗಿದ್ದು, ಅವರ ಸ್ಥಿತಿಗತಿಗಳು ಕಷ್ಟದಾಯಕವಾಗಿದ್ದು, ಉಪಾಧ್ಯಾಯರಿಗೆ ಜನತೆಯ ಸೌಹಾರ್ದ, ಸರ್ಕಾರದ ಬೆಂಬಲ ಬೇಕು. ಉಪಾಧ್ಯಾಯರು ರಾಷ್ಟ್ರಕ್ಕೆ ನಾಯಕರನ್ನು ಒದಗಿಸುವ ಜೊತೆಗೆ ಆ ಸಮ್ಮೇಳನದಲ್ಲಿ ಆಂಗ್ಲ ಭಾಷೆಯಲ್ಲಿಯೇ ಹೆಚ್ಚಿನವರು ಮಾತನಾಡಿದ್ದು, ಅನೇಕ ಉಪಾಧ್ಯಾಯರು ಕನ್ನಡ ತಿಳಿದವರಾಗಿದ್ದು ಯಾವ ಭಾಷೆ ಹೆಚ್ಚಾಗಿ ಬಳಸಲ್ಪಡುವುದೋ ಅಲ್ಲಿ ಆ ಭಾಷೆಯ ಪ್ರಯೋಗವನ್ನು ಮಾಡಬೇಕೆಂದು ಸಂಪಾದಕೀಯದಲ್ಲಿ ಹೇಳಲಾಗಿದೆ.[೫೭]

ದಿನಾಂಕ ೦೭.೦೫.೧೯೫೪ ರ 'ಸೋದರಿ' ಪತ್ರಿಕೆಯ ಸಂಚಿಕೆಯಲ್ಲಿ 'ಪ್ರಾಥಮಿಕ ವಿದ್ಯಾಭ್ಯಾಸ' ಎಂಬ ಶೀರ್ಷಿಕೆಯಡಿಯಲ್ಲಿ ಸರ್ಕಾರ ತಂದಂತಹ ಹೊಸ ಸುಧಾರಣೆಯನ್ನು ಸಂಪಾದಕೀಯದಲ್ಲಿ ಪ್ರಕಟಿಸಲಾಗಿದ್ದು, ಪ್ರಾಥಮಿಕ ಶಿಕ್ಷಣವನ್ನು ನಾಲ್ಕು ವರ್ಷಗಳಿಂದ ಆರು

ವರ್ಷಗಳಿಗೆ ಏರಿಸಿರುವುದು ನ್ಯಾಯಯುತವಾಗಿದೆ. ಪ್ರಾಥಮಿಕ ಶಿಕ್ಷಣವು ಮಾನವನ ಶಿಕ್ಷಣದ ಬುನಾದಿಯಾಗಿದೆ. ಪ್ರಾಥಮಿಕ ಶಿಕ್ಷಣದಲ್ಲಿ ಶಿಕ್ಷಕನ ಜವಾಬ್ದಾರಿ ಹೆಚ್ಚಾಗಿದ್ದು, ಮಕ್ಕಳ ಮೇಲೆ ಉತ್ತಮ ಪ್ರಭಾವವನ್ನು ಬೀರಿ ಸತ್ಪ್ರಜೆಯಾಗಿಸುವ ಜವಾಬ್ದಾರಿ ಇದ್ದು, ಶಿಕ್ಷಣದೊಂದಿಗೆ ಕೈಕೆಲಸವನ್ನು ಕಲಿಸುವುದು ಅವಶ್ಯಕವಾಗಿದ್ದು, ಬಣ್ಣದ ಕಾಗದಗಳಿಂದ ನಾನಾ ವಿಧವಾದ ಹೂಗಳನ್ನು, ಜೇಡಿಮಣ್ಣಿನಿಂದ ಅನೇಕ ವಸ್ತುಗಳನ್ನು ಮಾಡುವ ಪ್ರಕೃತಿಯೊಂದಿಗೆ ಬೆರೆಯುವ ಅವಕಾಶವನ್ನು ಕಲ್ಪಿಸಿಕೊಡಬೇಕು. ಪ್ರಾಥಮಿಕ ಶಿಕ್ಷಣವನ್ನು ಬೋಧಿಸುವ ಉಪಾಧ್ಯಾಯರಿಗೆ ಕನಿಷ್ಠ ವಿದ್ಯಾರ್ಹತೆ ಎಸ್.ಎಸ್.ಎಲ್.ಸಿ.ಯಾಗಿದ್ದು, ರಾಮಾಯಣ, ಮಹಾಭಾರತ, ಭಾಗವತ ಕಥೆಗಳ ಜೊತೆಗೆ ಸಂಸ್ಕೃತ ಶ್ಲೋಕಗಳು, ಮಾನವಿಕ, ಗಣಿತ ಮುಂತಾದವುಗಳನ್ನು ಅಭ್ಯಾಸ ಮಾಡಿಸಬೇಕು. ಇದರಿಂದಾಗಿ ಮಕ್ಕಳ ಜ್ಞಾನ ಹೆಚ್ಚುವುದು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.[೫೮]

ದಿನಾಂಕ ೨೩.೦೭.೧೯೫೫ರ ಸಂಚಿಕೆಯಲ್ಲಿ 'ರಾಷ್ಟ್ರ ನಿರ್ಮಾಣದಲ್ಲಿ ಒಂದು ಹೊಸ ಯತ್ನ ಸಾಮಾಜಿಕ ಹಿತರಕ್ಷಣೆ' ಎಂಬ ಶೀರ್ಷಿಕೆಯಡಿಯಲ್ಲಿ ಕೇಂದ್ರದಿಂದ ಸಾಮಾಜಿಕ ಹಿತ ರಕ್ಷಣೆ ಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ ೬ ಸಾವಿರ ಹಳ್ಳಿಗಳಲ್ಲಿ ಎಲ್ಲಾ ಸಂಸ್ಥಾನಗಳಲ್ಲಿಯೂ ಪ್ರಾರಂಭಿಸುವ ಯೋಜನಾ ಕೇಂದ್ರಗಳು ಒಟ್ಟು ೩೦೦ ಇದ್ದು, ಸ್ವಯಂ ಸಂಸ್ಥೆಗಳ ಮೂಲಕ ಮಹಿಳೆಯರು ಮಕ್ಕಳು ಬಾಲಕರ ಹಿತರಕ್ಷಣೆಯನ್ನು ಮಾಡಲಾಗುವುದು ಮತ್ತು ೧೫ ರಿಂದ ೨೫ ಹಳ್ಳಿಗಳಿಗೆ ಒಂದು ಕೇಂದ್ರದಂತೆ ೫೦ ಸಾವಿರ ರೂ.ಗಳ ವೆಚ್ಚವನ್ನು ಮಾಡಲಾಗುವುದು. ಸ್ವಯಂ ಸಂಸ್ಥೆಗಳು ಅರ್ಧದಷ್ಟು ಹಣವನ್ನು ಕೇಂದ್ರದಿಂದ ಪಡೆದರೆ, ಉಳಿದ ಅರ್ಧ ಹಣವನ್ನು ಸಂಸ್ಥಾನದ ಸರ್ಕಾರದಿಂದ ದಾನಿಗಳಿಂದ ಸಂಗ್ರಹಿಸಿ, ಸಾಮಾಜಿಕ ಹಿತ ರಕ್ಷಣೆಯನ್ನು ಮಾಡುವಲ್ಲಿ ಕಾರ್ಯ ನಿರ್ವಹಿಸಬೇಕು. ಈಗಾಗಲೇ ಆಂಧ್ರ, ಅಸ್ಸಾಂ, ಮುಂಬೈ, ಹೈದರಾಬಾದ್, ಮದ್ರಾಸ್, ತಿರುವಾಂಕೂರು, ಕೊಚ್ಚಿನ್, ಒರಿಸ್ಸಾ, ದೆಹಲಿ ಮುಂತಾದ ಕಡೆಗಳಲ್ಲಿ ಸಮಿತಿಯನ್ನು ರಚಿಸಿದ್ದು ಇನ್ನೂ ಉಳಿದ ಕಡೆ ರಚಿಸಲಾಗುವುದು. ಪಂಚವಾರ್ಷಿಕ ಯೋಜನೆಯಲ್ಲಿ ಸೂಚಿಸಿರುವ ಹಾದಿಯಲ್ಲಿ ಸಾಮಾಜಿಕ ಹಿತರಕ್ಷಣಾ ಕಾರ್ಯಗಳನ್ನು ಮುಂದುವರಿಸಿಕೊಂಡು ಹೋಗುವ ಸ್ವಯಂ ಸೇವಾ ಸಂಸ್ಥೆಗಳಲ್ಲಿ ಹೆಚ್ಚಿನ ಸಮಾಜಸೇವಕರು ಮಹಿಳೆಯರಿದ್ದು, ತಮ್ಮ ವ್ಯಾಪ್ತಿಯಲ್ಲಿ ಶಿಕ್ಷಣ, ಆರೋಗ್ಯ ಮತ್ತು ಗ್ರಾಮೀಣವಾಸಿಗಳ ಆರ್ಥಿಕ ಸುಧಾರಣೆ, ಪ್ರಸವಪೂರ್ವ ಅನಂತರ ಸ್ತ್ರೀಯರ ಆರೈಕೆ, ಅಕ್ಷರ ಪ್ರಚಾರ, ಮಹಿಳೆಯರಿಗೆ ಸಾಮಾಜಿಕ ಶಿಕ್ಷಣ, ಕೆಲಸಗಾರರ ಮಕ್ಕಳಿಗೆ ಸಾಮುದಾಯಿಕ ಶಿಶು ಗೃಹಗಳ ಸ್ಥಾಪನೆ, ಮಹಿಳೆಯರ ಕ್ಲಬ್‌ಗಳ, ಮಕ್ಕಳ ಕ್ರೀಡಾ ಕೇಂದ್ರಗಳನ್ನು ಸ್ಥಾಪಿಸುವ ಜೊತೆಗೆ, ಮಹಿಳೆಯರಿಗೆ ಕಲೆ ಮತ್ತು ಕುಶಲ ಕೇಂದ್ರಗಳನ್ನು ನಡೆಸಲಾಗುವುದು. ಅಂದರೆ ಕಿವುಡರಿಗೆ ಹೆಳವರಿಗೆ, ವರ್ಕ್‌ಶಾಪ್‌ಗಳು, ಎಳೆಯ ವಯಸ್ಸಿನ ಅಪರಾಧಿಗಳನ್ನು ತಿದ್ದುವ ಸಂಸ್ಥೆಗಳು, ಸಂಕಟಕ್ಕೆ ಈಡಾದ ಮಹಿಳೆಯರಿಗೆ ಸಂರಕ್ಷಿಸುವ ಗೃಹಗಳು ಇತ್ಯಾದಿಗಳನ್ನು ಸಾಮಾಜಿಕ ಹಿತರಕ್ಷಣೆ

ಕೇಂದ್ರವು ಕಾರ್ಯಕ್ರಮವನ್ನು ಹಮ್ಮಿಕೊಂಡು ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿ ತೊಡಗಿಸಿಕೊಳ್ಳುವುದರ ಬಗ್ಗೆ ಸಂಪಾದಕೀಯದಲ್ಲಿ ಚಿಂತಿಸಿದ್ದರು.[೫೯]

ದಿನಾಂಕ ೦೬.೦೮.೧೯೫೪ರ ಸಂಚಿಕೆಯಲ್ಲಿ 'ಸಮಾಜ ಸೇವಾ ವಿಭಾಗ' ಎಂಬ ಶೀರ್ಷಿಕೆಯಡಿಯಲ್ಲಿ ಕೇಂದ್ರ ಸರ್ಕಾರದವರು ಭಾರತ ಬಿಟ್ಟು ೨೭ ಪ್ರಾಂತ್ಯಗಳಲ್ಲಿ ೩ ಪ್ರಾಂತ್ಯಗಳನ್ನು ಬಿಟ್ಟು ಉಳಿದ ೨೪ ಪ್ರಾಂತ್ಯಗಳಲ್ಲಿ ಸೋಶಿಯಲ್ ವೆಲ್‌ಫೇರ್ ಬೋರ್ಡ್ ಅನ್ನು ಸ್ಥಾಪಿಸಲಾಗಿದೆ. ಆದರೆ ಮೈಸೂರು ಸಂಸ್ಥಾನದಲ್ಲಿ ಇನ್ನೂ ಸ್ಥಾಪಿತವಾಗಿಲ್ಲದೆ ಇರುವುದು ವಿಷಾದಕರವಾಗಿದ್ದು, ಮೈಸೂರು ಸಂಸ್ಥಾನದಲ್ಲಿ ಮೈಸೂರು ಮಹಿಳಾ ಸಮ್ಮೇಳನ ಎಂಬ ಸೇವಾ ಸಂಸ್ಥೆ ಇದ್ದು ೨೭ ವರ್ಷಗಳಿಂದ ಗ್ರಾಮಾಂತರ ಪ್ರದೇಶಗಳಲ್ಲಿ ಸೇವೆಯನ್ನು ಸಲ್ಲಿಸುತ್ತಿದ್ದು, ಆ ಸಂಸ್ಥೆಯು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದು, ಧನಸಹಾಯದ ಕೊರತೆಯನ್ನು ಕಾರ್ಯ ನಿರ್ವಹಿಸುವ ಸಮಾಜಸೇವಕರ ಕೊರತೆಯನ್ನು ಎದುರಿಸುತ್ತಿದೆ. ಈ ಸಂದರ್ಭದಲ್ಲಿ ಸರ್ಕಾರದವರು ಸೋಷಿಯಲ್ ವೆಲ್‌ಫೇರ್ ಬೋರ್ಡ್‌ನ್ನು ಸ್ಥಾಪಿಸಿ ಅವುಗಳಿಗೆ ಒಂದು ಜವಾಬ್ದಾರಿಯನ್ನು ನೀಡಿ ಧನಸಹಾಯವನ್ನು ಮಾಡಿ ಅವುಗಳ ಕಾರ್ಯವ್ಯಾಪ್ತಿ ವಿಸ್ತರಿಸುವಂತೆ ಮಾಡಬಹುದು ಎಂದು ಅಭಿಪ್ರಾಯಪಟ್ಟರು.[೬೦]

ದಿನಾಂಕ ೧೩.೦೮.೧೯೫೪ರ ಸಂಚಿಕೆಯಲ್ಲಿ ಭಾರತದ ಸ್ವಾತಂತ್ರ್ಯೋತ್ಸವ ೭ನೇ ವಾರ್ಷಿಕೋತ್ಸವದಲ್ಲಿ ರಾಷ್ಟ್ರಾಧ್ಯಕ್ಷರಾದ ಡಾ॥ ಬಾಬು ರಾಜೇಂದ್ರಪ್ರಸಾದ್‌ರವರು ನೀಡಿದ ಸಂದೇಶದ ಬಗ್ಗೆ ಸಂಪಾದಕೀಯದಲ್ಲಿ ಪ್ರಕಟಿಸಲಾಗಿದ್ದು, ಬಡತನ ಹಸಿವು ಅಜ್ಞಾನಗಳನ್ನು ನಿವಾರಿಸುವ ಪ್ರಯತ್ನದ ಜೊತೆಗೆ, ಜಗತ್ತಿನ ಶಾಂತಿ, ಇತರ ರಾಷ್ಟ್ರಗಳೊಡನೆ ವಿಶ್ವಾಸ, ಮಾನವ ಜನಾಂಗದ ಸುಖಸಂತೋಷಕ್ಕಾಗಿ ಸೇವೆಯನ್ನು ಮಾಡುವುದರ ಬಗ್ಗೆ, ಆಹಾರದ ಅಭಾವವನ್ನು ನೀಗಿಸಲು ಮಾಡುವ ಪ್ರಯತ್ನದ ಬಗ್ಗೆ ಪಂಚವಾರ್ಷಿಕ ಯೋಜನೆಗಳಲ್ಲಿ ಸಾಧಿಸಬೇಕಾದ ಕಾರ್ಯಕ್ರಮದ ಬಗ್ಗೆ ಭಾರತದಲ್ಲಿ ನಡೆಯುತ್ತಿರುವ ಪ್ರಕೃತಿವಿಕೋಪವನ್ನು ತಡೆಗಟ್ಟುವ ಬಗ್ಗೆ ಸಂಪಾದಕೀಯದಲ್ಲಿ ಪ್ರಕಟಿಸಲಾಗಿದೆ.[೬೧]

ದಿನಾಂಕ ೨೭.೦೮.೧೯೫೪ರ ಸಂಚಿಕೆಯಲ್ಲಿ 'ಆರೋಗ್ಯ ಭಾಗ್ಯ ಹೆಚ್ಚಲಿ' ಎಂಬ ಶೀರ್ಷಿಕೆಯಡಿಯಲ್ಲಿ ರಾಷ್ಟ್ರಪತಿ ಡಾ॥ ಬಾಬು ರಾಜೇಂದ್ರಪ್ರಸಾದ್‌ರವರು ಮೈಸೂರು ಸಂಸ್ಥಾನಕ್ಕೆ ಭೇಟಿಕೊಟ್ಟಿದ್ದು, ಶ್ರೀರಂಗಪಟ್ಟಣ, ತಲಕಾಡು, ಸೋಮನಾಥಪುರ, ಶಿವನಸಮುದ್ರ, ಶಿಂಷಾ, ಮೇಲುಕೋಟೆ ಇಲ್ಲಿಗೆ ಭೇಟಿ ನೀಡಿ ಇಲ್ಲಿನ ಪ್ರಜಾರಾಜ್ಯದ ವ್ಯವಸ್ಥೆಯ ಬಗ್ಗೆ, ರಾಜ ಪ್ರಮುಖರ ಮಹತ್ವವನ್ನು ತಿಳಿದು, ಮೈಸೂರಿನ ಅನೇಕ ಪಟ್ಟಣಗಳಿಗೆ ಭೇಟಿ ನೀಡಿ ಮೈಸೂರಿನ ಸಂಗೀತವನ್ನು ಆಸ್ವಾದಿಸಿದ ರಾಷ್ಟ್ರಪತಿಯವರು ಮೇಲುಕೋಟೆಗೆ ಭೇಟಿ ನೀಡಿ, ಪುನೀತರಾದ ಬಗ್ಗೆ ಮೈಸೂರು ಸಂಸ್ಥಾನ ವಿವಿಧ ಸಂಸ್ಕೃತಿಗಳ ಸಮ್ಮಿಲನ, ಭಾಷೆಗಳ ಏಕೀಕರಣ, ಪ್ರಬಲವಾದ ಶಾಸನಸಭೆ ಇವುಗಳಲ್ಲಿ ಮೈಸೂರು ಅಗ್ರಗಣ್ಯ ಸ್ಥಾನದಲ್ಲಿದೆ. ದಕ್ಷಿಣ ಭಾರತಕ್ಕೆ ಕೇಂದ್ರದಿಂದ

ಹೆಚ್ಚಿನ ಪ್ರಾಶಸ್ತ್ಯವನ್ನು ನೀಡದೆ ಇದು ರಾಷ್ಟ್ರಪತಿಗಳ ಭೇಟಿಯಿಂದ ಆ ಕೊರತೆ ಸಿಗುವುದೆಂಬ ಹಾಗೂ ರಾಷ್ಟ್ರಪತಿಗಳ ಆರೋಗ್ಯ ಸುಧಾರಿಸಲೆಂದು ಸಂಪಾದಕೀಯದಲ್ಲಿ ಪ್ರಕಟಿಸಲಾಗಿದೆ.[೬೨]

ದಿನಾಂಕ ೦೧.೧೦.೧೯೫೪ರ ಸಂಚಿಕೆಯಲ್ಲಿ ಕನ್ನಡ ನಾಡಿನಲ್ಲಿ ವೈಭವದಿಂದ ಆಚರಿಸುವ ನವರಾತ್ರಿ ಹಬ್ಬದ ಬಗ್ಗೆ, ಅಕ್ಟೋಬರ್ ತಿಂಗಳಿನಲ್ಲಿ ಬಳ್ಳಾರಿ ಮೈಸೂರು ಸಂಸ್ಥಾನಕ್ಕೆ ಸೇರ್ಪಡೆಯಾಗಿದ್ದ ಬಗ್ಗೆ, ಹಲವಾರು ವರ್ಷಗಳಿಂದ ಕನ್ನಡಿಗರು ಕನ್ನಡ ನಾಡಿನ ಕನಸನ್ನು ಕಾಣುತ್ತಿದ್ದು, ಅಖಂಡ ಕರ್ನಾಟಕದ ನಿರ್ಮಾಣದ ಬಗ್ಗೆ, ಈ ನವರಾತ್ರಿಯ ಕಾಲದಲ್ಲಿ ಸಾಹಿತ್ಯ ಸಂಗೀತ ಎಲ್ಲೆಡೆಯು ಹರಡಲೆಂದು ಹಬ್ಬದ ಶುಭಾಶಯವನ್ನು ಸಂಪಾದಕೀಯದಲ್ಲಿ ಕೋರಲಾಗಿದ್ದು ಎಂ.ಆರ್. ಲಕ್ಷ್ಮಮ್ಮನವರು ಏಕೀಕರಣಪರವಾದ ನಿಲುವನ್ನು ಹೊಂದಿದ್ದರೆಂದು ಈ ಲೇಖನದಿಂದ ಸ್ಪಷ್ಟವಾಗುತ್ತದೆ.[೬೩]

ದಿನಾಂಕ ೦೮.೧೦.೧೯೫೪ರ ಸಂಚಿಕೆಯಲ್ಲಿ 'ದಸರಾ ವಸ್ತುಪ್ರದರ್ಶನಕ್ಕೊಂದು ಭೇಟಿ' ಎಂಬ ಶೀರ್ಷಿಕೆಯಡಿಯಲ್ಲಿ ವಸ್ತುಪ್ರದರ್ಶನದಲ್ಲಿ ಇದ್ದಂತಹ ಕೈಮಗ್ಗದ ಶಾಖೆ, ಜಪಾನಿನ ಗೃಹ ಕೈಗಾರಿಕೆಗಳ ವಸ್ತುಗಳು, ಮಹಿಳಾ ಶಾಖೆಗಳಲ್ಲಿ ದೊರೆಯುವ ವಸ್ತುಗಳು, ಸೂರ್ಯೋದಯ ಶಾಖೆಯ ಅಡಿಯಲ್ಲಿ ಅನೇಕ ಮಹನೀಯರ ಕುರಿತ ಜೀವನಚರಿತ್ರೆಗಳ ಪುಸ್ತಕಗಳು, ಕೈಗಾರಿಕಾ ವಿಭಾಗ, ಮನಶ್ಶಾಸ್ತ್ರ ಶಾಖೆ, ವಿದ್ಯಾಭ್ಯಾಸದ ಸುಧಾರಣೆ, ವ್ಯವಸಾಯ ಇಲಾಖೆ ಅವುಗಳ ಜೊತೆಗೆ ಮನರಂಜನೆಯ ಸಾಧನಗಳು ವಸ್ತುಪ್ರದರ್ಶನದಲ್ಲಿದ್ದು ಅವುಗಳಿಂದ ಶಿಕ್ಷಣ, ಕೃಷಿ, ಕೈಗಾರಿಕೆ ಮುಂತಾದವುಗಳ ಬಗ್ಗೆ ಜ್ಞಾನವನ್ನು ಪಡೆದುಕೊಳ್ಳುವುದರ ಜೊತೆಗೆ ಅಗತ್ಯ ಸಾಮಗ್ರಿಗಳ ಉಪಯೋಗವನ್ನು ಪಡೆದುಕೊಳ್ಳಲು ಸಾಧ್ಯ ಎಂದು ತಮ್ಮ ಸಂಪಾದಕೀಯದಲ್ಲಿ ಪ್ರಕಟಿಸಿದ್ದಾರೆ.[೬೪]

ದಿನಾಂಕ ೨೨.೧೦.೧೯೫೪ರ ಸಂಚಿಕೆಯಲ್ಲಿ 'ಮೈಸೂರು ಸಮಾಜ ಅಭ್ಯುದಯ ಸಲಹಾ ಸಮಿತಿ' ಎಂಬ ಶೀರ್ಷಿಕೆಯಡಿಯಲ್ಲಿ ಕೇಂದ್ರ ಸಮಾಜ ಅಭ್ಯುದಯ ಸಂಸ್ಥೆ ಭಾರತದ ವಿವಿಧ ಸಂಸ್ಥಾನಗಳಲ್ಲಿ ಶಾಖೆಗಳನ್ನು ತೆರೆದಿದ್ದು, ಭಾರತದ ೨೨ ಸಂಸ್ಥಾನಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಬಗ್ಗೆ ೨ ಹಳ್ಳಿಗಳನ್ನು ಸೇರಿಸಿ ಒಂದು ಯೂನಿಟ್ ಆಗಿ ಪರಿವರ್ತಿಸಿ ಆ ಗ್ರಾಮದ ಸೇವಾಕಾರ್ಯವನ್ನು ನೋಡಿಕೊಳ್ಳಲು ಇಬ್ಬರು ಮಹಿಳೆಯರನ್ನು ನೇಮಿಸಿ, ಕಾರ್ಯ ನಿರ್ವಹಿಸಲು ಅರ್ಧ ಹಣವನ್ನು ಸ್ಥಳೀಯ ಸಂಸ್ಥೆ ನೀಡಿದ್ದರೆ, ಉಳಿದ ಅರ್ಧ ಹಣವನ್ನು ಕೇಂದ್ರ ಸಂಸ್ಥೆ ನೀಡುವ ಬಗ್ಗೆ ಮತ್ತು ಮಹಿಳೆಯರ ಮಕ್ಕಳ ಹಿತರಕ್ಷಣೆ ಅಂಗವಿಕಲರ ರಕ್ಷಣೆ ಅನಾಥ ಮಹಿಳೆಯರು ಮತ್ತು ಮಕ್ಕಳ ರಕ್ಷಣೆಯನ್ನು ಉದ್ದೇಶವಾಗಿ ಇಟ್ಟುಕೊಂಡು ಮೈಸೂರು ಸಂಸ್ಥಾನದಲ್ಲಿ ಸೋಶಿಯಲ್ ವೆಲ್‌ಫೇರ್ ಬೋರ್ಡ್ ಸ್ಥಾಪಿಸಲಾಗಿದ್ದು ಅದರ ಅಧ್ಯಕ್ಷರಾಗಿ ವಿಧಾನಪರಿಷತ್ತಿನ ಸದಸ್ಯರಾದ ಎಂ.ಆರ್. ಲಕ್ಷ್ಮಮ್ಮರವರು ಕಾರ್ಯ ನಿರ್ವಹಿಸುತ್ತಿದ್ದು ಯಶೋಧರಮ್ಮ ದಾಸಪ್ಪ, ಕಾಮೇಶ್ವರಮ್ಮ ಕುಪ್ಪಸ್ವಾಮಿ ಮೈಸೂರು ವಿಭಾಗದ ಸದಸ್ಯರಾದರೆ,

ರತ್ನಬಾಯಿಚಿತ್ತೂರ್ ಮತ್ತು ಸಾವಿತ್ರಮ್ಮ ಬೆಂಗಳೂರು ವಿಭಾಗದ ಸದಸ್ಯರಾಗಿ, ಅಣ್ಣೇಗೌಡರು ಚಿಕ್ಕಮಗಳೂರಿನ ಸದಸ್ಯರಾಗಿ, ಸಾವಿತ್ರಮ್ಮ ಶಿವಮೊಗ್ಗ ವಿಭಾಗದಿಂದ ಆಯ್ಕೆಯಾಗಿದ್ದು, ಲಕ್ಷ್ಮೀಕೃಷ್ಣಪ್ಪನವರು ರೆಡ್‌ಕ್ರಾಸ್ ಸಂಸ್ಥೆಯನ್ನು ಪ್ರತಿನಿಧಿಸಿದ್ದಾರೆ. ಶ್ರೀ ಸ್ವಾಮಿ ಯತೀಶ್ವರನಂದಜೀ ರಾಮಕೃಷ್ಣ ಮಠವನ್ನು ಪ್ರತಿನಿಧಿಸುವ ಸದಸ್ಯರಾಗಿ, ಮೈಸೂರು ಸಂಸ್ಥಾನದ ಸಮಾಜ ಅಭ್ಯುದಯ ಕಾರ್ಯ ನಿರ್ವಹಿಸುವ ಬಗ್ಗೆ ಸಂಪಾದಕೀಯದಲ್ಲಿ ಪ್ರಕಟಿಸಲಾಗಿದೆ.[೬೫]

ದಿನಾಂಕ ೦೫.೧೧.೧೯೫೪ರ ಸಂಚಿಕೆಯಲ್ಲಿ 'ಕಣ್ ತೆರೆದು ನೋಡಲ್ಲಿ ಸತ್ಯದೊಂದು ಸಂಗತಿ' ಎಂಬ ಶೀರ್ಷಿಕೆಯಡಿಯಲ್ಲಿ ಮಧ್ಯಮ ವರ್ಗದವರು ಎಷ್ಟು ದುಡಿದರೂ ಹೊಟ್ಟೆ, ಬಟ್ಟೆಗೆ ಕೊರತೆಯನ್ನು ಅನುಭವಿಸುತ್ತಿದ್ದು, ಬಡವ ಮತ್ತು ಕೆಳ ಮಧ್ಯಮ ವರ್ಗದವರ ಸಮಸ್ಯೆಗಳನ್ನು ಪರಿಹರಿಸಲು ಸರ್ಕಾರ ಕೆಲವೊಂದು ಅನುಕೂಲಗಳನ್ನು ಮಾಡಿಕೊಡುವ ಬಗ್ಗೆ, ಮನೆಯಲ್ಲಿರುವ ಹೆಣ್ಣುಮಕ್ಕಳಿಗೆ ಉಪಕಸುಬನ್ನು ಕಲ್ಪಿಸುವ ಬಗ್ಗೆ ಸರ್ಕಾರ ಆಲೋಚಿಸಿದ್ದು, ಹೊಲಿಗೆ ಶಿಕ್ಷಣ ಮುಂತಾದ ಕಾರ್ಯಗಳನ್ನು ಕೈಗೊಳ್ಳಲು ಸರ್ಕಾರವು ಧನ ಸಹಾಯವನ್ನು ಮಾಡಲಿದ್ದು ಸರ್ಕಾರದಿಂದ ಕೊಡುವ ಹಣಕ್ಕೆ ಸಮನಾಗಿ ಸ್ಥಳೀಯ ಸಂಸ್ಥೆಗಳು ಬಂಡವಾಳವನ್ನು ತೊಡಗಿಸಬೇಕು. ಆದರೆ ಸ್ಥಳೀಯ ಸಂಸ್ಥೆಗಳು ಆ ಹಣವನ್ನು ಹೊಂದಿಸಲು ಕಷ್ಟಕರವಾಗಿದ್ದು ಕೇಂದ್ರದಿಂದ ಬರುವ ಧನಸಹಾಯದ ಜೊತೆಗೆ ಮೈಸೂರು ರಾಜ್ಯ ಸರ್ಕಾರದವರು ಸ್ವಲ್ಪ ಹಣದ ಸಹಾಯವನ್ನು ಮಾಡಬೇಕೆಂದು ಹೇಳಿರುವ ಎಂ.ಆರ್. ಲಕ್ಷಮ್ಮನವರು ಕೇಂದ್ರದಿಂದ ಕೊಟ್ಟ ಅನುದಾನವನ್ನು ರಾಜ್ಯ ಸರ್ಕಾರವು ಸರಿಯಾಗಿ ವಿತರಿಸದ ಬಗ್ಗೆ 'ದೇವರು ಕೊಟ್ಟರೂ ಪೂಜಾರಿ ಕೊಡಲ್ಲ' ಎಂಬ ಗಾದೆ ಮಾತಿನಂತೆ ಆಡಳಿತ ಯಂತ್ರ ನಡೆಯುತ್ತಿರುವ ಬಗ್ಗೆ ತಮ್ಮ ಸಂಪಾದಕೀಯದಲ್ಲಿ ಸರ್ಕಾರವನ್ನು ಟೀಕೆ ಮಾಡಿದ್ದಾರೆ. ವಿಧಾನಪರಿಷತ್ತಿನ ಸದಸ್ಯರಾಗಿದ್ದು ಸರ್ಕಾರದ ಭಾಗವಾಗಿದ್ದು ಕೂಡ ಎಂ.ಆರ್. ಲಕ್ಷಮ್ಮನವರು ಜನಸಾಮಾನ್ಯರ ಏಳಿಗೆ ಮತ್ತು ಅಭಿವೃದ್ಧಿಗಾಗಿ ಶ್ರಮಿಸುವ ಮನೋಭಾವವಾಗಿದ್ದು ಸರ್ಕಾರವನ್ನು ಟೀಕೆ ಮಾಡಲು ಹಿಂಜರಿಯದ ಮನೋಭಾವ ಅವರದಾಗಿದ್ದು, ಅದು ಸಂಪಾದಕೀಯದಲ್ಲಿ ವ್ಯಕ್ತವಾಗಿದೆ.[೬೬]

ದಿನಾಂಕ ೧೨.೧೧.೧೯೫೪ರ ಸಂಚಿಕೆಯಲ್ಲಿ 'ಸರಕಾರ ಕಣ್ತೆರೆದು ನೋಡಲ್ಲಿ ಸತ್ಯದೊಂದು ಸಂಗತಿ' ಎಂಬ ಶೀರ್ಷಿಕೆಯಡಿಯಲ್ಲಿ ಹೆಣ್ಣುಮಕ್ಕಳು ಹೆಚ್ಚಿನ ವಿದ್ಯಾಭ್ಯಾಸ ಪಡೆಯದೆ ಅವಿವಾಹಿತಳಾಗಿರುವ ಅಥವಾ ಗಂಡನಿಂದ ಪರಿತ್ಯಕ್ತಳಾಗಿರುವ ಅಥವಾ ವಿಧವೆಯಾಗಿರುವ ಹಾಗೂ ಸಂಸಾರ ಸಾಗಿಸಲು ಕಷ್ಟಪಡುತ್ತಿರುವ ಬಡ ಹೆಣ್ಣುಮಕ್ಕಳು ಕೈಮಗ್ಗದಲ್ಲಿ ಕೆಲಸ ಮಾಡಿ ಹಣ ಸಂಪಾದಿಸುವ ಕಾರ್ಯದಲ್ಲಿ ತೊಡಗಬಹುದು. ಆದರೆ ಕೈಮಗ್ಗದ ಬಟ್ಟೆಗಳು ಅಷ್ಟೊಂದು ಉತ್ತಮ ದರ್ಜೆಯವು ಆಗಿಲ್ಲದೆ ಇದ್ದು, ಮಾಸಲು ಬಣ್ಣವಿದ್ದು, ಅದಕ್ಕೆ ಗಂಜಿ ಹಾಕಿಸಿ ಸಿದ್ಧಪಡಿಸಿದ್ದರೆ ಅದರ ಖರ್ಚು ಹೆಚ್ಚಾಗುತ್ತದೆ. ಕೈಮಗ್ಗದ

ಬಟ್ಟೆಗಳನ್ನು ಕೊಳ್ಳುವವರ ಸಂಖ್ಯೆ ಕಡಿಮೆ ಇದ್ದು, ಹೆಚ್ಚಿನ ಜನ ಕಾರ್ಖಾನೆಯಲ್ಲಿ ತಯಾರಾಗುವ ಬಟ್ಟೆಗಳನ್ನು ಬಯಸುತ್ತಿದ್ದು ಸಮಾಜಸೇವಾ ಸಂಸ್ಥೆಯಲ್ಲಿ ಹೊಲಿಗೆ ಮುಂತಾದ ಕಾರ್ಯಗಳನ್ನು ಕಲಿತು ದುಡಿವ ಮಹಿಳೆಯ ಶ್ರಮಕ್ಕೆ ಹೆಚ್ಚಿನ ಪ್ರತಿಫಲವಿಲ್ಲದೆ ಅವರು ಅಂತಹ ಸ್ಥಿತಿಯನ್ನು ತಲುಪುವ ಉದಾಹರಣೆಗಳನ್ನು ಕಾಣಬಹುದು. ಅದಕ್ಕಾಗಿ ಸರಕಾರದವರು ಸ್ವದೇಶಿ ಖಾದಿಯನ್ನು ಕೊಳ್ಳಲು ಪ್ರಚಾರಕಷ್ಟೇ ಸೀಮಿತವಾಗದೆ, ಸರಕಾರವು ಆಸ್ಪತ್ರೆಗಳಿಗೆ ಬೇಕಾದ ಟವಲ್, ಹೊದಿಕೆ ಮುಂತಾದವುಗಳನ್ನು ಖರೀದಿಸಿದರೆ ಕೈಮಗ್ಗದ ಖಾದಿ ಕೈಗಾರಿಕೆಗಳು ಉಳಿಯುವುದು. ಜೊತೆಗೆ ಆ ಉದ್ಯಮದಲ್ಲಿ ತೊಡಗಿಸಿಕೊಂಡ ಅನೇಕ ಮಹಿಳೆಯರ ಜೀವನ ಸುಗಮವಾಗುವುದು. ಇದಕ್ಕೆ ಆಡಳಿತಯಂತ್ರ ಅಧಿಕಾರಿಗಳ ಇಚ್ಛಾಶಕ್ತಿಯ ಕೊರತೆಯಿದ್ದು, ಬಡತನದ ಬೇಗೆಯನ್ನು ಅರಿತ ಜನಪ್ರತಿನಿಧಿಗಳು ಇದಕ್ಕೆ ಸಹಾಯವನ್ನು ಮಾಡಬೇಕು.  ಖಾದಿಯನ್ನು ಕೊಂಡುಕೊಳ್ಳಿ, ಧರಿಸಿ ಎಂಬ ಸರ್ಕಾರದ ಉಪದೇಶ ಒಳ್ಳೆಯದಾಗಿದ್ದು ಖಾದಿಯ ಉತ್ಪಾದನೆ ದೇಶದಲ್ಲಿ ಎಷ್ಟಿದೆ? ಅದನ್ನು ನೂಲುವವರು ಮಹಿಳೆಯರೆ? ನೂಲುವುದಕ್ಕೆ ಬೇಕಾದ ಸೌಕರ್ಯಗಳು ಅನುಕೂಲಕರವಾಗಿದೆಯೇ? ಎಂಬ ಮೂಲಭೂತ ಪ್ರಶ್ನೆಯನ್ನು ಯೋಚಿಸಿ ಖಾದಿಯ ತಯಾರಿಕೆಯ ಕಡೆ ಗಮನಕೊಡಬೇಕೆ ವಿನಃ, ಖಾದಿಯ ಉತ್ಪಾದನಾ ಕಾರ್ಯ ಸರ್ವೋದಯ ಸೇವೆಯೆಂದು ಪ್ರಚಾರದ ಉತ್ಸವವಾಗಬಾರದು. ಬೆಂಗಳೂರಿನ ಚಾಮರಾಜ ಪೇಟೆಯಲ್ಲಿ ಹೂವಿನ ವರ್ತಕರು ಹೂವು ಕಟ್ಟುವ ಮಹಿಳೆಯರಿಗೆ ಹೂವಿನ ಜೊತೆಗೆ ನಾರನ್ನು ಒದಗಿಸಿ, ಅವರು ಕಟ್ಟಿರುವ ಹೂವಿನ ಮಾಲೆಗೆ ನಿಗದಿಪಡಿಸಿದ ಹಣವನ್ನು ನೀಡಿ ವರ್ತಕರು ಕೊಂಡೊಯ್ಯುವ ಕೆಲಸ ಮಾಡುತ್ತಿದ್ದು ಇಂದು ಅರಳಿ ನಾಳೆ ಬಾಡುವ ಹೂವಿಗೆ ಇಷ್ಟು ಕಾಳಜಿಯನ್ನು ವಹಿಸುವ ವರ್ತಕರು ಇನ್ನು ಪವಿತ್ರ ವಸ್ತುವಾದ ಖಾದಿಯ ಉತ್ಪಾದನೆಗೆ ಸರಕಾರದವರು ಮತ್ತು ಖಾದಿಯ ತಯಾರಕರು, ಏನು ಕ್ರಮವನ್ನು ಕೈಗೊಂಡಿದ್ದಾರೆ ಎಂದು ಆಲೋಚಿಸಬೇಕು. ಸಮಾಜಸೇವಾ ಸಂಸ್ಥೆಗಳು ಅಲ್ಪಸ್ವಲ್ಪ ಖಾದಿ ನೂಲುವ ಕಾರ್ಯವನ್ನು ಕೈಗೊಳ್ಳುತ್ತಿದ್ದು, ಒಂದು ವೇಳೆ ಚರಕ ಕೆಟ್ಟುಹೋದರೆ ಅದನ್ನು ಸರಿಪಡಿಸುವ ಅಂಗಡಿಯ ಕೊರತೆ, ಹೊಸ ಚರಕಗಳನ್ನು ಕೊಳ್ಳಲು ಸಾಧ್ಯವಾಗದ ಸ್ಥಿತಿ ಹಾಗೂ ನೂಲುವವರ ಮನೆಗೆ ಹತ್ತಿಯನ್ನು ಕೊಟ್ಟು ದಾರವನ್ನು ತೆಗೆದುಕೊಂಡು ಹೋಗುವ ವ್ಯವಸ್ಥೆ ಇಲ್ಲದಿರುವುದರಿಂದ ಕೆಲಸ ಮಾಡುವವರಿಗೆ ಪ್ರೋತ್ಸಾಹ ಕಡಿಮೆ ಇರುವುದರಿಂದ ಈ ನಿಟ್ಟಿನಲ್ಲಿ ಎಲ್ಲರೂ ಆಲೋಚಿಸಬೇಕಾದ ಅಗತ್ಯತೆ ಇದೆ.  ಮೈಸೂರು ರಾಜ್ಯದಲ್ಲಿ ನೂಲುವ ಸಮಾಜಸೇವಾ ಸಂಸ್ಥೆಗಳು ಇದ್ದರೂ ಅದನ್ನು ಬಟ್ಟೆಯಾಗಿ ನೇಯುವ ಸೌಕರ್ಯವಿಲ್ಲ. ನೇಯ್ಗೆಯ ಶಿಕ್ಷಕರ ಕೊರತೆ ಇದ್ದು ಹುಬ್ಬಳ್ಳಿಯಿಂದ ಶಿಕ್ಷಕರನ್ನು ಕರೆಸಲು ವಿಫಲ ಪ್ರಯತ್ನ ನಡೆದು ನೇಯುವ ಮಗ್ಗವು ನಿರುಪಯೋಗಿಯಾಗಿದ್ದು, ಮೂಲದಲ್ಲಿಯೇ ಖಾದಿ ಸಮಿತಿ ಕೈಗೊಳ್ಳುವ ಕೆಲಸ ವಿಫಲವಾಗಿದ್ದು ಸರ್ಕಾರದವರು ಆಯವ್ಯಯ ಪಟ್ಟಿಯಲ್ಲಿ ಖಾದಿ ಉದ್ಯಮಕ್ಕಾಗಿ

ಇಟ್ಟಿರುವುದನ್ನು ಕಾಣಬಹುದಾಗಿದೆ ಎಂಬ ಲೇಖನವು ಸಂಪಾದಕೀಯದಲ್ಲಿ ಪ್ರಕಟವಾಗಿದ್ದು ಲಕ್ಷಮ್ಮರವರಿಗೆ ಕೈಗಾರಿಕೆಗಳ ಬಗ್ಗೆ ಮಹಿಳೆಯರ ಬಗ್ಗೆ ಖಾದಿ ಗ್ರಾಮೋದ್ಯೋಗ ವ್ಯವಸ್ಥೆಯ ಬಗೆಗಿನ ಕಾಳಜಿಯನ್ನು ವ್ಯಕ್ತಪಡಿಸಿದೆ.[೬೬]

ದಿನಾಂಕ ೧೧.೦೩.೧೯೫೫ರ ಸಂಚಿಕೆಯಲ್ಲಿ 'ಕೈಗಾರಿಕೋದ್ಯಮದಲ್ಲಿ ಅಂಧರ ಪಾತ್ರ' ಎಂಬ ಶೀರ್ಷಿಕೆಯಡಿಯಲ್ಲಿ ಡೆಹರಾಡೂನ್‌ನಲ್ಲಿ ಕೇಂದ್ರ ಸರ್ಕಾರದವರು ಅಂಧರಿಗೆ ಶಾಲೆ ನಡೆಸುತ್ತಿರುವುದು, ಭಾರತದಲ್ಲಿ ಮೊದಲ ಶಾಲೆಯಾಗಿದ್ದು ಆರ್. ಜೋಸೆಫ್ ಎಂಬುವರು ಅಲ್ಲಿನ ಮೇಲ್ವಿಚಾರಣೆಯನ್ನು ಮಾಡುತ್ತಿರುವ ಬಗ್ಗೆ, ಅಂಧರಿಗೆ ತರಬೇತಿಯನ್ನು ನೀಡಿ ಕಾರ್ಖಾನೆಗಳಲ್ಲಿ ಉದ್ಯೋಗವನ್ನು ಕಲ್ಪಿಸಿಕೊಡುತ್ತಿರುವ ಬಗ್ಗೆ, ಇಂಡಿಯನ್ ಟೆಲಿಫೋನ್ ಕಾರ್ಖಾನೆ, ಬಿನ್ನಿ ಮಿಲ್, ಮದ್ರಾಸ್ ಸಾಬೂನು ಕಾರ್ಖಾನೆ ಮುಂಬೈಯ ಹಲವಾರು ಕಾರ್ಖಾನೆಯಲ್ಲಿ ಅಂಧರು ಕೆಲಸ ಮಾಡುತ್ತಿರುವ ಬಗ್ಗೆ ಹಾಗೂ ಕಣ್ಣು ಇದ್ದವರಿಗಿಂತಲೂ ಅಚ್ಚುಕಟ್ಟಾಗಿ ಕಾರ್ಯ ನಿರ್ವಹಿಸುತ್ತಿರುವ ಬಗ್ಗೆ, ಅಂಧರು ಸಂಗೀತ ವಿದ್ಯೆಗಳಲ್ಲಿ ಸಾಧನೆ ಮಾಡಿದ್ದು, ಅಂತಹವರನ್ನು ಮೈಸೂರು ಸಂಸ್ಥಾನದಲ್ಲಿ ಶಿಕ್ಷಣ ಇಲಾಖೆಗೆ ನೇಮಿಸಬೇಕೆಂದು ತಮ್ಮ ಸಂಪಾದಕೀಯದಲ್ಲಿ ಮನವಿ ಮಾಡಿಕೊಂಡಿರುವ ಎಂ.ಆರ್. ಲಕ್ಷಮ್ಮನವರು ಅಂಗವಿಕಲರ ಬಗ್ಗೆಯೂ ಕೂಡ ಸಾಮಾಜಿಕ ಕಳಕಳಿಯನ್ನು ಇಟ್ಟುಕೊಂಡಿದ್ದರೆಂದು ಈ ಲೇಖನದಲ್ಲಿ ತಿಳಿದುಕೊಳ್ಳಬಹುದು.[೬೭]

ದಿನಾಂಕ ೨೫.೦೩.೧೯೫೫ರ ಸಂಚಿಕೆಯಲ್ಲಿ ಎಂ.ಆರ್. ಲಕ್ಷಮ್ಮನವರು ಚಿತ್ರದುರ್ಗದ ಮರಡಿಹಳ್ಳಿಯಲ್ಲಿ ಪ್ರಾರಂಭವಾದ ಸಮಾಜ ಸೇವಾ ಕೇಂದ್ರಕ್ಕೆ ಭೇಟಿ ನೀಡಿದ ಬಗ್ಗೆ, ಸಿರಿಗೆರೆಯಲ್ಲಿ ತರಳಬಾಳು ಮಠದಲ್ಲಿ ೪೦೦ ಮಕ್ಕಳು ಓದುತ್ತಿರುವ ಶಾಲೆ ಇರುವ ಬಗ್ಗೆ, ಆ ಶಾಲೆಯ ಮಕ್ಕಳು ಸಮಾಜಸೇವಾ ಕಾರ್ಯದಲ್ಲಿ ತೊಡಗಿಕೊಳ್ಳುತ್ತಿರುವ ಬಗ್ಗೆ ಲೇಖನದಲ್ಲಿ ತಿಳಿಸಿರುವ ಅವರು, ಮರಡಿಹಳ್ಳಿ ಕೇಂದ್ರಕ್ಕೆ ಭೇಟಿ ನೀಡಿದ ಅನುಭವದ ಬಗ್ಗೆ ಅಲ್ಲಿ ಸಮಾಜ ಸೇವಾ ಕೇಂದ್ರವು ತುಂಬಾ ಯಶಸ್ವಿಯಾಗಿ ತನ್ನ ಕಾರ್ಯವನ್ನು ನಿರ್ವಹಿಸಿದ ಬಗ್ಗೆ ತಿಳಿಸಿದ ಎಂ.ಆರ್. ಲಕ್ಷಮ್ಮನವರು ಅಲ್ಲಿರುವ ಹರಿಜನರ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿರುವ ಬಗ್ಗೆ ತಿಳಿಸಿ, ಈ ಲೇಖನದ ಮೂಲಕ ಓದುಗರಿಗೆ 'ನಿಮ್ಮ ಗ್ರಾಮದಲ್ಲಿ ಎಷ್ಟು ಹರಿಜನರ ಮನೆ ಇದೆ, ಅವರಿಗೆ ಪ್ರತ್ಯೇಕ ಬಾವಿ ಇದೆಯೇ? ಅವರು ನೀರನ್ನು ಹೇಗೆ ಪಡೆಯುತ್ತಾರೆ ಎಂಬುದನ್ನು ತಿಳಿಯಿರಿ. ಹರಿಜನರ ಯೋಗಕ್ಷೇಮವನ್ನು ಅಂತಃಕರಣ ಪೂರ್ವವಾಗಿ ವಿಚಾರಿಸಿ, ಒಳ್ಳೆಯ ಮಾತು ಹೃದಯದಿಂದ ಬಂದರೆ ಅದು ಸತ್ವಯುತವಾಗಿದ್ದು ಜನರ ಮೆಚ್ಚುಗೆಗಾಗಿ ತೋರುಗಾರಿಕೆಯ ಮಾತು ಪ್ರಯೋಜನವಿಲ್ಲ' ಎಂಬ ಸಂದೇಶವನ್ನು ನೀಡಿದ್ದಾರೆ. ಹೆಂಗಸರು ಮಕ್ಕಳು ಅಭಿವೃದ್ಧಿ ಹೊಂದಿದರೆ ಇಡೀ ದೇಶ ಅಭಿವೃದ್ಧಿ ಹೊಂದಿದ ಹಾಗೆ. ಮಕ್ಕಳಿಗೆ ಉತ್ತಮ ಶಿಕ್ಷಣದ ಅವಶ್ಯಕತೆಯಿದ್ದು, ಬಹಿರಂಗ ನಿರ್ಮಲತೆಗಿಂತ ಅಂತರಂಗ

ಆರೋಗ್ಯ ಬಹುಮುಖ್ಯವಾಗಿದ್ದು ಇನ್ನು ಪರಸ್ಪರವಾಗಿ ಬೆಳೆಸಿ ಮಕ್ಕಳನ್ನು ಯೋಗ್ಯಪೌರರಾಗಿ ಮಾಡಬೇಕು ಎಂಬ ಮಾತುಗಳನ್ನು ಸಮಾಜ ಸೇವಾ ಕೇಂದ್ರದಲ್ಲಿ ಮಾತನಾಡಿದ್ದು ಗುರಿ ಉದ್ದೇಶ ನಿರ್ಣಯ ಆಕಾಂಕ್ಷೆಗಳು ಒಂದಾಗಿದ್ದು ಐಕ್ಯತೆ, ಚೆನ್ನಾಗಿರಲೆಂದು ಲೇಖನದಲ್ಲಿ ಎಂ.ಆರ್. ಲಕ್ಷಮ್ಮನವರು ಮಹಿಳೆಯರ ಬಗೆ ಮಕ್ಕಳ ಬಗ್ಗೆ ಅಷ್ಟೇ ಅಲ್ಲದೆ ಹರಿಜನರ ಬಗ್ಗೆಯೂ ಕಳಕಳಿಯನ್ನು ಉಳ್ಳವರೆಂದು ಈ ಲೇಖನದಿಂದ ಸ್ಪಷ್ಟವಾಗುತ್ತದೆ.[೯]

ಜನವರಿ ೧೯೫೭ರ ಸಂಚಿಕೆಯಲ್ಲಿ 'ಹರಿಜನರ ಸಾಮಾಜಿಕ ಸಮಸ್ಯೆಗಳು' ಎಂಬ ಶೀರ್ಷಿಕೆಯಡಿಯಲ್ಲಿ ಭಾರತದ ಜನರು ಆರ್ಯ ದ್ರಾವಿಡ ಸಮ್ಮಿಳಿತದ ಜನಾಂಗವಾಗಿದ್ದು ಹಿಂದೂ ಸಮಾಜವು ವರ್ಣತತ್ವದ ಆಧಾರದ ಮೇಲೆ ನಾಲ್ಕು ವರ್ಗಗಳಾಗಿ ವಿಂಗಡಿಸಲ್ಪಟ್ಟು ಕಾಲಕ್ರಮೇಣ ಅನೇಕ ಜಾತಿಗಳಾಗಿ, ಉಪಜಾತಿಗಳಾಗಿ, ಪಂಗಡಗಳಾಗಿ ವಿಂಗಡಿಸಲ್ಪಟ್ಟಿದೆ. ಈ ಸಮಾಜದಲ್ಲಿ ಅಸ್ಪೃಶ್ಯತೆ ಎಂಬ ಜಾಡ್ಯವು ಜನ್ಮತಾಳಿ ಹರಿಜನರೆಂದು ಕರೆಯಲ್ಪಡುತ್ತಿರುವ ಜನಾಂಗವು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿವೆ. ಶಿಕ್ಷಣ, ಸಾರ್ವಜನಿಕ ಸ್ಥಳಗಳಲ್ಲಿ ನಿಷೇಧ, ದೇವಾಲಯ ಪ್ರವೇಶ ನಿಷೇಧ ಮುಂತಾದ ಸಮಸ್ಯೆಗಳನ್ನು ಎದುರಿಸುತ್ತಿದ್ದು, ಉದ್ಯೋಗಾವಕಾಶಗಳು ದೊರೆಯದೇ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಹರಿಜನರ ಏಳಿಗೆಗಾಗಿ ಡಾ॥ ಅಂಬೇಡ್ಕರ್‌ರವರು ಪ್ರಯತ್ನಿಸುತ್ತಿದ್ದು, ಅವರಿಗೆ ಅಧಿಕಾರವನ್ನು ನೀಡಲು ಉನ್ನತ ವರ್ಗದವರು ತಡೆಯೊಡ್ಡುತ್ತಾರೆಂಬ ಭಾವನೆ ಇದ್ದು ಕಾನೂನಿನ ಮುಖಾಂತರ ಅವರಿಗೆ ಹೆಚ್ಚಿನ ರಕ್ಷಣೆಯನ್ನು ನೀಡಬೇಕೆಂದು ಹೋರಾಟವನ್ನು ಮಾಡುತ್ತಿರುವ ಬಗ್ಗೆ, ಹರಿಜನರ ಈ ಸಮಸ್ಯೆಗೆ ಆರ್ಥಿಕ ಕಾರಣಕ್ಕಿಂತ ಸಾಮಾಜಿಕ ಕಾರಣ ಮುಖ್ಯವಾಗಿದ್ದು ಸಾರ್ವಜನಿಕ ಸಹಕಾರ ಮತ್ತು ಸರ್ಕಾರದಿಂದ ಸಹಾಯ ದೊರೆತರೆ ಅವರ ಪರಿಸ್ಥಿತಿಯು ಸುಧಾರಿಸಬಹುದು. ಹರಿಜನರಿಗೆ ವಿದ್ಯಾಭ್ಯಾಸವನ್ನು ಕಲ್ಪಿಸಿ ಆರ್ಥಿಕ ಪರಿಸ್ಥಿತಿ ಸುಧಾರಿಸಿ ಕಾನೂನುಕಟ್ಟಳೆಗಳ ಮೂಲಕ ಆಸರೆಯಾಗಿ ಅವರನ್ನು ಹೆಚ್ಚು ಹೆಚ್ಚು ಸರ್ಕಾರಿ ಉದ್ಯೋಗಗಳಲ್ಲಿ ನೇಮಿಸಿಕೊಂಡು ಅವರ ಏಳಿಗೆಯನ್ನು ಆರ್ಥಿಕ ಪ್ರಗತಿಯ ಬಗ್ಗೆ ಈ ಲೇಖನದಲ್ಲಿ ವಿವರವಾಗಿ ನೀಡಲಾಗಿದೆ.[೨೦]

**೭.೪ ಕೇಂದ್ರೀಯ ಸಮಾಜಕಲ್ಯಾಣ ಮಂಡಳಿಯ ಕಾರ್ಯಕಲಾಪಗಳ ಲೇಖನಗಳು**

ಶ್ರೀಮತಿ ದುರ್ಗಾಬಾಯಿ ದೇಶಮುಖರ ನೇತೃತ್ವದಲ್ಲಿ ಕೇಂದ್ರ ಸಮಾಜಕಲ್ಯಾಣ ಮಂಡಳಿಯ ಕಾರ್ಯಕಲಾಪಗಳು ಪ್ರಾರಂಭವಾಗಿದ್ದು, ಮೈಸೂರು ರಾಜ್ಯದಲ್ಲಿಯೂ ಎಂ.ಆರ್. ಲಕ್ಷಮ್ಮರವರ ನೇತೃತ್ವದಲ್ಲಿ ಸಮಾಜ ಕಲ್ಯಾಣ ಮಂಡಳಿಯು ರಚನೆಯಾಗಿದ್ದು ಮಹಿಳಾಭಿವೃದ್ಧಿ, ಗ್ರಾಮೀಣಾಭಿವೃದ್ಧಿ, ಶಿಕ್ಷಣ, ಮುಂತಾದ ಕಾರ್ಯಗಳನ್ನು ಸಾಧಿಸಲು ಸಮಾಜ ಕಲ್ಯಾಣ ಮಂಡಳಿಯು ಶ್ರಮಿಸುತ್ತಿದ್ದು ಕೇಂದ್ರ ಸಮಾಜ ಕಲ್ಯಾಣ ಮಂಡಲಿಯಲ್ಲಿ ನಡೆದ ಕಾರ್ಯಕಲಾಪಗಳನ್ನು 'ಸೋದರಿ' ಪತ್ರಿಕೆಯಲ್ಲಿ ವಿವರವಾಗಿ ಪ್ರಕಟಿಸಲಾಗಿದೆ.

ದಿನಾಂಕ ೦೬.೦೮.೧೯೫೪ರ ಸಂಚಿಕೆಯಲ್ಲಿ 'ಶ್ರೀಮತಿ ದುರ್ಗಾಬಾಯಿ ದೇಶಮುಖ್' ಎಂಬ ಶೀರ್ಷಿಕೆಯಡಿಯಲ್ಲಿ ಶ್ರೀಮತಿ ದುರ್ಗಾಬಾಯಿ ದೇಶಮುಖ್‌ರು ಬೆಂಗಳೂರಿಗೆ ಭೇಟಿ ನೀಡಿದ್ದಾಗ ಅವರನ್ನು ಭೇಟಿಯಾದ ಎಂ.ಆರ್. ಲಕ್ಷಮ್ಮನವರು ಅವರ ಕುರಿತು ಅವರೊಂದಿಗೆ ಚರ್ಚಿಸಿದ ಅನೇಕ ವಿಷಯಗಳ ಬಗ್ಗೆ ಲೇಖನವನ್ನು ಪ್ರಕಟಿಸಿದ್ದು ದುರ್ಗಾಬಾಯಿ ದೇಶಮುಖ್‌ರ ಕಾರ್ಯದರ್ಶಿನಿ ಬಗ್ಗೆ, ಅವರಿಬ್ಬರು ಒಟ್ಟಿಗೆ ವಕೀಲರಾಗಿ ಸೇವೆ ಸಲ್ಲಿಸಿದ್ದ ಬಗ್ಗೆ, ಅವರ ಕಾರ್ಯದರ್ಶಿನಿ ಬಡವರಿಗಾಗಿ ಪುಕ್ಕಟೆಯಾಗಿ ವಾದ ಮಾಡುತ್ತಿದ್ದ ಬಗ್ಗೆ, ದುರ್ಗಾಬಾಯಿ ದೇಶಮುಖ್‌ರ ಕಾರ್ಯಚಟುವಟಿಕೆ ಸೋಶಿಯಲ್ ವೆಲ್‌ಫೇರ್ ಬೋರ್ಡನ್ನು ಸ್ಥಾಪಿಸುವಲ್ಲಿ ಆಕೆಯ ಶ್ರಮ, ಮೈಸೂರು ಸಂಸ್ಥಾನದಲ್ಲಿ ಸಾಮಾಜಿಕ ಅಭಿವೃದ್ಧಿ ಸಾಧಿಸುವ ಬಗ್ಗೆ, ಸಾಮಾಜಿಕ ಕೆಲಸಕಾರ್ಯಗಳನ್ನು ಮಾಡಲು ಪ್ರೀತಿಯಿಂದ ದುಡಿಯುವ ಕೆಲಸಗಾರರು ಸ್ವಯಂಪ್ರೇರಿತರಾಗಿ ಭಾಗವಹಿಸುವ ಬಗ್ಗೆ, ಬಿಡುವಿನ ಸಮಯದಲ್ಲಿ ವಿದ್ಯಾರ್ಥಿಗಳು ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ಬಗ್ಗೆ, ಪ್ರಧಾನಿ ನೆಹರೂರವರ ಮಾರ್ಗದರ್ಶಿತ್ವದಲ್ಲಿ ಈ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದು, ಅವರು ಕೂಡ ಹಣದ ಸಹಾಯವನ್ನು ಮಾಡಿದ್ದು ಹಳ್ಳಿಗಳಲ್ಲಿ ಹೆಣ್ಣುಮಕ್ಕಳ ಹಿತವನ್ನು ಕಾಪಾಡಲು ಹಾಗೂ ಶಿಶು ಸಂರಕ್ಷಣೆಯನ್ನು ಮಾಡಲು ಯೋಜನೆಯನ್ನು ರೂಪಿಸಿರುವ ಬಗ್ಗೆ, ನಗರಗಳಲ್ಲಿ ಕೆಲಸ ಮಾಡಲು ಸೇವಾಮನೋಭಾವ ಹೊಂದಿರುವ ಮಹಿಳೆಯರ ಅವಶ್ಯಕತೆ ಇದ್ದು, ಮೆಟ್ರಿಕ್ ಪರೀಕ್ಷೆ ಪಾಸು ಮಾಡಿದ, ಇಂಗ್ಲಿಷ್ ಭಾಷೆ ಬರುವ ಮಹಿಳೆಯರ ಅಗತ್ಯತೆ ಇದ್ದು, ಮಹಿಳಾ ಸಮ್ಮೇಳನ ಸಹಕಾರ ಅಗತ್ಯವಿದ್ದು ಮೈಸೂರು ಸಂಸ್ಥಾನದಲ್ಲಿಯ ಮಹಿಳಾಕಾರ್ಯಗಳನ್ನು ನಿರ್ವಹಿಸಲು ಒಂದು ಬೋರ್ಡಿನ ಅವಶ್ಯಕತೆ ಇದ್ದು, ಆದಷ್ಟು ಬೇಗ ಸ್ಥಾಪನೆಯಾಗಿ ಕಾರ್ಯೋನ್ಮುಖವಾಗಲೆಂದು ದುರ್ಗಾಬಾಯಿ ದೇಶಮುಖ್‌ರು ತಮ್ಮ ಆಶಯವನ್ನು ವ್ಯಕ್ತಪಡಿಸಿದ್ದು ಅವುಗಳ ಬಗೆಗಿನ ವಿವರವಾದ ವರದಿ ಈ ಲೇಖನದಲ್ಲಿ ಪ್ರಕಟವಾಗಿದ್ದು ಅವರಂತೆಯೇ ಎಂ.ಆರ್. ಲಕ್ಷಮ್ಮನವರು ಕೂಡ ಸಮಾಜಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ಆಶಯವನ್ನು ವ್ಯಕ್ತಪಡಿಸಿದ್ದಾರೆ.[೬೧]

ದಿನಾಂಕ ೩೧.೧೨.೧೯೫೪ರ ಸಂಚಿಕೆಯಲ್ಲಿ 'ಸಮಾಜಸೇವೆಯನ್ನಾರಿಸಿಕೊಂಡ ಭಾರತ ಮಹಿಳೆ' ಎಂಬ ಶೀರ್ಷಿಕೆಯ ಅಡಿಯಲ್ಲಿ ಪ್ರತಿಭಾಶಾಲಿನಿಯಾದ ನ್ಯಾಯವಾದಿಯಾಗಿದ್ದವರು ಯೋಜನಾ ಸಮಿತಿಯನ್ನು ಬಿಟ್ಟು ಸಮಾಜಸೇವಾ ಕ್ಷೇತ್ರಕ್ಕೆ ಇಳಿದು ಕೆಲಸ ನಿರ್ವಹಿಸುತ್ತಿರುವ ದುರ್ಗಾಬಾಯಿ ದೇಶಮುಖ್‌ರ ಈ ಲೇಖನದಲ್ಲಿ ವಿವರಿಸಲಾಗಿದೆ. ಸರಳವಾದ ವ್ಯಕ್ತಿತ್ವಕ್ಕೆ ಖಾದಿ ಸೀರೆಯನ್ನು ಉಟ್ಟು ಗಾಂಧೀಜಿಯವರ ಜೊತೆಯಲ್ಲಿ ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ರಾಷ್ಟ್ರೀಯ ಯೋಜನಾ ಸಮಿತಿಯ ಸದಸ್ಯರಾಗಿ ಕೇಂದ್ರ ಮಂತ್ರಿಮಂಡಲ ಮಂತ್ರಿ ಪದವಿಗೆ ಸಮಾನವಾಗಿದ್ದರು. ಅದನ್ನೆಲ್ಲ ಬಿಟ್ಟು ಕೇಂದ್ರ ಸಮಾಜ ಕಲ್ಯಾಣ ಸಮಿತಿ ಅಧ್ಯಕ್ಷರಾಗಿ ಪ್ರಜಾಸೇವೆಗೆ ತಮ್ಮನ್ನು ಮೀಸಲಾಗಿಟ್ಟಿರುವ ಮಹಿಳೆ

ಇವರಾಗಿದ್ದು ರಾಜ್ಯಸಭೆಯ ಸದಸ್ಯರಾಗಿ ಕೆಲಸ ನಿರ್ವಹಿಸದೆ, ಅವರು ನ್ಯಾಯಬದ್ಧತೆಯ ಮತ್ತು ಪ್ರಗತಿಯ ಬಗ್ಗೆ ಚಿಂತಿಸಿ, ಸಂಕಟದಲ್ಲಿರುವವರಿಗೆ ಸಹಾನುಭೂತಿಯನ್ನು ತೋರಿಸುವ ಅವರು ೧೩ ವರ್ಷದಲ್ಲಿಯೇ ಮಹಾತ್ಮ ಗಾಂಧೀಜಿಯವರ ಪ್ರಭಾವಕ್ಕೆ ಒಳಗಾಗಿ ೨೦ ವರ್ಷಗಳಲ್ಲಿಯೇ ಅಸಹಕಾರ ಚಳವಳಿಯಲ್ಲಿ ಭಾಗವಹಿಸಿ, ಎಂ.ಎ. ಪದವಿಯನ್ನು ಪಡೆದು, ಬ್ಯಾರಿಸ್ಟರ್ ಪರೀಕ್ಷೆಯನ್ನು ಪಾಸುಮಾಡಿ ೧೯೪೨ ರಿಂದ ೧೯೫೨ ರವರೆಗೆ, ಮದರಾಸ್ ಹೈಕೋರ್ಟಿನ ಮುಖ್ಯ ನ್ಯಾಯವಾದಿಗಳಾಗಿ ಕಾರ್ಯ ನಿರ್ವಹಿಸಿ, ೧೯೫೨ ರಲ್ಲಿ ರಾಷ್ಟ್ರೀಯ ಯೋಜನಾ ಸಮಿತಿಯ ಸದಸ್ಯರಾಗಿ ವಿದ್ಯಾಭ್ಯಾಸ, ಆರೋಗ್ಯ, ನಿರಾಶ್ರಿತರ ಪುನರ್ ವ್ಯವಸ್ಥೆ ಇವುಗಳ ಬಗ್ಗೆ ಕಾರ್ಯ ನಿರ್ವಹಿಸಿ, ಹಿಂದೂ ಸಮಾಜ ಕಲ್ಯಾಣ ಸಮಿತಿಯ ಅಧ್ಯಕ್ಷರಾಗಿ ಅಂದು ಯೋಜನೆಗಳನ್ನು ರೂಪಿಸುತ್ತಿದ್ದವರು ಈಗ ಯೋಜನೆಗಳನ್ನು ಕಾರ್ಯಗತ ಮಾಡುತ್ತಿರುವ ಬಗ್ಗೆ ಈ ಲೇಖನದಲ್ಲಿ ವಿವರಿಸಲಾಗಿದೆ.[೨]

ದಿನಾಂಕ ೦೬.೦೫.೧೯೫೫ರ ಸಂಚಿಕೆಯಲ್ಲಿ 'ಸಮಾಜಸೇವೆ ಮತ್ತು ಗ್ರಾಮಕಲ್ಯಾಣ' ಎಂಬ ಶೀರ್ಷಿಕೆಯಡಿಯಲ್ಲಿ ನಮ್ಮ ರಾಷ್ಟ್ರದ ಪುನರುಜ್ಜೀವನದ ಸೂತ್ರವು ಗ್ರಾಮ ಕಲ್ಯಾಣವಾಗಿದ್ದು, ದೇಶದ ಅಭಿವೃದ್ಧಿ ಯೋಜನೆಗಳಲ್ಲಿ ಗ್ರಾಮಕಲ್ಯಾಣಕ್ಕೆ ಪ್ರಥಮ ಪ್ರಾಶಸ್ತ್ಯವನ್ನು ನೀಡಲಾಗಿದ್ದು, ಗ್ರಾಮಸೇವೆ ಹೇಗೆ ನಡೆಯಬೇಕು, ಪರಿಪೂರ್ಣತೆಯನ್ನು ಸಾಧಿಸುವುದು ಹೇಗೆ, ಇವೆಲ್ಲವೂ ಪ್ರಾಯೋಗಿಕವಾಗಿದೆ. ಗ್ರಾಮಕಲ್ಯಾಣ ಫಲಕಾರಿಯಾಗಬೇಕಾದರೆ ಸಮಾಜದ ಪ್ರತಿಯೊಬ್ಬರ ಸಹಕಾರ ಬೇಕು. ಸಾಮಾಜಿಕ ಸಮಸ್ಯೆಗಳನ್ನು ಗುರುತಿಸಿ ಅವುಗಳನ್ನು ಅರ್ಥಮಾಡಿಕೊಂಡು ಬಗೆಹರಿಸಲು ಪ್ರಾಯೋಗಿಕ ಜ್ಞಾನವಿರಬೇಕು. ಸಮಾಜಸೇವೆಯನ್ನು ಲಾಭವಿಲ್ಲದೆ ಮಾಡಬೇಕಾದ ಕೆಲಸವಾಗಿದ್ದು, ಗ್ರಾಮಸ್ಥರಿಗೆ ಮೊದಲು ಮನವರಿಕೆಯನ್ನು ಮಾಡಿಕೊಟ್ಟು ಸಮಾಜಸೇವಕರು ಮಕ್ಕಳಿಗೆ ಮನರಂಜನೆಯ ತರಗತಿಯನ್ನು ಪ್ರಾರಂಭಿಸುವುದರ ಮೂಲಕ ತಂದೆ-ತಾಯಿಯನ್ನು ಪರಿಚಯಮಾಡಿಕೊಂಡು ಕಾರ್ಯ ನಿರ್ವಹಿಸಬಹುದಾದ ಬಗ್ಗೆ ಉದಾಹರಣೆಯ ಮೂಲಕ ಲೇಖನದಲ್ಲಿ ಪ್ರಕಟಿಸಲಾಗಿದ್ದು, ಗ್ರಾಮಗಳಲ್ಲಿ ಇರುವ ಅಸ್ಪೃಶ್ಯತೆ ಆಚರಣೆ ಅವರ ಅಭಿಪ್ರಾಯವನ್ನು ಬದಲಿಸಬೇಕಾದ ಕಾರ್ಯಗಳ ಜೊತೆಗೆ, ವೈದ್ಯಕೀಯ ಸಹಾಯ ಇವುಗಳ ಮೂಲಕ ಗ್ರಾಮದಲ್ಲಿ ಸಮಾಜಸೇವೆಯನ್ನು ಮಾಡಬೇಕಾದ ಅನಿವಾರ್ಯತೆಯ ಬಗ್ಗೆ ಲೇಖನದಲ್ಲಿ ವಿವರಿಸಲಾಗಿದ್ದು, ಸಹಕಾರತತ್ವದ ಮೇಲೆ ಕೆಲಸ ಪ್ರಾರಂಭವಾದರೆ ಹೆಚ್ಚು ತೊಂದರೆಯಾಗದೆ ಕೆಲಸ ನಿರ್ವಹಿಸುವುದು ಸುಲಭವಾಗುತ್ತದೆ. ಸಮಾಜಸೇವೆಯಲ್ಲಿ ಕಾರ್ಯಕರ್ತರ ಸ್ಥಾನಮಾನವೇನು, ಅವರ ಸೇವಾವಿಧಾನಗಳು ಫಲಕಾರಿಯಾಗಿದ್ದವೆ? ಎಂಬುದನ್ನು ಗಮನಿಸಿದಾಗ ಗ್ರಾಮಗಳಲ್ಲಿ ಒಳಜಗಳಗಳು, ಕಿತ್ತಾಟಗಳು, ಅಸಹಕಾರ ಮನೋಭಾವ ಇವೆಲ್ಲವನ್ನು ಕಾಣಬಹುದು. ಗ್ರಾಮಸೇವಕರು ಮಾನವನನ್ನು ಮಾನವನಂತೆ ಕಾಣುವ ಅವರಲ್ಲಿ ಆತ್ಮಶಕ್ತಿ ಬೆಳೆಸುವ ಕೆಲಸವನ್ನು ಮಾಡಬೇಕು. ಸಮಾಜಕಾರ್ಯ ಮಾಡುವಾಗ

ವಿರೋಧಿಗಳನ್ನು ಒಲಿಸಿಕೊಳ್ಳುವುದು ಮುಖ್ಯವಾಗಿದ್ದು, ಭಾರತದಂತಹ ವಿಶಾಲವಾದ ದೇಶದಲ್ಲಿ ಇನ್ನು ಕೂಡ ಕೆಲಸದ ವ್ಯಾಪ್ತಿ ಹೆಚ್ಚು ಗ್ರಾಮಗಳ ಸುಧಾರಣೆಯಾಗಬೇಕು ಎಂಬುದು ಈ ಲೇಖನದ ಆಶಯವಾಗಿದೆ.[೭೫]

ದಿನಾಂಕ ೨೭.೦೫.೧೯೫೫ರ ಸಂಚಿಕೆಯಲ್ಲಿ 'ಬಾಲಾಪರಾಧಿಗಳಿಗೆ ಸಂಸ್ಥೆಗಳ ರಕ್ಷಣೆ' ಎಂಬ ಶೀರ್ಷಿಕೆಯಡಿಯಲ್ಲಿ ಬಾಲಾಪರಾಧಿಗಳ ಕಲ್ಯಾಣದ ಬಗ್ಗೆ ಅನೇಕ ತಪ್ಪು ಅಭಿಪ್ರಾಯಗಳಿದ್ದು, ಭಾರತದಲ್ಲಿ ಬಾಲಾಪರಾಧಿಗಳ ಬಗ್ಗೆ ಮೂಢಭಾವನೆಗಳು ಇದ್ದು, ಈ ತರದ ಮಕ್ಕಳಿಗೆ ಯಾವ ತರಬೇತಿ ಸಿಗುತ್ತಿದೆ ಎಂದು ತಿಳಿದುಬಂದಿಲ್ಲ. ಜನರಲ್ಲಿರುವ ಮೂಢಭಾವನೆಗಳು ಕಾನೂನಿನಲ್ಲಿ ಪ್ರತಿಬಿಂಬಿತವಾಗಿದ್ದು ಈ ಸಮಸ್ಯೆಯ ನಿವಾರಣೆಗೆ, ಸುಧಾರಣೆಗೆ, ಇನ್ನೂ ಶಾಸನವನ್ನು ರಚಿಸಬೇಕಾಗಿದೆ. ಬಾಲ ಕಾರ್ಮಿಕರ ರಕ್ಷಣೆಗೆ ಅನೇಕ ಸಂಸ್ಥೆ ಇದ್ದರೂ, ಅನೇಕ ಅನಾನುಕೂಲತೆಗಳು ಜನರ ನಿರುತ್ಸಾಹ, ಬಾಲಾಪರಾಧಿಗಳ ಸಂಸ್ಥೆಗಳೆಂದರೆ ಮಕ್ಕಳ ಸೆರೆಮನೆ ಎಂಬ ಭಾವನೆ ಮೂಡಿದೆ. ಬಾಲಾಪರಾಧಿಗಳ ಸುಧಾರಣೆಯೆಂದರೆ ಅವರನ್ನು ಕಾವಲು ಕಾಯುವುದು ಎಂದರ್ಥವಾಗಿದ್ದು, ಅವರಿಗೆ ಸಮಾಜದಲ್ಲಿ ಉತ್ತಮ ಸ್ಥಾನವನ್ನು ಕಲ್ಪಿಸಿಕೊಡಬೇಕೆಂಬ ಶಿಕ್ಷಿತ ಕಾರ್ಯಕರ್ತರ ಕೊರತೆಯನ್ನು ಕಾಣಬಹುದಾಗಿದೆ. ಸುಧಾರಣಾ ಗೃಹಗಳು ಅನಾಥಾಲಯಗಳೆಂದು ಭಾವಿಸಿ ಅವರಿಗೆ ಆಹಾರ, ಬಟ್ಟೆ ಮೊದಲಾದ ಸೌಕರ್ಯಗಳನ್ನು ನೀಡಿದರೆ ಸಾಕೆಂಬ ಭಾವನೆಯಿದ್ದು ಅವರಿಗೆ ವಿಶೇಷ ಶಿಕ್ಷಣ ಬೇಕಾಗಿಲ್ಲ. ಅವರನ್ನು ನೋಡಿಕೊಳ್ಳುವ ಮೇಲ್ವಿಚಾರಣೆ, ನಡೆಸಲು ವಿಶೇಷ ತರಬೇತಿ ಬೇಕಿಲ್ಲ ಎಂಬ ಅಭಿಪ್ರಾಯ ಸಮಾಜದಲ್ಲದೇ ಮಕ್ಕಳ ಮಾನಸಿಕ ಖಾಯಿಲೆಗೆ ಪರಿಹಾರವನ್ನು ಕಂಡುಹಿಡಿಯುವುದನ್ನು ಬಿಟ್ಟು, ಸುಧಾರಣಾ ಗೃಹಗಳು ಸ್ವಪರಿಪೂರ್ಣವಾಗಿರಬೇಕು ಎಂದು ಆಶಿಸುತ್ತಾರೆ. ಶಾಲೆಗಳಲ್ಲಿ ನೀಡುವ ಶಿಕ್ಷಣ ಮತ್ತು ಹೃದಯವೈಶ್ಯಾಲ್ಯತೆ ಕರುಣೆ ಇದ್ದರೆ, ಸಮಾಜಸೇವೆಗೆ ಸಾಲದು, ಬದಲಾಗಿ ಬಾಲಾಪರಾಧಿಗಳ ಮಕ್ಕಳ ಜೊತೆಯಲ್ಲಿ ವ್ಯವಹರಿಸಲು ವಿಶೇಷ ತರಬೇತಿ ಮತ್ತು ಶಿಕ್ಷಣದ ಅವಶ್ಯಕತೆ ಇದೆ ಎಂಬುದನ್ನು ಈ ಲೇಖನದಲ್ಲಿ ಹೇಳಲಾಗಿದೆ. ಬಾಲಾಪರಾಧಕ್ಕೆ ಸುಧಾರಣಾ ಗೃಹದಲ್ಲಿ ಮಕ್ಕಳಿಗೆ ಮೂಲ ಸೌಕರ್ಯಗಳನ್ನು ಒದಗಿಸುವುದರ ಜೊತೆಗೆ ಅವರ ವ್ಯಕ್ತಿತ್ವಕ್ಕೆ ಗಮನ ನೀಡಿದ್ದಲ್ಲಿ ಮಾತ್ರ ಸುಧಾರಣೆ ಸಾಧ್ಯವೆಂದು ಮೇರಿ ರಿಚ್‌ಮಂಡ್ ಎನ್ನುವ ಪರಿಣತೆ ಕೆಲವು ಸಲಹೆಗಳನ್ನು ನೀಡಿದ್ದಾರೆ. ಮಗುವಿನ ವ್ಯಕ್ತಿತ್ವ ಅವರ ಪ್ರತ್ಯೇಕ ಗುಣಗಳು ಮಗು ಬೆಳೆದ ಸಾಮಾಜಿಕ ವಾತಾವರಣ, ಅವರ ಪ್ರಭಾವ, ಮಗುವಿನ ವ್ಯಕ್ತಿತ್ವದ ಮೇಲೆ ಉಂಟಾದ ಧಕ್ಕೆ, ಮಗುವಿನ ಮನಸ್ಸಿಗೆ ಉಂಟಾದ ನೇರ ಪರಿಣಾಮ ಇವುಗಳನ್ನು ಅರಿತು ಮೇಲ್ವಿಚಾರಕನು ಸಾಮಾಜಿಕ ವಾತಾವರಣವನ್ನು ಉತ್ತಮಗೊಳಿಸಬೇಕು. ಪ್ರತಿಯೊಂದು ಮಗುವು ಸುತ್ತಮುತ್ತಲಿನ ಪರಿಸರದಲ್ಲಿಯೂ ವ್ಯವಹರಿಸುವುದನ್ನು ಗಮನಿಸಿ ಮಗುವಿನ ತಪ್ಪನ್ನು ತಿದ್ದಿ ಅನನ್ಯತೆ ಭಾವನೆಯನ್ನು ಬೆಳೆಸಬೇಕು. ಮಗುವಿನ ಕಲ್ಪನಾಶಕ್ತಿ, ಮಾನಸಿಕಶಕ್ತಿ, ನಂತರ

ಸಮಾಜ ಇತಿಮಿತಿಗಳನ್ನು ಅರಿತಿರುವ ಮೇಲ್ವಿಚಾರಕನು ಕೆಲಸ ನಿರ್ವಹಿಸಲು ವೈಜ್ಞಾನಿಕ ಜ್ಞಾನವನ್ನು ಇಟ್ಟುಕೊಂಡಿರಬೇಕು. ಸಮಾಜ ವಿಜ್ಞಾನದ ಪರಿಚಯವಿದ್ದು ಮಗುವಿನ ಮಾನಸಿಕ ಕಾಯಿಲೆಗೆ ಔಷಧೋಪಚಾರ ಜೊತೆಗೆ ಉತ್ತಮ ಆಹಾರ, ಅವಶ್ಯಕತೆಯು ಇರುವುದು. ವೃತ್ತಿ ಶಿಕ್ಷಣವನ್ನು ಅಂತಹ ಮಕ್ಕಳಿಗೆ ನೀಡುವುದರ ಮೂಲಕ ಮಕ್ಕಳಲ್ಲಿ ಆತ್ಮವಿಶ್ವಾಸ ಬೆಳೆಸುವುದರ ಜೊತೆಗೆ, ಆರ್ಥಿಕ ಮಾರ್ಗವನ್ನು ಒದಗಿಸುತ್ತದೆ. ಬಾಲಾಪರಾಧಿಗಳನ್ನು ಕೇವಲ ಕುಶಲ ಕೆಲಸಗಾರರನ್ನಾಗಿ ತಯಾರು ಮಾಡಿದರೆ ಸಾಲದು, ಜೊತೆಗೆ ದೇವರಲ್ಲಿ ಭಕ್ತಿ, ಜನರಲ್ಲಿ ವಿಶ್ವಾಸ, ಸತ್ಯಮಾರ್ಗದ ಗುಣಗಳನ್ನು ಬೆಳೆಸಿ ಅವರಲ್ಲಿ ನೈತಿಕ ಶಕ್ತಿಯನ್ನು ತುಂಬಬೇಕು. ಮುಂದಾಳತ್ವ, ಶಿಸ್ತು, ಆತ್ಮವಿಶ್ವಾಸವನ್ನು ವೃದ್ಧಿಸಲು, ಮನರಂಜನಾ ಕಾರ್ಯಕ್ರಮಗಳ ಜೊತೆಯಲ್ಲಿ ಶಿಬಿರಗಳು, ನಾಟಕಗಳನ್ನು ಏರ್ಪಡಿಸಬೇಕು. ಮಗುವಿಗೆ ವಿದ್ಯಾಭ್ಯಾಸವನ್ನು ನೀಡಿ, ಚಿಕಿತ್ಸೆಯನ್ನು ನೀಡಿ, ಶಾರೀರಿಕ ಕುಂದುಕೊರತೆಗಳ ನಿವಾರಣೆಗೆ ಉತ್ತಮ ಆಹಾರಗಳನ್ನು ಒದಗಿಸಿ ಅವರನ್ನು ಉತ್ತಮ ಪ್ರಜೆಗಳನ್ನಾಗಿ ಮಾಡಲು ಜಾಣ್ಮೆ, ಅನುಭವ ಶಿಕ್ಷಣದ ಅವಶ್ಯಕತೆಯಿದ್ದು ಬಾಲಾಪರಾಧಿಗಳ ಶಿಕ್ಷಣಕ್ಕೆ ಒಂದು ತಾಂತ್ರಿಕ ಮಹತ್ವವಿದ್ದು ಸಮಾಜದ ದುರ್ಬಲರನ್ನು ಮೇಲೆತ್ತುವುದು ಪ್ರಗತಿಶೀಲವಾದ ನಾಗರಿಕತೆಯ ರೂಪವಾಗಿದೆ ಎಂಬ ಲೇಖನವು 'ಸೋದರಿ'ಯಲ್ಲಿ ಪ್ರಕಟವಾಗಿದ್ದು, ಎಂ.ಆರ್. ಲಕ್ಷ್ಮಮ್ಮನವರು ಸಮಾಜದ ಎಲ್ಲಾ ಕ್ಷೇತ್ರಗಳ ಸುಧಾರಣೆಗೆ ಕಂಕಣಬದ್ಧರಾಗಿದ್ದರೆಂಬುದು ಈ ಲೇಖನದಿಂದ ತಿಳಿದುಕೊಳ್ಳಬಹುದು.

ದಿನಾಂಕ ೨೭.೦೫.೧೯೫೫ರ ಸಂಚಿಕೆಯಲ್ಲಿ ಶ್ರೀಮತಿ ದುರ್ಗಾಬಾಯಿ ಅವರ ಪರಿಚಯ ಲೇಖನವನ್ನು ಪ್ರಕಟಿಸಲಾಗಿದ್ದು ಆಂಧ್ರಪ್ರದೇಶದ ಕಾಕಿನಾಡ ಜಿಲ್ಲೆಯವರಾದ ದುರ್ಗಾಬಾಯಿಯವರು ಬಾಲ್ಯದಿಂದಲೇ ಖಾದಿಬಟ್ಟೆಯನ್ನು ಧರಿಸಿ ಬೆಳೆದವರು. ಅವರ ತಾಯಿ ಜಿಲ್ಲಾ ಕಾಂಗ್ರೆಸ್ ಸಮಿತಿಯಲ್ಲಿ ಸದಸ್ಯರಾಗಿದ್ದು ಸ್ವಾತಂತ್ರ ಹೋರಾಟ, ಸಮಾಜ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಇಂಗ್ಲಿಷ್ ಭಾಷೆಯನ್ನು ಕಲಿಯಲು ನಿರಾಕರಿಸಿ ಹಿಂದಿ, ಸಂಸ್ಕೃತ ಮಾತೃಭಾಷೆಯಾದ ತೆಲುಗು ಭಾಷೆಯಲ್ಲಿ ಶಿಕ್ಷಣವನ್ನು ಪಡೆದರು. ಇದೇ ಸಮಯದಲ್ಲಿ ಅವರ ವಿವಾಹ ನಡೆದು, ಸ್ವಲ್ಪ ಕಾಲದಲ್ಲಿಯೇ ಅವರ ಪತಿ ಕಾಲವಾದರು. ದುರ್ಗಾಬಾಯಿ ದೇಶಮುಖ್‌ರು ಸ್ವಾತಂತ್ರ್ಯ ಚಳವಳಿಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಎರಡು-ಮೂರು ವರ್ಷಗಳ ಕಾಲ ಕಾರಾಗೃಹವಾಸವನ್ನು ಅನುಭವಿಸಿದರು. ಪದೇಪದೇ ಸೆರೆಮನೆವಾಸವನ್ನು ಅನುಭವಿಸಿದ ಅವರು, ಸೆರೆಮನೆಯಲ್ಲಿ ಮಹಿಳಾ ಖೈದಿಗಳನ್ನು ನೋಡಿದ ಅವರು, ಕಾನೂನು ಅರಿವು ಇಲ್ಲದ ಅನೇಕ ಮಹಿಳೆಯರು ಸೆರೆಮನೆಯಲ್ಲಿಯೇ ಇರುವುದನ್ನು ನೋಡಿ, ವಕೀಲರಾಗಬೇಕೆಂದು ದೃಢಸಂಕಲ್ಪ ಮಾಡಿ ಹದಿನೆಂಟನೆ ವಯಸ್ಸಿನಲ್ಲಿ ಮನೆಯಲ್ಲಿಯೇ ಇಂಗ್ಲಿಷ್ ಕಲಿತು, ಖಾಸಗಿಯಾಗಿ ಮೆಟ್ರಿಕ್ ಪರೀಕ್ಷೆ ಪಾಸುಮಾಡಿ ಪದವಿಯನ್ನು ಪಡೆದು, ಬನಾರಸ್ ವಿಶ್ವವಿದ್ಯಾನಿಲಯದಲ್ಲಿ ರಾಜ್ಯಶಾಸ್ತ್ರವನ್ನು ಕಲಿಯಲು

ನಿರ್ಧರಿಸಿದಾಗ ಬನಾರಸ್ ವಿಶ್ವವಿದ್ಯಾನಿಲಯವು ಮಹಿಳೆಯರಿಗೆ ರಾಜ್ಯಶಾಸ್ತ್ರ ವಿಷಯವನ್ನು ಕಲಿಯಲು ಅವಕಾಶ ನೀಡದಿದ್ದಾಗ, ಮದರಾಸಿನ ವಿಶ್ವವಿದ್ಯಾನಿಲಯದಲ್ಲಿ ರಾಜ್ಯಶಾಸ್ತ್ರವನ್ನು ಅಭ್ಯಾಸ ಮಾಡಿ ಎಂ.ಎ. ಪದವಿಯನ್ನು ಪಡೆದುಕೊಂಡರು. ನಂತರ ಕಾನೂನನ್ನು ವ್ಯಾಸಂಗ ಮಾಡಲು ಇಂಗ್ಲೆಂಡಿಗೆ ತೆರಳಿದ ಅವರು ಪ್ರೊ. ಹೆರಾಲ್ಡ್‌ಲಾಸ್ಕಿರವರಂತಹ ಗುರುಗಳ ಬಳಿಯಲ್ಲಿ ಕಾನೂನನ್ನು ಕಲಿತರು. ಕಾನೂನು ಪರೀಕ್ಷೆಯನ್ನು ಪಾಸುಮಾಡಿದ ಅವರು ಮದರಾಸಿನ ಸುಪ್ರಸಿದ್ಧ ವಕೀಲರ ಬಳಿಯಲ್ಲಿ ಕಾರ್ಯ ನಿರ್ವಹಿಸಿದ ಅವರು, ಕ್ರಿಮಿನಲ್ ಕೇಸುಗಳನ್ನು ನಡೆಸುವ ಪ್ರಸಿದ್ಧ ವಕೀಲರಾದರು. ಇದರ ಜೊತೆಯಲ್ಲಿಯೇ 'ಆಂಧ್ರ ಮಹಿಳಾ' ಎನ್ನುವ ಮಾಸಪತ್ರಿಕೆಯನ್ನು ಪ್ರಾರಂಭಿಸಿದರು. ಆಂಧ್ರ ಮಹಿಳಾ ವಿಭಾಗದಿಂದ ಶಾಲೆ, ಕಲಾ ಶಾಲೆ, ನರ್ಸಿಂಗ್ ಶಾಲೆ, ಮಹಿಳಾ ಕೂಟಗಳನ್ನು ಪ್ರಾರಂಭಿಸಿ ಅನೇಕ ಹೆಣ್ಣುಮಕ್ಕಳಿಗೆ ಶಿಕ್ಷಣ ನೀಡಲು ಕಾರಣಕರ್ತರಾದರು. ದುರ್ಗಾಬಾಯಿಯವರು ರಾಜ್ಯಸಭಾ ಸದಸ್ಯರಾಗಿ ಅನೇಕ ಕಾನೂನು ತಿದ್ದುಪಡಿಗಳಲ್ಲಿ ಭಾಗವಹಿಸಿದರು. ಸಂಗೀತವನ್ನು ಬಲ್ಲ ಆಕೆ, ವೀಣೆಯನ್ನು ನುಡಿಸಲು ಕಲಿತಿದ್ದು, ಹೆಚ್ಚು ಅಧ್ಯಯನಶೀಲರಾಗಿ ಸುಪ್ರೀಂಕೋರ್ಟಿನ ವಕೀಲರಾಗಿಯೂ ಸಹ ಕೆಲಸ ಮಾಡಿದ ಮೊದಲ ಮಹಿಳೆಯಾಗಿ ಗುರುತಿಸಿಕೊಂಡರು. ರಾಜ್ಯಸಭಾ ಸದಸ್ಯರಾಗಿ ಸುಪ್ರೀಂಕೋರ್ಟಿನ ವಕೀಲರಾಗಿ ಕೆಲಸಕಾರ್ಯದಲ್ಲಿ ತೊಡಗಿಕೊಂಡ ಅವರು ವರಮಾನ ತೆರಿಗೆಯನ್ನು ಸಲ್ಲಿಸುತ್ತಿದ್ದರು. ಒಂದು ದಿನ ಪ್ರಧಾನಿ ನೆಹರುರವರು ತಮ್ಮನ್ನು ಭೇಟಿ ಮಾಡಲು ಕರೆ ಕಳುಹಿಸಿ ದುರ್ಗಾಬಾಯಿ ಅವರನ್ನು ಯೋಜನಾ ಸಮಿತಿಯಲ್ಲಿ ನೇಮಿಸಿಕೊಂಡರು. ನಂತರ ದುರ್ಗಾಬಾಯಿಯವರು ಭಾರತದ ಅರ್ಥಸಚಿವ ಚಿಂತಾಮಣಿ ದೇಶಮುಖ್‌ರವರನ್ನು ವಿವಾಹವಾಗಿ ಪತಿ ಮತ್ತು ಪತ್ನಿಯರು ದೇಶಸೇವೆಯಲ್ಲಿ ತೊಡಗಿಸಿಕೊಂಡರು. ಸಂತೋಷಕೂಟಗಳು, ಸತ್ಕಾರಕೂಟಗಳು ಮುಂತಾದ ಕೂಟಗಳಲ್ಲಿ ಭಾಗವಹಿಸಲು ಇಚ್ಛಿಸದ ಪತಿ ಮತ್ತು ಪತ್ನಿಯರಿಬ್ಬರೂ ದೇಶಸೇವೆ, ತೋಟಗಾರಿಕೆ, ಸಮಾಜಕಲ್ಯಾಣ, ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ಬಗ್ಗೆ ಈ ಲೇಖನ ಅವರ ವ್ಯಕ್ತಿತ್ವವನ್ನು ಅವರ ಸಮಾಜಸೇವಾ ಕಾರ್ಯವನ್ನು ಓದುಗರಿಗೆ ಪರಿಚಯಿಸುತ್ತವೆ.[೭೪]

ಜನವರಿ ೧೯೫೭ರ ಸಂಚಿಕೆಯಲ್ಲಿ 'ಪದ್ಮವಿಭೂಷಣ ಶ್ರೀಮತಿ ಜಾನಕಿದೇವಿ ಬಜಾಜ್' ಎಂಬ ಶೀರ್ಷಿಕೆಯಡಿಯಲ್ಲಿ ಅವರ ವ್ಯಕ್ತಿ ಪರಿಚಯವನ್ನು ಆಕೆಯ ಮಾತುಗಳಲ್ಲಿ ಕಟ್ಟಿಕೊಡಲಾಗಿದ್ದು, ಏಳು ವರ್ಷದ ಹುಡುಗಿಯನ್ನು ಜಮ್ನಲಾಲ್‌ಬಜಾಜ್‌ರವರಿಗೆ ಕೊಟ್ಟು ವಿವಾಹವನ್ನು ಮಾಡಲಾಗಿತ್ತು. ಆಗರ್ಭ ಶ್ರೀಮಂತ ಮನೆತನದಿಂದ ಬಂದ ಆಕೆ ತನ್ನ ಪತಿಯನ್ನು ಅನುಸರಿಸಿ ಸಮಾಜ ಸೇವೆಯಲ್ಲಿ ತನ್ನನ್ನು ತೊಡಗಿಸಿಕೊಂಡು, ಸಾಧಾರಣವಾದ ಖಾದಿ ಸೀರೆಯನ್ನು ಧರಿಸಿ ಸಾರ್ವಜನಿಕರಂಗದಲ್ಲಿ ತೊಡಗಿಸಿಕೊಂಡರು. ತನ್ನ ಆಭರಣಗಳನ್ನು ಸಂಪೂರ್ಣವಾಗಿ ತ್ಯಾಗ ಮಾಡಿ ಗಾಂಧೀಜಿಯವರ ಪ್ರಭಾವಕ್ಕೆ ಒಳಗಾಗಿ ವಾರ್ಧಾದಲ್ಲಿದ್ದ ತಮ್ಮ ಮನೆಯಲ್ಲಿ ಚರಕದಿಂದ ನೂಲನ್ನು ತೆಗೆಯುವ ಕೇಂದ್ರವನ್ನು ಸ್ಥಾಪಿಸಿ, ಸಾಮಾಜಿಕ

ಅನಿಷ್ಟಗಳನ್ನು ತೊಡೆದುಹಾಕುವಲ್ಲಿ ಹೋರಾಟವನ್ನು ಮಾಡಿದ ಅವರು ತಮ್ಮನ್ನು ಸ್ವಾತಂತ್ರ್ಯ ಚಳವಳಿಯಲ್ಲಿ ತೊಡಗಿಸಿಕೊಂಡರು. ಸ್ವಾತಂತ್ರ್ಯ ಹೋರಾಟಗಾರರ ಪತ್ನಿಯರಿಗೆ ಅನೇಕ ತೊಂದರೆಗಳು ಉಂಟಾದಾಗ ಅಂತಹ ಮಹಿಳೆಯರಿಗೆ ಆಶ್ರಮವನ್ನು ತೆರೆದರು, ೧೯೪೨ರಲ್ಲಿ ಅವರ ಪತಿ ಮರಣಹೊಂದಿದಾಗ ಅವರ ಜೀವನ ಧ್ಯೇಯಗಳನ್ನು ಜಾನಕಿ ದೇವಿಯವರು ಮುಂದುವರಿಸಿದರು. ತಮ್ಮ ಆಭರಣಗಳನ್ನು ಮಾರಿ ಗೋಸಂರಕ್ಷಣಾ ಸಂಸ್ಥೆಯನ್ನು ಸ್ಥಾಪಿಸಿದರು. ಕಸ್ತೂರಬಾ ಸಂಸ್ಥೆಯಲ್ಲಿ ಸದಸ್ಯೆಯಾಗಿ, ಭೂದಾನ ಯಜ್ಞದಲ್ಲಿ ಆಚಾರ್ಯ ವಿನೋಬಾಭಾವೆಯವರ ಜೊತೆಯಲ್ಲಿ ತೊಡಗಿಸಿಕೊಂಡಿದ್ದು, ಹರಿಜನರ ಉದ್ಧಾರಕ್ಕಾಗಿ ಶ್ರಮಿಸುತ್ತಿರುವ, ಈಕೆ ಸಮಾಜಸೇವಾಕಾರ್ಯದಲ್ಲಿ ತೊಡಗಿಕೊಂಡರೆ ಮಾತ್ರ ರಾಜಕಾರಣದಲ್ಲಿ ಸಫಲತೆ ಹೊಂದಬಹುದೆಂಬ ತತ್ವವನ್ನು ಅಳವಡಿಸಿಕೊಂಡ ಇವರಿಗೆ ಪದ್ಮ ವಿಭೂಷಣ ಪ್ರಶಸ್ತಿ ದೊರಕಿರುವ ಬಗ್ಗೆ ಲೇಖನದಲ್ಲಿ ಹೇಳಲಾಗಿದೆ.[೭೫]

### ೭.೫ ಸೋದರಿಗೆ ಪತ್ರ ಶೀರ್ಷಿಕೆಯಡಿಯಲ್ಲಿ ಎಂ.ಆರ್. ಲಕ್ಷಮ್ಮನವರ ಪ್ರವಾಸದ ಅನುಭವಗಳು

ಕೇಂದ್ರೀಯ ಸಮಾಜ ಕಲ್ಯಾಣ ಮಂಡಳಿ ಸ್ಥಾಪನೆಯಾಗಿ ಪ್ರತಿಯೊಂದು ಪ್ರಾಂತ್ಯದಲ್ಲಿಯೂ ಅದರ ಕಾರ್ಯಕಲಾಪಗಳ ಬಗ್ಗೆ 'ಸೋದರಿ' ಪತ್ರಿಕೆಯಲ್ಲಿ 'ಕೇಂದ್ರೀಯ ಸಮಾಜಕಲ್ಯಾಣ ಮಂಡಲಿಯ ಸಂಚಿಕೆ' ಎಂಬ ಶೀರ್ಷಿಕೆಯಡಿಯಲ್ಲಿ ಪ್ರಕಟವಾಗಿದ್ದು ಎಂ.ಆರ್. ಲಕ್ಷಮ್ಮರವರು ಮೈಸೂರು ಪ್ರಾಂತ್ಯದ ಸಮಾಜ ಕಲ್ಯಾಣ ಮಂಡಲಿಯ ಪ್ರಥಮ ಅಧ್ಯಕ್ಷರಾಗಿ ಕೇಂದ್ರದ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ಜವಾಬ್ದಾರಿಯನ್ನು ಹೊಂದಿದ್ದರು.

ದಿನಾಂಕ ೨೦.೦೮.೧೯೫೪ರ ಸಂಚಿಕೆಯಲ್ಲಿ 'ಸೋದರಿಗೆ ಪತ್ರ' ಎಂಬ ಶೀರ್ಷಿಕೆಯಡಿಯಲ್ಲಿ ಎಂ.ಆರ್. ಲಕ್ಷಮ್ಮನವರು ಅಮೆರಿಕಾ ಪ್ರವಾಸ ಮಾಡಿದ ಅನುಭವಗಳನ್ನು ಸಂಪಾದಕೀಯದಲ್ಲಿ ಹೇಳಿಕೊಂಡಿದ್ದು, ಬೆಂಗಳೂರಿನಲ್ಲಿ ವಿಮಾನ ಹತ್ತಿದ್ದು ಮನೆಯವರ ಅಗಲಿಕೆಯ ದುಃಖಗಳ ನಡುವೆಯು ವಿಮಾನ ಪ್ರಯಾಣದ ಅನುಭವವನ್ನು ಮುಂಬೈನಲ್ಲಿ ಅವರನ್ನು ಸ್ವಾಗತಿಸಲು ಬಂದ ಗುಲಾಬ್‌ದಾಸ್ ಬ್ರೋಕರ್ ಗುಜರಾತಿನ ಪ್ರಸಿದ್ಧ ಲೇಖಕರು ಹಾಗೂ ಎಂ.ಆರ್. ಲಕ್ಷಮ್ಮನವರ ಸ್ನೇಹಿತೆ ಭೇಟಿಯಾದ ಬಗ್ಗೆ, ಮುಂಬೈನ ಜೀವನ, ಅಲ್ಲಿನ ಕಟ್ಟಲೆಗಳು ಮುಂತಾದವುಗಳ ಬಗ್ಗೆ ವಿವರಿಸಿದ್ದು, ವಿಮಾನದಲ್ಲಿ ಅಮೆರಿಕಾದ ಪ್ರಯಾಣ ಪ್ರಾರಂಭಿಸಿದ್ದು, ನಡೆ ಮುಂದೆ ನಡೆ ಮುಂದೆ ಕುಗ್ಗದೆ ನಡೆ ಮುಂದೆ ಎಂದು ಸಂಪಾದಕೀಯವನ್ನು ಕೊನೆಗೊಳಿಸಿದ್ದಾರೆ.[೭೬]

ದಿನಾಂಕ ೨೭.೦೮.೧೯೫೪ರ ಸಂಚಿಕೆಯಲ್ಲಿ 'ಸೋದರಿಗೆ ಪತ್ರ' ಎಂಬ ಶೀರ್ಷಿಕೆಯಡಿಯಲ್ಲಿ ಎಂ.ಆರ್. ಲಕ್ಷಮ್ಮನವರು ವಿಮಾನ ಪ್ರಯಾಣದ ಅನುಭವಗಳು, ವಿಮಾನದ ಆಸನದಲ್ಲಿ ಕುಳಿತುಕೊಳ್ಳುವಾಗ ಧರಿಸುವ ಬೆಲ್ಟ್, ನೀರ ಮೇಲೆ ಪ್ರಯಾಣಿಸುವಾಗ

ಹಾಕಿಕೊಳ್ಳುವ ಲೈಫ್ ಜಾಕೆಟ್ ಬಗ್ಗೆ, ಗಗನಸಖಿ ಮಾಂಸಹಾರವನ್ನು ಬಡಿಸಿದ ಬಗ್ಗೆ, ವಿಮಾನದ ಕಿಟಕಿಯಲ್ಲಿ ಕಾಣಿಸುವ ಪ್ರಕೃತಿಯ ಬಗ್ಗೆ, ವಿಮಾನಸಖಿ ಸೌದಿ ಅರೇಬಿಯಾ ದೇಶದ ಬೂಸ್ರಾ ನಿಲ್ದಾಣದಲ್ಲಿ ವಿರಾಮ ನೀಡಿದ ಬಗ್ಗೆ, ಈಜಿಪ್ಟ್‌ನ ರಾಜಧಾನಿ ಕೈರೋದಲ್ಲಿ ಇಳಿದು ಪ್ರೇಕ್ಷಣೀಯ ಸ್ಥಳಗಳನ್ನು ನೋಡಿದ ಬಗ್ಗೆ, ಮರಳಲ್ಲಿ ಪಿರಮಿಡ್ಡು ಗುಂಪುಗಳು, ತಾಳೆಗರಿ ಗಿಡಗಳ ನಡುವೆ ಕಾಣುವ ಹೊಲ ಮನೆಗಳು, ಅಲ್ಲಿನ ಸೌಂದರ್ಯವನ್ನು ವರ್ಣಿಸಿರುವ ಎಂ.ಆರ್. ಲಕ್ಷಮ್ಮನವರು ವಿಮಾನದಲ್ಲಿ ಇರುವ ಸೌಕರ್ಯಗಳು, ಮೆಡಿಟೆರಿಯನ್ ಸಮುದ್ರದ ಮೇಲೆ ಸಾಗುವ ವಿಮಾನ ಕೆಳಗೆ ಕಾಣುತ್ತಿರುವ ಅಗಾಧವಾದ ನೀರಿನ ನಡುವೆ ಹಡಗುಗಳು, ಮೋಡದ ನಡುವಿನ ವಿಮಾನ ಪ್ರಯಾಣವನ್ನು ಆಸ್ವಾದಿಸಿ ರೋಮ್‌ನಲ್ಲಿ ಇಳಿದ ಲೇಖಕಿ ರೋಮ್‌ನಲ್ಲಿರುವ ಭಾರತದ ರಾಯಭಾರಿ ಕಛೇರಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಎಲ್.ವಿ. ಅಯ್ಯಂಗಾರ್‌ರವರನ್ನು ಭೇಟಿಯಾದ ಬಗ್ಗೆ, ವಿಮಾನ ನಿಲ್ದಾಣದಿಂದ ಅವರನ್ನು ಕರೆದುಕೊಂಡು ಹೋಗಲು ಬಂದಿದ್ದ ಎಡಿಲಿ ಬೂರಾಚ್ಚಿ ಎಂಬ ಯುವತಿಯ ಬಗ್ಗೆ ತಮ್ಮ ಸಂಪಾದಕೀಯದಲ್ಲಿ ಪ್ರಕಟಿಸಿರುವ ಎಂ.ಆರ್. ಲಕ್ಷಮ್ಮನವರು ತಮ್ಮ ಅಮೆರಿಕಾ ಪ್ರಯಾಣದ ವಿವರವನ್ನು ಈ ಲೇಖನದಲ್ಲಿ ನೀಡಿದ್ದಾರೆ.[೭೭]

ದಿನಾಂಕ ೨೨.೧೦.೧೯೫೪ರ ಸಂಚಿಕೆಯಲ್ಲಿ 'ಸೋದರಿ ಪತ್ರ' ಅಂಕಣದಲ್ಲಿ ರೋಮ್‌ನಲ್ಲಿ ಭೇಟಿ ನೀಡಿದ ಕೊಲೊಸಿಯಂ ಅಥವಾ ಆಂಫಿಥಿಯೇಟರು ಬಗ್ಗೆ ವಿವರಿಸಿರುವ ಎಂ.ಆರ್. ಲಕ್ಷಮ್ಮರವರು ೧೯೦೦ ಅಡಿಗಳ ಸುತ್ತಳತೆಯನ್ನು ೩೦೦ ಅಡಿಯ ಎತ್ತರವಿರುವ ಈ ಕಟ್ಟಡಕ್ಕೆ ಎಂಬತ್ತು ಪ್ರವೇಶದ್ವಾರಗಳಿದ್ದು, ಅದರಲ್ಲಿ ಎರಡು ರಾಜಮನೆತನದವರಿಗೆ, ಒಂದು ಯೋಧರಿಗಾಗಿ, ಮತ್ತೊಂದು ಸತ್ತಂತಹ ಯೋಧರನ್ನು ಎಳೆದೊಯ್ಯುವ ದ್ವಾರವಾಗಿದೆ. ಆ ಸ್ಥಳದಲ್ಲಿ ರಾಜರಾಣಿಯರು ಕುಳಿತುಕೊಳ್ಳುತ್ತಿದ್ದ ಸ್ಥಳ, ಸುರಂಗಮಾರ್ಗಗಳು, ನೆಲ ಮಾಳಿಗೆಗಳು, ಹಿಂಸಾದ್ವಾರ, ಕಾರಾಗೃಹ ಮುಂತಾದ ಭಾಗಗಳಿದ್ದು ಅಲ್ಲಿ ಯೋಧರ ದ್ವಂದ್ವ ಯುದ್ಧ ನಡೆಯುತ್ತಿದ್ದು, ಸಾಮಾನ್ಯವಾಗಿ ಸೇವಕ ವರ್ಗದವರು ಸೆರೆಸಿಕ್ಕ ಶತ್ರುಗಳು ಈ ಯುದ್ಧದಲ್ಲಿ ಪಾಲುಗೊಳ್ಳುತ್ತಿದ್ದು, ಅಲ್ಲಿ ರಕ್ತದ ಹೊಳೆ ಹರಿಯುತ್ತಿದ್ದ ಬಗ್ಗೆ, ಅದನ್ನು ನಿಲ್ಲಿಸಲು ಕ್ರಿ.ಶ. ೪೦೪ ರಲ್ಲಿ ಟೆಲಿಮೇಕಸ್ ಎಂಬ ಕ್ರೈಸ್ತ ಪಾದ್ರಿ ಪ್ರಯತ್ನಿಸಿದ್ದರ ಬಗ್ಗೆ, ಆದರೆ ಅಲ್ಲಿಯ ಜನತೆ ಆತನನ್ನು ಕಲ್ಲುಗಳಿಂದ ಹೊಡೆದು ಸಾಯಿಸಿದ್ದ ಬಗ್ಗೆ, ಕ್ರೈಸ್ತ ಪಾದ್ರಿ ಮರಣದ ನಂತರ ಯೋಧರ ರಕ್ತಪಾತದ ಆಟವನ್ನು ಚಕ್ರವರ್ತಿ ನಿಲ್ಲಿಸಿದ ಬಗ್ಗೆ, ಆತನ ತ್ಯಾಗವನ್ನು ಸ್ಮರಿಸಿದ ಎಂ.ಆರ್. ಲಕ್ಷಮ್ಮರವರು ಇಂತಹ ನಿಷ್ಠಾವಂತ ಜನ ಒಗ್ಗೂಡಿ ಪ್ರಯತ್ನಿಸಿದ್ದರೆ ಜಾಗತಿಕ ಯುದ್ಧವನ್ನು ನಿಲ್ಲಿಸಲು ಸಾಧ್ಯವಾಗದೆ? ಎಂಬ ಪ್ರಶ್ನೆಯನ್ನು ತಮ್ಮ ಲೇಖನದಲ್ಲಿ ಹೇಳಿರುವ ಅವರು ರೋಮ್‌ನ ಸೇಂಟ್ ಪೀಟರ್ ಚರ್ಚ್ ಬಗ್ಗೆ, ಅಲ್ಲಿನ ಕಲಾವೈಭವದ ಬಗ್ಗೆ, ಪ್ರಸಿದ್ಧ ಕಲಾವಿದ 'ಮೈಕಲ್ ಏಂಜಲೊ'ವಿನ ಮೋಸೆಸ್ ವಿಗ್ರಹದ ಬಗ್ಗೆ, ತಮ್ಮ ಲೇಖನದಲ್ಲಿ ಹೇಳಿರುವ ಎಂ.ಆರ್. ಲಕ್ಷಮ್ಮರವರು ಧರ್ಮ, ನ್ಯಾಯಸೂತ್ರಗಳನ್ನು ಕಾಪಾಡುವ ಮೋಸೆಸ್ ಮತ್ತೆ

ಜೀವತಾಳಿ ಬಂದು ಈ ಪ್ರಪಂಚವನ್ನು ಉದ್ಧರಿಸು ಎಂಬುದಾಗಿ ಮೋಸೆಸ್‌ನಿಗೆ ಅನಂತ ಪ್ರಣಾಮಗಳನ್ನು ಅರ್ಪಿಸಿದ ಬಗ್ಗೆ, ರೋಮ್ ನಗರವನ್ನು ಬಿಟ್ಟು ಹೊರಡುವ ಮುನ್ನ ನಾಟಕವನ್ನು ನೋಡಲು ನಿರ್ಧರಿಸಿದ್ದು, ನಂತರ ನಾಟಕಮಂದಿರ ಸಿಗದೆ ಮರಳಿ ಬಂದ ಬಗ್ಗೆ, ರೋಮ್‌ನಲ್ಲಿ ಪ್ರತಿಯೊಂದಕ್ಕೂ ಹೆಚ್ಚು ಬೆಲೆ ಇರುವ ಬಗ್ಗೆ, ತಮ್ಮ ಲೇಖನದಲ್ಲಿ ತಿಳಿಸಿದ್ದು ರೋಮ್ ನಗರಕ್ಕೆ ಗುಡ್‌ಬೈ ಹೇಳಿ ತಮ್ಮ ವಿಮಾನ ಪ್ರಯಾಣವನ್ನು ಮುಂದುವರೆಸಿದ್ದು ಎಂ.ಆರ್. ಲಕ್ಷಮ್ಮನವರು ಜಿನೀವಾಕ್ಕೆ ಬಂದ ಬಗ್ಗೆ ಹಾಗೂ ವಿಮಾನ ಪ್ರಯಾಣದ ಹಿತಕರ ಪ್ರಯಾಣವನ್ನು ತಮ್ಮ ಲೇಖನದಲ್ಲಿ ವಿವರಿಸಿದ್ದಾರೆ.[೭೮]

ದಿನಾಂಕ ೦೫.೧೧.೧೯೫೪ರ ಸಂಚಿಕೆಯಲ್ಲಿ ಎಂ.ಆರ್. ಲಕ್ಷಮ್ಮನವರು ಜಿನೀವಾದಲ್ಲಿ ತಾವು ಕಳೆದ ಕ್ಷಣಗಳನ್ನು 'ಸೋದರಿಯ ಪತ್ರ'ದಲ್ಲಿ ವಿವರಿಸಿದ್ದು, ಭಾರತದ ರಾಯಭಾರಿ ಕಛೇರಿಗೆ ಬೇಟಿ ನೀಡಿದ ಬಗ್ಗೆ ಅಲ್ಲಿ ಹಿಂದೂ ಮತ್ತು ಟೈಮ್ಸ್ ಆಫ್ ಇಂಡಿಯಾ ಪತ್ರಿಕೆಯನ್ನು ಓದಿ ಭಾರತದ ಸಮಾಚಾರವನ್ನು ತಿಳಿದುಕೊಂಡ ಬಗ್ಗೆ ಹಾಗೂ ಅಲ್ಲಿನ ಹೋಟೆಲ್‌ನಲ್ಲಿ ಕಂಡುಬರುವ ಸುಂದರ ಚಿತ್ರಣದ ಬಗ್ಗೆ ಮತ್ತು ಅಲ್ಲಿನ ಸ್ತ್ರೀಯರನ್ನು ಮತದಾನದ ಹಕ್ಕಿನ ಬಗ್ಗೆ ಪ್ರಶ್ನಿಸಿದ ಎಂ.ಆರ್. ಲಕ್ಷಮ್ಮರವರು ಹೆಣ್ಣುಮಕ್ಕಳಿಗೂ ಮತದಾನದ ಹಕ್ಕು ಇರುವ ಬಗ್ಗೆ ತಿಳಿದುಕೊಂಡ ಎಂ.ಆರ್. ಲಕ್ಷಮ್ಮರವರು ಜಿನೀವಾದಲ್ಲಿ ಉತ್ತಮ ಗಡಿಯಾರ ತಯಾರಾಗುವ ಬಗ್ಗೆ ವಿವರವಾಗಿ ತಿಳಿಸಿದ್ದಾರೆ.[೭೯]

ದಿನಾಂಕ ೧೨.೧೧.೧೯೫೪ರಂದು ಜಿನೀವಾದಲ್ಲಿ ಎಂ.ಆರ್. ಲಕ್ಷಮ್ಮರವರ ಪ್ರಯಾಣ ಮುಂದುವರೆದಿದ್ದು ಅಂಗಡಿಯಲ್ಲಿ ಇದ್ದಂತಹ ಸ್ತ್ರೀಯನ್ನು 'ನಿಮಗೆ ಮತದಾನದ ಹಕ್ಕು ಬೇಡವೆ?' ಎಂದು ಆಕೆಯನ್ನು ಕೇಳಿದಾಗ ಆಕೆ 'ನಾವು ಕೆಲಸದಲ್ಲಿ ನಿರತರಾಗಿರುವವರು ನಮಗೇಕೆ' ಎಂಬ ಉತ್ತರವನ್ನು ನೀಡಿದ್ದು ಸ್ವಿಟ್ಜರ್‌ಲ್ಯಾಂಡ್‌ನಲ್ಲಿ ಸ್ತ್ರೀಯರಿಗೆ ಮತದಾನದ ಅಧಿಕಾರ ಇಲ್ಲದೇ ಇರುವ ಬಗ್ಗೆ ಮತ್ತು ಆ ಹಕ್ಕಿಗಾಗಿ ಅಲ್ಲಿ ಹೋರಾಟ ಮಾಡುತ್ತಿರುವ ಸ್ತ್ರೀ ಸಂಘದ ಅಧ್ಯಕ್ಷೆಯಾದ ಮಿಸಸ್ ಚಾಯ್ಸಿ ಅವರನ್ನು ಭೇಟಿಮಾಡಿದ್ದ ಬಗ್ಗೆ ಮತ್ತು ಗಣರಾಜ್ಯವಾದ ಸ್ವಿಟ್ಜರಲ್ಯಾಂಡ್‌ನಲ್ಲಿ ರೂಢಿ ಸಂಪ್ರದಾಯಸ್ಥರಾದ ಮಹಿಳೆಯರು ವಿದ್ಯಾವಂತರಾದರು. ಹಕ್ಕಿಗಾಗಿ ಹೋರಾಟ ಮಾಡುವ ಚಳವಳಿ ಹೆಚ್ಚಿನ ಸಂಖ್ಯೆಯಲ್ಲಿ ನಡೆಯದಿರುವ ಬಗ್ಗೆ, ನಗರಪ್ರದೇಶಗಳಲ್ಲಿ ಮಾತ್ರ ಚಳವಳಿಗಳು ಇದ್ದು ಹಣದ ಕೊರತೆಯಿಂದ ಇತರ ಕಡೆಗಳಲ್ಲಿ ಚಳವಳಿ ತೀವ್ರತರವಾಗಿ ನಡೆಯದಿರುವ ಬಗ್ಗೆ ಹಾಗೂ ಅಲ್ಲಿನ ಶಾಸನಸಭೆಯಾದ ರೆಫರೆಂಡಂ ಮಹಿಳೆಯರಿಗೆ ಮತದಾನದ ಹಕ್ಕನ್ನು ನೀಡುವ ಬಗ್ಗೆ ಹಾಗೂ ಇದರ ಬಗ್ಗೆ ಜನತೆಯ ಅಭಿಪ್ರಾಯವನ್ನು ಸಂಗ್ರಹಿಸುವ ಸಮಯದಲ್ಲಿ ಮಹಿಳೆಯರಾಗಲಿ ಪುರುಷರಾಗಲಿ ಆಸಕ್ತಿ ವಹಿಸದಿರುವ ಬಗ್ಗೆ ಅಲ್ಲಿನ ಸ್ಥಳೀಯ ಪತ್ರಿಕೆಗಳು ಈ ವಿಷಯವಾಗಿ ಪ್ರಚಾರ ಮಾಡದಿರುವ ಬಗ್ಗೆ ಮಹಿಳೆಯರಿಗೆ ಮತದಾನದ ಹಕ್ಕಿನ ಉಸಾಬರಿ ಏಕೆಂದು

ಪುರುಷರು ಅವರನ್ನು ನಿರುತ್ಸಾಹಗೊಳಿಸಿದ ಬಗ್ಗೆ, ಮಿಸಸ್ ಚಾಯ್ಸಿರವರ ತಮ್ಮ ಅಭಿಪ್ರಾಯವನ್ನು ಎಂ.ಆರ್. ಲಕ್ಷಮ್ಮರವರಲ್ಲಿ ಹಂಚಿಕೊಂಡಿದ್ದು ಅದಕ್ಕೆ ವಿದೇಶದಲ್ಲಿರುವ ಮಹಿಳೆಯರು ಅತ್ಯಂತ ಸುಖಿಗಳೆಂಬ ಅಭಿಪ್ರಾಯ ಭಾರತ ದೇಶದಲ್ಲಿ ಇರುವ ಬಗ್ಗೆ ತಿಳಿಸಿದ್ದಾಗ ಆಕೆ ಮಹಿಳೆಯರಿಗೆ ಸ್ವಾತಂತ್ರ್ಯ ಇಲ್ಲದಿರುವ ಬಗ್ಗೆ ಹಾಗೂ ದೇಶದ ಆಗುಹೋಗುಗಳಲ್ಲಿ ಮಹಿಳೆಯರ ಪಾತ್ರ ಇಲ್ಲದೆ ಇರುವುದರಿಂದ ನಾವು ಅಸುಖಿಗಳು ಎಂಬ ಮಾತನ್ನು ಅವರು ವ್ಯಕ್ತಪಡಿಸಿದ್ದಾರೆ. ಅಲ್ಲಿ ಯುವಜನರು ಹಾಗೂ ವಿದ್ಯಾವಂತ ಜನಾಂಗದವರು ಮಹಿಳೆಯರಿಗೆ ಮತದಾನದ ಹಕ್ಕನ್ನು ನೀಡಬೇಕೆಂದು ಬಯಸಿದ್ದರೆ, ಅಲ್ಲಿನ ಚರ್ಚಿನ ಮುಖ್ಯಸ್ಥರು ನಿರಾಕರಿಸುತ್ತಾರೆ.

ಇಟಲಿಯಲ್ಲಿ ಮಹಿಳೆಯರಿಗೆ ಮತದಾನದ ಹಕ್ಕನ್ನು ನೀಡಿರುವ ಚರ್ಚ್ ಸ್ವಿಟ್ಜರ್‌ಲ್ಯಾಂಡಿನಲ್ಲಿ ನೀಡುವುದಕ್ಕೆ ಪಕ್ಷಪಾತವನ್ನು ತೋರುತ್ತಿದ್ದು, ನಾವು ಸ್ತ್ರೀಯರಲ್ಲವೇ? ನಾವು ತಾಯಂದಿರಲ್ಲವೇ? ಎಂದು ಪ್ರಶ್ನಿಸಿದ ಮಿಸೆಸ್ ಚಾಯ್ಸಿ ಸ್ತ್ರೀಯರೆಲ್ಲರು ಸೇರಿ ಒಂದು ಸಮ್ಮೇಳನವನ್ನು ಸಂಘಟಿಸಿ, ಮತದಾನದ ಹಕ್ಕನ್ನು ಪಡೆಯುವ ಬಗ್ಗೆ ಸಿದ್ಧತೆ ನಡೆಯುತ್ತಿದ್ದು ಮತ್ತು ಎಂ.ಆರ್. ಲಕ್ಷಮ್ಮರವರ ಸಲಹೆ ಸೂಚನೆಯನ್ನು ಕೇಳಿರುವ ಬಗ್ಗೆ ಎಂ.ಆರ್. ಲಕ್ಷಮ್ಮ ತಮ್ಮ ಪತ್ರದಲ್ಲಿ ಪ್ರಕಟಿಸಿದ್ದು ಅವರು ಅಚ್ಚರಿಯನ್ನು ವ್ಯಕ್ತಪಡಿಸಿದ್ದಾರೆ. ನಾಗರಿಕತೆಯ ದೇಶವಾದ ಸ್ವಿಟ್ಜರ್‌ಲ್ಯಾಂಡಿನಲ್ಲಿ ಮಹಿಳೆಯರಿಗೆ ಮತದಾನ ಹಕ್ಕು ಇಲ್ಲ. ಇರುವುದು ನಮ್ಮ ದೇಶದಲ್ಲಿ. ಗಾಂಧೀಜಿಯವರ ಪ್ರಭಾವದಿಂದ ಮಹಿಳೆಯರ ಸ್ಥಿತಿಗತಿಗಳು ಉತ್ತಮ ಮಟ್ಟದಲ್ಲಿ ಇರುವ ಬಗ್ಗೆ ಅವರಿಗೆ ತೋಚಿರುವ ಸಲಹೆಯನ್ನು ನೀಡುವೆನೆಂದು ತಮ್ಮ ಲೇಖನದಲ್ಲಿ ಪ್ರಕಟಿಸಿರುತ್ತಾರೆ. ಎಂ.ಆರ್. ಲಕ್ಷಮ್ಮರವರು ಬೇರೆ ದೇಶದಲ್ಲಿರುವ ಮಹಿಳೆಯರ ಸಮಸ್ಯೆಯನ್ನು ತಿಳಿದುಕೊಂಡು ಅದನ್ನು ಬಗೆಹರಿಸುವ ಪ್ರಯತ್ನವನ್ನು ಮಾಡಿರುವ ಬಗ್ಗೆ ಈ ಲೇಖನವು ಸ್ಪಷ್ಟಪಡಿಸುತ್ತದೆ.[೮೦]

**೭.೬. ಎಂ.ಆರ್. ಲಕ್ಷಮ್ಮನವರ ಸಂಪಾದಕತ್ವದಲ್ಲಿ ಬೆಳಕು ಪತ್ರಿಕೆಯಲ್ಲಿ ಪ್ರಕಟವಾದ ವಯಸ್ಕರ ಶಿಕ್ಷಣದ ಸುದ್ದಿ, ಚಿಂತನೆ ಮತ್ತು ವಿಚಾರಧಾರೆಗಳು**

ಎಂ.ಆರ್. ಲಕ್ಷಮ್ಮ ಅವರು ಬೆಳಕು ಪತ್ರಿಕೆಯಲ್ಲಿ ಸಂಪಾದಕಿಯಾಗಿ ಕಾರ್ಯ ನಿರ್ವಹಿಸುವ ಸಂದರ್ಭದಲ್ಲಿ ವಯಸ್ಕರ ಶಿಕ್ಷಣದ ಬಗ್ಗೆ ಅಪಾರವಾದ ಕಾಳಜಿಯನ್ನು ವಹಿಸಿದ್ದು ಮಹಿಳೆಯರ, ರೈತರ, ಸಮಾಜದ, ಕೆಳವರ್ಗದವರ ಅಭ್ಯುದಯಕ್ಕೆ ಬೇಕಾಗಿರುವ ಶಿಕ್ಷಣದ ಅಗತ್ಯತೆಯನ್ನು ಪ್ರತಿಪಾದಿಸಿದರು. ವಯಸ್ಕರ ಶಿಕ್ಷಣದ ಜೊತೆಗೆ ಸಾಮಾಜಿಕ ಅರಿವನ್ನು ಮೂಡಿಸುವ ಕಾರ್ಯವನ್ನು ಮಾಡಿದರು. ಸಾಮಾನ್ಯ ಜನರಿಗೆ ರಾಜಕೀಯ ಶಿಕ್ಷಣ, ಹಣಕಾಸಿನ ವಿಚಾರಗಳು, ವ್ಯವಸಾಯ, ಕೈಗಾರಿಕೆ, ಧರ್ಮ, ಆಚಾರ-ವಿಚಾರಗಳು ಮುಂತಾದ ಹೊಸ ಹೊಸ ವಿಚಾರ ಮತ್ತು ತಂತ್ರಜ್ಞಾನಗಳ ಬಗ್ಗೆ ತಿಳಿಸುವ ಕೆಲಸವನ್ನು ಮಾಡಿದರು.

ದಿನಾಂಕ ೧೬.೦೬.೧೯೪೫ರ ಸಂಚಿಕೆಯಲ್ಲಿ ಮೈಸೂರು ಸಂಸ್ಥಾನದ ದಿವಾನರ ಪತ್ನಿ ನರಸಮ್ಮನವರ ಅಧ್ಯಕ್ಷತೆಯಲ್ಲಿ ಬೆಂಗಳೂರು ನಗರದಲ್ಲಿ ಅಕ್ಷರಪ್ರಚಾರ ಸಮಿತಿಯ ಮಹಿಳಾ ಶಾಖೆಯು ತರಗತಿ ಪ್ರಾರಂಭವಾದ ಬಗ್ಗೆ ದಿವಾನರ ಪತ್ನಿಯವರು ಅಕ್ಷರಪ್ರಚಾರದ ಅವಶ್ಯಕತೆ ಕುರಿತು ಭಾಷಣ ಮಾಡಿದರು. ಮೈಸೂರು ಸಂಸ್ಥಾನದ ಅಕ್ಷರಪ್ರಚಾರ ಸಮಿತಿಯು ಮಹಾರಾಜರಲ್ಲಿ ಮನವಿಯನ್ನು ನೀಡಿ ಪುಸ್ತಕ ಭಂಡಾರಕ್ಕೆ ಪುಸ್ತಕಗಳನ್ನು ಕಳುಹಿಸಿ ಕೊಡಲು ಕೇಳಿಕೊಂಡಿದ್ದು ಮಹಾರಾಜರು ಎಲ್ಲಾ ವೇದಶಾಸ್ತ್ರಪುರಾಣಗಳನ್ನು ಕನ್ನಡದಲ್ಲಿ ಪ್ರಕಟಿಸಿದ್ದು ಅದನ್ನು ಅಕ್ಷರಪ್ರಚಾರ ಸಮಿತಿಯ ಕೇಂದ್ರ ಪುಸ್ತಕ ಭಂಡಾರಕ್ಕೆ ನೀಡಿರುತ್ತಾರೆ.

ದಿನಾಂಕ ೦೭.೦೭.೧೯೪೫ರ ಸಂಚಿಕೆ ೩೮ ರಲ್ಲಿ ಅಕ್ಷರ ಪ್ರಚಾರ ತರಗತಿಗಳ ವಿದ್ಯಾರ್ಥಿಗಳಿಗೆ ೩ ಪ್ರಶ್ನೆಗಳನ್ನು ಕೇಳಲಾಗಿತ್ತು. ಈ ಪ್ರಶ್ನೆಗಳಿಗೆ ಉತ್ತರವನ್ನು ಬರೆದಿರುವವರು ಕೇವಲ ಎರಡುವರೆ ತಿಂಗಳು ಬೇಸಿಗೆ ರಜಾ ಕಾಲದಲ್ಲಿ ನಡೆಸಿದ ತರಗತಿಗಳಲ್ಲಿ ವಿದ್ಯಾವಂತರಾದ ವಿದ್ಯಾರ್ಥಿಗಳಾಗಿದ್ದು ಮೊದಲನೆಯ ಪ್ರಶ್ನೆ. 'ಸರ್ಕಾರ ಎಂದರೇನು?' ಎಂಬ ಪ್ರಶ್ನೆಗೆ ರೇಣುಮಾಕನಹಳ್ಳಿಯ ಮಹಮ್ಮದ್ ಉಸ್ಮಾನ್ 'ಜನಗಳನ್ನು ಯಾವ ತೊಂದರೆಯು ಇಲ್ಲದೆ ಕಾಪಾಡುವುದು ಸರ್ಕಾರ ಷೇಕ್‌ದಾರರಿಂದ ದಿವಾನರವರೆವಿಗೂ ಇರುವವರೆಲ್ಲರು ಸರ್ಕಾರದ ಅಧಿಕಾರಿಗಳು. ಇವರೆಲ್ಲರಿಗೂ ಒಟ್ಟಿನಲ್ಲಿ ಸರ್ಕಾರ ಎನ್ನುವರು; ಎಂದು ಉತ್ತರಿಸಿದ್ದರೆ, ಅಬ್ದುಲ್ ರಹೀಮ್ ರೇಣುಮಾಕನಹಳ್ಳಿಯ ವಿದ್ಯಾರ್ಥಿ 'ದೇಶವನ್ನು ಆಳುವ ಅಧಿಕಾರಕ್ಕೆ ಸರ್ಕಾರ ಎಂದು ಹೆಸರು. ಜನಗಳು ಸರ್ಕಾರಕ್ಕೆ ವಿಧೇಯರಾಗಿರಬೇಕು. ಇಲ್ಲದಿದ್ದರೆ ಅವರಿಗೆ ಶಿಕ್ಷೆಯಾಗುತ್ತದೆ' ಎಂದು ಉತ್ತರಿಸಿರುತ್ತಾರೆ. ಎರಡನೆಯ ಪ್ರಶ್ನೆ, 'ಸಮಾಜ ಎಂದರೇನು?' ಎಂಬುದಕ್ಕೆ 'ಜನಗಳ ಗುಂಪಿಗೆ ಸಮಾಜ' ಎನ್ನುವರು ಎಂದು ಮಹಮ್ಮದ್ ಉಸ್ಮಾನ್ ಉತ್ತರಿಸಿದ್ದರೆ 'ಒಂದು ದೇಶದಲ್ಲಿರುವ ಒಂದೇ ಮತದ ಜನಗಳ ಗುಂಪಿಗೆ ಸಮಾಜ' ಎಂದು ಅಬ್ದುಲ್ ರಹೀಮ್ ಉತ್ತರಿಸಿರುತ್ತಾರೆ. ಮೂರನೆಯ ಪ್ರಶ್ನೆ 'ಸಮಾಜಕ್ಕೂ ಸರ್ಕಾರಕ್ಕೂ ಇರುವ ಸಂಬಂಧ ಏನು?' ಎಂಬ ಪ್ರಶ್ನೆಗೆ ಉತ್ತರ ಗೊತ್ತಿಲ್ಲವೆಂದು ಮಹಮ್ಮದ್ ಉಸ್ಮಾನ್ ಉತ್ತರಿಸಿದರೆ 'ಸಮಾಜದಿಂದಲೇ ಸರ್ಕಾರ ದೇಶದಲ್ಲಿ ಯಾವ ಸಮಾಜವು ಪ್ರಬಲವಾಗಿದ್ದರೆ ಸರ್ಕಾರವು ಆ ಸಮಾಜದ ಮುಖಂಡರಿಂದ ಏರ್ಪಡುತ್ತದೆ' ಎಂದು ಅಬ್ದುಲ್ ರಹೀಮ್ ಉತ್ತರಿಸಿರುತ್ತಾರೆ.

ಈ ಮೂಲಕ ನವಸಾಕ್ಷರರಿಗಾಗಿ ಪ್ರಶ್ನೆಗಳನ್ನು ಕೇಳಿ ಉತ್ತರಗಳನ್ನು ಪಡೆದುಕೊಳ್ಳುವುದರ ಮೂಲಕ ಅವರಲ್ಲಿ ಆಲೋಚಿಸುವ, ಚಿಂತನೆ ಮಾಡುವ ಶಕ್ತಿಯ ಜತೆಗೆ ಪತ್ರಗಳನ್ನು ಬರೆಯುವ ಸಾಮರ್ಥ್ಯವನ್ನು ಹೆಚ್ಚಿಸುವ ಕೆಲಸವನ್ನು 'ಬೆಳಕು' ಪತ್ರಿಕೆಯ ಎಂ.ಆರ್. ಲಕ್ಷಮ್ಮನವರ ಸಾರಥ್ಯದಲ್ಲಿ ನಡೆಯಿತೆಂದು ಹೇಳಬಹುದು. ಕಳೆದ ಜೂನ್ ೨೧ನೇ ತಾರೀಖು ಮೇಲುಕೋಟೆ ಗಂಗಸಂದ್ರ ಗ್ರಾಮಗಳಲ್ಲಿ ಅಕ್ಷರ ಕಲಿಯುತ್ತಿರುವ ವಿದ್ಯಾರ್ಥಿಗಳು ಅಲ್ಲಿನ ಪಟೇಲರಾದ ಬೆಟ್ಟಲಿಂಗೇಗೌಡರು ಮತ್ತು ಪುಸ್ತಕಭಂಡಾರ ಅಧಿಕಾರಿ ಜಡಿಯಪ್ಪನವರ

ನಾಯಕತ್ವದಲ್ಲಿ ಪಾಂಡವ ವಿಜಯ ಎಂಬ ನಾಟಕವನ್ನು ಅಭಿನಯಿಸಿದರು. ಪುಸ್ತಕಭಂಡಾರದ ಶಾಖೆಯ ಕಾರ್ಯದರ್ಶಿಗಳಾದ ಎಂ.ಎ. ಕೃಷ್ಣಸ್ವಾಮಿ ಅಕ್ಷರಪ್ರಚಾರ ಮತ್ತು ಪುಸ್ತಕಭಂಡಾರಗಳ ಬಗ್ಗೆ ಮಾತನಾಡಿದರು. ಜಿಲ್ಲಾ ವ್ಯವಸ್ಥಾಪಕರಾದ ಸತ್ಯನಾರಾಯಣರವರು ಪ್ರವಾಸವನ್ನು ಏರ್ಪಡಿಸಿದರು ಎಂಬ ವಿಷಯ ಪ್ರಕಟವಾಗಿದ್ದು ಇಂದಿನಂತೆಯೇ ವಿದ್ಯಾರ್ಥಿಗಳಿಗೆ ಪಾಠದ ಜತೆಗೆ ಪಠ್ಯೇತರ ಚಟುವಟಿಕೆಗಳನ್ನು ಹಮ್ಮಿಕೊಂಡು ಇನ್ನೂ ಹೆಚ್ಚಿನ ಆಸಕ್ತಿಯಿಂದ ಕಲಿಯಲು ವಯಸ್ಕರ ಶಿಕ್ಷಣ ಸಮಿತಿಯು ವಿದ್ಯಾರ್ಥಿಗಳನ್ನು ಪ್ರೇರೇಪಿಸಿತ್ತು ಎಂದು ಹೇಳಬಹುದು.[೮೧]

ದಿನಾಂಕ ೨೧.೦೭.೧೯೪೫ರ ಸಂಚಿಕೆಯಲ್ಲಿ ಬೆಂಗಳೂರಿನಲ್ಲಿ ಕಡಿಮೆ ವಯಸ್ಕರ ತರಗತಿಗಳು ಇರುವ ಬಗ್ಗೆ ಸುದ್ದಿ ಪ್ರಕಟವಾಗಿರುತ್ತದೆ. ಅಲ್ಲಿ 'ಮಹಿಳಾ ಸಮ್ಮೇಳನ' ಎಂಬ ಮಹಿಳೆಯ ಗುಂಪಿದ್ದು ಶ್ರೀಮತಿ ವಿಜಯಬಾಯಿ, ರುಕ್ಕಮ್ಮ, ನರಸಿಂಹಯ್ಯ, ವೆಂಗಡಮ್ಮ ಅವರು ಬೆಂಗಳೂರಿನಲ್ಲಿ ಐದು ಆರು ಕೇಂದ್ರಗಳನ್ನು ತೆರೆದಿದ್ದಾರೆ. ಶ್ರೀಮತಿ ಸಬೇರ ಬೇಗಂ ಎಂಬಾಕೆ ಮುಸ್ಲಿಂ ಮಹಿಳೆಯರಿಗೆ ತರಗತಿಗಳನ್ನು ತೆರೆದಿದ್ದು ಅಲ್ಲಿ ಕೆಲವು ಕನ್ನಡ ಕಲಿಯುವ ವಿದ್ಯಾರ್ಥಿಗಳು ಇದ್ದು ಎಂ.ಆರ್. ಲಕ್ಷಮ್ಮನವರು ಖುದ್ದು ನೋಡಿರುವುದಾಗಿ ಹೇಳಿಕೊಂಡಿದ್ದಾರೆ. ಮಹಮ್ಮದೀಯ ಹೆಂಗಸರು ಕನ್ನಡ ಕಲಿಯಬೇಕು, ಹಿಂದೂ ಸೋದರಿಯರು ಉರ್ದು ಕಲಿಯಬೇಕು, ಒಗ್ಗಟ್ಟು ಈ ರೀತಿ ಬೆಳೆಯಬೇಕು. ಬೆಂಗಳೂರಿನ ಗುಟ್ಟಳ್ಳಿಯಲ್ಲಿ ನೇಕಾರ ಹೆಂಗಸರು ಒಂದೇ ವಠಾರದಲ್ಲಿ ಸ್ನೇಹದಿಂದ ಇದ್ದು ಶ್ರೀಮತಿ ವೆಂಗಡಮ್ಮನವರ ಬಳಿಯಲ್ಲಿ ಅಕ್ಷರ ಕಲಿಯಲು ಆಸೆಪಡುವುದನ್ನು ನೋಡಿ ಎಂ.ಆರ್. ಲಕ್ಷಮ್ಮನವರು ಸಂತೋಷಪಟ್ಟು, ವಿದ್ಯೆ ಕಲಿತ ಮೇಲೆ ಇನ್ನೆಷ್ಟು ಹಸನಾಗಿ ಸಂಸಾರವನ್ನು ಸಾಗಿಸಬಹುದು ಎಂದು ಪ್ರಕಟಿಸಿದ್ದು, ಹೆಣ್ಣುಮಕ್ಕಳ ಶಿಕ್ಷಣಕ್ಕೆ ಉತ್ತೇಜನ ನೀಡುತ್ತಿದ್ದಾರೆಂದು ಇದರಿಂದ ತಿಳಿದುಬರುತ್ತದೆ.[೮೨]

ದಿನಾಂಕ ೨೮.೦೭.೧೯೪೫ರ ಸಂಚಿಕೆಯಲ್ಲಿ ಜುಲೈ ೨೧ನೇ ತಾರೀಖು ನಡೆದ ಜನತಾ ಶಿಕ್ಷಣ ಸಭೆಯಲ್ಲಿ ನಡೆದ ಕಾರ್ಯಕ್ರಮಗಳು, ಚುನಾವಣೆಗಳು ಇವುಗಳ ಬಗ್ಗೆ ವಿವರ ಪ್ರಕಟವಾಗಿದ್ದು, ಬೆಂಗಳೂರಿನ ಡಾಲಿ ಮೆಮೋರಿಯಲ್ ಹಾಲ್‌ನಲ್ಲಿ ಮೈಸೂರು ಸಂಸ್ಥಾನದ ಎಲ್ಲಾ ಭಾಗಗಳಿಂದ ಶಿಕ್ಷಣ ಕೆಲಸಗಾರರು, ಜಿಲ್ಲಾ ಸಮಿತಿಯ ಕಾರ್ಯದರ್ಶಿಗಳು ಗ್ರಾಮಸುಧಾರಕರು, ವಿದ್ಯಾ ಇಲಾಖೆಯ ಅಧಿಕಾರಿಗಳು, ಡಾ. ಕಿನಿಯವರು, ದಿವಾನ'ರು, ಪ್ರಧಾನ ಶಿರೋಮಣಿ ಎನ್. ಮಾಧವರಾಯ್‌ರವರು ಭಾಗವಹಿಸಿದ್ದು, ಸಮಿತಿಯ ಅಧ್ಯಕ್ಷರಾದ ಬಾಲಕೃಷ್ಣಯ್ಯರವರು ಸಮಿತಿಯ ವರದಿಯನ್ನು ಒಪ್ಪಿಸಿದರು. ೪೫,೫೦೦/- ರೂಪಾಯಿಗಳ ವೆಚ್ಚವನ್ನು ಮಾಡಲು ಸಭೆ ಒಪ್ಪಿತು. ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷರಾಗಿ ಶ್ರೀ ಬಾಲಕೃಷ್ಣಯ್ಯರವರು ಮರು ಚುನಾಯಿತರಾದರು. ಪ್ರೊ. ಈಗಲ್‌ಟನ್‌ರವರು ಅಧ್ಯಕ್ಷರಾಗಿ

ಆಯ್ಕೆಯಾದರು. ಮುಂದಿನ ಸಾಲಿನಲ್ಲಿ ೩,೦೦೦ ಶಾಲೆಗಳು ಪುರುಷರಿಗಾಗಿ, ೪೦೦ ಶಾಲೆಗಳನ್ನು ಹೆಣ್ಣುಮಕ್ಕಳಿಗಾಗಿ, ೫೦೦ ಗ್ರಾಮಾಂತರ ಪುಸ್ತಕಭಂಡಾರಗಳನ್ನು ಸ್ಥಾಪಿಸಲು ಸಭೆಯಲ್ಲಿ ನಿರ್ಧರಿಸಲಾಯಿತು. ಯೋಜನೆಯ ರೀತಿ ಕೆಲಸ ವ್ಯವಸ್ಥಿತವಾಗಿ ನಡೆದರೆ ೫೦,೦೦೦ ಜನರನ್ನು ಅಕ್ಷರಸ್ತರನ್ನಾಗಿಮಾಡಿಕೊಳ್ಳುವ ಗುರಿಯನ್ನು ಹಮ್ಮಿಕೊಳ್ಳಲಾಯಿತು. ಡಾ. ಕಿನಿಯವರು ಮತ್ತು ಟಿ. ಮರಿಯಪ್ಪನವರು ಮೊದಲು ಎರಡುವರೆ ತಿಂಗಳು ಓದಲು ಮುಂದೆ ಬರುವಂತೆ ನಂತರ ಬರುವುದಿಲ್ಲ. ಶಿಕ್ಷಕರು ತಮ್ಮ ವಿದ್ಯಾರ್ಥಿಗಳಲ್ಲಿ ಓದುವ ಅಭಿರುಚಿಯನ್ನು ಬೆಳೆಸಬೇಕು. ೫ ತಿಂಗಳ ಕಾಲ ಶ್ರಮಪಟ್ಟರೆ ಕಲಿತ ನಂತರ ಮರೆತುಬಿಡಲು ಅವಕಾಶ ಕೊಡದೆ ಕಥೆ, ಪದ್ಯ, ಪುಸ್ತಕ ಓದುವುದು. ದಿನಪತ್ರಿಕೆ ಓದುವುದು ಅಗತ್ಯ. ಜತೆಗೆ ಹಾಲು ಮತ್ತು ತರಕಾರಿ ಮಾರುವವರಿಗೆ ಸಂಜೆ ಹೊತ್ತು ಶಾಲೆ ಮಾಡುವುದು ಅನುಕೂಲವಲ್ಲ. ರೈತರಿಗೆ ನಾಟಿ ಕಾಲದಲ್ಲಿ ಕೊಯ್ಲು ಕಾಲದಲ್ಲಿ ಶಾಲೆ ಮಾಡುವುದು ಅನುಕೂಲವಿಲ್ಲ. ಶಾಲೆಗಳ ಕೆಲಸ ಕಲಿಯುವವರಿಗೆ ಬಿಡುವಿರುವ ಸಮಯದಲ್ಲಿ ಹೊಂದಾಣಿಕೆಯಿಂದ ಇದ್ದರೆ ಅನುಕೂಲವೆಂದು ಸಭೆಯಲ್ಲಿ ಚರ್ಚಿತವಾಯಿತು. 'ಬೆಳಕು' ಪತ್ರಿಕೆ ಆದಷ್ಟು ಹೆಂಗಸರಲ್ಲಿ ಓದು ಬರಹ ಕಲಿಯಲು ಉತ್ಸಾಹವನ್ನು ಹೆಚ್ಚಿಸಬೇಕು. ನಮ್ಮಲ್ಲಿ ಹೆಂಗಸರು ಮತ್ತು ಹರಿಜನರು ವಿದ್ಯೆಯಲ್ಲಿ ಹಿಂದುಳಿದಿದ್ದು, ಹೆಣ್ಣುಮಕ್ಕಳು ಅಕ್ಷರ ಕಲಿಯದ ಹೊರತು ಅವರ ಮಕ್ಕಳು ಕೂಡ ಶಾಲೆಗೆ ಹೋಗಲಾರವು. ಹರಿಜನರು ವಿದ್ಯೆಕಲಿಯದ ಹೊರತು ಹಿಂದೂ ಜನಾಂಗಕ್ಕೆ ಅಪಯಶಸ್ಸು ತಪ್ಪದು. 'ಬೆಳಕು' ಈ ಕೊರತೆಯನ್ನು ಹೋಗಲಾಡಿಸುವ ಪ್ರಯತ್ನವನ್ನು ಮಾಡಲೆಂದು ಸಭೆಯಲ್ಲಿ ಡಾ. ಕಿನಿಯವರು ಸಲಹೆ ನೀಡಿದರು. ರೈತಮುಖಂಡರಾದ ಪ್ರೊ. ರಂಗರವರು ವಯಸ್ಕರ ಶಿಕ್ಷಣ ಸಮಿತಿಯ ಕಛೇರಿಗೆ ಶ್ರೀ ಹೆಚ್.ಸಿ. ದಾಸಪ್ಪನವರ ಜತೆಗೆ ಆಗಮಿಸಿ ಕೆಲಸಗಳ ಬಗ್ಗೆ ಮೆಚ್ಚುಗೆ ಸೂಚಿಸಿ ಹಳ್ಳಿಗಳಲ್ಲಿ ಕಾಂಗ್ರೆಸ್‌ನ ಮುಖಂಡರನ್ನು ಇತರ ಪ್ರಮುಖರನ್ನು ಸೇರಿಸಿಕೊಳ್ಳುವುದರ ಬಗ್ಗೆ ಹಾಗೂ ಶಾಲೆಯ ಹಲಗೆಯ ಮೇಲೆ ಆ ದಿನದ ಸುದ್ದಿಯ ಸಾರಾಂಶ ಬರೆದು ವಿದ್ಯಾರ್ಥಿಗಳ ಮುಂದೆ ಓದಿದರೆ ಅವರಿಗೆ ಹೊಸ ವಿಚಾರಗಳ ಬಗ್ಗೆ ತಿಳಿದುಕೊಳ್ಳಲು ಸಹಾಯವಾಗುವುದೆಂದು ಸಲಹೆ ನೀಡಿದರು.[೪೩]

ದಿನಾಂಕ ೦೨.೦೯.೧೯೪೫ರಲ್ಲಿ ವಯಸ್ಕರ ಶಿಕ್ಷಣ ಸಮಿತಿಯ ಸಭೆ ನಡೆದು 'ಬೆಳಕು' ಸಂಪಾದಕ ಮಂಡಳಿಯನ್ನು ರಚಿಸಲಾಯಿತು. ಇದರಲ್ಲಿ ಎಂ.ಆರ್. ಲಕ್ಷ್ಮಮ್ಮನವರು ಸಂಪಾದಕರಾಗಿ, ಎಸ್.ವಿ. ಶ್ರೀನಿವಾಸರಾಯರು ವಯಸ್ಕರ ಶಿಕ್ಷಣ ಸಮಿತಿಯ ಕಾರ್ಯದರ್ಶಿಗಳಾಗಿ ಮತ್ತು ನ. ಭದ್ರಯ್ಯನವರು ವಿದ್ಯಾಪೀಠ ಮತ್ತು ಪ್ರಕಟಣ ಶಾಖೆಯ ಕಾರ್ಯದರ್ಶಿಗಳಾಗಿ ಸಂಪಾದಕ ಮಂಡಳಿಯಲ್ಲಿ ಇರತಕ್ಕದ್ದೆಂದು ತೀರ್ಮಾನಿಸಲಾಯಿತು. 'ಬೆಳಕು' ಪತ್ರಿಕೆಯನ್ನು ತರುವಲ್ಲಿ ಸರ್ಕಾರದವರು, ಸಾರ್ವಜನಿಕರು, ಪ್ರಜಾಮುಖಂಡರು, ಪತ್ರಿಕೋದ್ಯಮಿಗಳು ಸಹಾಯ ಸಹಕಾರ ನೀಡಿದ್ದು, ಅವರಿಗೆಲ್ಲ ವಂದಿಸುವ ಮೂಲಕ ಎಂ.ಆರ್. ಲಕ್ಷ್ಮಮ್ಮನವರು ವರದಿಯನ್ನು ಓದಿದರು. ಅಧ್ಯಕ್ಷೀಯ ಭಾಷಣ ಮಾಡಿದ

ಶ್ರೀಯುತ ಅಗರಂ ರಂಗಯ್ಯನವರು ಪತ್ರಿಕೆಗಳು ನಾನಾ ಅಭಿರುಚಿಗಳಿಗೆ ಅನುಸಾರವಾಗಿ ಸುದ್ದಿಯನ್ನು ಒದಗಿಸಬೇಕು. ನಾನಾ ದೃಷ್ಟಿಗಳಿಂದ ಸೇವೆ ಸಲ್ಲಿಸಬೇಕು. 'ಬೆಳಕು' ಪತ್ರಿಕೆಯು ಯುವಜನಾಂಗಕ್ಕೆ ಮತ್ತು ಆಗತಾನೆ ಕಲಿತಿರುವ ನವಸಾಕ್ಷರರಿಗೆ ತುಂಬಾ ಪ್ರಿಯವಾಗಿದ್ದು, ಪತ್ರಿಕೆಯ ಆಶಯ ಈಡೇರಲಿ 'ಬೆಳಕು ಪತ್ರಿಕೆ ಜ್ಞಾನದ ಬೆಳಕನ್ನು ಬೀರಲಿ, ಜನರ ಕಷ್ಟ ನಷ್ಟ ಕುಂದುಕೊರತೆಗಳೆಂಬ ಕತ್ತಲನ್ನು ಹೋಗಲಾಡಿಸಲಿ, ಅವರ ಎಲ್ಲಾ ಬಗೆಯ ರಾಜಕೀಯ, ಸಾಮಾಜಿಕ ಅವಶ್ಯಕತೆಗಳನ್ನು ಬಯಲಿಗೆ ತರಲಿ' ಎಂಬುದಾಗಿ ಮಾತನಾಡಿದರು. 'ಮೈಸೂರು ಪತ್ರಿಕೆ'ಯ ಸಂಪಾದಕರಾದ ಟಿ. ನಾರಾಯಣರವರು ಕೆಲವು ಸಲಹೆಗಳನ್ನು ನೀಡಿದರು.

ಈ ಸಂಚಿಕೆಯಲ್ಲಿ ವಯಸ್ಕರ ಶಿಕ್ಷಣ ಸಮಿತಿಯ ಪುಸ್ತಕಭಂಡಾರಗಳಲ್ಲಿ ದಿನಪತ್ರಿಕೆಗಳನ್ನು, ವಾರ ಪತ್ರಿಕೆಗಳನ್ನು ತರಿಸುತ್ತಿದ್ದು, ಕೆಲವು ಪುಸ್ತಕಭಂಡಾರಗಳಿಗೆ ದಿನಪತ್ರಿಕೆಗಳು ಸರಿಯಾದ ಸಮಯಕ್ಕೆ ತಲುಪುತ್ತಿಲ್ಲವೆಂದು 'ಬೆಳಕು' ಪತ್ರಿಕೆಗೆ ಪತ್ರಗಳು ಬಂದಿದ್ದು, ಕೆಲವು ಹಳ್ಳಿಗಳಿಗೆ ವಾರಕ್ಕೆ ಎರಡು ಬಾರಿ ಮಾತ್ರ ಅಂಚೆ ತಲುಪುವ ಸೌಕರ್ಯವಿದ್ದು, ಅಂತಹ ಹಳ್ಳಿಗಳಲ್ಲಿರುವ ಪುಸ್ತಕಭಂಡಾರವು ದಿನಪತ್ರಿಕೆಗಳನ್ನು ಬಿಟ್ಟು ವಾರಪತ್ರಿಕೆಗಳನ್ನು ಹಾಗೂ ಮಾಸಪತ್ರಿಕೆಗಳನ್ನು ಮಾತ್ರ ತರಿಸಿಕೊಳ್ಳಬೇಕೆಂದು ದಿನಪತ್ರಿಕೆಗಳಿಗೆ ವೃಥಾ ಚಂದಾಹಣ ವ್ಯರ್ಥವಾಗುವುದು ಎಂದು ಕಾರ್ಯದರ್ಶಿಗಳು ಪುಸ್ತಕಭಂಡಾರ ಅಧಿಕಾರಿಗಳಲ್ಲಿ ಮನವಿ ಮಾಡಿಕೊಂಡಿದ್ದರು. ಹಾಸನ ಜಿಲ್ಲಾ ಅಕ್ಷರಪ್ರಚಾರ ಸಮಿತಿಯ ಕಾರ್ಯದರ್ಶಿಗಳಿಗೆ ಹಳೇಬೀಡು ಹೋಬಳಿ ಮತ್ತಿಘಟ್ಟದ ಪುಸ್ತಕಭಂಡಾರ ಅಧಿಕಾರಿ ಮುತ್ತುರಾಯಸ್ವಾಮಿ ಪತ್ರವನ್ನು ಬರೆದಿದ್ದು ಆ ಪತ್ರವು ಪ್ರಕಟವಾಗಿದ್ದು, ವರ್ಷಕ್ಕೆ ೨೪ ರೂ.ಗಳನ್ನು ಪುಸ್ತಕಭಂಡಾರದ ಅಧಿಕಾರಿಯಾಗಿರುವ ಮುತ್ತುರಾಯಸ್ವಾಮಿಗೆ ವೇತನವಾಗಿ ನೀಡುತ್ತಿದ್ದು, ಆತ ತನಗೆ ವೇತನದ ಅವಶ್ಯಕತೆಯಿಲ್ಲವೆಂದು, ವೇತನವಿಲ್ಲದೆಯೇ ಕೆಲಸ ನಿರ್ವಹಿಸುವೆನು ಎಂದು ತಿಳಿಸಿ, ಆ ಹಣಕ್ಕೆ ಇನ್ನಷ್ಟು ಪುಸ್ತಕಗಳನ್ನು ಪುಸ್ತಕಭಂಡಾರಕ್ಕೆ ಕಳುಹಿಸಿಕೊಡುವಂತೆ ಮಾಡಿಕೊಂಡಿರುವ ಮನವಿಯ ಪತ್ರವನ್ನು ಪ್ರಕಟಿಸಲಾಗಿದ್ದು ವಯಸ್ಕರ ಶಿಕ್ಷಣ ಸಮಿತಿಯಲ್ಲಿ ಎಲ್ಲಾ ಅಧಿಕಾರಿವರ್ಗದವರು, ಉಪಾಧ್ಯಾಯರುಗಳು ಸೇವಾ ಮನೋಭಾವದಿಂದ ತಮ್ಮ ಕರ್ತವ್ಯವನ್ನು ತಾವು ನಿರ್ವಹಿಸುತ್ತಿದ್ದರೇ ವಿನಃ ಹಣಕ್ಕಾಗಿ ಕಾರ್ಯ ನಿರ್ವಹಿಸುತ್ತಿರಲಿಲ್ಲವೆಂದು ತಿಳಿದುಬರುತ್ತದೆ.[೮೪]

ದಿನಾಂಕ ೨೮.೦೭.೧೯೪೫ರ ಸಂಚಿಕೆಯಲ್ಲಿ ಮೈಸೂರು ಸಂಸ್ಥಾನದ ಅಕ್ಷರಪ್ರಚಾರ ಸಮಿತಿಯನ್ನು 'ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ' ಎಂದು ಕರೆಯಬೇಕೆಂದು ತೀರ್ಮಾನವಾಯಿತು.

ದಿನಾಂಕ ೧೩.೧೦.೧೯೪೫ರ ಸಂಚಿಕೆಯಲ್ಲಿ ಬೆಂಗಳೂರು ಜಿಲ್ಲೆಯ ಡಾಬಸ್‌ಪೇಟೆ ಮತ್ತು ಈಸೂರಿನಲ್ಲಿ ಶಿಕ್ಷಣ ಶಿಬಿರವು ನಡೆಯಿತು. ವಯಸ್ಕರ ಶಿಕ್ಷಣವನ್ನು ನೀಡುವ ೩೦

ಮಂದಿ ಅಧ್ಯಾಪಕರು ಅಲ್ಲಿ ಹಾಜರಿದ್ದರು. ಸುಂದರರಾಯರು, ವೆಂಕೋಬಾಚಾರ್ಯರು ಮತ್ತು ಹನುಮಂತಾಚಾರ್ಯರು ಶಿಬಿರವನ್ನು ಉದ್ದೇಶಿಸಿ ಮಾತನಾಡಿದರು. ಪಡೂರು ತಾಲ್ಲೂಕಿನ ಪಂಚಾಯಿತಿಯವರು ಪುಸ್ತಕಭಂಡಾರಕ್ಕೆ ದೇಣಿಗೆ ನೀಡಿದ ಬಗ್ಗೆ ಮೂಡಿಗೆರೆ ತಾಲ್ಲೂಕಿನ ಬಿಡರಹಳ್ಳಿಯಲ್ಲಿ ಅಕ್ಷರಪ್ರಚಾರದ ಬಗ್ಗೆ ಕಾಂಗ್ರೆಸ್‌ನ ಮುಖಂಡರು ಮಾತನಾಡಿದ ಬಗ್ಗೆ ಸುದ್ದಿ ಪ್ರಕಟವಾಗಿದೆ.

ದಿನಾಂಕ ೧೩.೧೦.೧೯೪೫ರ ಪ್ರಜಾಪ್ರತಿನಿಧಿ ಸಭೆಯಲ್ಲಿ ಪ್ರಚಾರದ ಬಗ್ಗೆ ಚರ್ಚಿತವಾಗಿರುವ ಬಗ್ಗೆ ೪ ಲಕ್ಷ ಜನರನ್ನು ೫ ವರ್ಷಗಳಲ್ಲಿ ಅಕ್ಷರಸ್ಥರನ್ನಾಗಿ ಮಾಡುವ ಗುರಿಯನ್ನು ಇಟ್ಟುಕೊಂಡ ಬಗ್ಗೆ ಮಾಹಿತಿಯನ್ನು ಕಾಣಬಹುದು.

ದಿನಾಂಕ ೨೦.೧೦.೧೯೪೫ರ ಸಂಚಿಕೆಯಲ್ಲಿ 'ಕನ್ನಡ ನಾಡಿನ ಹಿರಿಯ ಸಾಹಿತಿಗಳಲ್ಲಿ, ಕಿರಿಯ ಲೇಖಕರಲ್ಲಿ, ಗ್ರಾಮಸುಧಾರಕರಲ್ಲಿ, ಉಪಾಧ್ಯಾಯರುಗಳಲ್ಲಿ, ಮತ್ತಿತರ ಮಾನ್ಯರಲ್ಲಿ, ಮಹಿಳೆಯರಲ್ಲಿ ಬಿನ್ನಹ. 'ಬೆಳಕು'ವಿಗೆ ಲೇಖನಗಳನ್ನು ಕೊಡಿ. ವಯಸ್ಕ ಸೋದರ ಸೋದರಿಯರಿಗೆ ತಿಳಿವು ನೀಡಿ' ಎಂಬ ಅರಿಕೆಯನ್ನು ಮಾಡಿಕೊಂಡಿದ್ದು ಬೆಳಕು ಕಾರ್ಯಾಲಯ, ಸರಸ್ವತಿಪುರಂ, ಮೈಸೂರು ಈ ವಿಳಾಸಕ್ಕೆ ಲೇಖನಗಳನ್ನು ಕಳುಹಿಸಿಕೊಡಲು ಸಂಪಾದಕಿಯವರು ಕೋರಿಕೊಂಡಿದ್ದು ಅಕ್ಷರ ಕಲಿಸುವ ಕೈಂಕರ್ಯದಲ್ಲಿ ಎಲ್ಲರನ್ನು ತೊಡಗಿಸಿಕೊಳ್ಳುವ ಕೆಲಸವನ್ನು ಎಂ.ಆರ್. ಲಕ್ಷಮ್ಮನವರು ಮಾಡುತ್ತಿದ್ದರೆಂದು ತಿಳಿದುಬರುತ್ತದೆ.

ದಿನಾಂಕ ೨೪.೧೧.೧೯೪೫ರ ಸಂಚಿಕೆಯಲ್ಲಿ ತೀರ್ಥಹಳ್ಳಿಯ ಕೋಣಂದೂರಿನಲ್ಲಿ, ಚೆನ್ನಗಿರಿಯಲ್ಲಿ, ಹೊಳೆನರಸೀಪುರ ತಾಲ್ಲೂಕಿನ ಗರತಿ ಗ್ರಾಮದಲ್ಲಿ ಪುಸ್ತಕಭಂಡಾರವನ್ನು ತೆರೆಯಲು ಅನೇಕ ಮಹನೀಯರು ದೇಣಿಗೆಯನ್ನು ನೀಡಿದ ಬಗ್ಗೆ ಸುದ್ದಿಯನ್ನು ಕಾಣಬಹುದು. ಈ ಸಂಚಿಕೆಯಲ್ಲಿ ನವೆಂಬರ್ ೧೭ರಂದು 'ಬೆಳಕು' ಪತ್ರಿಕೆಯಿಂದ ದೀಪಾವಳಿ ಸಂಚಿಕೆ ಪ್ರಕಟವಾಗಿದ್ದು, ಅದರಲ್ಲಿ ಅನೇಕ ಲೇಖನಗಳು, ಕಥೆಗಳು, ಲಾವಣಿಗಳು, ಪ್ರಾರ್ಥನೆಗೀತೆಗಳು, ಕೋಲು ಪದಗಳು, ಅತ್ತೆ ಸೊಸೆಯ ಹಳ್ಳಿಯ ಹಾಡುಗಳು, ಅನೇಕ ವಿಚಾರಪೂರಿತ ಲೇಖನಗಳು ಇದ್ದು ಎಲ್ಲಾ ಲೇಖಕರಿಗೆ ವಂದನೆಗಳನ್ನು ತಿಳಿಸಿ, ಈ ಸಂಚಿಕೆಯನ್ನು ಓದುಗರು ಓದಿ ಸಲಹೆ ಸೂಚನೆಗಳನ್ನು ನೀಡಬೇಕೆಂದು ಸಂಪಾದಕರಾದ ಲಕ್ಷಮ್ಮನವರು ಕೋರಿಕೊಂಡ ಬಗ್ಗೆ ಪ್ರಕಟವಾಗಿದೆ.

ದಿನಾಂಕ ೧೨.೦೧.೧೯೪೬ರ ಸಂಚಿಕೆಯಲ್ಲಿ ಅರಕಲಗೂಡು ತಾಲ್ಲೂಕಿನ ಬೂದನೂರು ಗ್ರಾಮದ ಹಾಗೂ ತೀರ್ಥಹಳ್ಳಿ ತಾಲ್ಲೂಕು ಅಂಬುತೀರ್ಥದ ಶ್ರೀ ರಾಮೇಶ್ವರದೇವರ ಗುಡಿಯಲ್ಲಿ ವಯಸ್ಕರ ಶಿಕ್ಷಣ ಸಮಿತಿಯ ಪುಸ್ತಕಭಂಡಾರ ಹಾಗೂ ವಾಚನಾಲಯವನ್ನು ಪ್ರಾರಂಭಿಸಿದ ಬಗ್ಗೆ ಸುದ್ದಿಯನ್ನು ಪ್ರಕಟಿಸಲಾಗಿದೆ. ಈ ಸಂಚಿಕೆಯಲ್ಲಿ

ಬೆಂಗಳೂರು ದಕ್ಷಿಣ ತಾಲ್ಲೂಕು, ಬೇಗೂರು ಹೋಬಳಿ, ಚಿಕ್ಕತೋಗೂರು ಗ್ರಾಮದ ವಯಸ್ಕರ ಶಿಕ್ಷಣ ಶಾಲೆಯ ನಾಗಪ್ಪ ಎಂಬುವವರು ತಂದೆಯವರಿಗೆ ಪತ್ರವನ್ನು ಬರೆದಿದ್ದು ಆ ಪತ್ರವನ್ನು 'ಬೆಳಕು' ಪತ್ರಿಕೆಯಲ್ಲಿ ಪ್ರಕಟಿಸಲು ಕೋರಿರುತ್ತಾರೆ. ಪತ್ರದಲ್ಲಿ ತಂದೆಯಲ್ಲಿ ಕ್ಷೇಮಸಮಾಚಾರವನ್ನು ವಿಚಾರಿಸಿ ವಯಸ್ಕರ ಶಿಕ್ಷಣ ಶಾಲೆಯಲ್ಲಿ ಕಲಿತು ಓದಲು ಬರೆಯಲು ತಿಳಿದುಕೊಂಡ ಬಗ್ಗೆ, ವಯಸ್ಕರ ಶಾಲೆ ಸಮಿತಿಯ ಎಲ್ಲರಿಗೂ ವಂದನೆಗಳನ್ನು ತಿಳಿಸುವ ಸಾರಾಂಶದ ಪತ್ರವಾಗಿದ್ದು, ತಾನು ಪತ್ರ ಬರೆಯಲು ಸಮರ್ಥ ಎಂಬುದನ್ನು ನಿರೂಪಿಸಿದ ಸುದ್ದಿ 'ಬೆಳಕು' ಸಂಚಿಕೆಯ ಹೆಮ್ಮೆಯ ಹೆಗ್ಗಳಿಕೆಯಾಗಿದೆ.

ದಿನಾಂಕ ೧೯.೦೧.೧೯೪೬ರ ಸಂಚಿಕೆಯ ಮುಖಪುಟದಲ್ಲಿ ತುಮಕೂರು ಜಿಲ್ಲೆಯ ಕೊರಟಗೆರೆ ತಾಲ್ಲೂಕಿನ ರಾತ್ರಿಪಾಠಶಾಲೆಯಲ್ಲಿ ಕಲಿತ ತಿಪ್ಪೇನಾಗಣ್ಣನ ಪತ್ರವನ್ನು 'ನೂತನ ಅಕ್ಷರಸ್ಥನ ವಾಣಿ' ಎಂಬ ಶೀರ್ಷಿಕೆಯಡಿಯಲ್ಲಿ ಪ್ರಕಟಿಸಿದ್ದು, ಮೈಸೂರು ದಿವಾನರು ತಮ್ಮ ಊರಿಗೆ ಭೇಟಿ ನೀಡಿದ್ದ ಬಗ್ಗೆ, ಅವರ ಬಳಿಯಲ್ಲಿ ಅನೇಕರು ತಮ್ಮ ಅಹವಾಲುಗಳನ್ನು ಸಲ್ಲಿಸುತ್ತಿದ್ದ ಬಗ್ಗೆ ಹಾಗೂ ತಾನು ಈ ಮೊದಲೇ ವಿದ್ಯೆ ಕಲಿತಿದ್ದರೆ, ತಾನೂ ಕೂಡ ದಿವಾನರೊಂದಿಗೆ ಮಾತನಾಡಬಹುದಿತ್ತು ಎಂದು ಆಲೋಚಿಸಿದ ಬಗ್ಗೆ, ಊರಿನ ವಿದ್ಯಾವಂತರು ಬಳಸಿದ ಎಲೆಕ್ಟ್ರಿಸಿಟಿ, ರೇಡಿಯೋ, ಟೆಲಿಗ್ರಾಫ್ ಮುಂತಾದ ಪದಗಳ ಅರ್ಥ ತಿಳಿಯದೆ ಕಕ್ಕಾಬಿಕ್ಕಿಯಾದ ಬಗ್ಗೆ, ನನ್ನಂತೆ ಯಾರು ಆಗುವುದು ಬೇಡ ಇನ್ನಾದರೂ ಎಚ್ಚೆತ್ತುಕೊಳ್ಳಿ, ಅಕ್ಷರ ಕಲಿಯಿರಿ, ವಿಚಾರಗಳನ್ನು ತಿಳಿದುಕೊಳ್ಳಿ ಎಂಬ ಸಾರಾಂಶದ ಪತ್ರವನ್ನು ಪ್ರಕಟಿಸಿದ್ದು, ಅಕ್ಷರದ ಮಹತ್ವ, ವಿದ್ಯೆಯ ಅವಶ್ಯಕತೆ ಮತ್ತು ಈ ಹಿಂದೆ ವಿದ್ಯೆ ಕಲಿಯದೆ ಇದ್ದ ಜನರಿಗೆ ವಯಸ್ಕರ ಶಿಕ್ಷಣ ತರಗತಿಗೆ ಸೇರಿ ವಿದ್ಯೆ ಕಲಿಯಲು ಪ್ರೇರೇಪಿಸುವ ಈ ಪತ್ರ ಅಂದಿನ ಮೈಸೂರು ಸಂಸ್ಥಾನದಲ್ಲಿನ ಅನಕ್ಷರಸ್ಥನ ಅಳಲು ಮತ್ತು ವಯಸ್ಕರ ಶಿಕ್ಷಣ ಶಾಲೆಯ ಮಹತ್ಕಾರ್ಯದ ಪ್ರತಿಬಿಂಬವಾಗಿದೆ.[೮೫]

ದಿನಾಂಕ ೨೬.೦೧.೧೯೪೬ರ ಸಂಚಿಕೆಯಲ್ಲಿ ಬೇಲೂರು ತಾಲ್ಲೂಕು ಹಳೇಬೀಡು ಹೋಬಳಿ ತಟ್ಟಿಹಳ್ಳಿ ಗ್ರಾಮದ ವಯಸ್ಕರ ಶಿಕ್ಷಣದ ವಿದ್ಯಾರ್ಥಿ ಚಿಕ್ಕನಾಯಕ ಎಂದು ಪತ್ರವನ್ನು ಬರೆದಿದ್ದು, ವಾರದ ಭವಿಷ್ಯವನ್ನು 'ಬೆಳಕು' ಪತ್ರಿಕೆಯಲ್ಲಿ ಹಾಕಬೇಕೆಂದು ಮನವಿ ಮಾಡಿಕೊಂಡಿರುವ ಪತ್ರ ಪ್ರಕಟವಾಗಿದ್ದು, ಅದಕ್ಕೆ ಉತ್ತರವಾಗಿ ಸಂಪಾದಕರಾದ ಎಂ.ಆರ್. ಲಕ್ಷ್ಮಮ್ಮನವರು ವಿದ್ಯೆ ಕಲಿತದ್ದಕ್ಕೆ ಸಂತೋಷವನ್ನು ವ್ಯಕ್ತಪಡಿಸಿ, ನಿಮ್ಮ ಊರಿನ ಜನರು, ಹೆಣ್ಣುಮಕ್ಕಳು, ಇನ್ನಷ್ಟು ಜನ ವಯಸ್ಕರ ಶಿಕ್ಷಣ ಶಾಲೆಯನ್ನು ಸೇರಿ ಅಕ್ಷರ ಕಲಿಯುವಂತೆ ಪ್ರೇರೇಪಿಸಿ, ವಾರದ ಭವಿಷ್ಯದ ಬಗ್ಗೆ ನಂಬಿಕೆ ಇಲ್ಲದಿರುವ ಬಗ್ಗೆ ಹಾಗೂ ವಾರದ ಭವಿಷ್ಯವನ್ನು ಓದಿ ಚೆನ್ನಾಗಿದ್ದರೆ ಸಂತೋಷಪಟ್ಟು, ಕೆಟ್ಟದ್ದಾಗಿದ್ದರೆ ವಾರವೆಲ್ಲ ಆಲೋಚಿಸಿ ಮನಸ್ಸಿನ ಮೇಲೆ ಪರಿಣಾಮ ಬೀರಿ ಕೆಲಸ ಮಾಡಲು ತೊಂದರೆಯಾಗುತ್ತದೆ. ಆದ್ದರಿಂದ ಕಷ್ಟ ಸುಖ ಎಲ್ಲದರ

ಹೊಣೆಯನ್ನು ದೇವರ ಮೇಲೆ ಹಾಕಿ ನಮ್ಮ ಧರ್ಮವನ್ನು ಪಾಲಿಸಬೇಕೆಂದು ಉತ್ತರಿಸುತ್ತಾರೆ. ಈ ಉತ್ತರದಿಂದ ಎಂ.ಆರ್. ಲಕ್ಷಮ್ಮನವರು ಆಧುನಿಕ ಮನೋಭಾವದವರು ವಿಚಾರವಾದಿಗಳು ವೈಜ್ಞಾನಿಕವಾಗಿ ಚಿಂತನೆಯನ್ನು ಮಾಡುವ ವ್ಯಕ್ತಿತ್ವವನ್ನು ಉಳ್ಳವರೆ ವಿನಹ ಜನತೆಯಲ್ಲಿ ಮೌಢ್ಯತೆಯನ್ನು ಬಿತ್ತುವ ಮತ್ತು ಭವಿಷ್ಯಗಳ ಚಿಂತನೆಯಲ್ಲಿ ತೊಡಗಿ ದೈನಂದಿನ ಜೀವನ ಕೆಲಸಕಾರ್ಯಗಳನ್ನು ಮರೆಯುವ ಪ್ರವೃತ್ತಿಯನ್ನು ಖಂಡಿಸುವ ವ್ಯಕ್ತಿತ್ವವನ್ನು ಉಳ್ಳವರಾಗಿದ್ದರು ಎನ್ನಬಹುದು. ಸರಗೂರಿನಲ್ಲಿ ೨೦ ಮಂದಿ ವಿದ್ಯಾರ್ಥಿಗಳು ವಯಸ್ಕರ ಶಿಕ್ಷಣ ತರಗತಿಯಲ್ಲಿ ಕಲಿಯುತ್ತಿದ್ದು, ಅದರಲ್ಲಿ ೧೮ ಮಂದಿ ಮುಸಲ್ಮಾನರಾಗಿದ್ದು ಅಲ್ಲಿನ ಉಪಾಧ್ಯಾಯರಾದ ಫಕೀರ ಷರೀಫ್‌ರವರು ಬಹಳ ನಿಷ್ಠೆಯಿಂದ ಕನ್ನಡವನ್ನು ಕಲಿಸುತ್ತಿದ್ದಾರೆ. ಮನೆ ಮಾತು ಬೇರೆಯಾಗಿದ್ದರೂ ನಾಡಭಾಷೆಯಾದ ಕನ್ನಡವನ್ನು ಕಲಿಯುವ ಉತ್ಸಾಹವನ್ನು ಅಲ್ಲಿನ ವಿದ್ಯಾರ್ಥಿಗಳು ತೋರಿಸುತ್ತಿರುವ ಬಗ್ಗೆ ಸುದ್ದಿ ಪ್ರಕಟವಾಗಿದೆ.[೬]

ದಿನಾಂಕ ೦೨.೦೨.೧೯೪೬ರ ಸಂಚಿಕೆಯಲ್ಲಿ 'ಬೆಳಕು' ಪತ್ರಿಕೆಯ ಕಾರ್ಯಾಲಯ ಬೇರೆ ಕಟ್ಟಡದಲ್ಲಿ ಪ್ರಾರಂಭವಾದ ಬಗ್ಗೆ ಅಲ್ಲಿ ನಡೆದ ಸಮಾರಂಭದ ವಿವರವನ್ನು ಕಾಣಬಹುದು. 'ಬೆಳಕು' ಪತ್ರಿಕೆಯ ಕಾರ್ಯಾಲಯವು ವೈಸರಾಯಿ ರಸ್ತೆಯ ವೇದಗ್ರಹದಲ್ಲಿ ಪ್ರಾರಂಭವಾಗಿದ್ದು, ಅಲ್ಲೇ ಕೇಂದ್ರ ಪುಸ್ತಕಭಂಡಾರ ಮತ್ತು ಕಛೇರಿಯನ್ನು ಪ್ರಾರಂಭಿಸಿದ್ದು, ಸಮಾರಂಭದ ಅಧ್ಯಕ್ಷತೆಯನ್ನು 'ಸಾಧ್ವಿ' ಪತ್ರಿಕೆಯ ಸಂಪಾದಕರಾದ ಆಗರಂ ರಂಗಯ್ಯನವರು ವಹಿಸಿದ್ದರು. ಬೆಳಕು ಪತ್ರಿಕೆಯ ಸಂಪಾದಕಿ ಶ್ರೀಮತಿ ಎಂ.ಆರ್. ಲಕ್ಷಮ್ಮನವರು ಬೆಳಕು ಪತ್ರಿಕೆಯ ವರದಿಯನ್ನು ಓದಿದರು. 'ಬೆಳಕು' ಪತ್ರಿಕೆಯ ೫೦೦೦ ಪ್ರತಿಗಳು ಅಚ್ಚಾಗುತ್ತಿದ್ದು, ಈ ಕೆಳಗಿನ ಉದ್ದೇಶಗಳನ್ನು ಪತ್ರಿಕೆ ಹಮ್ಮಿಕೊಂಡಿದ್ದು ಅದನ್ನು ಸಾಧಿಸಲು ಸಂಪಾದಕಿ ಶ್ರಮಿಸುತ್ತಿದ್ದರು.

೧) ದೇಶವಿದೇಶಗಳಲ್ಲಿ ನಡೆಯುವ ಕೆಲಸಕಾರ್ಯ ಮತ್ತು ಘಟನೆಗಳನ್ನು ಜನಸಾಮಾನ್ಯರಿಗೆ ತಿಳಿಯುವಂತೆ ಸರಳವಾಗಿ ಬರೆಯುವುದು.

೨) ರಾಜಕೀಯವೆಂದರೇನು? ಎಂಬುದು ಕಷ್ಟವಾದರೂ ತಿಳಿಯತಕ್ಕ ವಿಚಾರವಾಗಿದ್ದು, ಪಕ್ಷಪಾತವಿಲ್ಲದೆ ರಾಜಕೀಯ ಶಿಕ್ಷಣವನ್ನು ಜನಸಾಮಾನ್ಯರಿಗೆ ದೊರಕಿಸುವುದು.

೩) ನಮ್ಮ ಸಮಾಜದಲ್ಲಿ ಎಷ್ಟೋ ಕೆಡಕುಗಳಿದ್ದು ಅವುಗಳ ವಿಚಾರಣೆಗೆ ಜನರ ಮನಸ್ಸನ್ನು ಒಲಿಸುವುದು.

೪) ಹಣದ ಪ್ರಪಂಚಕ್ಕೆ ಸಂಬಂಧಪಟ್ಟ ಎಷ್ಟೋ ಅಂಶಗಳನ್ನು ಜನರ ತಿಳುವಳಿಕೆಗಾಗಿ ನೀಡುವುದು. ಹಣಕಾಸು ಬದುಕಿನ ಜೀವಾಳ, ಹಣಕಾಸನ್ನು ಸಂಪಾದಿಸುವ ಮತ್ತು ಇದ್ದ ಹಣಕಾಸನ್ನು ಹೆಚ್ಚಿಸಿಕೊಳ್ಳುವ ತಿಳುವಳಿಕೆ ಕೊಟ್ಟರೆ ಅದು ಕೆಲವರಿಗೆ ಉಪಕಾರವಾಗಬಹುದು.

೫) ಪ್ರಪಂಚದ ಹಣಕಾಸಿನ ವ್ಯವಸ್ಥೆಯಲ್ಲಿ ಮೈಸೂರು ಹೇಗೆ ಭಾಗಿಯಾಗಿದೆ ಎಂಬುದನ್ನು ಜನರಿಗೆ ಮನವರಿಕೆ ಮಾಡುವುದು.

೬) ಸರ್ಕಾರಕ್ಕೆ ಮತ್ತು ಜನಸಾಮಾನ್ಯರಿಗೂ ಇರುವ ಸಂಬಂಧವನ್ನು ಬೆಳೆಸುವುದು ಸರ್ಕಾರದ ಉದ್ದೇಶಗಳನ್ನು ಜನರಿಗೆ, ಜನರ ಕಷ್ಟನಿಷ್ಠುರಗಳನ್ನು ಸರ್ಕಾರಕ್ಕೆ ತಿಳಿಸಲು ಸಹಕಾರಿಯಾಗುವುದು. ಈ ಉದ್ದೇಶಗಳನ್ನು ಒಂದೊಂದಾಗಿ ಕ್ರಮಕ್ರಮವಾಗಿ ಸಾಧಿಸಲಾಗುತ್ತಿದೆ.

'ಬೆಳಕು' ಪತ್ರಿಕೆ ೩೦ ರಿಂದ ೩೨,೦೦೦ ಪ್ರತಿಗಳು ಪ್ರಕಟವಾಗಬೇಕೆಂದು ನಮ್ಮ ಆಶಯವಾಗಿದ್ದು, ಹೊಸದಾಗಿ ಕಲಿತವರಲ್ಲಿ ಹಾಗೂ ಪ್ರತಿ ಹಳ್ಳಿಗೊಂದರಂತೆ ಹಂಚಿಕೆಯಾಗಬೇಕು. ಪ್ರತಿ ವಯಸ್ಕರ ಶಿಕ್ಷಣ ಶಾಲೆಗಳಿಗೆ ಒಂದೊಂದು ಪ್ರತಿಯನ್ನು ಉಚಿತವಾಗಿ ನೀಡಲಾಗುತ್ತಿದ್ದು, ಇತರರಿಗೆ ೨ ರೂ.ಗಳನ್ನು ನೀಡಿ ಚಂದದಾರರಾಗಲು ತೀರ್ಮಾನಿಸಲಾಯಿತು. ಎಂ.ಆರ್. ಲಕ್ಷಮ್ಮರವರು ಹೆಚ್ಚು ಹೆಚ್ಚು ಜನ ವಿದ್ಯಾವಂತರಾಗಿ ದೇಶ–ವಿದೇಶಗಳ ವಿಷಯಗಳನ್ನು ತಿಳಿದುಕೊಂಡು ಪತ್ರಿಕೆಯನ್ನು ಓದುವ ಹವ್ಯಾಸವನ್ನು ಬೆಳೆಸಿಕೊಳ್ಳಬೇಕೆನ್ನುವುದು ಅವರ ಆಶಯವಾಗಿತ್ತು.[೮೭]

ದಿನಾಂಕ ೦೯.೦೨.೧೯೪೬ರ ಸಂಚಿಕೆಯಲ್ಲಿ ವಯಸ್ಕರ ಶಿಕ್ಷಣ ಸಮಿತಿಯ ಸಭೆ ಸೇರಿದ್ದ ಬಗ್ಗೆ ಅಲ್ಲಿ ಕೈಗೊಂಡ ತೀರ್ಮಾನಗಳನ್ನು ಪ್ರಕಟಿಸಿದ್ದು ದಿನಾಂಕ ೨೫.೦೧.೧೯೪೫ರ ತಾರೀಖಿನ ಶುಕ್ರವಾರದಂದು ಸುಮಾರು ೫೦ ಜನ ಸದಸ್ಯರು ಸಭೆ ಸೇರಿ ಈ ಕೆಳಕಂಡ ತೀರ್ಮಾನಗಳನ್ನು ಕೈಗೊಳ್ಳಲಾಯಿತು. ಸಂಜೆ ೪ ಗಂಟೆಗೆ ಪ್ರಾರಂಭವಾಗಿ ಮೊದಲು ದಿವಂಗತ ಬಿ.ಎಂ.ಶ್ರೀ ರವರಿಗೆ ಸಂತಾಪ ಸೂಚಿಸುವ ನಿರ್ಣಯವನ್ನು ಕೈಗೊಳ್ಳಲಾಯಿತು. ಶ್ರೀಕಂಠಯ್ಯನವರು ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷರಾಗಿದ್ದು, ಅವರನ್ನು ನೆನೆಯುತ್ತ ಅಳುತ್ತ ಕೂತರೆ ಸಾಲದು, ಅಂತಹ ಮಹನೀಯರು ಹಾಕಿಕೊಟ್ಟ ದಾರಿಯಲ್ಲಿ ನಡೆಯಬೇಕು. ಅವರಿಂದ ಹಚ್ಚಲ್ಪಟ್ಟ ಬೆಳಕು ಯಾವಾಗಲು ಉರಿಯುವಂತೆ ಮಾಡಬೇಕೆಂದು ಪಣತೊಟ್ಟರು. ಈ ರೀತಿ ಹಚ್ಚಿದ ಬೆಳಕು ಹಳ್ಳಿ ಹಳ್ಳಿಗಳಿಗೂ ತಲುಪುವ ಕಾರ್ಯವನ್ನು ಸಾಕಾರಗೊಳಿಸಲು ಪ್ರತಿಜ್ಞೆ ಮಾಡಲಾಯಿತು.

೧೯೪೫ ರಲ್ಲಿ ೪,೫೩೦ ರಲ್ಲಿ ವಯಸ್ಕರ ಶಿಕ್ಷಣ ಶಾಲೆಗಳನ್ನು ತೆರೆಯಲಾಗಿದ್ದು, ೮೯, ೮೯೬ ವಯಸ್ಕರು ಶಾಲೆಯಲ್ಲಿ ಶಿಕ್ಷಣ ಪಡೆದಿದ್ದು ಕಳೆದ ವರ್ಷ ೨,೨೦೪ ರಾತ್ರಿ ಶಾಲೆಗಳಿದ್ದವು. ಕಳೆದ ವರ್ಷ ೩೯೫ ಪುಸ್ತಕ ಭಂಡಾರಗಳಿದ್ದು ಪ್ರಸ್ತುತ ೬೪೩ ಪುಸ್ತಕಭಂಡಾರಗಳು ಹೆಚ್ಚಿದ್ದು, ಇನ್ನೂ ೩೦೦ ಪುಸ್ತಕ ಭಂಡಾರಗಳನ್ನು ತೆರೆಯಲಾಗುವುದೆಂದು ಸಭೆಯಲ್ಲಿ ಚರ್ಚಿಸಲಾಯಿತು. ಕ್ಲೋಸ್‌ಪೇಟೆಯ ಮಾದಯ್ಯ ಗೌಡರು 'ಬೆಳಕು' ಪತ್ರಿಕೆ ೫,೦೦೦ ಪ್ರತಿಯಿಂದ ೨೫,೦೦೦ ಪ್ರತಿಯವರೆಗೆ ಅಚ್ಚಾಗಬೇಕೆಂದು

ಹೇಳಿದರು. ನೇರಳೆ ಮಾದಯ್ಯನವರು ಹರಿಜನರಿಗೆ ಇನ್ನೂ ಹೆಚ್ಚಾಗಿ ತರಗತಿಗಳನ್ನು ತೆರೆಯಬೇಕೆಂದು ಸಭೆಯಲ್ಲಿ ತೀರ್ಮಾನಮಾಡಿದರು.

೧೯೪೬-೪೭ನೇ ಸಾಲಿನಲ್ಲಿ ವಯಸ್ಕರ ಶಿಕ್ಷಣ ಸಮಿತಿಯ ಕಾರ್ಯಕಲಾಪಗಳ ಬಗ್ಗೆ ಚರ್ಚಿಸಲಾಯಿತು. ೬,೦೦೦ ರಾತ್ರಿ ಶಾಲೆಗಳನ್ನು, ೬೦೦ ಮಹಿಳೆಯರಿಗಾಗಿ ರಾತ್ರಿ ಶಾಲೆಗಳನ್ನು ತೆರೆಯಲು ೪,೪೦೦ ತರಗತಿಗಳಿಗೆ ವಿದ್ಯಾಮಂದಿರಗಳನ್ನು ನೀಡಬೇಕೆಂದು, ೧೨,೦೦೦ ಪುಸ್ತಕಭಂಡಾರಗಳ ಜತೆಗೆ ಮತ್ತು ೮೦೦ ಪುಸ್ತಕ ಭಂಡಾರಗಳನ್ನು ತೆರೆಯಬೇಕೆಂದು, ನಾಲ್ಕು ಕೇಂದ್ರ ಪುಸ್ತಕಭಂಡಾರಗಳ'ನ್ನು, ಮೂರು ವಿದ್ಯಾಪೀಠಗಳನ್ನು ಸ್ಥಾಪಿಸಬೇಕೆಂದು ಯೋಜನೆಗಳನ್ನು ಹಮ್ಮಿಕೊಂಡು ಇದಕ್ಕೆ ತಗಲುವ ಅಂದಾಜು ವೆಚ್ಚ ೭,೯೦,೦೦೦/- ರೂ.ಗಳೆಂದು ಅಂದಾಜು ಮಾಡಿದರು. ಉಪಾಧ್ಯಾಯರ ಸಂಭಾವನೆಯನ್ನು ಹೆಚ್ಚಿಸುವ ಬಗ್ಗೆ ತೀರ್ಮಾನಿಸಲಾಯಿತು. ಪ್ರತಿ ಪುರುಷನನ್ನು ಅಕ್ಷರಸ್ಥರನ್ನಾಗಿಸಿದರೆ ಆ ಉಪಾಧ್ಯಾಯರಿಗೆ ಮೂರು ರೂ. ಸಂಭಾವನೆ, ಹಾಗೂ ಒಬ್ಬ ಮಹಿಳೆಯನ್ನು ಅಕ್ಷರಸ್ಥರನ್ನಾಗಿ ಮಾಡಿದರೆ ನಾಲ್ಕು ರೂ. ಸಂಭಾವನೆಯನ್ನು ಉಪಾಧ್ಯಾಯರಿಗೆ ನೀಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಇದಕ್ಕೆ ಬೇಕಾಗುವ ಹಣ ಒಂದು ಲಕ್ಷ ರೂಪಾಯಿಗಳನ್ನು ಸರ್ಕಾರದಿಂದ ಪಡೆದುಕೊಳ್ಳುವುದೆಂದು ತೀರ್ಮಾನಿಸಲಾಯಿತು. ಇದೇ ಸಂಚಿಕೆಯಲ್ಲಿ ಜನವರಿ ೧೯ನೇ ತಾರೀಖು ಚಿತ್ರದುರ್ಗ ಜಿಲ್ಲೆಯ ಅಕ್ಷರಪ್ರಚಾರಕರ ಸಮ್ಮೇಳನ ನಡೆದ ಬಗ್ಗೆ ಸುದ್ದಿ ಪ್ರಕಟವಾಗಿದ್ದು ಒಟ್ಟು ೫೭೧ ಮಹಿಳೆಯರು ಅಕ್ಷರಸ್ಥರಾಗಿ ಪ್ರಶಸ್ತಿ ಪತ್ರವನ್ನು ಪಡೆದರು. ಆ ಸಮಾರಂಭದಲ್ಲಿ ಮೈಸೂರು ಸಂಸ್ಥಾನದ ವಿದ್ಯಾಮಂತ್ರಿಯವರ ರಾಯನ್‌ರವರ ಪತ್ನಿ ಹಾಗೂ ಶ್ರೀಮತಿ ಅಮೃತಕೌರರವರು ಭಾಗವಹಿಸಿ ವಯಸ್ಕರ ಶಿಕ್ಷಣ ಸಮಿತಿಯ ಕಾರ್ಯವೈಖರಿಗೆ ಮೆಚ್ಚುಗೆ ಸೂಚಿಸಿ, ಸರ್ಕಾರದವರು ಹೆಣ್ಣುಮಕ್ಕಳ ಶಿಕ್ಷಣಕ್ಕಾಗಿ ಹೆಚ್ಚು ಹಣವನ್ನು ವೆಚ್ಚ ಮಾಡುತ್ತಿರುವ ಬಗ್ಗೆ ಪ್ರಶಂಸಿಸಿ, ಪ್ರತಿಯೊಬ್ಬ ಮಹಿಳೆಯನ್ನು ವಿದ್ಯಾವಂತೆಯಾಗಿ ಮಾಡುವುದು ಉತ್ತಮ. ಮೂರು ವರ್ಷಗಳಲ್ಲಿ ೬೦,೦೦೦ ವಯಸ್ಕರಿಗೆ ಓದು ಬರಹ ಕಲಿಸಿರುವ ವಯಸ್ಕರ ಶಿಕ್ಷಣ ಸಮಿತಿಯನ್ನು ಅಭಿನಂದಿಸಿರುವ ಬಗ್ಗೆ ಸುದ್ಧಿ ಪ್ರಕಟವಾಗಿದೆ.

ದಿನಾಂಕ ೦೨.೦೩.೧೯೪೬ರ ಸಂಚಿಕೆಯಲ್ಲಿ ಎಂ.ಆರ್. ಲಕ್ಷಮ್ಮನವರು ದಾವಣಗೆರೆಯ ಬೂಸಪೇಟೆಯಲ್ಲಿರುವ ವಯಸ್ಕರ ಶಿಕ್ಷಣ ತರಗತಿಗೆ ಭೇಟಿ ನೀಡಿರುವ ಬಗ್ಗೆ ಅಲ್ಲಿನ ಸ್ಥಿತಿಗತಿಗಳ ಬಗ್ಗೆ ಲೇಖನವನ್ನು ಬರೆದಿದ್ದು, ಇವರು ತರಗತಿಗೆ ಹೋದಾಗ ೪೦ ಜನ ವಯಸ್ಕರ ಶಿಕ್ಷಣ ತರಗತಿಯ ಹೆಣ್ಣುಮಕ್ಕಳು ಇವರನ್ನು ಸ್ವಾಗತಿಸಿದರು. ಎಂ.ಆರ್. ಲಕ್ಷಮ್ಮನವರು ನಮ್ಮ ದೇಶ ಯಾವುದು? ನಮ್ಮ ನಾಡು ಯಾವುದು? ಎಂಬ ಪ್ರಶ್ನೆಗಳನ್ನು ಕೇಳಿದಾಗ, ಕೆಲವರು ಮಾತ್ರ ಭಾರತದೇಶ, ಕನ್ನಡನಾಡು ಎಂದು ಉತ್ತರಿಸಿದರು.

ಮೈಸೂರಿನಿಂದ ತರಗತಿಯನ್ನು ನೋಡಲು ತೆರಳಿದ ಇವರನ್ನು ಕಂಡು ಸಂತೋಷಿಸಿದ ಅವರುಗಳು ವಿದ್ಯೆಯನ್ನು ಕಲಿಯುತ್ತಿರುವ ಬಗ್ಗೆ ಹೆಮ್ಮೆಯ ಭಾವನೆಯನ್ನು ಹೊಂದಿದರು. ಹೆಣ್ಣುಮಕ್ಕಳ ತರಗತಿಗೆ ಅನೇಕ ಅಡ್ಡಿ ಆತಂಕಗಳು ಇರುವ ಬಗ್ಗೆ ದಾಖಲಿಸಿರುವ ಎಂ.ಆರ್. ಲಕ್ಷಮ್ಮನವರು ತುಂಟ ಹುಡುಗರು ಕಲ್ಲು ಎಸೆಯುತ್ತಿದ್ದ ಬಗ್ಗೆ, ವಯಸ್ಕರು ತರಗತಿಗೆ ಹೋಗುವಾಗ ಚಿಕ್ಕಮಕ್ಕಳು ಶಾಲೆಗೆ ಹೋಗುತ್ತಿದ್ದಾರೆಂದು ಅವರನ್ನು ಕುಚೇಷ್ಟೆ ಮಾಡಿದರೂ ಅದಕ್ಕೆಲ್ಲ ಎದೆಗುಂದದೆ ಅದೇ ಸ್ಥಳದಲ್ಲಿಯೇ ಪಾಠ ಕಲಿಯಲು ಹಟಹಿಡಿದ ಹೆಣ್ಣುಮಕ್ಕಳು ಮತ್ತು ಅದರಲ್ಲಿ ಒಬ್ಬ ಗರ್ಭಿಣಿ ಹೆಣ್ಣುಮಗಳು ಮಗು ಹುಟ್ಟುವ ಮೊದಲು ಅಕ್ಷರ ಕಲಿಯಬೇಕೆಂಬ ಆಕಾಂಕ್ಷೆಯನ್ನು ಹೊಂದಿರುವ ಬಗ್ಗೆ ದಾಖಲಿಸಿರುವ ಎಂ.ಆರ್. ಲಕ್ಷಮ್ಮನವರು ದೇಶವನ್ನು ಕಾಯಬಲ್ಲ ಸೌಭಾಗ್ಯವನ್ನು ಹೆಂಗಸರು ಹೊಂದಿದ್ದು, ನಾವು ಹೀಗೆ ಮುನ್ನಡೆದರೆ ಯಾವ ಮಹಾಕಾರ್ಯವನ್ನಾದರೂ ಸಾಧಿಸಬಹುದೆಂದು ಹೇಳಿಕೊಂಡಿದ್ದಾರೆ. ಶಿಕ್ಷಣದ ಜತೆಜತೆಗೆ ಮಹಿಳಾ ಚಿಂತನೆಗಳನ್ನು ಒಳಗೊಂಡ ಎಂ.ಆರ್.ಲಕ್ಷಮ್ಮನವರು 'ಮಹಿಳಾ ಸುಧಾರಕಿ' ಎಂದರೆ ತಪ್ಪಾಗಲಾರದು.[೮೮]

ದಿನಾಂಕ ೩೦.೦೩.೧೯೫೬ರಲ್ಲಿ ಮೈಸೂರು ಜಿಲ್ಲೆ ಕೃಷ್ಣರಾಜನಗರದ ಸಹೋದರರು ಉರ್ದು ಪುಸ್ತಕಭಂಡಾರವನ್ನು ತೆರೆಯಲು ದೇಣಿಗೆಯನ್ನು ನೀಡಿರುವ ಬಗ್ಗೆ, ತೀರ್ಥಹಳ್ಳಿ ತಾಲ್ಲೂಕು ಆದಿಗಲ್ ಗ್ರಾಮದಲ್ಲಿ ಗ್ರಂಥಭಂಡಾರವನ್ನು ತೆರೆಯಲು ಶ್ರೀ ಮಂಜಪ್ಪ ಪಂಡಿತರು ದೇಣಿಗೆ ನೀಡಿದ್ದರ ಬಗ್ಗೆ, ಕೋಲಾರ ಜಿಲ್ಲೆಯ ಬಂಗಾರಪೇಟೆ ತಾಲ್ಲೂಕು, ಮೊತಕಪಲ್ಲಿಯಲ್ಲಿ ೧೮ ಮಹಿಳೆಯರಿಗೆ ವಯಸ್ಕರ ಶಿಕ್ಷಣ ತರಗತಿಗಳನ್ನು ಆರಂಭಿಸುವ ಬಗ್ಗೆಎಂ. ಪ್ರಮೀಳಮ್ಮನವರು ಆರಂಭಿಸಿರುವ ಬಗ್ಗೆ ಚಿತ್ರದುರ್ಗ ಜಿಲ್ಲೆಯ ಹಿರಿಯೂರು ಮತ್ತು ಚಳ್ಳಕೆರೆಗಳಲ್ಲಿ ಆಹಾರದ ಅಭಾವ ಇರುವುದರಿಂದ ವಯಸ್ಕರ ಶಿಕ್ಷಣ ಶಾಲೆಗಳನ್ನು ಸದ್ಯಕ್ಕೆ ಮುಚ್ಚಲು ತೀರ್ಮಾನಿಸಿದ ಬಗ್ಗೆ ದಾವಣಗೆರೆಯ ದುರ್ಗಮ್ಮನ ಜಾತ್ರೆಯಲ್ಲಿ ವಯಸ್ಕರ ಶಿಕ್ಷಣದ ಬಗ್ಗೆ ಚಿತ್ರಪಟಗಳನ್ನು ಮತ್ತು ಪುಸ್ತಕಗಳನ್ನು ಪ್ರದರ್ಶನ ಏರ್ಪಡಿಸಿದ ಬಗ್ಗೆ ಸುದ್ದಿಯನ್ನು ಪ್ರಕಟಿಸಲಾಗಿದೆ.

ದಿನಾಂಕ ೨೦.೦೪.೧೯೫೬ರ ಸಂಚಿಕೆಯಲ್ಲಿ ನಂಜನಗೂಡು ತಾಲ್ಲೂಕು ದೊಡ್ಡ ಹೊಮ್ಮ ಗ್ರಾಮದಲ್ಲಿ ವಯಸ್ಕರ ಶಿಕ್ಷಣ ಪುಸ್ತಕಭಂಡಾರಕ್ಕೆ ಆ ಗ್ರಾಮದ ಛೇರ್ಮನ್ ಡಿ. ಶ್ಯಾಮಣ್ಣನವರು ೨೩ ಪುಸ್ತಕಗಳನ್ನು ಉದಾರವಾಗಿ ನೀಡಿದ ಬಗ್ಗೆ, ಮದ್ದೂರು ತಾಲ್ಲೂಕು ಬೆಸಗರಹಳ್ಳಿಯ ಪುಸ್ತಕಭಂಡಾರಕ್ಕೆ ಅಲ್ಲಿನ ಅಧಿಕಾರಿಗಳು ತಮ್ಮ ಸಂಭಾವನೆಯನ್ನೇ ನೀಡದ ಬಗ್ಗೆ, ತುಮಕೂರು ಜಿಲ್ಲೆ, ತುರುವೇಕೆರೆ ತಾಲ್ಲೂಕು ಮುನಿಯೂರು ಗ್ರಾಮದ ಪುಸ್ತಕಭಂಡಾರದ ಅಧಿಕಾರಿಗಳು ತಮ್ಮ ಒಂದು ವರ್ಷದ ಸಂಭಾವನೆಯನ್ನು ಪುಸ್ತಕಭಂಡಾರಕ್ಕೆ ದೇಣಿಗೆ ನೀಡಿದ

ಬಗ್ಗೆ, ಕೋಲಾರ ಜಿಲ್ಲೆ, ಚಿಂತಾಮಣಿಯಲ್ಲಿ ೭೦ ಮಂದಿ ಮಹಿಳೆಯರು ವಯಸ್ಕರ ಶಿಕ್ಷಣ ಸಮಿತಿಯಲ್ಲಿ ಕಲಿಯುತ್ತಿರುವ ಬಗ್ಗೆ ಪ್ರಕಟವಾಗಿದೆ.

ದಿನಾಂಕ ೨೭.೦೪.೧೯೪೬ರ ಸಂಚಿಕೆಯಲ್ಲಿ ಚಿತ್ರದುರ್ಗ ತಾಲ್ಲೂಕು ತುರುವನೂರು ಹೋಬಳಿಯ ಮುದ್ದಾಪುರ ಗ್ರಾಮದ ವಯಸ್ಕರ ಶಿಕ್ಷಣ ಶಾಲೆಯ ವಿದ್ಯಾರ್ಥಿ ಹೊನ್ನೂರು ಸಾಬಿಯವರು 'ಬೆಳಕು' ಪತ್ರಿಕೆಗೆ ಪತ್ರ ಬರೆದಿದ್ದು, ತಾವು ಅಕ್ಷರ ಕಲಿತ ಬಗ್ಗೆ ಮೊದಲ ಪರೀಕ್ಷೆಯಲ್ಲಿ ೫೦ ಅಂಕ ಪಡೆದ ಬಗ್ಗೆ, ಓದು ಬರಹ ಕಲಿತಿದ್ದಕ್ಕೆ ಆತನಿಗೆ ಜಂಬ ಬಂದಿರುವ ಬಗ್ಗೆ, ಪತ್ರ ಓದಲು ಪತ್ರಿಕೆಯ ಮೇಲಿರುವ ಪದಗಳನ್ನು ಓದಲು ಕಲಿತಿದ್ದು, ಆತನ ಸ್ನೇಹಿತರು ಮುಂದಿನ ಪರೀಕ್ಷೆಯಲ್ಲಿ ಹೊನ್ನೂರು ಸಾಬಿಗಿಂತ ಹೆಚ್ಚಾಗಿ ಅಂಕ ತೆಗೆದುಕೊಳ್ಳುವ ಬಗ್ಗೆ, ಅವರು ಹೇಳಿರುವ ಮಾತನ್ನು ಹಾಗೂ ಪುರಾಣ ಕಥೆಗಳು ಹಾಗೂ ನೀತಿ ಕಥೆಗಳನ್ನು ಕಲಿತು ತನ್ನ ಮಕ್ಕಳಿಗೆ ಹೇಳುವ ಬಗ್ಗೆ, ಕನ್ನಡ ಬಹಳ ಸುಲಭವಾಗಿ ಕಲಿಯುವ ಭಾಷೆಯಾಗಿರುವ ಬಗ್ಗೆ, ವ್ಯವಸಾಯ ಮಾಡುವಾಗ, ಕಪಿಲೆ ಬಾವಿಯಲ್ಲಿ ನೀರು ಹರಿಸುವಾಗ ಪದಗಳನ್ನು ಹಾಡಿಕೊಳ್ಳುವ ಬಗ್ಗೆ, ವಿದ್ಯೆ ಕಲಿಸಿಕೊಟ್ಟ ಗುರುಗಳಿಗೆ ಸರ್ಕಾರದವರಿಗೂ ಮಹಾರಾಜರಿಗೂ ವಂದನೆ ಸಲ್ಲಿಸಿ ಎಲ್ಲರಿಗೂ ದೇವರು ಒಳ್ಳೆಯದನ್ನು ಮಾಡಲೆಂದು ಪ್ರಾರ್ಥಿಸಿ, ೧೫.೦೩.೧೯೪೬ ರಂದು ಬರೆದ ಪತ್ರವನ್ನು 'ಬೆಳಕು' ಪತ್ರಿಕೆಯಲ್ಲಿ ಪ್ರಕಟಿಸಿ ಸಂಪಾದಕರಾದ ಎಂ.ಆರ್. ಲಕ್ಷಮ್ಮನವರು ನಿಮಗೆ ಓದಲಿಕ್ಕೆ ಹೆಚ್ಚು ಪುಸ್ತಕಗಳನ್ನು ಕಳುಹಿಸಿಕೊಡುವುದಾಗಿ ತಿಳಿಸಿ ನೀವು ವ್ಯವಸಾಯ ಮಾಡುವಾಗ ಹೇಳಿಕೊಳ್ಳುವ ಪದಗಳನ್ನು ಬರೆದು ಕಳುಹಿಸಿದರೆ 'ಬೆಳಕು' ಪತ್ರಿಕೆಯಲ್ಲಿ ಪ್ರಕಟಿಸುವುದಾಗಿ ತಿಳಿಸಿದರು. ನವಸಾಕ್ಷರರನ್ನು ಪ್ರೋತ್ಸಾಹಿಸುವ ಕಾರ್ಯವನ್ನು ಎಂ.ಆರ್. ಲಕ್ಷಮ್ಮನವರು ಮಾಡುತ್ತಿದ್ದಾರೆಂಬುದಕ್ಕೆ ಸಾಕ್ಷಿಯಾಗಿ ಈ ಪತ್ರವನ್ನು ಕಾಣಬಹುದು.[೯]

ದಿನಾಂಕ ೧೧.೦೫.೧೯೪೬ರ ಸಂಚಿಕೆಯಲ್ಲಿ ಮೈಸೂರು ಸಂಸ್ಥಾನ ವಿದ್ಯಾಮಂತ್ರಿಗಳಾದ ಡಾ. ಟಿ.ಸಿ. ರಾಯನ್‌ರವರು ಕೋಲಾರ ಜಿಲ್ಲೆಯಲ್ಲಿ ಪ್ರವಾಸಮಾಡಿ ೫೬ ಜನ ಮಹಿಳೆಯರು ಕಲಿಯುತ್ತಿರುವ ವಯಸ್ಕರ ಶಿಕ್ಷಣ ಶಾಲೆಗೆ ಭೇಟಿ ನೀಡಿದ ಬಗ್ಗೆ, ಕೋಲಾರ ಜಿಲ್ಲೆಯ ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷರಾದ ಕೆ. ಗುರುದತ್ತರವರು ಜಿಲ್ಲಾ ಸಮಿತಿಯ ಸಭೆಯಲ್ಲಿ 'ವಿದ್ಯೆ ಇಲ್ಲದೆ ದೇಶಕ್ಕೆ ಮುಕ್ತಿ ಇಲ್ಲ, ಬರೀ ಅನಕ್ಷರಸ್ಥರನ್ನಾಗಿ ಮಾಡಿದರೆ ಸಾಲದು, ವಯಸ್ಕರರನ್ನು ಸರ್ವವಿಧದಲ್ಲಿಯೂ ಬುದ್ಧಿವಂತರನ್ನಾಗಿ ಮಾಡುವುದು ವಿದ್ಯೆಯ ಉದ್ದೇಶ. ವಿದ್ಯಾವಂತರನ್ನಾಗಿ ಮಾಡುವ ಪವಿತ್ರಕಾರ್ಯವನ್ನು ಸೇವಾದೃಷ್ಟಿಯಿಂದ ಮಾಡಬೇಕು'. ಹಾಸನದಲ್ಲಿ ಉತ್ಸಾಹಿ ತರುಣರು ಶಿಕ್ಷಣ ಪ್ರಚಾರ ಚಳವಳಿಯನ್ನು ಮಾಡುತ್ತಿರುವ ಬಗ್ಗೆ, ಚಿಕ್ಕಮಗಳೂರಿನಲ್ಲಿ ಮಹಿಳೆಯರ ತರಗತಿ ಪ್ರಾರಂಭಿಸಲು ಮಹಿಳಾ ವೈದ್ಯರು ಸಹಕಾರ ನೀಡಿದ ಬಗ್ಗೆ, ವಯಸ್ಕರ ಶಿಕ್ಷಣ ಸಮಿತಿಯ ಪುಸ್ತಕಭಂಡಾರ ಅಧಿಕಾರಿಗಳ ಶಿಬಿರ ನಡೆಯುವ ಬಗ್ಗೆ,

ಎಂ.ವಿ. ವೆಂಕಟಪ್ಪ ಎಂಬುವವರು ಮೊತಕಪಲ್ಲಿಯಲ್ಲಿ ಪುರುಷರಿಗೆ ಎರಡು ಹಾಗೂ ಮಹಿಳೆಯರಿಗೆ ಒಂದು ವಯಸ್ಕರ ಶಿಕ್ಷಣ ತರಗತಿ ನಡೆಸುತ್ತಿರವ ಬಗ್ಗೆ, ಯುಗಾದಿ ಹಬ್ಬದ ದಿನ ನಮಗೆ ರಜಾ ಬೇಡವೆಂದು ಹೇಳಿ ತರಗತಿಗೆ ವಿದ್ಯಾರ್ಥಿಗಳು ಹಾಜರಾಗಿದ್ದು ಅವರಿಗೆ ಪಾಠವನ್ನು ಮಾಡಿದ ಬಗ್ಗೆ ತಮ್ಮ ಅನುಭವವನ್ನು ಹೇಳಿದ್ದು ಅವೆಲ್ಲವು ಸಂಚಿಕೆಯಲ್ಲಿ ಪ್ರಕಟವಾಗಿದೆ. ಈ ಸಂಚಿಕೆಯಲ್ಲಿ ವಿಶ್ವವಿದ್ಯಾನಿಲಯದ ಮನಶ್ಯಾಸ್ತ್ರದ ಪ್ರಾಧ್ಯಾಪಕರಾದ ಬಿ. ಕುಪ್ಪಸ್ವಾಮಿಯವರು ಬರೆದ 'ನಮ್ಮ ಮಕ್ಕಳು' ಮತ್ತು 'ಮಕ್ಕಳ ಬೆಳವಣಿಗೆ' ಎಂಬ ಎರಡು ಪುಸ್ತಕವನ್ನು ವಯಸ್ಕರ ಶಿಕ್ಷಣ ಪುಸ್ತಕ ಮಾಲೆ ರಚಿಸಿಕೊಟ್ಟಿದ್ದು, ಅವರು ಬರೆದ' 'ಮಕ್ಕಳ ಮನಶ್ಯಾಸ್ತ್ರ' ಎಂಬ ಪುಸ್ತಕಕ್ಕೆ ೭೫೦ ರೂ.ಗಳ ಬಹುಮಾನ ದೊರೆತಿದ್ದು, ಅವರಿಗೆ ಅಭಿನಂದನೆಗಳನ್ನು ತಿಳಿಸಲಾಗಿದೆ.

ದಿನಾಂಕ ೧೮.೦೫.೧೯೪೬ರ ಸಂಚಿಕೆಯಲ್ಲಿ ಮೈಸೂರು ನಗರದ ವಯಸ್ಕರ ಶಿಕ್ಷಣ ಸಮಿತಿಯು ೧೦.೦೫.೧೯೪೬ರ ಶುಕ್ರವಾರ ಬೆಳಿಗ್ಗೆ ರಣಜಿತ್ ಸಿನಿಮಾ ಮಂದಿರದಲ್ಲಿ ಶಿಕ್ಷಣ ಚಿತ್ರಗಳ ಪ್ರದರ್ಶನವನ್ನು ಏರ್ಪಡಿಸಿದ್ದು, ಮೈಸೂರು ನಗರದ ವಯಸ್ಕರ ಶಿಕ್ಷಣ ಶಾಲೆಯ ವಿದ್ಯಾರ್ಥಿಗಳಿಗೋಸ್ಕರ ಏರ್ಪಡಿಸಲಾಗಿದ್ದು, ಮಹಾರಾಜರವರ ಹುಜೂರ್ ಸೆಕ್ರೆಟರಿಯವರಾದ ಟಿ. ರಾಮಯ್ಯನವರು ಅಧ್ಯಕ್ಷತೆ ವಹಿಸಿ, ವಿದ್ಯಾರ್ಥಿಗಳಿಗೆ ಏರ್ಪಡಿಸಿರುವ ಶಿಕ್ಷಣದ ಚಿತ್ರಪ್ರದರ್ಶನ ಮನರಂಜನೆಯ ಬದಲಾಗಿ ಜ್ಞಾನಪ್ರಸಾರಕ್ಕಾಗಿ, ದೇಶದ ಅಭ್ಯುದಯಕ್ಕೆ ವಿದ್ಯೆಯೇ ಆಧಾರವಾಗಿದ್ದು, ರಾಷ್ಟ್ರೀಯ ಭಾವನೆಯು ಮೂಡಬೇಕು, ಈ ಭಾವನೆಯು ಮೂಡಲು ವಿದ್ಯೆಯ ಅವಶ್ಯಕತೆ ಇದೆ. ವಿದ್ಯೆಯೇ ಮೊದಲ ಹೆಜ್ಜೆ. ಅಕ್ಷರಜ್ಞಾನವನ್ನು ಮಹಾರಾಜ ಕಾಲೇಜಿನ ವಿದ್ಯಾರ್ಥಿಗಳು ಜನತಾ ಚಳವಳಿಯಾಗಿ ಮಾರ್ಪಡಿಸಿ ಯೋಜನೆಗೆ ಒಂದು ರೂಪನ್ನು ಕೊಟ್ಟು, ಮೈಸೂರು ಅಕ್ಷರಪ್ರಚಾರ ಸಮಿತಿ ಸ್ಥಾಪಿತವಾಯಿತು. ಇಂದು ಅಕ್ಷರಪ್ರಚಾರ ಸಮಿತಿಯು ವಯಸ್ಕರ ಶಿಕ್ಷಣ ಸಮಿತಿಯಾಗಿ ಮಾರ್ಪಟ್ಟು, ಸಾವಿರಾರು ಜನರಿಗೆ ಅಕ್ಷರಜ್ಞಾನವನ್ನು ನೀಡಿ ಹೊಸದಾಗಿ ಅಕ್ಷರ ಕಲಿತವರಿಗಾಗಿ ಚಿಕ್ಕಪುಟ್ಟ ಪುಸ್ತಕಗಳನ್ನು ಪ್ರಕಟಿಸಲು ಪುಸ್ತಕ ಭಂಡಾರವನ್ನು ಸ್ಥಾಪಿಸಿದ್ದು, ಈ ಯೋಜನೆ ಮಹಾರಾಜರ ಪ್ರೋತ್ಸಾಹ ಮತ್ತು ಬೆಂಬಲದಿಂದ ಉತ್ತಮವಾಗಿ ನಡೆಯುತ್ತಿದೆ ಎಂದು ಅಧ್ಯಕ್ಷೀಯ ಭಾಷಣ ಮಾಡಿದ್ದ ಸುದ್ದಿ ಪ್ರಕಟವಾಗಿದೆ.

ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯ ಸಭೆ ೧೯೪೬ ಮೇ ೧೦ ಮತ್ತು ೧೧ ರ'ಂದು ನಡೆದು ಅಕ್ಷರಪ್ರಚಾರ ಮತ್ತು ಪುಸ್ತಕಭಂಡಾರದ ಬಗ್ಗೆ ಚರ್ಚಿತವಾಗಿ ಮುಂದಿನ ವರ್ಷ ಪುರುಷರಿಗಾಗಿ ೬,೦೦೦ ತರಗತಿಗಳನ್ನು ಹಾಗೂ ಮಹಿಳೆಯರಿಗಾಗಿ ೬೦೦ ವಯಸ್ಕರ ಶಿಕ್ಷಣ ತರಗತಿಗಳನ್ನು, ಈಗ ನಡೆಯುತ್ತಿರುವ ೧,೨೦೦ ಪುಸ್ತಕಭಂಡಾರಗಳ ಜತೆಗೆ ೮೦೦ ಪುಸ್ತಕಭಂಡಾರಗಳನ್ನು ಸ್ಥಾಪಿಸಬೇಕೆಂದು ಸಭೆಯಲ್ಲಿ ತೀರ್ಮಾನವನ್ನು

ಕೈಗೊಳ್ಳಲಾಯಿತು. ತರಗತಿಗಳು ಎಲ್ಲಿ ನಡೆಯಬೇಕು, ತರಗತಿ ನಡೆಸುವ ಉಪಾಧ್ಯಾಯರಿಗೆ ನೀಡಬೇಕಾದ ತರಬೇತಿಯ ಬಗ್ಗೆ, ತರಬೇತಿಗೆ ಬೇಕಾದ ಸಾಮಗ್ರಿಗಳನ್ನು ಹಂಚಿಕೆ ಮಾಡುವ ಬಗ್ಗೆ, ತರಗತಿಗಳ ಪ್ರಾರಂಭ, ಮೊದಲನೆಯ ಪರೀಕ್ಷೆ, ಎರಡನೆಯ ಪರೀಕ್ಷೆ ನಡೆಸಬೇಕಾದ ದಿನಾಂಕಗಳನ್ನು ಸಭೆಯಲ್ಲಿ ತೀರ್ಮಾನಿಸಲಾಯಿತು.

ದಿನಾಂಕ ೦೧.೦೬.೧೯೪೬ರ ಸಂಚಿಕೆಯಲ್ಲಿ ದೇಶದ ತರುಣರು ತಮ್ಮ ಸುತ್ತಮುತ್ತಲಿನ ಜನರಿಗೆ ಆದರ್ಶವಾಗಿರುವಂತೆ ಶಿಕ್ಷಣ ಕೊಡಲು ವಯಸ್ಕರ ಶಿಕ್ಷಣ ಸಮಿತಿ ವಿದ್ಯಾಪೀಠವೊಂದನ್ನು ನಂಜನಗೂಡಿನಲ್ಲಿ ಸ್ಥಾಪಿಸಿದ್ದು, ಜೂನ್ ತಿಂಗಳ ಕೊನೆಯ ವಾರ ಪ್ರಾರಂಭವಾಗುವ ಶಿಕ್ಷಣವು ಐದು ತಿಂಗಳಕಾಲ ನಡೆಯಲಿದ್ದು, ಶಿಕ್ಷಣಾರ್ಥಿಗಳ ಊಟ, ವಸತಿ ವೆಚ್ಚವನ್ನು ವಿದ್ಯಾಪೀಠವೇ ವಹಿಸಿಕೊಳ್ಳುವುದು. ಈ ಪೀಠಕ್ಕೆ ಸೇರಲಿರುವವರು ಸಾಮಾನ್ಯವಾಗಿ ಓದು ಬರಹ ತಿಳಿದಿದ್ದು ಹಳ್ಳಿಗಳಲ್ಲಿ ನೆಲೆಸಿ ಗ್ರಾಮಸೇವೆಯನ್ನು ಕೈಗೊಳ್ಳಲು ಆಸಕ್ತಿಯಿದ್ದು, ವ್ಯವಸಾಯ ಮಾಡಲು ತಿಳಿದಿರುವ ವಯಸ್ಕರು ಜೂನ್ ೧೦ನೇ ತಾರೀಖಿನೊಳಗೆ ಅರ್ಜಿಯನ್ನು ಸಲ್ಲಿಸಬೇಕೆಂದು ಪ್ರಕಟಣಾ ಸುದ್ದಿಯು ಪತ್ರಿಕೆಯಲ್ಲಿ ಪ್ರಕಟವಾಗಿದೆ. ವಯಸ್ಕರ ಶಿಕ್ಷಣ ಸಮಿತಿಯು ಬರೀ ಓದು ಬರಹ ಕಲಿಸುವುದಕ್ಕೆ ಮಾತ್ರ ಸೀಮಿತವಾಗದೆ ಯುವಕರಿಗೆ ಶಿಕ್ಷಣ ನೀಡಿ ಗ್ರಾಮಗಳ ಅಭಿವೃದ್ಧಿಯಲ್ಲಿ ತೊಡಗುವಂತೆ ಮಾಡುವುದು ಕೂಡ ಅದರ ಮಹತ್ತರ ಯೋಜನೆಯಾಗಿತ್ತೆಂದು ತಿಳಿಯಬಹುದು.[೮೦]

ದಿನಾಂಕ ೨೯.೦೬.೧೯೪೬ರ ಸಂಚಿಕೆಯಲ್ಲಿ ಹೊಳೆನರಸೀಪುರ ತಾಲ್ಲೂಕು, ಮಳಲಿ ಗ್ರಾಮದ ಗ್ರಾಮಸ್ಥರು ಪುಸ್ತಕ ಭಂಡಾರಕ್ಕೆ ೧೨೦ ರೂ.ಗಳನ್ನು ದಾನ ನೀಡಿದ ಬಗ್ಗೆ ಆನೇಕಲ್ ತಾಲ್ಲೂಕಿನ ವಯಸ್ಕರ ಶಿಕ್ಷಣ ತರಗತಿಗೆ ಬೆಂಗಳೂರು ಜಿಲ್ಲೆಯ ವಯಸ್ಕರ ಶಿಕ್ಷಣದ ವೈಸ್ ಪ್ರೆಸಿಡೆಂಟ್ ಶ್ರೀಮತಿ ಲಕ್ಷ್ಮೀದೇವಿಯವರು ಹರಿಜನ ಕೇರಿಯ ರಾತ್ರಿ ಪಾಠಶಾಲೆಗೆ ಭೇಟಿ ನೀಡಿದ ಬಗ್ಗೆ, ದೊಡ್ಡಕೆರೆ ಬಾಗಿಲು ವಯಸ್ಕರ ಶಿಕ್ಷಣ ಶಾಲೆಗೆ ಭೇಟಿಕೊಟ್ಟು, ೩೦ ವರ್ಷದಿಂದ ೬೦ ವರ್ಷ ವಯಸ್ಸಿನ ಮಹಿಳೆಯರು ಓದು ಬರಹ ಕಲಿಯುತ್ತಿರುವ ಬಗ್ಗೆ ಸಂತೋಷಪಟ್ಟ ಬಗ್ಗೆ, ಕಲ್ಯಾಣಮಂಟಪದ ಬೀದಿಯಲ್ಲಿ ಹೊಸದಾಗಿ ಮಹಿಳೆಯರಿಗಾಗಿ ವಯಸ್ಕರ ಶಿಕ್ಷಣ ಶಾಲೆ ಪ್ರಾರಂಭವಾದ ಬಗ್ಗೆ ಸುದ್ದಿ ಪ್ರಕಟವಾಗಿದೆ.

ದಿನಾಂಕ ೧೩.೦೭.೧೯೪೬ರ ಸಂಚಿಕೆಯಲ್ಲಿ ಚೇರ್‌ಮನ್ ತಿಮ್ಮೇಗೌಡರು ಅಂಕನಹಳ್ಳಿ, ಹಾಸನ ಜಿಲ್ಲೆಯಿಂದ ಪತ್ರ ಬರೆದಿದ್ದು 'ನಮ್ಮ ಹಳ್ಳಿಗಾಡಿನ ಜನರ ಅಜ್ಞಾನವನ್ನು ಹೋಗಲಾಡಿಸಲು ತಾವು ಲಕ್ಷಗಟ್ಟಲೆ ಖರ್ಚುಮಾಡಿ ವಿದ್ಯಾ ಪ್ರಚಾರ ಮಾಡುತ್ತಿರುವುದು ಸಂತೋಷದ ವಿಷಯ. ಆದರೆ ನಮ್ಮ ಹಳ್ಳಿಗಳಲ್ಲಿರುವ ಜನರು ಬಡತನದಿಂದಲೂ ಮತ್ತು ಅಜ್ಞಾನವೆಂಬ ಕಗ್ಗತ್ತಲೆಯಲ್ಲಿ ಮುಳುಗಿರುವುದರಿಂದ ಮೊದಲು ಶಾಲೆಗೆ ಸೇರುವಾಗ ಇದ್ದ ಉತ್ಸಾಹವನ್ನು ಕಳೆದುಕೊಂಡು ಶಾಲೆಯನ್ನು ಬಿಡುತ್ತಿದ್ದಾರೆ. ಆದುದರಿಂದ ನಮ್ಮ

ಅಭಿಪ್ರಾಯವೆಂದರೆ ವಯಸ್ಕರಿಗೆ ಬಲವಂತವಾಗಿ ಆದೇಶಮಾಡಿ ಓದಿಸುವುದು ಹಾಗೂ ರುಜುವಿಲ್ಲದೆ ಯಾರು ಲೇವಾದೇವಿ ಮಾಡಬಾರದು, ಹೆಬ್ಬೆಟ್ಟು ಗುರುತಿಗೆ ಯಾವುದೇ ಬೆಲೆ ಇಲ್ಲವೆಂದು ಆದೇಶವನ್ನು ಹೊರಡಿಸಿದರೆ ಎಲ್ಲರೂ ಕಲಿಯುವುದರಲ್ಲಿ ಆಸಕ್ತಿ ವಹಿಸುತ್ತಾರೆ' ಎಂದು ಪತ್ರವನ್ನು ಬರೆದಿರುತ್ತಾರೆ. ಆ ಪತ್ರಕ್ಕೆ ಸಂಪಾದಕರಾದ ಎಂ.ಆರ್. ಲಕ್ಷಮ್ಮನವರು ತಿಮ್ಮೇಗೌಡರು ನೀಡಿರುವ ಸಲಹೆಗೆ ಓದುಗರಾದ ನಿಮ್ಮ ಅಭಿಪ್ರಾಯವನ್ನು ತಿಳಿಸಿ ಎಂದು ಪ್ರಕಟಿಸಿದ್ದಾರೆ.

ದಿನಾಂಕ ೨೦.೦೭.೧೯೪೬ರ ಸಂಚಿಕೆಯಲ್ಲಿ 'ಒಬ್ಬರಿಗೆ ಒಬ್ಬರು ಕಲಿಸಿ' ಎಂಬ ಶೀರ್ಷಿಕೆಯಡಿಯಲ್ಲಿ ಮೆಕ್ಸಿಕೋ ದೇಶದಲ್ಲಿ ಅರ್ಧಕ್ಕೆ ಅರ್ಧದಷ್ಟು ದೇಶದ ಜನರಿಗೆ ಓದು ಬರಹ ಬರದೇ ಇದ್ದಾಗ, ಅಲ್ಲಿನ ಅಧ್ಯಕ್ಷರು ೬ ರಿಂದ ೪೬ ವರ್ಷದ ವಯಸ್ಕರು ಓದು ಬರಹ ಕಲಿಯಬೇಕು ಹಾಗೂ ಓದು ಬರಹ ಕಲಿತವರು ಕಡ್ಡಾಯವಾಗಿ ಇನ್ನೊಬ್ಬರಿಗೆ ಕಲಿಸಬೇಕೆಂದು ಕಾನೂನನ್ನು ಹೊರಡಿಸಿದ್ದು, ಅಲ್ಲಿ ಶೇಕಡ ೭೦ ರಷ್ಟು ಜನರು ಓದು ಬರಹ ಕಲಿತಿರುವ ಬಗ್ಗೆ, ಅಧ್ಯಕ್ಷರು ಅಲ್ಲಿನ ಆಡಳಿತ'ಗಾರನಿಗೆ ಜವಾಬ್ದಾರಿಯನ್ನು ನೀಡಿದ್ದು, ಆತ ಶಾಲಾ ಉಪಾಧ್ಯಾಯರು, ರೈತಮುಖಂಡರು ಮತ್ತು ಸೈನ್ಯಾಧಿಕಾರಿಗಳ ಮೇಲೆ ಜವಾಬ್ದಾರಿಯನ್ನು ವಹಿಸಿದ್ದು, ಹಳ್ಳಿಗಾಡಿನಲ್ಲಿ ಶಿಕ್ಷಣ ಕಲಿಯುವ ಬಗ್ಗೆ ಅವರಿಗಾಗಿ ಸಾವಿರಾರು ಪುಸ್ತಕಗಳು ಪ್ರಕಟವಾದ ಬಗ್ಗೆ, ಸಂಘಸಂಸ್ಥೆಗಳು, ವರ್ತಕರು, ಕ್ರೈಸ್ತ ಪಾದ್ರಿಗಳು ಮತ್ತು ಕಾಲೇಜಿನ ವಿದ್ಯಾರ್ಥಿಗಳು ಸೇರಿ, ಸೆರೆಮನೆಯ ಖೈದಿಗಳಿಗೂ ಕೂಡ ಅಕ್ಷರ ಕಲಿಸಿದ ಬಗ್ಗೆ 'ಬೆಳಕು' ಪತ್ರಿಕೆಯಲ್ಲಿ ಪ್ರಕಟವಾಗಿದ್ದು, ನಮ್ಮ ದೇಶದಲ್ಲೂ ಇಂತಹ ಕಾನೂನು ಜಾರಿಗೆ ಬಂದರೆ ಆರು ತಿಂಗಳಲ್ಲಿ ಲಕ್ಷಾಂತರ ಜನರು ಅಕ್ಷರಸ್ಥರಾಗುವರೆಂದು ಲಕ್ಷಮ್ಮನವರು ಅಭಿಪ್ರಾಯಪಟ್ಟಿದ್ದಾರೆ.[೧೧]

ದಿನಾಂಕ ೨೭.೦೭.೧೯೪೬ರ ಸಂಚಿಕೆಯಲ್ಲಿ ಹಾಸನ ಜಿಲ್ಲೆಯಲ್ಲಿ ಶಿಕ್ಷಣ ಶಿಬಿರ ಆರಂಭವಾದ ಬಗ್ಗೆ ಸುದ್ದಿ ಪ್ರಕಟವಾಗಿದೆ. ಈ ಸಂಚಿಕೆಯಲ್ಲಿ 'ಮೂಲಶಿಕ್ಷಣ' ಎಂಬ ಶೀರ್ಷಿಕೆಯಡಿಯಲ್ಲಿ ಕೈಗೂ ಮೆದುಳಿಗೂ ಸಂಬಂಧ ಇದೆ. ಕೈ ಕೆಲಸ ಮಾಡಿದರೆ ಮೆದುಳಿಗೆ ವಿದ್ಯೆ ಸುಲಭವಾಗಿ ಹತ್ತುತ್ತದೆ. ಆದರೆ ನಮ್ಮಲ್ಲಿ ಕೈ ಕೆಲಸ ಮಾಡುವವರಿಗೆ ಸಾಮಾನ್ಯವಾಗಿ ವಿದ್ಯೆ ಇಲ್ಲ. ವಿದ್ಯೆ ಇದ್ದವರಿಗೆ ಕೈ ಕುಶಲತೆ ಇಲ್ಲ. ಎರಡು ಕೂಡಿದರೆ ಒಳ್ಳೆಯದಲ್ಲವೇ? ಈ ಆಲೋಚನೆ ದೊಡ್ಡ ವಿದ್ವಾಂಸರುಗಳಿಗೆ ಬಂದಿದ್ದು, ಮಕ್ಕಳಿಗೆ ಬರೀ ಬಾಯಿಪಾಠ ಮಾಡಿಸಿದರೆ ಸಾಲದು, ಕೈ ಕೆಲಸದ ಮೂಲಕ ವಿದ್ಯೆ ಕಲಿಸಬೇಕು. ಇದರಿಂದ ಮೈ ಮತ್ತು ಮೆದುಳಿನ ಬೆಳವಣಿಗೆಗೆ ಸಹಕಾರಿಯಾಗಿದ್ದು, ಗಾಂಧೀಜಿಯವರು ಕೂಡ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಮಕ್ಕಳಿಗೆ ನೂಲುವುದು, ಕೃಷಿ ಮಾಡುವುದು ಹೆಣ್ಣುಮಕ್ಕಳಾದರೆ ಅವರಿಗೆ ಮನೆ ಕೆಲಸದ ಮೂಲಕ ಓದು ಬರಹ ಲೆಕ್ಕ ಕಲಿಸಲು ಸಾಧ್ಯ. ಹಳ್ಳಿಯವನು ಕಲಿಯುವುದರ ಜತೆಗೆ ಸಂಭಾವನೆಯನ್ನು ಪಡೆಯಬಹುದು. ಈ ಬಗೆಯ ಹೊಸ ಶಿಕ್ಷಣಕ್ಕೆ

ಮೂಲಶಿಕ್ಷಣವೆಂದು ಹೆಸರು. ಈ ಶಿಕ್ಷಣ ಭಾರತದಲ್ಲಿ ಈಗಾಗಲೇ ಜಾರಿಗೆ ಬಂದು ಮೈಸೂರು ಸಂಸ್ಥಾನದಲ್ಲಿ ಈ ಬಗೆಯ ಹೊಸ ಶಿಕ್ಷಣವನ್ನು ನೀಡಲು ಕೆಂಗೇರಿಯಲ್ಲಿ ಗುರುಕುಲವನ್ನು ತೆರೆದಿದ್ದು, ಅಲ್ಲಿ ಮೂಲಶಿಕ್ಷಣ ನೀಡುವ ಉಪಾಧ್ಯಾಯರಿಗೆ ತರಬೇತಿ ಕೇಂದ್ರವನ್ನು ಸ್ಥಾಪಿಸಲಾಗಿದೆ ಎಂಬ ವಿಷಯದ ಬಗ್ಗೆ ಲೇಖನವು ಪ್ರಕಟವಾಗಿದ್ದು, ಈ ಲೇಖನವು ಗೃಹ ಕೈಗಾರಿಕೆಗಳ ಅಭಿವೃದ್ಧಿಯ ಬಗ್ಗೆ, ಶಿಕ್ಷಣದ ಸ್ವರೂಪದ ಬಗ್ಗೆ ಜನಸಾಮಾನ್ಯರಿಗೆ ತಿಳಿಸುವ ಪ್ರಯತ್ನವಾಗಿದೆ. ಎಂ.ಆರ್. ಲಕ್ಷಮ್ಮನವರು ಸ್ವಾತಂತ್ರ್ಯಪೂರ್ವದಲ್ಲಿಯೇ ಮೂಲಶಿಕ್ಷಣದ ಅವಶ್ಯಕತೆಯ ಬಗ್ಗೆ ಅರಿವನ್ನು ಮೂಡಿಸುವ ಮತ್ತು ಕೌಶಲ್ಯಾಭಿವೃದ್ಧಿಯ ಕುರಿತು ಚಿಂತನೆಯನ್ನು ಮಾಡಿದ್ದು, ಈ ಲೇಖನವು ಅವರ ಆಧುನಿಕ ಚಿಂತನೆಯನ್ನು ಬಿಂಬಿಸುತ್ತದೆ.[೨]

ಈ ಸಂಚಿಕೆಯಲ್ಲಿ ಚಿಕ್ಕಮಗಳೂರಿನ ವೆಂಕಟರಾಮಯ್ಯ ಎಂಬುವರು 'ಅನಕ್ಷರಸ್ಥೆಯಿಂದಾದ ಅನಾಹುತ' ಎಂಬ ಶೀರ್ಷಿಕೆಯಡಿಯಲ್ಲಿ ತಮ್ಮ ಸ್ವ ಅನುಭವದ ಲೇಖನವನ್ನು ಬರೆದು ತಿಳಿಸಿರುತ್ತಾರೆ. ಲೇಖಕರ ತಾಯಿಯವರು ಓದು ಬರಹ ಕಲಿತವರಲ್ಲ. ಆದರೆ ಸಹಿ ಹಾಕಲು ಮಾತ್ರ ಅರಿತಿದ್ದು, ಅವರಿಗೆ ವಿದ್ಯೆ ಕಲಿಯಲು ಹೇಳಿದರೂ ಅವರು ನನಗೆ ವಯಸ್ಸಾಗಿದ್ದು, ಈಗ ನನಗೇಕೆ ವಿದ್ಯೆ? ಎಂದು ಹೇಳುತ್ತಿದ್ದರು. ಲೇಖಕರು ಡಿಪೋದಿಂದ ಹೋಗಿ ಸಾಮಾನನ್ನು ತರಲು ರೇಷನ್‌ಕಾರ್ಡ್‌ನ್ನು ಕೇಳಿದಾಗ, ಅವರ ತಾಯಿಯು ರೇಷನ್‌ಕಾರ್ಡ್ ನಾನು ನೋಡೆ ಇಲ್ಲ ಎಂದು ಉತ್ತರಿಸುತ್ತಾರೆ. ರೇಷನ್‌ಕಾರ್ಡು ಮತ್ತು ಇತರ ಕಾಗದಪತ್ರಗಳನ್ನು ಇಡುವ ಸ್ಥಳದಲ್ಲಿ ಯಾವುದಾದರೂ ಕಾಗದವನ್ನು ತೆಗೆದುಕೊಂಡೆಯ? ಎಂದು ಲೇಖಕರು ತಾಯಿಯವರನ್ನು ಪ್ರಶ್ನಿಸಿದಾಗ ಹೌದು ಪಕ್ಕದ ಮನೆ ಲಕ್ಷ್ಮಿದೇವಮ್ಮನವರಿಗೆ ಸಕ್ಕರೆ ಹಾಕಿಕೊಡಲು ಒಂದು ಕಾಗದವನ್ನು ತೆಗೆದುಕೊಂಡೆನೆಂದು ಹೇಳುತ್ತಾರೆ. ಲೇಖಕರು ಹೋಗಿ ಲಕ್ಷ್ಮಿದೇವಮ್ಮನವರನ್ನು ಕೇಳಿದಾಗ ಸಕ್ಕರೆಯನ್ನು ಉಪಯೋಗಿಸಿ ಆ ಕಾಗದವನ್ನು ಎಸೆದುಬಿಟ್ಟಿದ್ದೇನೆ ಎಂದು ಹೇಳಿದರು. ಮೂರು ದಿನಗಳ ನಂತರ ತಿಪ್ಪೆಗುಂಡಿಯಲ್ಲಿ ರೇಷನ್‌ಕಾರ್ಡ್‌ನ್ನು ನೋಡಿದ ಲೇಖಕರು ಅವರ ತಾಯಿಯವರಿಗೆ ತೋರಿಸಿ ಹೊಸ ರೇಷನ್‌ಕಾರ್ಡ್‌ನ್ನು ಪಡೆದುಕೊಂಡರು. ಅವರ ತಾಯಿಯವರು ವಿದ್ಯೆ ಕಲಿತಿದ್ದರೆ ನನ್ನಿಂದ ಈ ತಪ್ಪು ಜರುಗುತ್ತಿರಲಿಲ್ಲವೆಂದು ಮರುಗಿದ ಬಗ್ಗೆ ಪತ್ರಿಕೆಯಲ್ಲಿ ಪ್ರಕಟವಾಗಿದ್ದು, ವಿದ್ಯೆ ಕಲಿಯಲು ವಯಸ್ಸಿನ ಭೇದವಿಲ್ಲ. ಪ್ರತಿಯೊಬ್ಬರಿಗೂ ಶಿಕ್ಷಣದ ಅವಶ್ಯಕತೆ ಇದೆ ಎಂದು ತಿಳಿಸುವ ಉದ್ದೇಶದಿಂದ ಎಂ. ಆರ್. ಲಕ್ಷಮ್ಮನವರು ಈ ಪತ್ರವನ್ನು 'ಬೆಳಕು' ಪತ್ರಿಕೆಯಲ್ಲಿ ಪ್ರಕಟಿಸಿದರು.

ದಿನಾಂಕ ೦೩.೦೮.೧೯೪೬ರ ಸಂಚಿಕೆಯಲ್ಲಿ ಹಿಂದಿನ ಸಂಚಿಕೆಯಲ್ಲಿ ಓದುಬರಹವನ್ನು ಕಡ್ಡಾಯವಾಗಿ ಕಲಿಯಬೇಕೆಂಬ ಹಾಗೂ ಲೇವಾದೇವಿ ವ್ಯವಹಾರಗಳನ್ನು ಸಹಿ ಮೂಲಕ ನಡೆಸಬೇಕೆಂದು ಅದಕ್ಕೆ ನಿಮ್ಮ ಅಭಿಪ್ರಾಯವೇನೆಂದು ಹೇಳಲಾಗಿದ್ದು 'ಬೆಳಕು'

ಸಂಚಿಕೆಯ ಕಛೇರಿಗೆ ಓದುಗರು ಪತ್ರ ಬರೆದು ಬಲವಂತದಿಂದ ಅಕ್ಷರಾಭ್ಯಾಸ ಕಷ್ಟಸಾಧ್ಯವಾದ ಮಾತು ಹಾಗೂ ಲೇವಾದೇವಿ ವ್ಯವಹಾರವನ್ನು ಮಾಡಲು ಬರಿ ಸಹಿಯನ್ನಷ್ಟೇ ಹಾಕುವುದನ್ನು ರೂಢಿಸಿಕೊಳ್ಳುತ್ತಾರೆ. ಆದುದರಿಂದ ಹಳ್ಳಿಯ ವಿದ್ಯಾವಂತರು, ಅಧಿಕಾರಿಗಳು ಸೇರಿ ಅವಿದ್ಯಾವಂತರ ಮನ ಒಲಿಸಿ, ಅಕ್ಷರವನ್ನು ಕಲಿಸಬೇಕೇ ವಿನಃ ಬಲವಂತದಿಂದ ಮತ್ತು ಆದೇಶದ ಮೂಲಕ ಹಾಗೂ ಕಾನೂನಿನ ಮೂಲಕ ಕಲಿಸಲು ಸಾಧ್ಯವಿಲ್ಲವೆಂದು ಓದುಗರು ಬರೆದಂತಹ ಪತ್ರ ಪ್ರಕಟವಾಗಿದೆ.

ದಿನಾಂಕ ೩೧.೦೮.೧೯೪೬ ರ ಸಂಚಿಕೆಯಲ್ಲಿ ಭದ್ರಾವತಿಯಲ್ಲಿರುವ ಮೈಸೂರು ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯಲ್ಲಿ ಪ್ರತಿ ತಿಂಗಳು ಮಾಸಪತ್ರಿಕೆಯನ್ನು ಹೊರಡಿಸುತ್ತಿದ್ದು, ಜುಲೈ ತಿಂಗಳಲ್ಲಿ ವಯಸ್ಕರ ಶಿಕ್ಷಣದ ಬಗ್ಗೆ ಸುದ್ದಿ ಪ್ರಕಟವಾಗಿದ್ದು, ಆ ಕಾರ್ಖಾನೆಯ ಅಧ್ಯಕ್ಷರು ಮುನ್ನುಡಿಯನ್ನು ಬರೆದಿದ್ದು, 'ವಿದ್ಯೆಯೇ ದಕ್ಷತೆಗೆ ಮತ್ತು ಕಾರ್ಯ ನಿರ್ವಹಿಸುವ ಸಾಮರ್ಥ್ಯದ ಅಭಿವೃದ್ಧಿಗೆ ಅಡಿಗಲ್ಲಾಗಿದೆ, ನಮ್ಮಲ್ಲಿ ಹಲವಾರು ಜನ ಬುದ್ಧಿವಂತ ಕೆಲಸಗಾರರಿದ್ದು, ವಿದ್ಯೆ ಇಲ್ಲದೆ ಇರುವುದರಿಂದ ಅವರಿಗೆ ಬಡ್ತಿ ದೊರೆಯದೆ ಕಡಿಮೆ ಕೂಲಿಗೆ ಕೆಲಸ ಮಾಡುತ್ತಿದ್ದು, ಇವರಿಗೆ ವಿದಾಭ್ಯಾಸದ ಅವಶ್ಯಕತೆ ಇದ್ದು, ವಿದ್ಯೆ ಕೊಡಿಸುವ ಕೆಲಸವಾಗಬೇಕೆಂದು' ಹೇಳಿರುತ್ತಾರೆ. ಜತೆಗೆ ವಯಸ್ಕರ ಶಿಕ್ಷಣದ ಕುರಿತು ಬಂದ ಲೇಖನಗಳಿಗೆ ಬಹುಮಾನವನ್ನು ಕೊಡಲು ಕಾರ್ಖಾನೆಯವರು ತೀರ್ಮಾನಿಸಿದ್ದಾರೆ. ಈ ಲೇಖನದಿಂದ ಕಾರ್ಖಾನೆಗಳಲ್ಲಿಯೂ ಕೂಡ ವಯಸ್ಕರ ಶಿಕ್ಷಣದ ಬಗ್ಗೆ ಜಾಗೃತಿ ಮೂಡಿಸುವ ಕೆಲಸವನ್ನು ವಯಸ್ಕರ ಶಿಕ್ಷಣ ಸಮಿತಿ ಮತ್ತು 'ಬೆಳಕು' ಪತ್ರಿಕೆ ಮಾಡಿತಿತ್ತೆಂದು ತಿಳಿದುಕೊಳ್ಳಬಹುದು.

ದಿನಾಂಕ ೨೧.೦೯.೧೯೪೬ರ ಸಂಚಿಕೆಯಲ್ಲಿ 'ಬೆಳಕು' ಸಂಪಾದಕಿ ಹಾಗೂ ಮೈಸೂರಿನ ಶಾಸನಸಭೆ ಸದಸ್ಯರಾದ ಎಂ.ಆರ್. ಲಕ್ಷ್ಮಮ್ಮನವರು ಉತ್ತರ ಕರ್ನಾಟಕದ ಪ್ರವಾಸವನ್ನು ಕೈಗೊಂಡಿದ್ದು ೦೫.೦೯.೧೯೪೬ರಂದು ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ವಯಸ್ಕರ ಶಿಕ್ಷಣ ವಿಷಯದ ಬಗ್ಗೆ ಉಪನ್ಯಾಸ ನೀಡಿ ವಯಸ್ಕರ ಶಿಕ್ಷಣ ಸಮಿತಿಯು ಕಾರ್ಯವರದಿಯನ್ನು ಸಭೆಯಲ್ಲಿಟ್ಟರು. ಚಿಕ್ಕಬಳ್ಳಾಪುರದಲ್ಲಿರುವ ರುಕ್ಮಿಣಿ ಅಮ್ಮನವರು ಚಿಕ್ಕಬಳ್ಳಾಪುರದ ಆದಿಕರ್ನಾಟಕ ಕೇರಿಯಲ್ಲಿ ಒಂದು ಉಚಿತ ವಾಚನಾಲಯವನ್ನು ಪ್ರಾರಂಭೀಸಿ ದಿನಪತ್ರಿಕೆ ಮತ್ತು ವಾರಪತ್ರಿಕೆಯನ್ನು ತರಿಸಿಕೊಡುವ ಬಗ್ಗೆ ಹಾಗೂ ಪುಸ್ತಕಭಂಡಾರದ ಅಧಿಕಾರಿಯಾಗಿ ಕೆಲಸ ಮಾಡುವಂತಹವರು ತಮ್ಮ ಸಂಭಾವನೆಯನ್ನು ಪಡೆದುಕೊಳ್ಳದೆ, ಅದರಿಂದ ಪುಸ್ತಕಭಂಡಾರಕ್ಕೆ ಹೆಚ್ಚಿನ ಪುಸ್ತಕಗಳನ್ನು ತರಿಸಿಕೊಳ್ಳುವ ಬಗ್ಗೆ 'ಬೆಳಕು' ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ.

ದಿನಾಂಕ ೨೬.೧೦.೧೯೪೬ರ ಸಂಚಿಕೆಯಲ್ಲಿ ಭದ್ರಾವತಿಯ ಕಬ್ಬಿಣ ಕಾರ್ಖಾನೆಯಲ್ಲಿ ವಯಸ್ಕರ ಶಿಕ್ಷಣ ಶಾಲೆಗಳು ನಡೆದು ಅನೇಕರು ಅಕ್ಷರಸ್ಥರಾಗಿದ್ದು, ಶೇ. ೬೦ ಕ್ಕಿಂತ ಹೆಚ್ಚು

ಹಾಜರಿ ಇದ್ದವರಿಗೆ ಪ್ರತಿದಿನ ಒಂದು ಆಣೆಯಂತೆ ಪ್ರೋತ್ಸಾಹಧನವನ್ನು ನೀಡಲು ಕಾರ್ಖಾನೆಯ ಆಡಳಿತ ಮಂಡಳಿ ನಿರ್ಧರಿಸಿದ್ದು, ಇತರರಿಗೆ ಅಕ್ಷರ ಕಲಿಯಲು ಆಸಕ್ತಿ ಬರುವಂತಹ ಕೆಲಸವನ್ನು ಮಾಡಿದ ಕಾರ್ಖಾನೆಯ ಆಡಳಿತ ಮಂಡಳಿಯನ್ನು ಅಭಿನಂದಿಸಿದ ಸುದ್ದಿ ಪ್ರಕಟವಾಗಿದೆ. ಮೈಸೂರು ಜಿಲ್ಲೆಯ ಕೃಷ್ಣರಾಜನಗರ ತಾಲ್ಲೂಕು, ಅಂಕನಹಳ್ಳಿಯಲ್ಲಿ ಪುಸ್ತಕಭಂಡಾರ ಪ್ರಾರಂಭವಾದ ಬಗ್ಗೆ, ಮಂಡ್ಯ ಜಿಲ್ಲೆಯ ಒಡೆಯರಹಳ್ಳಿಯಲ್ಲಿ ಪುಸ್ತಕಭಂಡಾರ ಪ್ರಾರಂಭವಾದ ಬಗ್ಗೆ, ಅಲ್ಲಿ ಯಕ್ಷಗಾನ ಕೋಲಾಟ, ಸುಗ್ಗಿಯ ಕುಣಿತ, ಮುಂತಾದವು ಬೆಳಗಿನ ಝಾವ ೪ ಗಂಟೆಗೆ ನಡೆದ ಬಗ್ಗೆ ಸುದ್ದಿ ಪ್ರಕಟವಾಗಿದೆ.

ದಿನಾಂಕ ೨೬.೧೦.೧೯೪೬ರ ಸುಭಾಷಿತ ಕಾಲಂನಲ್ಲಿ 'ವಾರ್ಷಿಕ ಸಂಚಿಕೆ' ಎಂಬ ಶೀರ್ಷಿಕೆಯಡಿಯಲ್ಲಿ 'ಬೆಳಕು'ವಿಗೆ ನಾಲ್ಕು ವರುಷ ತುಂಬಿತು. ಮುಂದಿನ ತಿಂಗಳಿಂದ ಅದು ಐದು ವರುಷದ ಮಗು ಆದ್ದರಿಂದ ನವೆಂಬರ್‌ನಲ್ಲಿ ವಾರ್ಷಿಕ ಸಂಚಿಕೆ ಹೊರಡುತ್ತದೆ ಎಂದು ಸಂಪಾದಕರು ಸುದ್ದಿಯನ್ನು ಪ್ರಕಟಿಸಿದ್ದಾರೆ.

ದಿನಾಂಕ ೨೩.೧೧.೧೯೪೬ರ ಸಂಚಿಕೆಯಲ್ಲಿ 'ಅಕ್ಷರಪ್ರಚಾರದಲ್ಲಿ ಮಹಿಳೆಯರ ಆಸಕ್ತಿ' ಎಂಬ ಶೀರ್ಷಿಕೆಯಡಿಯಲ್ಲಿ ಮುಖಪುಟ ಲೇಖನ ಪ್ರಕಟವಾಗಿದ್ದು, ಮಹಿಳಾ ಸಮ್ಮೇಳನದಲ್ಲಿ ಚರ್ಚಿತವಾದ ವಿಷಯಗಳು ಹಳ್ಳಿಹಳ್ಳಿಗೂ ತಲುಪಬೇಕೆಂದು, ಹೆಂಗಸರಲ್ಲಿ ಅಕ್ಷರ ನೆಲೆಗೊಳ್ಳದ ಹೊರತು ದೇಶದ ಏಳಿಗೆ ಸುಲಭವಲ್ಲ. ಮಹಿಳೆಯರಲ್ಲಿ ಅಕ್ಷರದ ಅರಿವನ್ನು ಮೂಡಿಸುವ ಕೆಲಸವನ್ನು ಹೇಗೆ ಹಮ್ಮಿಕೊಳ್ಳಬೇಕು? ಅಕ್ಷರ ಪ್ರಚಾರದಲ್ಲಿ ಆಸಕ್ತಿ ಇರುವ ಮಹಿಳೆಯರನ್ನು ಕರೆದು ಸಭೆ ಏರ್ಪಡಿಸಿ ಚರ್ಚಿಸಿ ಅಕ್ಷರಪ್ರಚಾರ ಕಾರ್ಯವನ್ನು ಇಡೀ ದೇಶದಾದ್ಯಂತ ಅನುಷ್ಠಾನಗೊಳಿಸಬೇಕೆಂಬ ಲೇಖನ ಪ್ರಕಟವಾಗಿದ್ದು, ಎಂ.ಆರ್. ಲಕ್ಷಮ್ಮನವರು ಮಹಿಳಾ ಶಿಕ್ಷಣಕ್ಕೆ ಹೆಚ್ಚು ಒತ್ತು ನೀಡಿದ್ದು, ಅವರು ಮಹಿಳಾ ಚಿಂತಕಿ ಮತ್ತು ಸ್ತ್ರೀ ಸುಧಾರಕಿಯಾಗಿದ್ದರೆಂದು ತಿಳಿದುಬರುತ್ತದೆ.[೯೩]

ದಿನಾಂಕ ೦೭.೧೨.೧೯೪೬ರ ಸಂಚಿಕೆಯಲ್ಲಿ ಶ್ರೀರಂಗಪಟ್ಟಣದ ಕೆ. ಶೆಟ್ಟಿಹಳ್ಳಿಯಲ್ಲಿ ಹರಿಜನರಿಗೆ ಒಂದು ಪುಸ್ತಕಭಂಡಾರವನ್ನು ತೆರೆದ ಬಗ್ಗೆ, ಜಗಳೂರು ತಾಲ್ಲೂಕು ತೋರಣಗಟ್ಟೆ ಗ್ರಾಮದಲ್ಲಿ ವಯಸ್ಕರ ಶಿಕ್ಷಣ ಸಮಿತಿ 'ಸ್ತ್ರೀ ವಿದ್ಯಾಭ್ಯಾಸ' ಎಂಬ ವಿಷಯ ಕುರಿತ ಉಪನ್ಯಾಸ ಕಾರ್ಯಕ್ರಮ ನಡೆದ ಬಗ್ಗೆ, ಬೆಂಗಳೂರಿನಲ್ಲಿ ನಡೆದ ಮೈಸೂರು ಸ್ಟೇಟ್ ಕಾಂಗ್ರೆಸ್ ಆರನೇ ಅಧಿವೇಶನದಲ್ಲಿ, ಮೈಸೂರು ಸಂಸ್ಥಾನದ ಅಕ್ಷರಪ್ರಚಾರ ಸಮಿತಿಯವರು ಚಲನಚಿತ್ರ ಪ್ರದರ್ಶನ ಮಾಡಿದ್ದರಿಂದ ಜನರಿಗೆಲ್ಲಾ ವಿದ್ಯೆ ಮತ್ತು ಅಕ್ಷರಪ್ರಚಾರದ ಉದ್ದೇಶ ಮತ್ತು ಅವಶ್ಯಕತೆ ತಿಳಿದ ಬಗ್ಗೆ ಸುದ್ದಿ ಪ್ರಕಟವಾಗಿದೆ. ಈ ಸಂಚಿಕೆಯಲ್ಲಿ ವಯಸ್ಕ ವಿದ್ಯಾರ್ಥಿಗಳಿಗೆ ಒಂದು ಸ್ಪರ್ಧೆ ಏರ್ಪಡಿಸಿದ್ದು ಮಹಾತ್ಮ ಗಾಂಧೀಜಿಯವರ ಮುಖ್ಯ ಉಪದೇಶ ಯಾವುದೆಂದು ಉತ್ತರ

ತಿಳಿಸಬೇಕು ಹಾಗೂ ಉತ್ತಮ ಉತ್ತರಕ್ಕೆ ರೂ.೧೦/- ಬಹುಮಾನವನ್ನು ನೀಡಲಾಗುವುದೆಂದು ಪ್ರಕಟಿಸಲಾಗಿದೆ.[೪]

ದಿನಾಂಕ ೧೮.೦೧.೧೯೪೭ರ ಸಂಚಿಕೆಯಲ್ಲಿ ಪ್ರಕಟವಾದ ವಯಸ್ಕರ ಶಿಕ್ಷಣ ವಿದ್ಯಾರ್ಥಿಗಳಿಗೆ ಮಹಾತ್ಮ ಗಾಂಧೀಜಿಯವರ ಜೀವನ ಮತ್ತು ಉಪದೇಶದ ಮೂಲ ತತ್ವಗಳನ್ನು ಒಳಗೊಂಡ ಲೇಖನಗಳನ್ನು ಬರೆದು ಕಳುಹಿಸುವ ಸ್ಪರ್ಧೆಯ ಬಗ್ಗೆ 'ಬೆಳಕು'ವಿನಲ್ಲಿ ಪ್ರಕಟವಾಗಿದ್ದು, ಮಹಾತ್ಮರ ಸಂದೇಶಗಳನ್ನು ತಿಳಿಸುವ ಮತ್ತು ಜನರಲ್ಲಿ ಓದುವ ಹವ್ಯಾಸವನ್ನು ಬೆಳೆಸಲು ಎಂ.ಆರ್. ಲಕ್ಷಮ್ಮನವರು ಪ್ರಯತ್ನಿಸುತ್ತಿದ್ದ'ರೆಂದು ತಿಳಿದುಬರುತ್ತದೆ.

ದಿನಾಂಕ ೨೫.೦೧.೧೯೪೭ ಸಂಚಿಕೆಯಲ್ಲಿ ಪ್ರಕಟವಾದ 'ಬೆಳಕು' ಪತ್ರಿಕೆಯಲ್ಲಿ 'ಬೆಳಕು ಓದುಗರಲ್ಲಿ ವಿನಂತಿ'ಎಂಬ ಶೀರ್ಷಿಕೆಯಲ್ಲಿ ಜನಸಾಮಾನ್ಯರಲ್ಲಿ ಮನೆಮಾಡಿರುವ ಅಜ್ಞಾನವನ್ನು ಓಡಿಸಿ ತಿಳುವಳಿಕೆಯನ್ನು ಮೂಡಿಸುವುದೆ 'ಬೆಳಕು'ವಿನ ಉದ್ದೇಶ. ಇದು ನಮ್ಮ ಹಳ್ಳಿಗಳಲ್ಲಿರುವ ವಯಸ್ಕರಿಗಾಗಿ ಇರುವ ಪತ್ರಿಕೆ. ಈ ಉದ್ದೇಶವು ಪೂರ್ತಿಯಾಗಿ ನೆರವೇರಬೇಕಾದರೆ 'ಬೆಳಕು' ಪತ್ರಿಕೆಯ ಓದುಗರು ಸಹಕರಿಸಬೇಕು. ಅವರ ಅಪೇಕ್ಷೆ, ಆಸೆ, ಅವಶ್ಯಕತೆ ನಮಗೆ ತಿಳಿಯಬೇಕು, ಅದಕ್ಕಾಗಿ ಈ ವಿನಂತಿ. ತಾವು ತಮ್ಮ ಸಂದೇಹಗಳನ್ನು, ತಮಗೆ ತಿಳಿಯದಿರುವ ವಿಷಯಗಳನ್ನೂ ನಮಗೆ ಬರೆದು ತಿಳಿಸಿ, ತಮ್ಮ ಪ್ರಶ್ನೆಗಳಿಗೆ ಉತ್ತರ ಕೊಡಲು, ತಮ್ಮ ಸಂದೇಹಗಳನ್ನು ಪರಿಹಾರ ಮಾಡಲು ನಾವು ಪ್ರಯತ್ನಿಸುತ್ತೇವೆ. ತಾವು ಯಾವ ವಿಷಯವನ್ನು ಕುರಿತಾದರೂ ಪ್ರಶ್ನೆ ಕೇಳಬಹುದು. ರಾಜಕೀಯ, ಹಣಕಾಸಿನ ವಿಚಾರ, ವ್ಯಾಪಾರ, ವ್ಯವಸಾಯ, ಕೈಗಾರಿಕೆ, ಧರ್ಮ, ಆಚಾರಗಳು ಇತರೆ ವಿಷಯಗಳು. ಹಾಗೆಯೇ ನಿಮ್ಮ ಕ್ಷೇಮಸಮಾಚಾರವನ್ನು ಕಷ್ಟಗಳನ್ನೂ ತಿಳಿಸಿದರೆ ನಮ್ಮಿಂದ ಏನಾದರೂ ಉಪಕಾರವಾಗುವಂತಿದ್ದರೆ ಮಾಡುವೆವು. ಒಟ್ಟಿನಲ್ಲಿ ತಾವು ಯಾವುದಾದರೂ ವಿಷಯವನ್ನು ತಿಳಿದುಕೊಳ್ಳಬೇಕೆಂದು ಬಯಸಿದರೆ ನಮಗೆ ಬರೆಯಿರಿ. 'ಬೆಳಕು' ಕಛೇರಿಗೆ ಪತ್ರ ಬರೆಯುವಂತೆ ಸಂಪಾದಕಿ ಕೋರಿಕೊಂಡಿರುವ ಬಗ್ಗೆ ಪ್ರಕಟಗೊಂಡಿದ್ದು 'ಬೆಳಕು' ಪತ್ರಿಕೆಯು ಎಲ್ಲಾ ವಿಷಯಗಳ ಬಗ್ಗೆ ಮಾಹಿತಿ ನೀಡುವ ಜನರಿಗೆ ಅರಿವು ಮೂಡಿಸುವ ಓದುಗರನ್ನು ಚಿಂತನೆಗಳಿಗೆ ಒಡ್ಡುವ ಕೆಲಸವನ್ನು ಮಾಡುತ್ತಿತ್ತು. ಬೆಳಕು ಪತ್ರಿಕೆ ಕೇವಲ ನವಸಾಕ್ಷರರಿಗೆ ಅಲ್ಲದೆ ಎಲ್ಲರಿಗೂ ಬೇಕಾಗಿರುವ ಪತ್ರಿಕೆಯಾಗಿತ್ತು ಎಂದರೆ ತಪ್ಪಾಗಲಾರದು ಮತ್ತು ಆ ಪ್ರಶ್ನೆಗಳಿಗೆ ಉತ್ತರಿಸುವ ಸಾಮರ್ಥ್ಯವನ್ನು ಹೊಂದಿದ ಸಂಪಾದಕಿಯಾದ ಎಂ.ಆರ್. ಲಕ್ಷಮ್ಮನವರಿಗೆ ಇದ್ದ ಜ್ಞಾನದ ವಿಸ್ತಾರವನ್ನು ಇದರಿಂದ ನಾವು ತಿಳಿದುಕೊಳ್ಳಬಹುದು.

ದಿನಾಂಕ ೦೧.೦೨.೧೯೪೭ರ ಸಂಚಿಕೆಯಲ್ಲಿ ವಯಸ್ಕರ ಶಿಕ್ಷಣ ಸಮಿತಿಯ ಸಭೆ ನಡೆದು, ಆ ಸಭೆಯಲ್ಲಿ ಮಾತನಾಡಿದ ವಯಸ್ಕರ ಶಿಕ್ಷಣ ಸಮಿತಿಯ ಉಪಾಧ್ಯಕ್ಷರಾದ ಡಾ. ಪುರುಷೋತ್ತಮರವರು ವಯಸ್ಕರಿಗೆ ಅಕ್ಷರ ಕಲಿಸಿದ ಮಾತ್ರಕ್ಕೆ, ಪುಸ್ತಕಭಂಡಾರವನ್ನು

ಸ್ಥಾಪಿಸಿದ ಮಾತ್ರಕ್ಕೆ ಅವರ ಶಿಕ್ಷಣವು ಪರಿಪೂರ್ಣವಾಗುವುದಿಲ್ಲ. ಜನರ ದೃಷ್ಟಿ ಕೋನ ಬದಲಾಗಬೇಕು. ಅವರ ಮೈಮನಸ್ಸು, ಸಾಮಾಜಿಕ ಜೀವನ ಇವುಗಳಲ್ಲಿ ಹೊಸ ಚೈತನ್ಯ ಮೂಡಬೇಕು. ಜನಜೀವನಕ್ಕೆ ತಿಳುವಳಿಕೆ, ಸಂತೋಷ, ವಿನೋದ ನೀಡುವ ಸಂಘಗಳನ್ನು ಸ್ಥಾಪಿಸಬೇಕು. ನಿರಾಸೆಯಿಂದ ದಿಕ್ಕುಕೆಟ್ಟು ಮುಂದೆ ಹೇಗೆ ಹೆಜ್ಜೆ ಇಡಬೇಕೆಂದು ತಿಳಿಯದ ನಮ್ಮ ಜನರಲ್ಲಿ ಮಹಾತ್ವಾಕಾಂಕ್ಷೆಯನ್ನು ತುಂಬಿ, ಅವರ ಮುಂದಿನ ಗುರಿಯನ್ನು ಮತ್ತು ದಾರಿಯನ್ನು ತೋರಿಸಿ ಕರೆದೊಯ್ಯುವ ದೇಶಭಕ್ತಿ, ಸಾಹಸಿ, ಬುದ್ಧಿವಂತ, ವಿಶ್ವಾಸನಂಬಿಕೆ ಇರುವ ಕಾರ್ಯಕರ್ತರು ನಮಗೆ ಬೇಕು. ಅವರಿಗೆ ಬೇಕಾದಷ್ಟು ಅನುಕೂಲಗಳನ್ನು ಒದಗಿಸಿ, ಸ್ವಾತಂತ್ರ್ಯವನ್ನು ಮತ್ತು ಗೌರವವನ್ನು ನೀಡಿ, ಶಿಕ್ಷಣ ನೀಡುವಲ್ಲಿ ದೇಶದ ಅಭಿವೃದ್ಧಿಯಲ್ಲಿ ತೊಡಗಿಕೊಳ್ಳಬೇಕು ಎಂದು ಭಾಷಣ ಮಾಡಿದ್ದಾರೆ.[೫]

ದಿನಾಂಕ ೨೨.೦೨.೧೯೪೭ರ ಸಂಚಿಕೆಯಲ್ಲಿ ಶ್ರೀ. ಡಿ.ವಿ. ಗುಂಡಪ್ಪನವರು ವಯಸ್ಕರ ಶಿಕ್ಷಣ ಸಮಿತಿಗೆ ಭೇಟಿನೀಡಿ 'ಜ್ಞಾನ ಎಲ್ಲರಿಗೂ ಸೇರಿದ್ದು, ವೇದ ಮತ್ತು ಉಪನಿಷತ್ತುಗಳು ಯಾವ ಪಂಗಡದ ಸೊತ್ತೂ ಅಲ್ಲ. ಜ್ಞಾನಿಗಳು ಧರ್ಮದ ಬೆಳಕನ್ನು ಹರಡುವರು. ಅನೇಕ ಪುರೋಹಿತರಿಗೆ ಮಂತ್ರಗಳ ಅರ್ಥವೇ ತಿಳಿಯದು. ನಮ್ಮಲ್ಲಿ ಧರ್ಮಜ್ಞಾನವಿದೆ. ಸಮಾಜವಿಜ್ಞಾನವಿಲ್ಲ. ಸಮಾಜವಿಜ್ಞಾನವನ್ನು ಪಾಶ್ಚಿಮಾತ್ಯರಿಂದ ಕಲಿಯಬೇಕು. ವಿಜ್ಞಾನವೆಂದರೆ ವಿಚಾರವಿಮರ್ಶೆಗಳಿಂದ ಹುಟ್ಟಿದ ಜ್ಞಾನ' ಎಂಬುದಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ ಅವರು ವಯಸ್ಕರ ಶಿಕ್ಷಣ ಸಮಿತಿಯ ಕಾರ್ಯವನ್ನು ಮೆಚ್ಚಿಕೊಂಡರು. 'ಬೆಳಕು' ಪತ್ರಿಕೆಯ ಮೂಲಕ ಜನರಿಗೆ ಸುಲಭವಾಗಿ ತಿಳಿಯುವಂತೆ ವಿಜ್ಞಾನವನ್ನು ತಿಳಿಸಬೇಕು. ನಮ್ಮ ಜನ ಅನಕ್ಷರಸ್ಥರಾಗಿದ್ದರೂ ಸುಸಂಸ್ಕೃತರು. ಪ್ರಪಂಚದಲ್ಲಿ ಯಾವ ಜನರು ನಮ್ಮ ಜನರಷ್ಟು ಸಂಸ್ಕೃತರಲ್ಲ. ನಮ್ಮ ಧರ್ಮವು ಬದುಕಿರುವುದು ಹಳ್ಳಿಗರ ಸರಳ ಜೀವನದಿಂದ. ಅವರು ಕಟ್ಟಿದ ಬಡಮಠಗಳೇ ನಮ್ಮ ಧರ್ಮಕ್ಕೆ ಆಶ್ರಯ. ಶೃಂಗೇರಿ, ಉಡುಪಿಗಳಂತಹ ಐಶ್ವರ್ಯ ತುಂಬಿದ ಮಠಗಳಿಂದ ನಮ್ಮ ಸಮಾಜಕ್ಕೆ ಏನೂ ಉಪಯೋಗವಿಲ್ಲ. ಅನೇಕ ಹರಿಜನರು ಶಾಂತಿಯಿಂದ ಜೀವನ ಸಾಗಿಸುತ್ತಿದ್ದು ಕಷ್ಟ ನಷ್ಟಗಳ ಮಧ್ಯೆಯೇ ಜೀವನ ತತ್ವ ಅವರನ್ನು ಕೈಬಿಡದೆ ಕಾಯುತ್ತಿದೆ. ಹಿಂದೂ ಧರ್ಮವನ್ನು ಇತರ ಧರ್ಮಗಳಂತೆ ಇಷ್ಟೇ ಎಂಬ ಚೌಕಟ್ಟಿನಲ್ಲಿ ಬಂಧಿಸಿಡಲು ಸಾಧ್ಯವಿಲ್ಲ. ಹಿಂದೂ ಧರ್ಮ ತಾನೇ ತಾನಾಗಿ ಬೆಳೆದು ಬಂದಿದ್ದು, ಅಲ್ಲಿ ಸರ್ವರಿಗೂ ಅವಕಾಶವಿದೆ ಎಂಬ ಮಾತುಗಳನ್ನು ಡಿ.ವಿ.ಜಿಯವರು ನುಡಿದಿದ್ದು ಅದನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ.[೬]

ದಿನಾಂಕ ೧೯.೦೪.೧೯೪೭ರ ಸಂಚಿಕೆಯಲ್ಲಿ ಮೈಸೂರು ಜಿಲ್ಲಾ ವಯಸ್ಕರ ಶಿಕ್ಷಣ ಸಮಿತಿಯ ವಾರ್ಷಿಕ ಸಭೆ ಜಿಲ್ಲಾಧಿಕಾರಿಗಳಾದ ಜಿ.ಎನ್. ನಾಗರಾಜರಾಯರ ಅಧ್ಯಕ್ಷತೆಯಲ್ಲಿ ಸಭೆ ನಡೆದು, ಮೈಸೂರು ಜಿಲ್ಲೆಯಲ್ಲಿ ಮಹಿಳೆಯರ ಶಾಲೆಗಳು ಆರಂಭವಾಗಬೇಕು.

ಮಹಿಳೆಯರಿಗೆ ಮತ್ತು ಹಿಂದುಳಿದ ವರ್ಗದವರಿಗೆ ಶಿಕ್ಷಣ ನೀಡಿದರೆ ವಯಸ್ಕರ ಶಿಕ್ಷಣ ಸಮಿತಿಯ ಉದ್ದೇಶ ಈಡೇರುವುದು ಎಂದು ಅವರು ಅಭಿಪ್ರಾಯ ಪಟ್ಟಿದ್ದು, ಮಹಿಳೆಯರ ಅಭಿವೃದ್ಧಿಗಾಗಿ 'ಬೆಳಕು' ಪತ್ರಿಕೆ ಮತ್ತು ಎಂ.ಆರ್. ಲಕ್ಷಮ್ಮ ಶ್ರಮಿಸುತ್ತಿದ್ದರೆಂಬುದು ತಿಳಿದು ಬರುತ್ತದೆ.

ದಿನಾಂಕ ೧೩.೧೦.೧೯೪೭ರ ಭಾನುವಾರ ಬೆಳಿಗ್ಗೆ ವಯಸ್ಕರ ಶಿಕ್ಷಣ ಸಮಿತಿಯಲ್ಲಿ ನಡೆದ ವಯಸ್ಕರಿಗೆ ಜ್ಞಾನ ಭಂಡಾರವನ್ನು ಹೆಚ್ಚಿಸಲು ಸಿನಿಮಾ ಪ್ರದರ್ಶಿಸುವ ಯಂತ್ರವನ್ನು ಕೊಂಡುಕೊಳ್ಳುವ ಬಗ್ಗೆ ಮಹಿಳೆಯರ ತರಗತಿಗೆ ಹೆಚ್ಚು ಗಮನ ಕೊಡಬೇಕೆಂದು, ಹರಿಜನರಿಗೆ ಹೆಚ್ಚು ಶಾಲೆಯನ್ನು ತೆರೆಯಬೇಕೆಂದು, ತಮಿಳು, ತೆಲುಗು ಭಾಷೆಗಳ ಶಾಲೆಗಳನ್ನು ಪ್ರಾರಂಭಿಸಬೇಕೆಂದು ಬೇಡಿಕೆಯಿಟ್ಟಾಗ ರಾಜಭಾಷೆ ಕನ್ನಡವಾಗಿರುವುದರಿಂದ ತಮಿಳು ಮತ್ತು ತೆಲುಗಿನಲ್ಲಿ ಅಕ್ಷರ ಕಲಿಯದೆ. ಕನ್ನಡ ಭಾಷೆಯಲ್ಲಿಯೇ ವಯಸ್ಕರ ಶಿಕ್ಷಣ ಪಡೆದುಕೊಳ್ಳಬೇಕು ಎಂಬ ನಿರ್ಣಯವನ್ನು ಕೈಗೊಳ್ಳಲಾಯಿತು. ವಯಸ್ಕರ ಶಿಕ್ಷಣ ಸಮಿತಿಯು ಕನ್ನಡ ಭಾಷೆಯನ್ನು ಬೆಳೆಸುವ ಕಾರ್ಯದ ಜೊತೆಗೆ ಅನ್ಯ ಭಾಷಿಗರು ಕನ್ನಡವನ್ನು ಕಲಿತು ವ್ಯವಹರಿಸಬೇಕೆಂದು ಸ್ವಾತಂತ್ರ್ಯಪೂರ್ವದಲ್ಲಿಯೇ ಆಲೋಚಿಸಿದ್ದು, ಎಂ.ಆರ್. ಲಕ್ಷಮ್ಮನವರು ವಯಸ್ಕರ ಶಿಕ್ಷಣ ಸಮಿತಿಯ ಭಾಗವಾಗಿದ್ದು ಕನ್ನಡ ಭಾಷೆಯನ್ನು ಎಲ್ಲೆಡೆ ಹರಡುವ ಕೈಂಕರ್ಯವನ್ನು ಮಾಡುತ್ತಿದ್ದರೆಂದು ತಿಳಿಯಬಹುದು.[೯೭]

ಎಂ.ಆರ್. ಲಕ್ಷಮ್ಮನವರು ೧೯೪೭ರ ಅಕ್ಟೋಬರ್ ತಿಂಗಳವರೆಗೆ 'ಬೆಳಕು' ಪತ್ರಿಕೆಯ ಸಂಪಾದಕಿಯಾಗಿ ವಯಸ್ಕರ ಶಿಕ್ಷಣ ಸಮಿತಿಯ ಸದಸ್ಯರಾಗಿ ಕಾರ್ಯ ನಿರ್ವಹಿಸಿದ್ದು ಅವರ ನೇತೃತ್ವದಲ್ಲಿ ಅನೇಕ ಮಹಿಳಾ ಶಿಕ್ಷಣ ಶಾಲೆಗಳು ಪ್ರಾರಂಭವಾಗಿ ಕರ್ತವ್ಯ ನಿರ್ವಹಿಸಿದ್ದು ಕಂಡುಬರುತ್ತದೆ. ಶಿಕ್ಷಣದ ಬಗ್ಗೆ ಅದರಲ್ಲೂ ವಿಶೇಷವಾಗಿ ಮಹಿಳಾ ಶಿಕ್ಷಣ, ಮೂಲಶಿಕ್ಷಣ ಮತ್ತು ಕೌಶಲ್ಯಾಭಿವೃದ್ಧಿಯ ಬಗ್ಗೆ ಸ್ವತಂತ್ರ್ಯಪೂರ್ವದಲ್ಲಿಯೇ ಚಿಂತಿಸಿ ಕಾರ್ಯರೂಪಕ್ಕೆ ತಂದ ಹೆಗ್ಗಳಿಗೆ ಎಂ.ಆರ್. ಲಕ್ಷಮ್ಮನವರದ್ದಾಗಿದೆ.

**೭.೭ ಬೆಳಕು ಪತ್ರಿಕೆಯಲ್ಲಿ ವ್ಯಕ್ತವಾದ ಎಂ. ಆರ್. ಲಕ್ಷಮ್ಮ ಅವರ ರಾಜಕೀಯ ಚಿಂತನೆಗಳು.**

ದಿನಾಂಕ ೧೬.೦೬.೧೯೪೫ರ ಸಂಚಿಕೆಯಲ್ಲಿ 'ರಾಮರಾಜ್ಯ' ಎಂಬ ಶೀರ್ಷಿಕೆಯಲ್ಲಿ ರಾಮರಾಜ್ಯ ಎಂದರೆ ಏನು? ಅದು ಪೂರ್ಣ ಪ್ರಜಾಪ್ರಭುತ್ವ, ಅಲ್ಲಿ ಸಂಪತ್ತು, ವರ್ಣ, ಜಾತಿ, ಮತ, ಲಿಂಗಭೇದವಿಲ್ಲದೆ ನ್ಯಾಯವಿಮರ್ಶೆ ನಿಷ್ಪಕ್ಷಪಾತವಾಗಿದ್ದು, ಪ್ರತಿಯೊಬ್ಬರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವ, ಪತ್ರಿಕೆಗಳಿಗೆ ಸ್ವಾತಂತ್ರ್ಯವಿದ್ದು ಸತ್ಯ ಅಹಿಂಸೆಗಳ ನೆಲೆಗಟ್ಟಿನಲ್ಲಿ ನಿರ್ಮಾಣವಾದ ಪ್ರತಿಯೊಂದು ಗ್ರಾಮವು ಸುಖ-ಸಂಪತ್ತು, ತೃಪ್ತಿಗಳಿಂದ ಇರುವ ಜನರಿಂದ ಸಮೃದ್ಧಿಯಾಗಿರುವುದು. ಮಹಾತ್ಮ ಗಾಂಧೀಜಿಯವರು ರಾಮರಾಜ್ಯ ಎಂದರೆ ಹೇಗಿರಬೇಕು ಎಂದು ಹೇಳಿದ್ದು, ಪ್ರತಿಯೊಬ್ಬನು ದುಡಿಯಬೇಕು, ಪ್ರತಿಯೊಬ್ಬ ಪ್ರಜೆಯು ತನ್ನ ಕರ್ತವ್ಯವನ್ನು

ಸರಿಯಾಗಿ ಪಾಲಿಸಬೇಕು. ಮೊದಲು ಕರ್ತವ್ಯ ಆನಂತರ ಹಕ್ಕುಗಳು ಬರುತ್ತವೆ ಎಂದು ಅವರು ಹೇಳಿದ್ದು, ಪ್ರತಿಯೊಬ್ಬರು ವಿಶಾಲವಾಗಿ ಆಲೋಚಿಸುವ, ನಡೆದುಕೊಳ್ಳುವ ಬಗ್ಗೆ ಲೇಖನ ಪ್ರಕಟವಾಗಿದ್ದು, ಎಂ.ಆರ್. ಲಕ್ಷಮ್ಮನವರು ರಾಮರಾಜ್ಯದ ಕಲ್ಪನೆಯನ್ನು ಜನರಲ್ಲಿ ಮೂಡಿಸಿ, ಆದರ್ಶ ರಾಜ್ಯದ ಬಗ್ಗೆ ತಮ್ಮ ನಿಲುವನ್ನು ವ್ಯಕ್ತಪಡಿಸಿದ್ದಾರೆ.[೯೮]

ದಿನಾಂಕ ೨೫.೦೮.೧೯೪೫ರ ಸಂಪಾದಕೀಯದಲ್ಲಿ 'ವಿಜಯೋತ್ಸವ' ಎಂಬ ಶೀರ್ಷಿಕೆಯಲ್ಲಿ ಐದು ವರ್ಷದಿಂದ ನಡೆಯುತ್ತಿದ್ದ ಎರಡನೇ ಮಹಾಯುದ್ಧ ನಿಂತ ಬಗ್ಗೆ, ಯುದ್ಧದ ಸಮಯದಲ್ಲಿ ಉಂಟಾದ ತೊಂದರೆಗಳ ಬಗ್ಗೆ, ಯುದ್ಧ ನಿಂತರು ಪ್ರಪಂಚದಲ್ಲಿ ಶಾಂತಿ ಸ್ಥಾಪಿತವಾಗುವುದೇ? ಎಂಬ ಪ್ರಶ್ನಾರ್ಥಕ ಭಾವದೊಂದಿಗೆ ಈ ಲೇಖನವು ಹಲವಾರು ಪ್ರಶ್ನೆಗಳನ್ನು ಮೂಡಿಸಿದ್ದು, ೧೯೧೪ ರಲ್ಲಿ ನಡೆದ ಮೊದಲ ಮಹಾಯುದ್ಧದ ನಂತರ ನಡೆದ ವರ್ಸೆಲ್ಸ್ ಒಪ್ಪಂದ ಎರಡನೇ ಮಹಾಯುದ್ಧಕ್ಕೆ ಕಾರಣವಾಯಿತು. ಹೀಗೆ ಮತ್ತೆ ಮತ್ತೆ ಯುದ್ಧವಾಗುವ ಸಂದರ್ಭವನ್ನು ತಪ್ಪಿಸುವ ಸಲುವಾಗಿ ಮಹಾತ್ಮ ಗಾಂಧೀಜಿಯವರು ಅಹಿಂಸೆ ಮತ್ತು ಸತ್ಯಾಗ್ರಹಗಳ ಭಾವವನ್ನು ಬೋಧಿಸುತ್ತಿದ್ದು ಆ ದಾರಿಯಲ್ಲಿ ನಡೆದರೆ ಮಾತ್ರ ಶಾಂತಿ ನೆಲಸಿ ನಿಜವಾದ ವಿಜಯೋತ್ಸವ ಉಂಟಾಗುವುದು. ಈ ಸಂಪಾದಕೀಯವು ಇಂದಿನ ಸಮಾಜಕ್ಕೆ ಮಾದರಿಯಾಗುವ ರೀತಿಯದ್ದಾಗಿದ್ದು ಸಮಾಜದ ಶಾಂತಿಯನ್ನು ಕಾಪಾಡುವ ಕಾರ್ಯವನ್ನು ಮಾಡುವ ಬಗ್ಗೆ ಎಂ.ಆರ್. ಲಕ್ಷಮ್ಮರವರ ಪ್ರಯತ್ನ ಅನನ್ಯವಾದದ್ದು.[೯೯]

ದಿನಾಂಕ ೦೮.೦೯.೧೯೪೫ರ ಸಂಚಿಕೆಯಲ್ಲಿ 'ಓಂ ಶಾಂತಿ ಶಾಂತಿ ಶಾಂತಿಃ' ಶೀರ್ಷಿಕೆಯಡಿಯಲ್ಲಿ ೧೯೧೪ರಿಂದ ೧೯೧೮ರವರೆಗೆ ನಡೆದ ಮೊದಲ ಮಹಾಯುದ್ಧದ ನಂತರ ನಡೆದ ಒಪ್ಪಂದ, ಶಾಂತಿಯನ್ನು ಕಾಪಾಡಲು ಹುಟ್ಟಿಕೊಂಡ ರಾಷ್ಟ್ರಗಳ ಸಂಘ, ರಾಷ್ಟ್ರಗಳು ಅನುಸರಿಸಬೇಕಾದ ಶಸ್ತ್ರ ಸನ್ಯಾಸತ್ವ ಆಚರಿಸುವ ಬಗ್ಗೆ, ಅದನ್ನು ಮೀರಿ ೧೯೩೯ ರಿಂಧ ೧೯೪೫ರ ವರೆಗೆ ಆರು ವರ್ಷಗಳು ನಡೆದ ಎರಡನೇ ಮಹಾಯುದ್ಧ, ಯುದ್ಧ ಮುಗಿದ ನಂತರ ಶಾಂತಿ ಒಪ್ಪಂದಗಳು ಬರೀ ಮಾತಾಗದೆ, ಶಾಂತಿ ನೆಲೆಸುವುದಕ್ಕೆ ಪ್ರತಿಯೊಬ್ಬರು ತಮ್ಮ ಮನೋಭಾವವನ್ನು ಬದಲಿಸಿಕೊಳ್ಳಬೇಕು. ಸೇಡಿನ ಮನೋಭಾವ, ದುರಾಸೆ, ತಾನು ಹೆಚ್ಚು ಎಂಬ ಅಹಂಕಾರ ಅಳಿದು ವಿಶ್ವಪ್ರೇಮ, ಸತ್ಯದ ದಾರಿ, ಅಹಿಂಸಾಧರ್ಮವನ್ನು ಆಚರಿಸುವ ಜನತೆ ಇದ್ದಲ್ಲಿ ಯುದ್ಧಗಳು ಸಂಭವಿಸುವುದಿಲ್ಲ. ಜನತೆಯ ಬೆಂಬಲವಿಲ್ಲದೆ ಯಾವ ನಾಯಕನು ಯುದ್ಧಕ್ಕೆ ಸನ್ನದ್ಧನಾಗಲಾರ. ಗಾಂಧೀಜಿಯವರು ಮೂವತ್ತು ವರ್ಷಗಳಿಂದಲೂ ವಿಶ್ವಶಾಂತಿಗಾಗಿ ದುಡಿಯುತ್ತಿರುವ ಬಗ್ಗೆ ಸಂಪಾದಕೀಯದಲ್ಲಿ ದಾಖಲಿಸಿರುವ ಎಂ.ಆರ್. ಲಕ್ಷಮ್ಮನವರ ವಿಶ್ವಭ್ರಾತೃತ್ವದ ಕಲ್ಪನೆ, ಸತ್ಯ ಮತ್ತು ಅಹಿಂಸೆಯನ್ನು ಆಚರಿಸುವ ಮನೋಭಾವವನ್ನು ಜನರಲ್ಲಿ ಬಿತ್ತುವ ಕಾರ್ಯವನ್ನು ಮಾಡುತ್ತಿದ್ದಾರೆಂಬುದರಲ್ಲಿ ಸಂಶಯವಿಲ್ಲ.[೧೦೦]

ದಿನಾಂಕ ೦೮.೦೬.೧೯೪೬ರ ಸಂಪಾದಕೀಯದಲ್ಲಿ ಪ್ರಜಾಪ್ರತಿನಿಧಿ ಸಭೆ ನಡೆದ ಬಗ್ಗೆ, ಮೇ ೨೯ ರಂದು ೧೨ ಗಂಟೆಗೆ ಪ್ರಾರಂಭವಾದ ಸಭೆಯಲ್ಲಿ ೩೧೦ ಪ್ರತಿನಿಧಿಗಳು, ಪತ್ರಿಕಾಪ್ರತಿನಿಧಿಗಳು, ಅಧಿಕಾರಿಗಳು ಎಲ್ಲಾ ಸೇರಿದ್ದು ೧೧ ಜನ ಮಹಿಳಾ ಸದಸ್ಯರಿದ್ದರು. ಪ್ರಜಾಪ್ರತಿನಿಧಿ ಸಭೆಯಲ್ಲಿ ೧೯೯ ಪ್ರಶ್ನೆಗಳು, ೧೭೪ ನಿರ್ಣಯಗಳು, ೧೦೬ ಅರಿಕೆಗಳು ಇದ್ದವು. ಪ್ರೇಕ್ಷಕರ ಗ್ಯಾಲರಿಯಲ್ಲಿ ಮೂವರು ಮಹಿಳೆಯರಿದ್ದು, ಅವರಿಗೆ ಕಾರ್ಯಕಲಾಪದ ಬಗ್ಗೆ ತಿಳಿಯಲು ಆಸಕ್ತಿ ಇಲ್ಲದಿರುವುದರಿಂದ ಮಧ್ಯದಲ್ಲಿ ಅವರು ಎದ್ದುಹೋದ ಬಗ್ಗೆ ಲಕ್ಷಮ್ಮನವರು ತಮ್ಮ ಅಭಿಪ್ರಾಯವನ್ನು ಈ ರೀತಿ ವ್ಯಕ್ತಪಡಿಸಿದ್ದಾರೆ. 'ಇದಕ್ಕಿಂತ ಶೋಚನೀಯ ಸ್ಥಿತಿಯುಂಟೇ?' ಎಂದು ಮರುಗಿ ಮಹಿಳೆಯರು ಆಡಳಿತದಲ್ಲಿ ಭಾಗವಹಿಸುವ ಅವಶ್ಯಕತೆ ಇರುವ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ದಿವಾನರು ಇಂಗ್ಲಿಷಿನಲ್ಲಿ ಭಾಷಣ ಮಾಡಿದ ಬಗ್ಗೆ ಸಿ.ಕೆ. ವೆಂಕಟರಾಮಯ್ಯನವರು ಅದನ್ನು ಕನ್ನಡಕ್ಕೆ ತರ್ಜುಮೆ ಮಾಡಿದ ಬಗ್ಗೆ, ಪ್ರಶ್ನೆ ಉತ್ತರ ನಡೆಯುವ ಬಗ್ಗೆ, ಚರ್ಚೆಗಳಾದ ಬಗ್ಗೆ, ಮಸೂದೆಗಳನ್ನು ಚರ್ಚಿಸುವಾಗ ಅದನ್ನು ವಿರೋಧಿಸುವವರ ಬಗ್ಗೆ ಈ ಲೇಖನದಲ್ಲಿ ವಿವರಿಸಿದ್ದು ಸದನದಲ್ಲಿ ನಡೆಯುವ ಕಲಾಪಗಳನ್ನು ಜನಸಾಮಾನ್ಯರ ಗಮನಕ್ಕೆ ತರುವ ಮೂಲಕ ಎಂ.ಆರ್. ಲಕ್ಷಮ್ಮನವರು ಜನಸಾಮಾನ್ಯರಿಗೆ ರಾಜಕೀಯ ಶಿಕ್ಷಣವನ್ನು ನೀಡುವ ಮತ್ತು ಜನಸಾಮಾನ್ಯರನ್ನು ಆಡಳಿತದಲ್ಲಿ ಪಾಲ್ಗೊಳ್ಳುವಂತೆ ಮಾಡುವ ದೂರದೃಷ್ಟಿಯನ್ನು ಇಟ್ಟುಕೊಂಡಿದ್ದರೆಂದು ಸ್ಪಷ್ಟವಾಗುತ್ತದೆ.[೧೦೧]

ದಿನಾಂಕ ೦೬.೦೭.೧೯೪೬ರ ಸಂಚಿಕೆಯಲ್ಲಿ 'ನ್ಯಾಯ ವಿಧಾಯಕ ಸಭೆ'ಯಲ್ಲಿ ಅಧಿವೇಶನದಲ್ಲಿ ನಡೆದ ಮುಖ್ಯ ವಿಷಯಗಳನ್ನು ನೀಡಲಾಗಿದ್ದು ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರಗಳನ್ನು ಸ್ಥಾಪಿಸಲು ಸಮಯಬಂದಾಗ ತಕ್ಕ ಕಾರ್ಯಕ್ರಮವನ್ನು ಕೈಗೊಳ್ಳುವ ಬಗ್ಗೆ, ಸಂಸ್ಥಾನದಲ್ಲಿ ಪಾನನಿರೋಧವನ್ನು ತರಬೇಕೆಂದು, ಸಂಸ್ಥಾನದಲ್ಲಿರುವ ಎಲ್ಲಾ ದೇವಾಲಯಗಳಿಗೂ ಹರಿಜನರಿಗೆ ಪ್ರವೇಶ ಉಂಟೆಂದು, ಹೆಚ್ಚು ಆದಾಯ ಬರದೆ ಇದ್ದಂತಹ ಭೂಮಿಗಳಿಗೆ ಕಂದಾಯ ಮಾಫಿ ಮಾಡುವುದೆಂದು, ಬ್ರಿಟಿಷ್ ಪ್ರಾಂತ್ಯದಲ್ಲಿ ಜಾರಿಗೆ ಬಂದಿರುವ ಸುಧಾರಣೆಗಳನ್ನು ಇಲ್ಲಿಯೂ ಜಾರಿಗೆ ತರಬೇಕೆಂದು, ಹಳ್ಳಿಗಳಲ್ಲಿ ವಿದ್ಯಾಭ್ಯಾಸವನ್ನು ಹೆಚ್ಚು ಮಾಡಬೇಕೆಂದು, ಗ್ರಾಮಾಂತರದ ಪುಸ್ತಕಭಂಡಾರಗಳಿಗೆ ಇನ್ನೂ ಹೆಚ್ಚು ಪ್ರೋತ್ಸಾಹ ಕೊಡಬೇಕೆಂದು ಹಾಗೂ ಅಕ್ಷರಪ್ರಚಾರಕಾರ್ಯ ಮುಖ್ಯವಾಗಿರಬೇಕೆಂದು ಎಂ.ಆರ್. ಲಕ್ಷಮ್ಮನವರು ನ್ಯಾಯವಿಧಾಯಕ ಸಭೆಯಲ್ಲಿ ಮಾತನಾಡಿದ್ದು, ಅವರು ನ್ಯಾಯವಿಧಾಯಕ ಸಭೆಯ ಸದಸ್ಯರಾಗಿದ್ದು ಉತ್ತಮ ಚರ್ಚಾಪಟುವಾಗಿದ್ದರೆಂಬುದು ತಿಳಿದುಬರುತ್ತದೆ. ಜನರಿಗೆ ಉತ್ತಮ ಸೌಲಭ್ಯವನ್ನು ಕಲ್ಪಿಸಿಕೊಡುವ ಪ್ರಗತಿಪರ ಧೋರಣೆಯನ್ನು ಹೊಂದಿದ ರಾಜಕಾರಣಿಯಾಗಿದ್ದರೆಂಬುವುದನ್ನು ಈ ಲೇಖನದಿಂದ ತಿಳಿದುಕೊಳ್ಳಬಹುದು.[೧೦೨]

ದಿನಾಂಕ ೦೭.೦೯.೧೯೪೬ರ ಸಂಚಿಕೆಯಲ್ಲಿ 'ಕಾಂಗ್ರೆಸಿನ ಕಥೆ' ಎಂಬ ಶೀರ್ಷಿಕೆಯಡಿಯಲ್ಲಿ ಭಾರತದ ಕಾಂಗ್ರೆಸ್‌ನ ಸ್ಥಾಪನೆಯೊಂದಿಗೆ ಭಾರತದಲ್ಲಿ ಉಂಟಾದ ಸ್ವಾತಂತ್ರ್ಯ ಚಳವಳಿಯ ಬಗ್ಗೆ ಈ ಲೇಖನದಲ್ಲಿ ತಿಳಿಸಲಾಗಿದೆ. ೧೮೮೫ ಡಿಸೆಂಬರ್ ೨೮ ರಂದು ಉಮೇಶಚಂದ್ರ ಬ್ಯಾನರ್ಜಿ ಬೊಂಬಾಯಿ ನಗರದಲ್ಲಿ ಭಾರತದ ರಾಷ್ಟ್ರೀಯ ಕಾಂಗ್ರೆಸ್‌ನ್ನು ಸ್ಥಾಪಿಸಿದರು. ಸಾಮಾಜಿಕ ಸಮಸ್ಯೆಗಳನ್ನು ಕುರಿತು ಯೋಚಿಸುವ ಸಲುವಾಗಿ ಸ್ಥಾಪಿಸಲ್ಪಟ್ಟ ಈ ಸಂಸ್ಥೆ ಎರಡನೇ ಸಭೆಯಲ್ಲಿ ದಾದಾಬಾಯಿ ನವರೋಜಿಯವರು ರಾಜಕೀಯರಂಗಕ್ಕಾಗಿ ಈ ಸಂಸ್ಥೆ ಮೀಸಲು ಎಂದರು. ಪ್ರತಿವರ್ಷ ಕಾಂಗ್ರೆಸ್ ಸಭೆ ಸೇರುತ್ತಿದೆ. ಸೈನ್ಯದ ಖರ್ಚು ಕಡಿಮೆಮಾಡಲು, ಭಾರತದಲ್ಲಿ ಸಿವಿಲ್ ಸರ್ವಿಸ್ ಪರೀಕ್ಷೆ ನಡೆಸಲು, ಉಪ್ಪಿನ ಸುಂಕ ಕಡಿಮೆ ಮಾಡಲು, ಸರ್ಕಾರದ ಆಡಳಿತದಲ್ಲಿ ಭಾರತೀಯರು ಪಾಲ್ಗೊಳ್ಳುವಂತೆ ಮಾಡಲು ಅನೇಕ ಕೋರಿಕೆಗಳನ್ನು ಸರ್ಕಾರಕ್ಕೆ ಕಳುಹಿಸಿಕೊಡುತ್ತಿದ್ದರು. ಲಾರ್ಡ್ ಕರ್ಜನ್ ಭಾರತದ ವೈಸರಾಯಿಯಾಗಿ ಬಂದ ಮೇಲೆ ಬಂಗಾಳವನ್ನು ವಿಭಜಿಸಿದ ವಿರುದ್ಧ ಹೋರಾಟ ಪ್ರಾರಂಭವಾಯಿತು. ೧೯೦೫ರಲ್ಲಿ ಪ್ರಾರಂಭವಾದ ಬಂಗಾಳ ವಿಭಜನೆ ವಿರೋಧಿ ಚಳವಳಿ ೧೯೧೧ ರಲ್ಲಿ ಬಂಗಾಳವನ್ನು ಒಂದುಗೂಡಿಸಲು ಕಾರಣವಾಯಿತು. ೧೯೦೬ರಲ್ಲಿ ಮುಸ್ಲಿಂ ಲೀಗ್ ಸ್ಥಾಪನೆಯಾಯಿತು. ಬ್ರಿಟಿಷರ ಕುತಂತ್ರ ಅರಿತ ಮುಸ್ಲಿಂಲೀಗ್ ಕಾಂಗ್ರೆಸ್ ಜೊತೆಗೂಡಿ ಕೆಲಸ ಮಾಡಿತು. ಬಾಲಗಂಗಾಧರ ತಿಲಕ್, ಗೋಪಾಲಕೃಷ್ಣ ಗೋಖಲೆ, ರಾಸ್‌ಬಿಹಾರಿ ಬೋಸ್, ಅನಿಬೆಸೆಂಟ್, ಪಂಡಿತ್ ಮೋತಿಲಾಲ್ ನೆಹರು, ಲಾಲಾಲಜಪತ್‌ರಾಯ್, ಮಹಾತ್ಮ ಗಾಂಧೀಜಿ, ನೆಹರು ಮುಂತಾದವರು ಭಾರತದ ಏಳಿಗೆಗೆ ತಮ್ಮ ತನು ಮನ ಧನ ಅರ್ಪಿಸಿದರು. ೧೯೦೯ ರಲ್ಲಿ ಮಿಂಟೋ ಮಾರ್ಲೆ ಸುಧಾರಣೆಯಲ್ಲಿ ವೈಸರಾಯ್ ಮಂಡಳಿಯಲ್ಲಿ ೧೯೨೧ರ ನಂತರ ಮೂರು ಜನ ಭಾರತೀಯ ಸದಸ್ಯರಿದ್ದರು. ೧೯೪೦ರಲ್ಲಿ ಐದು ಜನ ಸದಸ್ಯರನ್ನು ವೈಸರಾಯ್ ಮಂಡಳಿಗೆ ತೆಗೆದುಕೊಂಡು, ೧೯೪೧ ರಲ್ಲಿ ೧೧ ಜನ ಸದಸ್ಯರು ವೈಸರಾಯಿ ಮಂಡಳಿಯಲ್ಲಿದ್ದು ೧೯೪೨ರ ಭಾರತ ಬಿಟ್ಟು ತೊಲಗಿ ಚಳವಳಿಯ ನಂತರ ೧೧ ಜನ ಸದಸ್ಯರು ಕೂಡ ಭಾರತೀಯರಾಗಿದ್ದು ಭಾರತ ಸ್ವತಂತ್ರವಾಯಿತು. ಇನ್ನು ನಾವು ದಾಸರಲ್ಲ, ಸ್ವತಂತ್ರರು ಎಂದು ಸಂಪಾದಕೀಯದಲ್ಲಿ ಬರೆದಿರುವ ಎಂ.ಆರ್. ಲಕ್ಷ್ಮಮ್ಮನವರು ಭಾರತದ ಸ್ವಾತಂತ್ರ್ಯದ ಕಡೆಗಿನ ಹೆಜ್ಜೆ ಗುರಿ ತಲುಪುತ್ತಿರುವ ಬಗ್ಗೆ ತಮ್ಮ ಲೇಖನದಲ್ಲಿ ಹೇಳಿದ್ದಾರೆ.[೧೦೩]

ದಿನಾಂಕ ೧೯.೧೦.೧೯೪೬ರ ಸಂಪಾದಕೀಯದಲ್ಲಿ 'ಪ್ರತಿನಿಧಿ ಸಭೆಯ ಕಾರ್ಯಕಲಾಪ' ಎಂಬ ಶೀರ್ಷಿಕೆಯಡಿಯಲ್ಲಿ ಸೆಪ್ಟೆಂಬರ್ ೩೦ ರಿಂದ ಅಕ್ಟೋಬರ್ ೧೩ನೇ ತಾರೀಖಿನವರೆಗೆ ನಡೆದ ಕಾರ್ಯಕಲಾಪವನ್ನು ವಿವೇಚಿಸಿ ಎಂ.ಆರ್. ಲಕ್ಷ್ಮಮ್ಮನವರು ಸಂಪಾದಕೀಯದಲ್ಲಿ ಪ್ರಕಟಿಸಿದ್ದಾರೆ. ಹೊಸ ದಿವಾನರಾದ ಸರ್ ರಾಮಸ್ವಾಮಿ ಮೊದಲಿಯರ್ ಪ್ರತಿನಿಧಿ ಸಭೆಯ ಅಧ್ಯಕ್ಷತೆ ವಹಿಸಿದ ಬಗ್ಗೆ ಅವರ ಬುದ್ಧಿವಂತಿಕೆ, ಆಸಕ್ತಿ, ಕನ್ನಡ ಭಾಷೆಯ

ಪರಿಚಯ ಇಲ್ಲದಿದ್ದರೂ ಭಾಷಣಕಾರರ ವಾದಸರಣಿಯನ್ನು ಗ್ರಹಿಸುತ್ತಿದ್ದ ಬಗ್ಗೆ, ಪ್ರಜಾಪಕ್ಷ, ಮುಸ್ಲಿಂಲೀಗ್, ನಿಮ್ನವರ್ಗದವರ ಪಕ್ಷ ಸರ್ಕಾರಕ್ಕೆ ಸಂಪೂರ್ಣ ಬೆಂಬಲ ನೀಡಿದರೆ ಕಾಂಗ್ರೆಸ್ ಪಕ್ಷ ಸರ್ಕಾರವನ್ನು ವಿರೋಧಿಸುತ್ತಿತ್ತು. ಸಭೆಯ ಕಾರ್ಯಕಲಾಪ ಶಿಸ್ತಿನಿಂದ ನಡೆಯಲು, ಪ್ರಜಾಪ್ರತಿನಿಧಿಸಭೆ ನಡೆಯಲು ವಿಶಾಲವಾದ ಕಟ್ಟಡದ ಅವಶ್ಯಕತೆ ಇರುವ ಬಗ್ಗೆ ದಿವಾನರು ಹೇಳಿದರು. ಆದರೆ 'ಬೆಳಕು' ಪತ್ರಿಕೆಯ ದೃಷ್ಟಿಯಿಂದ ಸಭೆಯ ಕಾರ್ಯಕಲಾಪಗಳನ್ನು ವಿವೇಚಿಸಿದರೆ ಜನಸಾಮಾನ್ಯರು, ರೈತರು, ಕೂಲಿಕಾರರು, ಸರ್ಕಾರದಲ್ಲಿ ತಮ್ಮದೂ ಹಕ್ಕಿದೆ, ಹೊಣೆಗಾರಿಕೆ ಇದೆ, ಸೇವೆ ಇದೆ ಎಂದು ತಿಳಿದಿದ್ದು, ಯುದ್ಧದ ಸಮಯದಲ್ಲಿ ಉಂಟಾದ ಅನೇಕ ತೊಂದರೆಗಳ ಫಲವಾಗಿ ಕೇಂದ್ರದಲ್ಲಿ ಹೊಸ ಸರ್ಕಾರದ ಸ್ಥಾಪನೆಯಾಗಿದೆ. ಪ್ರತಿಯೊಬ್ಬ ಹಳ್ಳಿಗನಿಗೂ ರಾಜಕೀಯ ವ್ಯವಸ್ಥೆಯ ಬಗ್ಗೆ ಅರ್ಥವಾಗಿದ್ದು, ಹೊಸದೊಂದು ಆಲೋಚನೆಯನ್ನು ಮಾಡುತ್ತಿದ್ದು, ಆಹಾರದ ಅಭಾವ ಇನ್ನಿತರ ತೊಂದರೆಗಳು ಆಡಳಿತ ಯಂತ್ರದ ಲೋಪದೋಷದಿಂದ ಆಗಿದ್ದು, ತಾನು ಆಡಳಿತದಲ್ಲಿ ಭಾಗವಹಿಸಬೇಕು ಎಂಬುದು ಜನಸಾಮಾನ್ಯರಿಗೆ ಅರ್ಥವಾಗಿದೆ. ಆದರೆ ಪ್ರಜಾಪ್ರತಿನಿಧಿ ಸಭೆಯಲ್ಲಿ ಈ ಭರವಸೆ ದೊರೆತಂತೆ ತೋರುವುದಿಲ್ಲ. ಸಂಸ್ಥಾನದಲ್ಲಿ ಭ್ರಷ್ಟಾಚಾರವನ್ನು ನಿಗ್ರಹಿಸುವುದು, ಮದ್ಯಪಾನ ನಿಷೇಧವನ್ನು ಜಾರಿಗೊಳಿಸುವುದು ಇವೆಲ್ಲವನ್ನು ಜಾರಿಗೆ ತರಲು ಕಷ್ಟಸಾಧ್ಯವಿದ್ದು ಈ ಪ್ರಶ್ನೆಗಳಿಗೆ ಉತ್ತರ ದೊರೆತಿಲ್ಲ. ಮಹಿಳೆಯರಿಗೆ ದೇಶದ ಆಡಳಿತದಲ್ಲಿ ಭಾಗವಹಿಸಲು ಅವಕಾಶ ಇರಬೇಕು. ಜನಸಂಖ್ಯೆಯ ಅರ್ಧದಷ್ಟಿರುವ ಮಹಿಳೆಯರಿಗೆ ಸರ್ಕಾರ ಹೊಣೆಗಾರಿಕೆಯನ್ನು ನೀಡಲಾಗಿದೆಯೇ ಎಂಬ ಪ್ರಶ್ನೆಗೆ ಇಲ್ಲ ಎಂದು ನೋವಿನಿಂದ ನುಡಿಯಬೇಕಾಗಿದೆ. ಒಟ್ಟಿನಲ್ಲಿ ಆಡಳಿತವರ್ಗ, ಪ್ರಜಾವರ್ಗ ಇವೆರಡಕ್ಕೂ ಹೊಣೆಗಾರಿಕೆಯು ಇದ್ದು, ಇದಕ್ಕೆ ಸ್ಪಂದಿಸಬೇಕಾದುದು ನಮ್ಮೆಲ್ಲರ ಕರ್ತವ್ಯವೆಂದು ಹೇಳಿ ಸಂಪಾದಕೀಯವನ್ನು ಬರೆದಿದ್ದು, ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪನೆಯಾಗಬೇಕು, ಆಡಳಿತದಲ್ಲಿ ಇರುವ ಅನೇಕ ಲೋಪದೋಷಗಳನ್ನು ಸರಿಪಡಿಸಬೇಕು, ಮಹಿಳೆಯರಿಗೆ ಸಮಾನ ಅವಕಾಶಗಳನ್ನು ಕಲ್ಪಿಸಬೇಕೆಂಬುದು ಎಂ.ಆರ್. ಲಕ್ಷಮ್ಮನವರ ಲೇಖನದಲ್ಲಿ ಸ್ಪಷ್ಟವಾಗಿ ಬಿಂಬಿತವಾಗಿದೆ. ದೀನ-ದಲಿತರ, ಜನಸಾಮಾನ್ಯರ, ಮಹಿಳೆಯರ ಬಗೆಗಿನ ಅವರ ಚಿಂತನೆಗಳು ಇಂದಿಗೂ ಅನುಕರಣೀಯ.[೧೦೪]

ದಿನಾಂಕ ೨೧.೧೨.೧೯೪೬ರ ಸಂಚಿಕೆಯಲ್ಲಿ 'ರಾಜ್ಯಾಂಗ ಘಟನಾ ಸಭೆಯಲ್ಲಿ ಪಂಡಿತ ಜವಹರಲಾಲರ ಭಾಷಣ' ಎಂಬ ಶೀರ್ಷಿಕೆಯ ಅಡಿಯಲ್ಲಿ ಭಾರತದಲ್ಲಿ ತಾತ್ಕಾಲಿಕ ಸರ್ಕಾರ ರಚನೆಯಾಗಿ ರಾಜ್ಯಾಂಗ ವ್ಯವಸ್ಥೆಯನ್ನು ಪೂರೈಸುವವರೆಗೆ ನಮ್ಮ ಕೆಲಸವನ್ನು ನಿಲ್ಲಿಸುವುದಿಲ್ಲವೆಂದು ಪ್ರತಿಯೊಬ್ಬರು ಪ್ರತಿಜ್ಞೆ ಮಾಡಬೇಕೆಂದು, ಪ್ರಜಾಪ್ರಭುತ್ವದ ನಿರ್ಣಯವನ್ನು ಅಂಗೀಕರಿಸಿರುವ ಬಗ್ಗೆ, ದೇಶೀಯ ಸಂಸ್ಥಾನಗಳು ಒಕ್ಕೂಟದಲ್ಲಿ ಸೇರುವ ಬಗ್ಗೆ, ಪ್ರಜಾಪ್ರತಿನಿಧಿಗಳು ಜನರ ಪ್ರತಿನಿಧಿಗಳಾಗಿ, ನೆಪಮಾತ್ರಕ್ಕೆ ರಾಜಪ್ರಭುತ್ವ ಇರುವಂತೆ,

ಲಂಡನ್ನಿಗೆ ಹೋಗಿ ನೆಹರುರವರು ಪ್ರಧಾನಿ ಅಟ್ಲಿಯವರನ್ನು ಭೇಟಿ ಮಾಡಿದ ಬಗ್ಗೆ ಸಂಪಾದಕೀಯದಲ್ಲಿ ಪ್ರಕಟವಾಗಿದ್ದು ಎಂ.ಆರ್. ಲಕ್ಷಮ್ಮನವರು ಸರ್ಕಾರದ ವೇತನ ಪಡೆಯುವ ನೌಕರರಾಗಿದ್ದರೂ ಅವರು ಪ್ರಜಾಪ್ರಭುತ್ವವಾದಿಯಾಗಿದ್ದರೆಂದು ಅದರ ಸಂಪಾದಕೀಯದಿಂದ ತಿಳಿದುಬರುತ್ತದೆ.[೧೦೫]

ದಿನಾಂಕ ೧೮.೦೧.೧೯೪೭ರ ಸಂಚಿಕೆಯಲ್ಲಿ 'ಜವಾಬ್ದಾರಿ ಸರ್ಕಾರ ಹಾಗೆಂದರೇನು?' ಎಂಬ ಶೀರ್ಷಿಕೆಯಡಿಯಲ್ಲಿ ಸರ್ಕಾರ, ಪ್ರಜೆಗಳು ಮೆಚ್ಚುವಂತೆ ಮತ್ತು ಅವರ ಇಚ್ಛೆಯಂತೆ ಆಡಳಿತ ನಡೆಸುವುದನ್ನು ಜವಾಬ್ದಾರಿ ಸರ್ಕಾರ ಎನ್ನಲಾಗುತ್ತದೆ. ಯಾವಾಗ ಸರ್ಕಾರ ಜನರ ಇಷ್ಟಕ್ಕೆ ವಿರುದ್ಧವಾಗಿದ್ದಾಗ, ಅದನ್ನು ತೆಗೆದು ಹಾಕಿ ತಮಗೆ ಒಪ್ಪುವಂತಹ ಸರ್ಕಾರ ರಚಿಸುವ ಅಧಿಕಾರ ಪ್ರಜೆಗಳಿಗಿರಬೇಕು. ಪ್ರಜೆಗಳು ತಮ್ಮ ಈ ಅಧಿಕಾರವನ್ನು ಪ್ರತಿನಿಧಿಗಳ ಮೂಲಕ ನಡೆಸುತ್ತಾರೆ. ಸರ್ಕಾರವೆಂದರೆ ಮಂತ್ರಿಮಂಡಲವಾಗಿದ್ದು, ಆಡಳಿತನೀತಿಯನ್ನು ಮಂತ್ರಿಮಂಡಲ ನಿರ್ಧರಿಸುತ್ತದೆ. ಪ್ರಜೆಗಳಿಂದ ಆಯ್ಕೆಯಾದ ಪ್ರತಿನಿಧಿಗಳು ಮಂತ್ರಿಮಂಡಲ ರಚಿಸುವುದಕ್ಕೂ ಹಾಗೂ ವಿಶ್ವಾಸವನ್ನು ಕಳೆದುಕೊಂಡ ಮಂತ್ರಿಮಂಡಲವನ್ನು ಉರುಳಿಸುವುದಕ್ಕೂ ಸ್ವತಂತ್ರವಾದ ಅಧಿಕಾರ ಪ್ರತಿನಿಧಿಗಳಿಗಿದ್ದರೆ ಅದನ್ನು ಜವಾಬ್ದಾರಿ ಸರ್ಕಾರ ಎನ್ನಬಹುದು. ಯಾವ ಸಭೆಯಲ್ಲಿ ಈ ರೀತಿಯ ಮುಖ್ಯ ಅಧಿಕಾರವನ್ನು ನೀಡುವುದಿಲ್ಲವೋ ಅಂತಹ ಸಭೆಗಳು ಎಷ್ಟು ದೊಡ್ಡದಾದರೂ ಜವಾಬ್ದಾರಿ ಸರ್ಕಾರದ ಅಂಗವಾಗಲಾರದು. ಈ ಲೇಖನವು ಮೈಸೂರು ಸಂಸ್ಥಾನದ ಜನತೆಗೆ ರಾಜಕೀಯ ಶಿಕ್ಷಣದ ಜೊತೆಗೆ ಜವಾಬ್ದಾರಿ ಸರ್ಕಾರದ ಬಗ್ಗೆ ತಿಳುವಳಿಕೆ ಮೂಡಿಸುವ ಕಾರ್ಯವನ್ನು 'ಬೆಳಕು' ಪತ್ರಿಕೆ ಮಾಡುತ್ತಿತ್ತು ಎಂದು ಹೇಳಬಹುದು. ಜೊತೆಗೆ ಸರ್ಕಾರದಿಂದ ವೇತನ ಪಡೆಯುವ ಅಂಗಸಂಸ್ಥೆಯಾಗಿರುವ ವಯಸ್ಕರ ಶಿಕ್ಷಣ ಸಮಿತಿಯ ವಾರಪತ್ರಿಕೆ 'ಬೆಳಕು'ವಿನ ಸಂಪಾದಕಿಯಾಗಿದ್ದ ಎಂ.ಆರ್. ಲಕ್ಷಮ್ಮನವರು ಸರ್ಕಾರದ ವಿರುದ್ಧವಾಗಿದ್ದ ಜವಾಬ್ದಾರಿ ಸರ್ಕಾರದ ಪರವಾಗಿ ಲೇಖನವನ್ನು ಪ್ರಕಟಿಸಿದ್ದು, ಪತ್ರಿಕೆಯ ಮೂಲಕ ನಿರ್ಭೀತ ಪತ್ರಿಕೋದ್ಯಮ ಧರ್ಮವನ್ನು ಪಾಲಿಸುತ್ತಿದ್ದರು. ಇದು ಅಂದಿನ ಕಾಲದಲ್ಲಿ ದೊಡ್ಡ ಸವಾಲಾಗಿದ್ದು ಜನರ ಪರವಾಗಿ ಅವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಿದ್ದರು.[೧೦೬]

ದಿನಾಂಕ ೦೧.೦೩.೧೯೪೭ರ ಸಂಚಿಕೆಯಲ್ಲಿ 'ಪ್ರಸಿದ್ಧ ಪತ್ರಿಕೆ ಹೊರಟಿದೆ' ಎಂಬ ಶೀರ್ಷಿಕೆಯಡಿಯಲ್ಲಿ ಮೈಸೂರು ಸಂಸ್ಥಾನದ ದಿವಾನರಾದ ಸರ್ ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್‌ರವರು ಮಹಾರಾಜರ ಅಪ್ಪಣೆಯಂತೆ ಸಂಸ್ಥಾನದಲ್ಲಿ ರಾಜ್ಯಾಂಗ ಸುಧಾರಣೆಯ ಬಗ್ಗೆ ಸಮಸ್ತ ಪ್ರಜೆಗಳ ಅಭಿಪ್ರಾಯ ತಿಳಿದುಕೊಳ್ಳಲು ಸರ್ಕಾರದಿಂದ ಹೊರಡಿಸಿದ ಆದೇಶವನ್ನು ಪ್ರಕಟಿಸಲಾಗಿದ್ದು, ಒಂಬತ್ತು ವಿಚಾರಗಳಿಗೆ ಸಂಬಂಧಿಸಿದಂತೆ ಪ್ರಜೆಗಳ ಅಭಿಪ್ರಾಯವನ್ನು ಕೇಳಲಾಗಿದ್ದು, ಶಾಸಕಾಂಗದಲ್ಲಿ ಒಂದೇ ಸಭೆ ಇರಬೇಕೆ? ಅಥವಾ

ಈಗಿರುವಂತೆ ಎರಡು ಸಭೆ ಇರಬೇಕೆ? ಅವುಗಳ ಸ್ಥಾನ ಹಾಗೂ ಕಾರ್ಯಗಳ ಬಗ್ಗೆ, ಶಾಸಕಾಂಗದ ರಚನೆ, ಚುನಾವಣೆ ಯಾವ ರೀತಿ ನಡೆಯಬೇಕು, ಅಲ್ಪಸಂಖ್ಯಾತರ ಪ್ರಾತಿನಿಧ್ಯ, ವಿಶೇಷ ಹಿತದ ಪ್ರಾತಿನಿಧ್ಯ, ಕಾರ್ಯಾಂಗ ಯಾವ ರೀತಿ ಇರಬೇಕು, ಶಾಸಕಾಂಗ ಮತ್ತು ಕಾರ್ಯಾಂಗಕ್ಕೆ ಇರುವ ಸಂಬಂಧ ಈ ಅಂಶಗಳನ್ನು ಸರ್ಕಾರ ತನ್ನ ನಿರೂಪದಲ್ಲಿ ಹೊರಡಿಸಿದ್ದು, 'ಬೆಳಕು' ಪತ್ರಿಕೆಯು ಅದರ ಅರ್ಥವಿವರಣೆಯನ್ನು ನೀಡಿದ್ದು, ವಯಸ್ಕರು, 'ಬೆಳಕು' ಪತ್ರಿಕೆಯ ಓದುಗರು, ತಮ್ಮ ತಮ್ಮ ಶಾಲೆಗಳಲ್ಲಿ ಚರ್ಚಿಸಿ ತಮ್ಮ ಅಭಿಪ್ರಾಯ ತಿಳಿಸುವಂತೆ ಕೋರಲಾಗಿದೆ. 'ಬೆಳಕು' ಪತ್ರಿಕೆಯು ವಯಸ್ಕರ ಆಡಳಿತದಲ್ಲಿ ಪಾಲ್ಗೊಳ್ಳುವಂತೆ ಮಾಡಲು ಅವರ ಜವಾಬ್ದಾರಿಗಳನ್ನು ತಿಳಿಸುವುದರ ಜೊತೆಗೆ ದೇಶದ ಅಭಿವೃದ್ಧಿಯಲ್ಲಿ ಪ್ರಜೆಗಳ ಪಾತ್ರವನ್ನು ಕೂಡ ಸ್ಪಷ್ಟವಾಗಿ ಜನರಿಗೆ ತಿಳಿಸುವ ಕಾರ್ಯವನ್ನು ಮಾಡಿತ್ತು ಎಂದರೆ ತಪ್ಪಾಗಲಾರದು.[೧೦೭]

ದಿನಾಂಕ ೨೬.೦೪.೧೯೪೭ರ ಸಂಚಿಕೆಯಲ್ಲಿ 'ಮುಂದೇನು' ಎಂಬ ಶೀರ್ಷಿಕೆಯಡಿಯಲ್ಲಿ ಮೈಸೂರು ಸಂಸ್ಥಾನದ ದಿವಾನರು ಹಾಗೂ ಮೈಸೂರು ಕಾಂಗ್ರೆಸ್ ಅಧ್ಯಕ್ಷರ ಭೇಟಿಯ ಬಗ್ಗೆ, ಮೈಸೂರು ರಾಜ್ಯಾಂಗ ಸಮಿತಿಗೆ ಸೇರುವ ಬಗ್ಗೆ, ರಾಜ್ಯಾಂಗ ಸಮಿತಿಯ ಪ್ರತಿನಿಧಿಗಳ ಆಯ್ಕೆ ಬಗ್ಗೆ, ಸಂಸ್ಥಾನದಲ್ಲಿ ರಾಜ್ಯಾಡಳಿತದಲ್ಲಿ ಬರಬೇಕಾದ ಸುಧಾರಣೆಯ ಬಗ್ಗೆ ಚರ್ಚಿಸಲು ಸಭೆ ಸೇರಿದ್ದು, ಈ ಸಭೆಯಿಂದ ದೇಶಕ್ಕೆ ಹಿತವಾಗಲಿ, ಹಳ್ಳಿಗನ ಏಳಿಗೆ ಸಾಧಿಸಲಿ ಎಂಬ ಸಂಪಾದಕೀಯ ಲೇಖನದಲ್ಲಿ ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರ ರಚನೆಯ ಬಗ್ಗೆ ಎಂ.ಆರ್. ಲಕ್ಷ್ಮಮ್ಮನವರು ತಾಳಿದ ನಿಲುವುಗಳು ಈ ಲೇಖನದಲ್ಲಿ ಬಿಂಬಿತವಾಗಿದೆ.[೧೦೮]

ದಿನಾಂಕ ೦೫.೦೭.೧೯೪೭ರ ಸಂಚಿಕೆಯಲ್ಲಿ ಸಂಪಾದಕೀಯದಲ್ಲಿ 'ನ್ಯಾಯವಿಧಾಯಕ ಸಭೆ' ಎಂಬ ಶೀರ್ಷಿಕೆಯಡಿಯಲ್ಲಿ ಜೂನ್ ೧೯, ೧೯೪೭ ರಲ್ಲಿ ನ್ಯಾಯವಿಧಾಯಕ ಸಭೆಯ ಅಧಿವೇಶನ ನಡೆದ ಬಗ್ಗೆ, ಆಹಾರದ ಸಮಸ್ಯೆ ಮತ್ತು ಪಡಿತರ ಸರಿಯಾಗಿ ವಿತರಣೆಯಾಗದ ಬಗ್ಗೆ, ಗೋಮಾಳಗಳ ಅಭಿವೃದ್ಧಿ, ಜಾನುವಾರುಗಳ ವೃದ್ಧಿ, ವ್ಯವಸಾಯಕ್ಕೆ ಬೇಕಾದ ಸಾಮಾಗ್ರಿಗಳ ವಿಲೇವಾರಿ, ಕೈಗಾರಿಕೆಗಳ ಸ್ಥಾಪನೆ, ಹಳ್ಳಿಗರಿಗೆ ಶಿಕ್ಷಣ, ಸಾರಿಗೆ ಸಂಪರ್ಕಗಳ ಅಭಿವೃದ್ಧಿ, ವಯಸ್ಕರ ಶಿಕ್ಷಣದ ಹೆಚ್ಚಳ, ಔದ್ಯೋಗಿಕ ಶಿಕ್ಷಣ ಹೆಚ್ಚಿಸುವುದು, ನ್ಯಾಯಾಂಗ ಮತ್ತು ಪೊಲೀಸ್ ಇಲಾಖೆಯಲ್ಲಿರುವ ಅವ್ಯವಸ್ಥೆಯನ್ನು ಸರಿಪಡಿಸುವ ಬಗ್ಗೆ, ಸರ್ಕಾರಿ ನೌಕರರ ವೇತನ ಹೆಚ್ಚಳದ ಬಗ್ಗೆ, ಜವಾಬ್ದಾರಿ ಸರ್ಕಾರ ರಚನೆಯ ಬಗ್ಗೆ, ಮೈಸೂರು ಸಂಸ್ಥಾನ ರಾಜ್ಯಾಂಗಸಭೆಗೆ ಸೇರುವ ಬಗ್ಗೆ, ನ್ಯಾಯವಿಧಾಯಕ ಸಭೆಯಲ್ಲಿ ಚರ್ಚೆಯಾಗುವ ವಿಷಯಗಳಾಗಿದ್ದು, ರಾಜ್ಯಾಂಗಸಭೆಗೆ ಮೈಸೂರಿನಿಂದ ಆಯ್ಕೆಯಾಗಿರುವವರು ಮೇಧಾವಿಗಳಾಗಿರಬೇಕು. ಜೊತೆಗೆ ಒಬ್ಬ ಸ್ತ್ರೀ ಪ್ರತಿನಿಧಿ ಅವಶ್ಯಕತೆ ಇರಬೇಕು. ದೇಶದ

ಅರ್ಧದಷ್ಟಿರುವ ಸ್ತ್ರೀಯರು ಅವರ ಸಮಸ್ಯೆಗಳನ್ನು, ಆಶೋತ್ತರಗಳನ್ನು, ಬೇಡಿಕೆಗಳನ್ನು ಆಕೆ ಮಾತ್ರ ಪ್ರತಿಬಿಂಬಿಸಬಲ್ಲವಳಾಗಿದ್ದು, ಮಹಿಳಾ ಪ್ರತಿನಿಧಿ, ರಾಜ್ಯಾಂಗ ಸಭೆಯ ನಿಯೋಗದಲ್ಲಿ ಇರಬೇಕೆಂದು ಸಂಪಾದಕೀಯದಲ್ಲಿ ಪ್ರಕಟವಾಗಿದ್ದು, ಈ ಲೇಖನವು ಎಂ.ಆರ್. ಲಕ್ಷ್ಮಮ್ಮನವರ ಸ್ತ್ರೀಪರ ಕಾಳಜಿಯನ್ನು ಬಿಂಬಿಸುತ್ತದೆ.[೧೯]

ದಿನಾಂಕ ೦೨.೦೮.೧೯೪೭ರ ಸಂಚಿಕೆಯಲ್ಲಿ 'ಭಾರತ ದೇಶದ ಹೊಸ ಬಾವುಟ' ಎಂಬ ಶೀರ್ಷಿಕೆಯಡಿಯಲ್ಲಿ ಬಾವುಟವು ದೇಶದ ಆತ್ಮವಿದ್ದಂತೆ. ದೇಶದ ಆಸೆ, ಭರವಸೆ, ಭಕ್ತಿ, ನಲ್ಮೆ, ಕಿರೀಟಗಳನ್ನು ಬಾವುಟಗಳು ಪ್ರತಿನಿಧಿಸುತ್ತವೆ. ಪ್ರಾಚೀನಕಾಲದಿಂದಲೂ, ರಾಜಾಧಿರಾಜರುಗಳು ತಮ್ಮದೇ ಆದಂತಹ ಧ್ವಜಪತಾಕೆಗಳನ್ನು ಹೊಂದಿದ್ದರೆಂದು ಹಾಗೂ ಪ್ರಪಂಚದ ಇತರ ರಾಷ್ಟ್ರಗಳಾದ ಅಮೆರಿಕ, ರಷ್ಯಾ, ಜಪಾನ್, ಜರ್ಮನಿ ಮುಂತಾದ ದೇಶಗಳು ತಮ್ಮದೇ ಆದ ಬಾವುಟಗಳನ್ನು ಹೊಂದಿದ ಬಗ್ಗೆ, ಭಾರತವು ಬ್ರಿಟನ್ನಿನ ವಸಾಹತು ಆಗಿದ್ದಾಗ ಭಾರತಕ್ಕೆ ಧ್ವಜವೇ ಇರದ ಬಗ್ಗೆ, ಭಾರತದ ರಾಷ್ಟ್ರೀಯ ಕಾಂಗ್ರೆಸ್ ಸ್ವಾತಂತ್ರ್ಯ ಹೋರಾಟದಲ್ಲಿ ಕೇಸರಿ, ಬಿಳಿ, ಹಸಿರು ಪಟ್ಟಿಗಳ ನಡುವೆ ಚರಕದ ಚಿಹ್ನೆ ಇರುವ ಬಾವುಟವಿದ್ದು, ಆ ಬಾವುಟವನ್ನು ಹಾರಿಸಿ, ಏಟು ತಿಂದು ಪ್ರಾಣತೆತ್ತವರೆಷ್ಟೋ? ಮನೆ ಮಕ್ಕಳನ್ನು ಬಿಟ್ಟು ಬಾವುಟವನ್ನು ಹಿಡಿದು ಹೋರಾಟ ಮಾಡಿದ ಹೆಣ್ಣುಮಕ್ಕಳೆಷ್ಟೋ? ಇಂತಹ ಹೋರಾಟಗಳಿಂದ ಭಾರತ ಇಂದು ತನ್ನ ಕಾಲಮೇಲೆ ತಾನು ನಿಲ್ಲುವ ನೆಲೆಗೆ ಬಂದಿದ್ದು, ಭಾರತದ ನೂತನ ಧ್ವಜ ಕೇಸರಿ, ಬಿಳಿ, ಹಸಿರು ಬಣ್ಣಗಳ ನಡುವೆ ಅಶೋಕಚಕ್ರವನ್ನು ಒಳಗೊಂಡ ಧ್ವಜವನ್ನು ಎಲ್ಲರೂ ಒಪ್ಪಿ ರಾಜ್ಯಾಂಗ ಸಭೆಯಲ್ಲಿ ಹಾರಿಸಿದ ಬಗ್ಗೆ, ಆಗಸ್ಟ್ ೧೫ ರಂದು ಈ ಧ್ವಜವನ್ನು ಮನೆಮನೆಗಳ ಮೇಲೆ ಹಾರಿಸಿ ವಂದಿಸುವುದಕ್ಕೆ ಮೈಸೂರು ಸಂಸ್ಥಾನದ ಧ್ವಜವಾಗಿ ಗಂಡಭೇರುಂಡ ಧ್ವಜ ಹಾರಿಸುವುದರ ಜೊತೆಗೆ ಭಾರತಮಾತೆಗೆ, ಮೈಸೂರುಮಾತೆಗೆ ನಮಿಸೋಣವೆಂದು ಸಂಪಾದಕೀಯ ಪ್ರಕಟವಾಗಿದ್ದು, ಸ್ವಾತಂತ್ರದ ಹೊಸ್ತಿಲಿನ'ಲ್ಲಿ ಭಾರತ ಧ್ವಜದ ಬಗ್ಗೆ ತಮ್ಮ ಸಂಪಾದಕೀಯದಲ್ಲಿ ವಿವರವಾಗಿ ಲಕ್ಷ್ಮಮ್ಮನವರು ತಿಳಿಸಿದ್ದಾರೆ.[೧೧೦]

ದಿನಾಂಕ ೦೯.೦೮.೧೯೪೭ರ ಸಂಚಿಕೆಯಲ್ಲಿ 'ಆಗಸ್ಟ್ ೧೫ರಿಂದ ಏನೂ ಮಾಡತಕ್ಕದ್ದು' ಎಂಬ ಶೀರ್ಷಿಕೆಯಡಿಯಲ್ಲಿ ಆಗಸ್ಟ್ ೧೪ರ ಮಧ್ಯರಾತ್ರಿ ಬ್ರಿಟಿಷರು ಆಳ್ವಿಕೆಯನ್ನು ಭಾರತೀಯರಿಗೆ ವಹಿಸಿಕೊಡುವ ಬಗ್ಗೆ, ನಮ್ಮ ಸರ್ಕಾರ ಅಸ್ತಿತ್ವಕ್ಕೆ ಬರುವ ಬಗ್ಗೆ, ಆಗಸ್ಟ್ ೧೫ರಂದು ಮಹತ್ವದ ದಿನವಾಗಿದ್ದು ಎಲ್ಲ ಕಡೆಯು, ಸರ್ಕಾರದ ಭವನಗಳ ಮೇಲೆ ನಮ್ಮ ಬಾವುಟ ಹಾರಿಸುವ ಬಗ್ಗೆ ೫೦–೬೦ ವರ್ಷಗಳಿಂದ ಮಾಡಿದ ಹೋರಾಟ, ರಕ್ತಪಾತ, ಪ್ರಾಣಬಲಿ, ದೇಶಭಕ್ತರ ತ್ಯಾಗ, ಸಾರ್ಥಕಗೊಂಡ ಬಗ್ಗೆ ಆಗಸ್ಟ್ ೧೫ ರಂದು ಏನು ಮಾಡಬೇಕೆಂದು ನೀವು ಕೇಳುವಿರಿ, ಪಟ್ಟಣದಲ್ಲಿ ಶಾಲೆ, ಸಂಘ ಸಂಸ್ಥೆಗಳಿಗೆ, ಸಾರ್ವಜನಿಕ ಸಂಸ್ಥೆಗಳಿಗೆ ವಿರಾಮ ನೀಡಿ ಸಿಹಿ ಹಂಚುವ ಮತ್ತು ಬಾವುಟಗಳನ್ನು ಹಂಚುವ ಕಾರ್ಯ

ನಡೆಯಲ್ಪಟ್ಟಿದ್ದು, ಎಲ್ಲಾ ಕಡೆಯೂ ಬಾವುಟ ರಾರಾಜಿಸಲಿದೆ. ನಿಮ್ಮೂರಲ್ಲಿ, ಹಳ್ಳಿಗಳಲ್ಲಿ, ಮನೆಯನ್ನು ತೋರಣಗಳಿಂದ ಅಲಂಕರಿಸಿ, ಹಟ್ಟಿಗಳನ್ನು ಮತ್ತು ತೊಟ್ಟಿ ಮನೆಗಳನ್ನು ಗುಡಿಸಿ ಸಾರಿಸಿ, ರಂಗೋಲಿಯಿಂದ ಶೃಂಗರಿಸಿ, ಮನೆಯ ಮೇಲೆ ಬಾವುಟವನ್ನು ಹಾರಿಸಿ ಆ ದಿನ ಹಬ್ಬವನ್ನು ಆಚರಿಸಿ. ಸಂಜೆ ಊರಜನರೆಲ್ಲ ಸೇರಿ ಭಜನೆ, ಕೋಲಾಟವಾಡಿ ಮತ್ತು ಸ್ವಾತಂತ್ರ್ಯದ ಬಗ್ಗೆ, ದೇಶದ ಬಗ್ಗೆ ಉಪನ್ಯಾಸ ಮಾಡುವವರು ಇದ್ದರೆ ಕೇಳಿ, ರಾಷ್ಟ್ರಗೀತೆ ಪಠಣ ಮಾಡಿ, ರಾಷ್ಟ್ರಧ್ವಜಕ್ಕೆ ವಂದನೆ ಸಲ್ಲಿಸಿ, ಜಯಜಯಕಾರ ಹೇಳಿ, ಮೈಸೂರು ಗೀತೆಯಾದ 'ಕಾಯಾ ಶ್ರೀಗೌರಿ' ಹಾಡಿ ಮಹಾರಾಜರಿಗೆ ಜಯಕಾರ ಮಾಡಿರಿ, ಸ್ವಾತಂತ್ರ್ಯದ ಉತ್ಸವವನ್ನು ಹಿಂದೂ, ಮುಸ್ಲಿಂ ಹಾಗೂ ಕ್ರಿಶ್ಚಿಯನ್ ಎಂಬ ಭೇದವಿಲ್ಲದೆ, ಗಂಡು-ಹೆಣ್ಣು-ಮಕ್ಕಳು ಎಂಬ ಭೇದವಿಲ್ಲದೆ, ಸಮಸ್ತ ಜನರು ಹೊಸ ಬಾವುಟಕ್ಕೆ ವಂದಿಸಿ ಉತ್ಸವವನ್ನು ಆಚರಿಸಬೇಕು. ಹಳ್ಳಿಯ ಸಿರಿವಂತರು, ಊರ ಮಕ್ಕಳಿಗೆ ಸಿಹಿತಿಂಡಿ ನೀಡಿದರೆ, ಹಳ್ಳಿಯ ವಿಚಾರವಂತರು ಸ್ವಾತಂತ್ರ್ಯ ಬಗ್ಗೆ, ಬಾವುಟದ ಬಗ್ಗೆ ಉಪದೇಶವನ್ನು ನೀಡಲಿ. ಆಗಸ್ಟ್ ೧೫ರ ದಿನ ಸಂಪಾದನೆ, ವ್ಯವಸಾಯ, ದುಡಿಮೆ ಎಲ್ಲದಕ್ಕೂ ವಿರಾಮ. ಅಂದು ದೇಶದ ಧ್ಯಾನ ಮಾತ್ರ ಎಂದು ತಮ್ಮ ಸಂಪಾದಕೀಯದಲ್ಲಿ ಪ್ರಕಟಿಸಿರುವ ಎಂ.ಆರ್. ಲಕ್ಷಮ್ಮನವರು ಸ್ವಾತಂತ್ರ್ಯೋತ್ಸವವನ್ನು ಹೇಗೆ ಆಚರಿಸಬೇಕು ಎಂಬುದರ ಜೊತೆಗೆ ಆ ದಿನದ ಮಹತ್ವ, ಆ ದಿನಕ್ಕಾಗಿ ಕಾತರದಿಂದ ಕಾಯುವಂತೆ ಲೇಖನವನ್ನು ಪ್ರಕಟಿಸಿದ್ದಾರೆ.[೧೧೧]

ದಿನಾಂಕ ೦೯.೦೮.೧೯೪೭ರ ಸಂಚಿಕೆಯಲ್ಲಿ 'ಸ್ವಾತಂತ್ರ್ಯದ ಬರುವಿಕೆ' ಎಂಬ ಶೀರ್ಷಿಕೆಯಡಿಯಲ್ಲಿ 'ಬೆಳಕು' ಪತ್ರಿಕೆಯ ಓದುಗರು ಸ್ವಾತಂತ್ರ್ಯ ಬಂದರೆ ಏನು ಅನುಕೂಲ ಎಂಬ ಪ್ರಶ್ನೆಯನ್ನು ಕೇಳಿದ್ದು, ಅದಕ್ಕೆ ಉತ್ತರವಾಗಿ ಡಿ. ವಿ. ಗುಂಡಪ್ಪನವರು ಬರೆದಿರುವ ಲೇಖನ ಪ್ರಕಟವಾಗಿದ್ದು, **'ಬ್ರಿಟಿಷರು ಈ ದೇಶದಿಂದ ಹೊರಟುಹೋಗುವುದು, ಎರಡು ದೇಶದ ರಾಜ್ಯಾಧಿಕಾರವನ್ನು ಪ್ರಜೆಗಳ ಕೈಗೆ ನೀಡುವುದು ಸ್ವಾತಂತ್ರ್ಯದಲ್ಲಿ ಸೇರಿರುವ ಅಂಶಗಳಾಗಿದ್ದು, ದೆಹಲಿಯಲ್ಲಿ ಒಂದು ಸಂಯುಕ್ತರಾಷ್ಟ್ರ ಯೋಜನೆ ಸಿದ್ಧವಾಗಿದ್ದು, ಪ್ರಾಂತ್ಯಗಳು ಮತ್ತು ಸಂಸ್ಥೆಗಳು ಸೇರಿಕೊಂಡು ಕಾನ್‌ಸ್ಟುಯೆಂಟ್ ಅಸೆಂಬ್ಲಿಯನ್ನು ರಚಿಸಿಕೊಂಡು ಭಾರತ ಹೊಸ ಸರ್ಕಾರವನ್ನು ಸ್ಥಾಪಿಸುವ ಬಗ್ಗೆ, ಭಾರತಕ್ಕೆ ಡೊಮಿನಿಯನ್ ಸ್ಥಾನಮಾನ ಅಂದರೆ ಸ್ವಾತಂತ್ರ ಪ್ರಜಾಸ್ವರಾಜ್ಯಯುಳ್ಳಂತಹ ರಾಷ್ಟ್ರಗಳಾಗಿದ್ದು, ಬ್ರಿಟನ್ನಿನಡಿಯಲ್ಲಿ ಇದ್ದು, ಇನ್ನು ಮುಂದೆ ಸ್ವತಂತ್ರವಾದ ದೇಶವಾಗಿದ್ದು, ಬ್ರಿಟನ್ನಿನ ಅಧೀನಕ್ಕೆ ಒಳಪಡದೆ ಪ್ರಜೆಗಳು ಸರ್ಕಾರವನ್ನು ಸ್ಥಾಪಿಸಲಾಗುವುದು. ಬ್ರಿಟಿಷರು ಭಾರತವನ್ನು ಬಿಟ್ಟು ಹೋಗುವ ಸಂದರ್ಭದಲ್ಲಿ ಅನಾನುಕೂಲಗಳನ್ನು ಮಾಡಿದ್ದು, ಭಾರತವನ್ನು ವಿಂಗಡಿಸಿ ಪಾಕಿಸ್ತಾನವೆಂಬ ರಾಷ್ಟ್ರ ಹುಟ್ಟು ಹಾಕಿದ್ದು, ಒಟ್ಟಿನಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಬಂದಿದ್ದು ಅದನ್ನು ಉಳಿಸಿಕೊಳ್ಳುವ ಜವಾಬ್ದಾರಿಯನ್ನು ದೇಶದ ಪ್ರತಿಯೊಬ್ಬರು ಮಾಡಬೇಕು. ಪ್ರತಿಯೊಬ್ಬ ಹೆಂಗಸು ಗಂಡಸು ಎಂಬ ಭೇದವಿಲ್ಲದೆ, ಈ ದೇಶ ನನ್ನದು, ನನ್ನದೆ ಸರ್ಕಾರ, ಇದರ ಯೋಗಕ್ಷೇಮ ಮತ್ತು ಜವಾಬ್ದಾರಿ ನನ್ನದು ಎಂದು**

**ತಿಳಿದು, ಕೋಮುಭಾವನೆಯನ್ನು, ಜಾತಿ ಮತ ವೈಷಮ್ಯವನ್ನು ಬಿಟ್ಟು ತಾವೆಲ್ಲರೂ ಒಂದೇ ಎಂದು ಭಾವಿಸಿ ಪ್ರತಿಯೊಬ್ಬರು ನೀತಿನಿಷ್ಠೆಯಿಂದ ಹಾಗೂ ವಿಚಾರನಿಷ್ಠೆಯಿಂದ ನಡೆದುಕೊಳ್ಳಬೇಕು'** ಎಂಬ ಲೇಖನ ಪ್ರಕಟವಾಗಿದೆ. ಹಾಗೆಯೇ ಟಿ. ಮರಿಯಪ್ಪನವರು 'ಸ್ವಾತಂತ್ರ್ಯದಿನ' ಎಂಬ ಶೀರ್ಷಿಕೆಯಡಿಯಲ್ಲಿ ಕ್ರಿ.ಶ. ೧೬೦೦ ರಲ್ಲಿ ವ್ಯಾಪಾರಕ್ಕಾಗಿ ಬಂದ ಬ್ರಿಟಿಷರು ಸಾಮ್ರಾಜ್ಯ ಸ್ಥಾಪಿಸಿದ ಬಗೆ, ೧೮೫೭ರಲ್ಲಿ ನಡೆದ ಸಿಪಾಯಿದಂಗೆ ಎಂಬ ಸ್ವಾತಂತ್ರ್ಯ ಸಮರ ಯಶಸ್ವಿಯಾಗದ ಬಗ್ಗೆ, ೧೮೮೫ ರಲ್ಲಿ ಭಾರತದ ರಾಷ್ಟ್ರೀಯ ಕಾಂಗ್ರೆಸ್ ಸ್ಥಾಪನೆಯ ಬಗ್ಗೆ, ಅನೇಕ ನಾಯಕರು ಹೋರಾಟದಲ್ಲಿ ಭಾಗವಹಿಸಿದ ಬಗ್ಗೆ ಗಾಂಧೀಜಿಯವರು ಸತ್ಯ ಮತ್ತು ಅಹಿಂಸೆಯ ಅಸ್ತ್ರಗಳನ್ನು ಪ್ರಯೋಗಿಸಿದ ಬಗ್ಗೆ, ಕ್ವಿಟ್ ಇಂಡಿಯಾ ಚಳವಳಿ ನಡೆದ ಬಗ್ಗೆ, ಸುಭಾಷ್ ಚಂದ್ರಬೋಸರ ಬಗ್ಗೆ ಲೇಖನದಲ್ಲಿ ವಿವರಿಸಲಾಗಿದ್ದು ಅದರ ಫಲವಾಗಿ ೧೯೪೭ರಲ್ಲಿ ಸ್ವಾತಂತ್ರ್ಯ ಬಂದ ಬಗ್ಗೆ ವಿವರವಾದ ಲೇಖನ ಪ್ರಕಟವಾಗಿದ್ದು ಸ್ವಾತಂತ್ರ್ಯದ ಸವಿಯನ್ನು ಪ್ರತಿಯೊಬ್ಬರು ಅನುಭವಿಸಬೇಕೆಂದು ಈ ಲೇಖನ ಬಿಂಬಿಸುತ್ತದೆ.

ದಿನಾಂಕ ೨೨.೧೧.೧೯೪೭ರ ಸಂಚಿಕೆಯಲ್ಲಿ ಅಖಿಲ ಮೈಸೂರು ಕಾಂಗ್ರೆಸ್ ಸಮಿತಿ ಅಧಿವೇಶನ ನವೆಂಬರ್ ೧೪ ರಿಂದ ೧೬ರವರೆಗೆ ಚಿತ್ರದುರ್ಗದಲ್ಲಿ ನಡೆದ ಬಗ್ಗೆ ಸಂಪಾದಕೀಯದಲ್ಲಿ ವಿವರಗಳನ್ನು ನೀಡಲಾಗಿದೆ. ಚಿತ್ರದುರ್ಗದಲ್ಲಿ ಅಧಿವೇಶನ ನಡೆಯುವ ಸ್ಥಳಕ್ಕೆ ವಿಜಯನಗರ ಎಂಬ ಹೆಸರಿಟ್ಟಿದ್ದು, ನಿಜಲಿಂಗಪ್ಪನವರು ಮತ್ತು ಮೈಸೂರು ಸಂಸ್ಥಾನದ ಪ್ರಧಾನಮಂತ್ರಿಯಾದ ಚಂಗಲ್‌ರಾಯರೆಡ್ಡಿಯವರು ಮೈಸೂರು ಧ್ವಜವನ್ನು ಮತ್ತು ಭಾರತದ ತ್ರಿವರ್ಣಧ್ವಜವನ್ನು ಹಾರಿಸಿದ ಬಗ್ಗೆ, ಮೈಸೂರು ಸಂಸ್ಥಾನದ ಕಾಂಗ್ರೆಸ್ಸಿನ ನೂತನ ಅಧ್ಯಕ್ಷರಾಗಿ ಸಿ. ಸಿದ್ದಲಿಂಗಯ್ಯನವರು ಆಯ್ಕೆಯಾಗಿ ಬಂದ ಬಗ್ಗೆ, ಅನೇಕ ಕಡೆಗಳಿಂದ ಜನರು ಬಂದು ಸೇರಿದ್ದು, ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪನೆಯ ಬಗ್ಗೆ, ತಾತ್ಕಾಲಿಕ ಮಂತ್ರಿಮಂಡಲದ ರಚನೆಯ ಬಗ್ಗೆ, ಕರ್ನಾಟಕದ ಏಕೀಕರಣದ ಬಗ್ಗೆ, ಅಂದಿನ ಸಭೆಯಲ್ಲಿ ಚರ್ಚಿತವಾದ ವಿಷಯವಾಗಿದ್ದು ಎಂ.ಆರ್. ಲಕ್ಷಮ್ಮನವರು ತಮ್ಮ ಸಂಪಾದಕೀಯದಲ್ಲಿ ಪ್ರಕಟಿಸಿದ್ದಾರೆ.[೧೧೨]

ಎಂ. ಆರ್. ಲಕ್ಷಮ್ಮನವರ ಸಂಪಾದಕತ್ವದಲ್ಲಿ ಪ್ರಕಟವಾದ **'ಸೋದರಿ'** ಪತ್ರಿಕೆಯ ೮೦ ಸಂಚಿಕೆಗಳು ಲಭ್ಯವಾಗಿದ್ದು ಅವುಗಳಲ್ಲಿ ಅವರ ಸಮಾಜ ಸುಧಾರಣೆ ಮಹಿಳಾ ಪರ ಚಿಂತನೆಗಳು ಹೊರಹೊಮ್ಮಿದೆ. ೧೯೫೦ರಲ್ಲಿ ಪ್ರಾರಂಭವಾದ ಸೋದರಿ ೧೯೫೫ ರವರೆಗೆ ಜುಲೈ ವಾರಪತ್ರಿಕೆಯಾಗಿ ಪ್ರಕಟವಾಗಿ ೧೯೫೫ರ ನಂತರ ಮಾಸಪತ್ರಿಕೆಯಾಗಿ ೧೯೫೭ ಏಪ್ರಿಲ್-ಮೇ ತಿಂಗಳವರೆಗೆ ಪ್ರಕಟವಾಗಿದೆ. ಏಳು ವರ್ಷಗಳ ಕಾಲ ಸಂಪಾದಕಿಯಾಗಿ, ಪ್ರಕಾಶಕಿಯಾಗಿ ಮುದ್ರಕಿಯಾಗಿ ಪತ್ರಿಕೆಯನ್ನು ನಿಭಾಯಿಸಿದ ಎಂ.ಆರ್. ಲಕ್ಷಮ್ಮನವರ ವಿಚಾರಧಾರೆಗಳು ಸಂಪೂರ್ಣ ಲಭ್ಯವಿದ್ದಲ್ಲಿ ಪರಿಪೂರ್ಣವಾಗುತ್ತಿತ್ತು. ಆದರೂ ಪತ್ರಿಕೆಗಳು

ಅವರ ಚಿಂತನೆಗಳನ್ನು ಕಾರ್ಯವೈಖರಿಯನ್ನು ಲಭ್ಯವಾದಷ್ಟು ಹೊರಹೊಮ್ಮಿಸುವಲ್ಲಿ ಯಶಸ್ವಿಯಾಗಿದ್ದು ಅವರ ಬಹುಮುಖಿ ವ್ಯಕ್ತಿತ್ವವನ್ನು ಅರಿಯುವಲ್ಲಿ ಸಹಕಾರಿಯಾಗಿದೆ.

**ಅಡಿ ಟಿಪ್ಪಣಿಗಳು**

೧) ಲಕ್ಷ್ಮಮ್ಮ ಎಂ.ಆರ್. (ಸಂ) 'ಬೆಳಕು' ಪತ್ರಿಕೆ, ದಿನಾಂಕ ೦೮.೦೯.೧೯೪೫

೨) ಅದೇ, ದಿನಾಂಕ ೨೨.೦೯.೧೯೪೫

೩) ಅದೇ, ದಿನಾಂಕ ೧೨.೦೧.೧೯೪೬

೪) ಅದೇ, ದಿನಾಂಕ ೨೬.೦೧.೧೯೪೬

೫) ಅದೇ, ದಿನಾಂಕ ೦೯.೦೨.೧೯೪೬

೬) ಅದೇ, ದಿನಾಂಕ ೨೪.೦೮.೧೯೪೬

೭) ಅದೇ, ದಿನಾಂಕ ೩೧.೦೮.೧೯೪೬

೮) ಅದೇ, ದಿನಾಂಕ ೨೩.೧೧.೧೯೪೬

೯) ಅದೇ, ದಿನಾಂಕ ೦೭.೧೨.೧೯೪೬

೧೦) ಅದೇ, ದಿನಾಂಕ ೦೧.೦೨.೧೯೪೭

೧೧) ಅದೇ, ದಿನಾಂಕ ೦೪.೦೧.೧೯೪೭

೧೨) ಅದೇ, ದಿನಾಂಕ ೧೯.೦೪.೧೯೪೭

೧೩) ಲಕ್ಷ್ಮಮ್ಮ ಎಂ.ಆರ್. (ಸಂ) ಸೋದರಿ ಪತ್ರಿಕೆ, ದಿನಾಂಕ ೦೯.೦೨.೧೯೫೦

೧೪) ಅದೇ, ಪತ್ರಿಕೆ ದಿನಾಂಕ ೧೨.೦೨.೧೯೫೦.

೧೫) ಅದೇ, ಪತ್ರಿಕೆ ದಿನಾಂಕ ೧೯.೦೨.೧೯೫೦.

೧೬) ಅದೇ, ಪತ್ರಿಕೆ ದಿನಾಂಕ ೧೯.೦೨.೧೯೫೦.

೧೭) ಅದೇ, ಪತ್ರಿಕೆ ದಿನಾಂಕ ೨೬.೦೨.೧೯೫೦.

೧೮) ಅದೇ, ಪತ್ರಿಕೆ ದಿನಾಂಕ ೦೫.೦೩.೧೯೫೦.

೧೯) ಅದೇ, ಪತ್ರಿಕೆ ದಿನಾಂಕ ೨೬.೦೩.೧೯೫೪.

೨೦) ಅದೇ, ಪತ್ರಿಕೆ ದಿನಾಂಕ ೧೪.೦೫.೧೯೫೪.

೨೧) ಅದೇ, ಪತ್ರಿಕೆ ದಿನಾಂಕ ೧೬.೦೭.೧೯೫೪.

೨೨) ಅದೇ, ಪತ್ರಿಕೆ ದಿನಾಂಕ ೨೬.೧೧.೧೯೫೪.

೨೩) ಅದೇ, ಪತ್ರಿಕೆ ದಿನಾಂಕ ೦೩.೧೨.೧೯೫೪.

೨೪) ಅದೇ, ಪತ್ರಿಕೆ ದಿನಾಂಕ ೧೦.೧೨.೧೯೫೪.

೨೫) ಅದೇ, ಪತ್ರಿಕೆ ದಿನಾಂಕ ೦೭.೦೧.೧೯೫೫.

೨೬) ಅದೇ, ಪತ್ರಿಕೆ ದಿನಾಂಕ ೦೭.೦೧.೧೯೫೫.

೨೭) ಅದೇ, ಪತ್ರಿಕೆ ದಿನಾಂಕ ೧೮.೦೨.೧೯೫೫.

೨೮) ಅದೇ, ಪತ್ರಿಕೆ ದಿನಾಂಕ ೨೮.೦೧.೧೯೫೫

೨೯) ಅದೇ, ಪತ್ರಿಕೆ ದಿನಾಂಕ ೦೪.೦೨.೧೯೫೫

೩೦) ಅದೇ, ಪತ್ರಿಕೆ ದಿನಾಂಕ ೧೧.೦೨.೧೯೫೫

೩೧) ಅದೇ, ಪತ್ರಿಕೆ ದಿನಾಂಕ ೨೫.೦೨.೧೯೫೫

೩೨) ಅದೇ, ಪತ್ರಿಕೆ ದಿನಾಂಕ ೧೧.೦೩.೧೯೫೫

೩೩) ಅದೇ, ಪತ್ರಿಕೆ ದಿನಾಂಕ ೨೨.೦೪.೧೯೫೫

೩೪) ಅದೇ, ಪತ್ರಿಕೆ ದಿನಾಂಕ ೨೨.೦೪.೧೯೫೫

೩೫) ಅದೇ, ಪತ್ರಿಕೆ ದಿನಾಂಕ ೨೯.೦೪.೧೯೫೫

೩೬) ಅದೇ, ಪತ್ರಿಕೆ ದಿನಾಂಕ ೦೩.೦೬.೧೯೫೫

೩೭) ಅದೇ, ಪತ್ರಿಕೆ ದಿನಾಂಕ ೨೪.೦೬.೧೯೫೫

೩೮) ಅದೇ, ಪತ್ರಿಕೆ ಜನವರಿ ೧೯೫೭ (ಮಾಸ ಪತ್ರಿಕೆ)

೩೯) ಅದೇ, ಪತ್ರಿಕೆ ಫೆಬ್ರವರಿ ೧೯೫೭ (ಮಾಸ ಪತ್ರಿಕೆ)

೪೦) ಲಕ್ಷಮ್ಮ, ಎಂ.ಆರ್. 'ಬೆಳಕು', ವಯಸ್ಕರ ಶಿಕ್ಷಣ ಸಮಿತಿ, ಮೈಸೂರು, ದಿನಾಂಕ ೨೫.೦೮.೧೯೪೫

೪೧) ಅದೇ, ಪತ್ರಿಕೆ ದಿನಾಂಕ ೦೧.೦೯.೧೯೪೫

೪೨) ಅದೇ, ಪತ್ರಿಕೆ ದಿನಾಂಕ ೦೬.೧೦.೧೯೪೫.

೪೩) ಅದೇ, ದಿನಾಂಕ ೨೭.೧೦.೧೯೪೫

೪೪) ಅದೇ, ದಿನಾಂಕ ೨೪.೧೧.೧೯೪೫

೪೫) ಅದೇ, ದಿನಾಂಕ ೦೬.೦೪.೧೯೪೬

೪೬) ಅದೇ, ದಿನಾಂಕ ೧೦.೦೮.೧೯೪೬

೪೭) ಅದೇ, ದಿನಾಂಕ ೧೬.೧೧.೧೯೪೬

೪೮) ಅದೇ, ದಿನಾಂಕ ೨೩.೧೧.೧೯೪೬

೪೯) ಅದೇ, ದಿನಾಂಕ ೩೦.೧೧.೧೯೪೬

೫೦) ಅದೇ, ದಿನಾಂಕ ೦೭.೧೨.೧೯೪೬

೫೧) ಅದೇ, ದಿನಾಂಕ ೧೪.೧೨.೧೯೪೬

೫೨) ಅದೇ, ದಿನಾಂಕ ೦೪.೦೧.೧೯೪೭

೫೩) ಅದೇ, ದಿನಾಂಕ ೧೧.೦೧.೧೯೪೭

೫೪) ಅದೇ, ದಿನಾಂಕ ೦೮.೦೨.೧೯೪೭

೫೫) ಅದೇ, ದಿನಾಂಕ ೦೮.೦೩.೧೯೪೭

೫೬) ಲಕ್ಷಮ್ಮ ಎಂ.ಆರ್. (ಸಂ) 'ಸೋದರಿ' ಪತ್ರಿಕೆ, ದಿನಾಂಕ ೧೨.೦೨.೧೯೫೪.

೫೭) ಅದೇ, ಪತ್ರಿಕೆ ದಿನಾಂಕ ೩೦.೦೪.೧೯೫೪.

೫೮) ಅದೇ, ಪತ್ರಿಕೆ ದಿನಾಂಕ ೦೭.೦೫.೧೯೫೪.

೫೯) ಅದೇ, ಪತ್ರಿಕೆ ದಿನಾಂಕ ೨೩.೦೭.೧೯೫೪.

೬೦) ಅದೇ, ಪತ್ರಿಕೆ ದಿನಾಂಕ ೦೬.೦೮.೧೯೫೪.

೬೧) ಅದೇ, ಪತ್ರಿಕೆ ದಿನಾಂಕ ೧೩.೦೮.೧೯೫೪.

೬೨) ಅದೇ, ಪತ್ರಿಕೆ ದಿನಾಂಕ ೨೭.೦೮.೧೯೫೪.

೬೩) ಅದೇ, ಪತ್ರಿಕೆ ದಿನಾಂಕ ೦೧.೧೦.೧೯೫೪.

೬೪) ಅದೇ, ಪತ್ರಿಕೆ ದಿನಾಂಕ ೦೮.೧೦.೧೯೫೪.

೬೫) ಅದೇ, ಪತ್ರಿಕೆ ದಿನಾಂಕ ೨೨.೧೦.೧೯೫೪.

೬೬) ಅದೇ, ಪತ್ರಿಕೆ ದಿನಾಂಕ ೦೫.೧೧.೧೯೫೪.

೬೭) ಅದೇ, ಪತ್ರಿಕೆ ದಿನಾಂಕ ೧೨.೧೧.೧೯೫೪.

೬೮) ಅದೇ, ಪತ್ರಿಕೆ ದಿನಾಂಕ ೧೧.೦೩.೧೯೫೫.

೬೯) ಅದೇ, ಪತ್ರಿಕೆ ದಿನಾಂಕ ೨೫.೦೩.೧೯೫೫

೭೦) ಅದೇ, ಜನವರಿ ೧೯೫೭.

೭೧) ಅದೇ, ದಿನಾಂಕ ೦೬.೦೮.೧೯೫೪

೭೨) ಅದೇ, ದಿನಾಂಕ ೩೧.೧೨.೧೯೫೪.

೭೩) ಅದೇ, ದಿನಾಂಕ ೦೬.೦೫.೧೯೫೫

೭೪) ಅದೇ, ದಿನಾಂಕ ೨೭.೦೮.೧೯೫೫.

೭೫) ಅದೇ, ಪತ್ರಿಕೆ ಜನವರಿ ೧೯೫೫ (ಮಾಸಪತ್ರಿಕೆ).

೭೬) ಅದೇ, ದಿನಾಂಕ ೨೦.೦೮.೧೯೫೪.

೭೭) ಅದೇ, ದಿನಾಂಕ ೨೭.೦೮.೧೯೫೪

೭೮) ಅದೇ, ದಿನಾಂಕ ೨೨.೧೦.೧೯೫೪

೭೯) ಅದೇ, ದಿನಾಂಕ ೦೫.೧೧.೧೯೫೪

೮೦) ಅದೇ, ದಿನಾಂಕ ೧೨.೦೧.೧೯೫೪

೮೧) ಲಕ್ಷಮ್ಮ ಎಂ.ಆರ್. (ಸಂ.) ಬೆಳಕು ಪತ್ರಿಕೆ ದಿನಾಂಕ ೦೭.೦೭.೧೯೪೫

೮೨) ಅದೇ, ದಿನಾಂಕ ೨೧.೦೭.೧೯೪೫

೮೩) ಅದೇ, ದಿನಾಂಕ ೨೮.೦೭.೧೯೪೫

೮೪) ಅದೇ, ದಿನಾಂಕ ೦೨.೦೯.೧೯೪೫

೮೫) ಅದೇ, ದಿನಾಂಕ ೧೯.೦೧.೧೯೪೬

೮೬) ಅದೇ, ದಿನಾಂಕ ೨೬.೦೧.೧೯೪೬

೮೭) ಅದೇ, ದಿನಾಂಕ ೦೨.೦೨.೧೯೪೬

೮೮) ಅದೇ, ದಿನಾಂಕ ೦೩.೦೩.೧೯೪೬

೮೯) ಅದೇ, ದಿನಾಂಕ ೨೭.೦೪.೧೯೪೬

೯೦) ಅದೇ, ದಿನಾಂಕ ೦೧.೦೬.೧೯೪೬

೯೧) ಅದೇ, ದಿನಾಂಕ ೨೦.೦೭.೧೯೪೬

೯೨) ಅದೇ, ದಿನಾಂಕ ೨೭.೦೭.೧೯೪೬

೯೩) ಅದೇ, ದಿನಾಂಕ ೨೩.೧೧.೧೯೪೬

೯೪) ಅದೇ, ದಿನಾಂಕ ೦೭.೧೨.೧೯೪೬

೯೫) ಅದೇ, ದಿನಾಂಕ ೦೧.೦೨.೧೯೪೬

೯೬) ಅದೇ, ದಿನಾಂಕ ೨೨.೦೨.೧೯೪೭

೯೭) ಅದೇ, ದಿನಾಂಕ ೧೩.೧೦.೧೯೪೭

೯೮) ಅದೇ, ದಿನಾಂಕ ೧೬.೦೬.೧೯೪೫

೯೯) ಅದೇ, ದಿನಾಂಕ ೨೫.೦೮.೧೯೪೫

೧೦೦) ಅದೇ, ದಿನಾಂಕ ೦೮.೦೯.೧೯೪೫

೧೦೧) ಅದೇ, ದಿನಾಂಕ ೦೮.೦೬.೧೯೪೬

೧೦೨) ಅದೇ, ದಿನಾಂಕ ೦೬.೦೭.೧೯೪೬

೧೦೩) ಅದೇ, ದಿನಾಂಕ ೦೭.೦೯.೧೯೪೬

೧೦೪) ಅದೇ, ದಿನಾಂಕ ೦೯.೧೦.೧೯೪೬

೧೦೫) ಅದೇ, ದಿನಾಂಕ ೨೧.೧೨.೧೯೪೬

೧೦೬) ಅದೇ, ದಿನಾಂಕ ೧೮.೦೧.೧೯೪೭

೧೦೭) ಅದೇ, ದಿನಾಂಕ ೦೧.೦೩.೧೯೪೭

೧೦೮) ಅದೇ, ದಿನಾಂಕ ೨೬.೦೪.೧೯೪೭

೧೦೯) ಅದೇ, ದಿನಾಂಕ ೦೫.೦೭.೧೯೪೭

೧೧೦) ಅದೇ, ದಿನಾಂಕ ೦೨.೦೮.೧೯೪೭

೧೧೧) ಅದೇ, ದಿನಾಂಕ ೦೯.೦೮.೧೯೪೭

೧೧೨) ಅದೇ, ದಿನಾಂಕ ೨೨.೧೧.೧೯೪೭

# ಅಧ್ಯಾಯ : ಎಂಟು

## ಉಪಸಂಹಾರ

ಇಪ್ಪತ್ತನೆಯ ಶತಮಾನದ ಮಧ್ಯಭಾಗದ ಸ್ವಾತಂತ್ರ್ಯ ಚಳವಳಿಯ ಅಂತಿಮ ಹಂತ ಹಾಗೂ ಬದಲಾವಣೆಯ ಹೊಸ ಗಾಳಿ ಬೀಸುವ ಕಾಲಘಟ್ಟದಲ್ಲಿ ಸಾಮಾಜಿಕ ಕ್ಷೇತ್ರಕ್ಕೆ ಮತ್ತು ಸಾರಸ್ವತಲೋಕಕ್ಕೆ ಅಡಿಯಿಟ್ಟು ಮುಂದೆ ಧೀಮಂತ ಸಮಾಜಕಾರ್ಯಕರ್ತೆಯಾಗಿ, ರಾಜಕಾರಣಿಯಾಗಿ, ಪತ್ರಿಕೋದ್ಯಮಿಯಾಗಿ, ಮಹಿಳಾಪರಚಿಂತಕಿಯಾಗಿ, ಸ್ತ್ರೀ ಸುಧಾರಕಿಯಾಗಿ ಬೆಳೆದವರು ಎಂ.ಆರ್. ಲಕ್ಷಮ್ಮನವರು. ಇವರು ಸಂಪ್ರದಾಯಸ್ಥ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದ್ದರೂ, ಹೆಣ್ಣುಮಕ್ಕಳು ಹೆಚ್ಚಿನ ಶಿಕ್ಷಣ ಪಡೆಯುವುದೇ ವಿರಳವಾಗಿದ್ದ ಕಾಲದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದು ತಮ್ಮನ್ನು ಸಮಾಜಸೇವೆಯಲ್ಲಿ ತೊಡಗಿಸಿಕೊಂಡರು. ತಮ್ಮ ಕುಟುಂಬದ ಅವಶ್ಯಕತೆಗಳನ್ನು ಕೂಡ ಸಮರ್ಥವಾಗಿ ನಿಭಾಯಿಸಿದ ಆದರ್ಶ ಗೃಹಿಣಿ. ತಮ್ಮ ಪ್ರಗತಿಪರ ಹಾಗೂ ವಿಭಿನ್ನ ಚಿಂತನಾಕ್ರಮದಿಂದ ವೈಚಾರಿಕ ಮನೋಭಾವವನ್ನು ಬೆಳೆಸಿಕೊಂಡಿದ್ದ ಲಕ್ಷಮ್ಮ ರಾಜಕೀಯ ಕ್ಷೇತ್ರ, ಪತ್ರಿಕೋದ್ಯಮ, ಮಹಿಳಾಪರವಾದ ಚಳವಳಿಗಳಲ್ಲಿ ತಮ್ಮ ಹೆಜ್ಜೆಗುರುತನ್ನು ಬಲವಾಗಿ ಮೂಡಿಸಿದ್ದರು. ಸಾಮಾಜಿಕ ಮೌಲ್ಯಗಳಿಗೆ ಒತ್ತುಕೊಟ್ಟು ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಕ್ಷೇತ್ರದ ಬದಲಾವಣೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡವರಾಗಿದ್ದು, ಅವರ ಕಾರ್ಯಕ್ಷೇತ್ರವನ್ನು ಅವಲೋಕಿಸಿದಾಗ ಸಾಮಾನ್ಯ ಹಿನ್ನೆಲೆಯ ಗೃಹಿಣಿಯೊಬ್ಬರು ಇಷ್ಟೆಲ್ಲಾ ಸಾಧನೆ ಮಾಡಲು ಸಾಧ್ಯವೇ ಎಂದು ಅಚ್ಚರಿಪಡುವಂತಾಗುತ್ತದೆ. ಅವರು ಏಕಕಾಲದಲ್ಲಿಯೇ ಹಲವಾರು ಕ್ಷೇತ್ರಗಳಲ್ಲಿ ಕೆಲಸ ಮಾಡಿದ್ದಾರೆ.

ಹಿಂದಿನ ಕಾಲದಲ್ಲಿ ಹೆಣ್ಣುಮಕ್ಕಳನ್ನು ಉನ್ನತ ಶಿಕ್ಷಣಕ್ಕೆ ಕಳುಹಿಸುವುದೇ ಕಷ್ಟವಾಗಿದ್ದು ಮತ್ತು ಅವರಿಗೆ ಸ್ವಾತಂತ್ರ್ಯ ನೀಡಿ ಸಾರ್ವಜನಿಕ ಸೇವೆಗೆ ಕಳುಹಿಸುವುದು ದೂರದ ಮಾತಾಗಿದ್ದ ಕಾಲದಲ್ಲಿ ಸಂಪ್ರದಾಯಸ್ಥ ಮನೆತನದಲ್ಲಿ ಜನಿಸಿದ್ದರೂ ಲಕ್ಷಮ್ಮನವರ ಸಮಾಜಸೇವೆಗೆ ಅವರ ತಂದೆಯವರು ಅಡಿಪಾಯ ಹಾಕಿದರು. ಅದಕ್ಕೆ ಬೆಂಬಲವಾಗಿ ನಿಂತವರು ಲಕ್ಷಮ್ಮ ಅವರ ಪತಿ ನಾರಾಯಣಮೂರ್ತಿಯವರು. ಮಹಿಳೆಯರು ಅಕ್ಷರಸ್ಥರಾಗಿ, ವಿದ್ಯಾವಂತರಾಗಿ ದೇಶಸೇವೆಯಲ್ಲಿ ತೊಡಗಬೇಕೆಂಬುದು ಅವರ ಆಶಯವಾಗಿತ್ತು. ಮೈಸೂರು ಮತ್ತು ಬೆಂಗಳೂರಿನಲ್ಲಿ ಮಹಿಳಾ ಮಂಡಳಿಗಳನ್ನು ಸ್ಥಾಪನೆ ಮಾಡಿ ರಚನಾತ್ಮಕ ಕಾರ್ಯಗಳನ್ನು ಕೈಗೊಳ್ಳುವ ಮೂಲಕ ಸಮಾಜದ ಏಳಿಗೆಗೆ ಕಾರಣಕರ್ತರಾದರು. ಹಲವಾರು ಮಹಿಳಾ ಮಂಡಲಿಗಳನ್ನು ಸ್ಥಾಪಿಸಿದರು. ವನಿತಾಸದನ, ಭಗಿನಿ ಸೇವಾ ಸಮಾಜ ಮುಂತಾದ ಮಹಿಳಾ ಸಮಾಜಗಳಲ್ಲಿ ಸದಸ್ಯೆಯಾಗಿ ಎನ್.ಆರ್. ಕಾಲೋನಿಯ ಮಹಿಳಾ ಮಂಡಲಿ ಶಿಕ್ಷಣ ಸಂಸ್ಥೆ ಮಹಿಳೆಯರಿಂದಲೇ ಪ್ರಾರಂಭವಾಗಿ ಇಂದಿಗೂ ಸಾವಿರಾರು ಮಕ್ಕಳಿಗೆ ಶಿಕ್ಷಣ ನೀಡಲು

ಕಾರಣಕರ್ತರಾದವರು ಎಂ.ಆರ್. ಲಕ್ಷಮ್ಮ ಅವರಿಗಿದ್ದ ಜಾಣ್ಮೆ, ಮಾತುಗಾರಿಕೆ, ಸೇವಾಮನೋಭಾವ, ಸಾಮಾಜಿಕಪ್ರಜ್ಞೆ, ವಿದ್ಯೆ ಇವೆಲ್ಲದರ ಜೊತೆಗೆ ಅವರ ಹಸನ್ಮುಖ ಮತ್ತು ಸದಾ ಪುಟಿಯುವ ಉತ್ಸಾಹದ ವ್ಯಕ್ತಿತ್ವ ಅವರು ಸಮಾಜ ಕ್ಷೇತ್ರದಲ್ಲಿ ತೊಡಗಿಕೊಳ್ಳಲು ಸಹಕಾರಿಯಾಯಿತು. ಸಾಹಿತ್ಯಪ್ರಿಯೆಯಾಗಿದ್ದ ಲಕ್ಷಮ್ಮನವರು ಆಕಾಶವಾಣಿಗೆ ನಾಟಕಗಳನ್ನು ಮತ್ತು ರೂಪಕಗಳನ್ನು ಬರೆಯುತ್ತಿದ್ದು ಅವುಗಳು ಮೈಸೂರು ಆಕಾಶವಾಣಿಯಲ್ಲಿ ಅಲ್ಲದೇ ಹೈದ್ರಾಬಾದ್ ಮತ್ತು ಮದ್ರಾಸಿನ ಆಕಾಶವಾಣಿಯ ಕನ್ನಡ ವಿಭಾಗದಲ್ಲಿ ಪ್ರಸಾರಗೊಂಡಿದ್ದವು.

ಲಕ್ಷಮ್ಮ ಅವರ ಸಾಹಿತ್ಯಸೇವೆ ಮತ್ತು ಸಮಾಜಸೇವೆ ಅವರನ್ನು ವಯಸ್ಕರ ಶಿಕ್ಷಣ ಸಂಸ್ಥೆಯ ಪತ್ರಿಕೆ 'ಬೆಳಕು'ವಿನ ಸಂಪಾದಕಿಯಾಗುವಂತೆ ಮಾಡಿತು. ಹೆಣ್ಣುಮಕ್ಕಳಿಗೆ ಪತ್ರಿಕೋದ್ಯಮ ದೂರವಾಗಿದ್ದ ಕಾಲದಲ್ಲಿ ಸತತವಾಗಿ ಮೂರು ವರ್ಷಗಳ ಕಾಲ 'ಬೆಳಕು' ವಾರಪತ್ರಿಕೆಯ ಸಂಪಾದಕಿಯಾಗಿ ಕಾರ್ಯ ನಿರ್ವಹಿಸಿದರು. ಬೆಳಕು ಪತ್ರಿಕೆಯ ಸಂಪಾದಕಿಯಾಗಿ ತಮ್ಮ ಪ್ರಗತಿಪರ ಚಿಂತನೆಗಳು ಹಾಗೂ ವೈಚಾರಿಕ ಮನೋಭಾವವನ್ನು ಪ್ರಕಟಪಡಿಸಲು ಸಾಧ್ಯವಾಯಿತು. ಅಕ್ಷರ ಕಲಿಯುವ ಹಂಬಲ, ಅದನ್ನು ಮುಂದುವರೆಸಿಕೊಂಡು ಹೋಗಲು 'ಬೆಳಕು' ಪತ್ರಿಕೆಯನ್ನು ಆಶ್ರಯಿಸಿದ್ದ ಅನೇಕ ಗ್ರಾಮೀಣ ಜನರಲ್ಲಿ ಹೊಸ ಚಿಂತನೆಯನ್ನು ಹಾಗೂ ಅರಿವನ್ನು ಮೂಡಿಸಿದರು. ಮಹಿಳೆಯರ ಅಭ್ಯುದಯದ ಬಗ್ಗೆ ಮತ್ತು ಸಾಮಾಜಿಕ ಸುಧಾರಣೆಯ ಬಗ್ಗೆ ಚಿಂತಿಸುತ್ತಿದ್ದ ಲಕ್ಷಮ್ಮನವರು ೧೯೪೩ರಲ್ಲಿ ಪ್ರಾರಂಭವಾದ 'ಬೆಳಕು' ಪತ್ರಿಕೆ ೨೦೦೧ ರವರೆಗೆ ತನ್ನ ಪ್ರಸಾರವನ್ನು ನಿಲ್ಲಿಸುವವರೆಗೆ ಸಂಪಾದಕರಾಗಿದ್ದವರಲ್ಲಿ ಏಕೈಕ ಮಹಿಳಾ ಸಂಪಾದಕಿಯಾಗಿ ಇತಿಹಾಸ ಸೃಷ್ಟಿಸಿದರು. ಪುರುಷಪ್ರಧಾನ ಪತ್ರಿಕೋದ್ಯಮ ಕ್ಷೇತ್ರದಲ್ಲಿ 'ಬೆಳಕು' ಪತ್ರಿಕೆಯ ಏಕೈಕ ಮಹಿಳಾ ಸಂಪಾದಕಿಯಾಗಲು ಕಾರಣ ಅವರ ಜ್ಞಾನದ ವಿಸ್ತಾರ ಮತ್ತು ಸಾಮಾಜಿಕ ಕಳಕಳಿ ಕಾರಣವೆಂದರೆ ತಪ್ಪಾಗಲಾರದು. ಹೊಸದಾಗಿ ಅಕ್ಷರವನ್ನು ಕಲಿಯುವವರಿಗೆ ಚಿಕ್ಕ, ಚೊಕ್ಕ ಮತ್ತು ಸರಳ ವಾಕ್ಯಗಳಲ್ಲಿ ವಿಚಾರಗಳನ್ನು ತಿಳಿಸುವ ಅರಿವನ್ನು ಹಾಗೂ ಜ್ಞಾನವನ್ನು ಹೆಚ್ಚಿಸುವ ಕಾರ್ಯವನ್ನು ಶ್ರದ್ಧೆಯಿಂದ ಮಾಡಿದರು. 'ಬೆಳಕು' ಪತ್ರಿಕೆಯಲ್ಲಿ ವಯಸ್ಕರ ಶಿಕ್ಷಣದ ಬಗೆಗಿನ ಕಾಳಜಿಯಷ್ಟೇ ಅಲ್ಲದೆ ಸಮಾಜದ ಅಭಿವೃದ್ಧಿ ಮತ್ತು ಸುಧಾರಣೆ, ಗ್ರಾಮೀಣಾಭಿವೃದ್ಧಿ, ಮಹಿಳೆಯರ ಮತ್ತು ಮಕ್ಕಳ ಸರ್ವಾಂಗೀಣ ಅಭ್ಯುದಯಕ್ಕಾಗಿ ಮಾಡುತ್ತಿದ್ದ ಚಿಂತನೆಗಳು, 'ಬೆಳಕು'ವಿನ ಓದುಗರಲ್ಲಿ ದೇಶಪ್ರೇಮದ ಬೀಜವನ್ನು ಬಿತ್ತಿದ ಹೆಗ್ಗಳಿಕೆ ಲಕ್ಷಮ್ಮನವರದಾಗಿತ್ತು. ಎಲ್ಲ ಓದುಗರಿಗೆ ಅನುಕೂಲವಾಗಲೆಂಬ ಉದ್ದೇಶದಿಂದ ಸಾಮಾನ್ಯ ಜ್ಞಾನಕ್ಕೆ ಸಂಬಂಧಿಸಿದ ಸಂಗತಿಗಳು ಪ್ರಮುಖ ವ್ಯಕ್ತಿಗಳ ಬಗ್ಗೆ ಲೇಖನಗಳನ್ನು ಪ್ರಕಟಿಸುತ್ತಿದ್ದ ಲಕ್ಷಮ್ಮನವರು ಸ್ವಾತಂತ್ರ್ಯ ಚಳವಳಿಯ ಪರವಾದ ಹಾಗೂ ಏಕೀಕರಣದ ಸುದ್ದಿಗಳನ್ನು ಪ್ರಕಟಿಸುತ್ತಿದ್ದರು. 'ಬೆಳಕು' ಪತ್ರಿಕೆ ಸರ್ಕಾರದಿಂದ ಧನಸಹಾಯ ಪಡೆಯುತ್ತಿದ್ದ ಪತ್ರಿಕೆಯಾಗಿದ್ದು ಸರ್ಕಾರದ ಒಂದು ಅಂಗಸಂಸ್ಥೆಯಾದ ವಯಸ್ಕರ ಶಿಕ್ಷಣ ಸಮಿತಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗಲೂ

ಸರ್ಕಾರವನ್ನು ಟೀಕಿಸಲು, ಸ್ವಾತಂತ್ರ್ಯ ಚಳವಳಿಯ ಪರವಾಗಿ, ಏಕೀಕರಣದ ಪರವಾಗಿ ಧ್ವನಿಯೆತ್ತಲು ಹಿಂಜರಿಯದೆ ಧೈರ್ಯವಾಗಿ ತಮ್ಮ ನಿಲುವನ್ನು ಪ್ರಕಟಿಸುತ್ತಿದ್ದ ಸಂಪಾದಕಿ ಲಕ್ಷಮ್ಮನವರಾಗಿದ್ದರು. ಇದರೊಂದಿಗೆ ಎಲ್ಲಾ ದಾನಕ್ಕಿಂತ ಶ್ರೇಷ್ಠದಾನ ವಿದ್ಯಾದಾನ ಎಂಬುದನ್ನು ಅರಿತು ಅಕ್ಷರಜ್ಞಾನವನ್ನು ಹರಡಿದರು.

ಎಂ.ಆರ್. ಲಕ್ಷಮ್ಮನವರು ಆಕಸ್ಮಿಕವಾಗಿ ರಾಜಕೀಯ ರಂಗಕ್ಕೆ ಕಾಲಿಟ್ಟರು. ಆದರೂ ಅವರ ಸೇವೆ ಅನನ್ಯವಾದದ್ದು. ೧೯೪೪ರಲ್ಲಿ ನ್ಯಾಯವಿಧಾಯಕ ಸಭೆಯ ಸದಸ್ಯರಾಗಿ ಅವಿರೋಧವಾಗಿ ಆಯ್ಕೆಯಾದ ಅವರು ಮೈಸೂರಿನ ಅರಸರು ಹೊಂದಿದ್ದಂತಹ ಪ್ರಜಾಪ್ರಭುತ್ವ ವಿರೋಧಿ ಮನೋಭಾವವನ್ನು ಖಂಡಿಸಿದರು. ಮೈಸೂರು ಚಲೋ ಚಳವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಸೆರೆಮನೆವಾಸವನ್ನು ಅನುಭವಿಸಿದರು. ಜನರನ್ನು ಸಂಘಟಿಸಿ ಸ್ವಾತಂತ್ರ್ಯದ ಕಿಡಿಯನ್ನು ಪ್ರಜ್ವಲಿಸುವಂತೆ ಮಾಡಿದರು. ಸೆರೆಮನೆಯಲ್ಲಿದ್ದಾಗ ಅವರು ಬರೆದ ತುರಂಗವಾಸ ಅನುಭವ ಎಂಬ ಸೆರೆಮನೆ ದಿನಚರಿ ಒಂದು ಪ್ರಮುಖವಾದ ಐತಿಹಾಸಿಕ ದಾಖಲೆಯಾಗಿದೆ. ಅವರ ಸೆರೆಮನೆ ದಿನಚರಿಯಲ್ಲಿ ಸ್ವಾತಂತ್ರ್ಯ ಚಳವಳಿಯ ಘಟನೆಗಳು, ಪ್ರಮುಖ ವ್ಯಕ್ತಿಗಳ ಹೋರಾಟಗಳು, ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದ ಹೋರಾಟಗಾರರು, ಮಹಿಳಾ ಸ್ವಾತಂತ್ರ್ಯ ಚಳವಳಿಗಾರರ ಬಗೆಗಿನ ಅಭಿಪ್ರಾಯಗಳು ಮತ್ತು ಗಾಂಧೀಜಿಯವರ ಪ್ರಭಾವಕ್ಕೊಳಗಾಗಿರುವ ಅನೇಕ ಅನಕ್ಷರಸ್ಥರ ಹೋರಾಟಗಾರರ ಬಗ್ಗೆ ದಾಖಲಿಸಿದ್ದು, ಸೆರೆಮನೆಯಲ್ಲಿ ಅಕ್ಷರಜ್ಞಾನವನ್ನು ನೀಡುವುದರ ಜೊತೆಗೆ ಸಮಾಜ ಸುಧಾರಣೆಯ ಬಗ್ಗೆ ಗಹನವಾಗಿ ಚಿಂತಿಸಿದ ಲಕ್ಷಮ್ಮನವರು ಎಲ್ಲ ವಿವರಗಳನ್ನು ಒಳಗೊಂಡ ದಾಖಲೆಯಾಗಿದೆ ಹಾಗೂ ನಂತರದ ದಿನಗಳಲ್ಲಿ ಒಬ್ಬ ಸಮಾಜಸುಧಾರಕಿಯಾಗಲು ದೃಢನಿರ್ಧಾರ ಕೈಗೊಂಡರು.

ಲಕ್ಷಮ್ಮ ಅವರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದಂತೆ ಏಕೀಕರಣ ಚಳವಳಿಯಲ್ಲಿ ಭಾಗವಹಿಸಿದರು. ಸ್ವಾತಂತ್ರ್ಯಪೂರ್ವದಲ್ಲಿಯೇ 'ಬೆಳಕು' ಪತ್ರಿಕೆಯ ಸಂಪಾದಕಿಯಾಗಿದ್ದಾಗಲೇ ಏಕೀಕರಣ ಪರವಾದ ಚಿಂತನೆಗಳನ್ನು ಹೊಂದಿದ್ದರು. ಏಕೀಕರಣದ ಅಗತ್ಯತೆ, ಉದ್ದೇಶಗಳ ಬಗ್ಗೆ 'ಬೆಳಕು' ಪತ್ರಿಕೆಯಲ್ಲಿ ಲೇಖನಗಳನ್ನು ಪ್ರಕಟಿಸಿದ್ದಾರೆ. ಲಕ್ಷಮ್ಮ ಅವರು ರೈಲ್ವೆ ತಡೆ ಚಳವಳಿಯಲ್ಲಿ ಭಾಗವಹಿಸಿ ಏಕೀಕರಣ ಚಳವಳಿಯಲ್ಲಿ ಸಕ್ರಿಯ ಪಾತ್ರ ವಹಿಸಿದ್ದರು. ತಮ್ಮ ಸಂಪಾದಕತ್ವದ 'ಸೋದರಿ' ಪತ್ರಿಕೆಯಲ್ಲಿ ಏಕೀಕರಣ ಪರವಾದ ಚಿಂತನೆಗಳನ್ನು ಹೋರಾಟ ರೂಪುರೇಷೆಗಳನ್ನು ಕುರಿತ ಲೇಖನಗಳನ್ನು ಪ್ರಕಟಿಸುತ್ತಿದ್ದರು. ಹಳೇ ಮೈಸೂರು ಭಾಗದ ಅನೇಕ ನಾಯಕರು ಏಕೀಕರಣ ವಿರೋಧಿ ಭಾವನೆಯನ್ನು ಹೊಂದಿದ್ದರು. ಆದರೆ ಲಕ್ಷಮ್ಮನವರು ಏಕೀಕರಣಪರವಾದ ನಿಲುವನ್ನು ಹೊಂದಿದ್ದು

ವಿಧಾನಪರಿಷತ್ತಿನ ಸದಸ್ಯರಾಗಿದ್ದಾಗ ಅವರು ಏಕೀಕರಣಪರವಾದ ಅನೇಕ ಭಾಷಣಗಳನ್ನೂ, ಚರ್ಚೆಗಳನ್ನೂ ಮಾಡಿದ್ದಲ್ಲದೇ ಅಖಂಡ ಕರ್ನಾಟಕದ ಪ್ರತಿಪಾದಕರಾಗಿದ್ದರು.

ಲಕ್ಷಮ್ಮನವರು ಸ್ಥಳೀಯ ಸಂಸ್ಥೆಗಳ ಮೂಲಕ ರಾಜಕೀಯದ ಮೆಟ್ಟಿಲನ್ನೇ ಹಂತ ಹಂತವಾಗಿ ಏರಿದರು. ೧೯೪೬ರಲ್ಲಿ ಪುರಸಭಾ ಸದಸ್ಯರಾಗಿ ಚುನಾಯಿತರಾಗಿ ಮೈಸೂರು ನಗರದ ಅಭಿವೃದ್ಧಿಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ೧೯೫೨ ರಿಂದ ೧೯೭೦ರವರೆಗೆ ೧೮ ವರ್ಷಗಳ ಕಾಲ ವಿಧಾನಪರಿಷತ್ತಿನ ಸದಸ್ಯರಾಗಿ ಜನಸೇವೆಯಲ್ಲಿ ತೊಡಗಿಸಿಕೊಂಡರು. ನ್ಯಾಯವಿಧೇಯಕ ಸಭೆಯ ಸದಸ್ಯರಾಗಿ, ವಿಧಾನಪರಿಷತ್ತಿನ ಸದಸ್ಯರಾಗಿ ಅವರು ಮಾಡಿದ ಭಾಷಣಗಳು ಮತ್ತು ಚರ್ಚೆಗಳನ್ನು ಅಧ್ಯಯನ ಮಾಡಿದಾಗ ಅವರ ಚಿಂತನೆಗಳು ಸಮಾಜಮುಖಿಯಾಗಿದ್ದು, ಸಾಮಾಜಿಕ ಕಳಕಳಿಯನ್ನು ಬಿಂಬಿಸುತ್ತದೆ. ಹದಿನೆಂಟು ವರ್ಷಗಳ ಕಾಲ ವಿಧಾನಪರಿಷತ್ತಿನ ಸದಸ್ಯರಾಗಿದ್ದರು. ಇತರ ರಾಜಕಾರಣಿಗಳಂತೆ ಹಣ, ಅಧಿಕಾರ, ಆಸ್ತಿಗಳನ್ನು ಹಿಂಬಾಲಿಸದೆ ದೇಶದ ರೈತರು, ಮಹಿಳೆಯರು, ಕುಶಲಕರ್ಮಿಗಳು, ಮಕ್ಕಳು ಮತ್ತು ಜನಸಾಮಾನ್ಯರ ಅಭಿವೃದ್ಧಿಗಾಗಿ ಶ್ರಮಿಸಿದರು. ಸಂಪ್ರದಾಯಸ್ಥ ಕುಟುಂಬದ ಹಿನ್ನೆಲೆ ಇದ್ದು ಮನೆ ತುಂಬಾ ಮಕ್ಕಳು, ಜೊತೆಗೆ ರಾಜಕೀಯ ಮತ್ತು ಸಾಮಾಜಿಕ ಜವಾಬ್ದಾರಿಗಳ ನಡುವೆಯೂ ದೂರದ ದೇಶವಾಗಿದ್ದ ಅಮೆರಿಕಾಕ್ಕೆ ಭೇಟಿ ನೀಡಿದ್ದು, ಅವರ ಧೈರ್ಯ ಮತ್ತು ಸಾಹಸದ ಪ್ರತೀಕವಾಗಿದೆ. ಲಕ್ಷಮ್ಮನವರು ರಾಜಕೀಯ ಸಂಸ್ಥೆಗಳ ಪರಿಶೀಲನೆಗಾಗಿ ಹಾಗೂ ಮಹಿಳೆಯರ ಸ್ಥಿತಿಗತಿಗಳ ಅಧ್ಯಯನಕ್ಕಾಗಿ ೧೯೫೪ ರಲ್ಲಿ ಅಮೆರಿಕಾ ದೇಶಕ್ಕೆ ಭೇಟಿ ನೀಡಿ ನಾಲ್ಕುವರೆ ತಿಂಗಳುಗಳ ಕಾಲ ಅಲ್ಲಿಯೇ ನೆಲೆಸಿದ್ದು ಭಾರತದ ಇತಿಹಾಸ ಮತ್ತು ಸಂಸ್ಕೃತಿಯ ವೈಶಿಷ್ಟ್ಯವನ್ನು ಅಮೆರಿಕಾದ ದೇಶವಾಸಿಗಳಿಗೆ ಪರಿಚಯ ಮಾಡಿಸಿದರು. ಅಲ್ಲಿನ ಪ್ರಮುಖ ವ್ಯಕ್ತಿಗಳನ್ನು ಭೇಟಿ ಮಾಡಿ ಹಲವಾರು ವಿಷಯಗಳ ಬಗ್ಗೆ ವಿಚಾರವಿನಿಮಯ ಮಾಡಿಕೊಂಡರು. ಅಂದಿನ ಕಾಲದಲ್ಲಿ ಅಮೆರಿಕಾ ದೇಶಕ್ಕೆ ಭಾರತೀಯರ ಪ್ರತಿನಿಧಿಯಾಗಿ ಹೋಗಿಬಂದ ದಿಟ್ಟ ಮಹಿಳೆ ಎಂಬ ಹೆಗ್ಗಳಿಕೆ ಇವರದು. ಅಮೆರಿಕಾ ಮಾತ್ರವಲ್ಲದೇ ಯುರೋಪ್‌ಖಂಡದ ಇತರ ದೇಶಗಳಾದ ಇಂಗ್ಲೆಂಡ್, ಇಟಲಿ, ಫ್ರಾನ್ಸ್ ಪ್ರವಾಸ ಮಾಡಿ ಅಲ್ಲಿನ ಮಹಿಳೆಯರ ಸ್ಥಾನಮಾನ ಮತ್ತು ಸ್ಥಿತಿಗತಿಗಳನ್ನು ಗಮನಿಸಿ ಭಾರತದಲ್ಲಿಯೂ ಕೂಡ ಮಹಿಳೆಯರು ಉತ್ತಮ ಸ್ಥಾನಮಾನ ಗಳಿಸಬೇಕೆಂಬ ಹಂಬಲ ಹೊಂದಿದ್ದ ಲಕ್ಷಮ್ಮ ಅವರು ಅದಕ್ಕಾಗಿ ತಮ್ಮ ಜೀವನವನ್ನೇ ಮುಡಿಪಾಗಿಟ್ಟಿದ್ದರು.

ಎಂ.ಆರ್. ಲಕ್ಷಮ್ಮನವರ ಮತ್ತೊಂದು ಸಾಹಸವೆಂದರೆ, ಪತ್ರಿಕೋದ್ಯಮ ಕ್ಷೇತ್ರದ ಸಾಧನೆ. ಪುರುಷಪ್ರಧಾನವಾದ ಸಮಾಜದಲ್ಲಿ ಇಂದಿಗೂ ಕೂಡ ಕಾಲಿಡಲು ಹಿಂಜರಿಯುವಂತಹ ಕ್ಷೇತ್ರವಾದ ಪತ್ರಿಕೋದ್ಯಮಕ್ಕೆ ೫೦ರ ದಶಕದಲ್ಲಿ ಕಾಲಿಟ್ಟು ಕನ್ನಡನಾಡಿನ ಪತ್ರಿಕೋದ್ಯಮಕ್ಕೆ ಒಂದು ಅಮೂಲ್ಯ ಕೊಡುಗೆಯಾಗಿ 'ಸೋದರಿ' ವಾರಪತ್ರಿಕೆಯನ್ನು

ನೀಡಿದರು. ಕನ್ನಡ ಪತ್ರಿಕೋದ್ಯಮ ರಾಷ್ಟ್ರೀಯ, ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯ, ನಾಡು-ನುಡಿಗಳ ಸ್ವರೂಪದ, ಆಶಯಗಳೊಂದಿಗೆ ಆರಂಭದ ಹೊತ್ತಿನಲ್ಲಿಯೇ ಮಹಿಳೆಯರು ಹಲವು ಉದ್ದೇಶಗಳ ಹಿನ್ನೆಲೆಯಲ್ಲಿ ಪತ್ರಿಕಾರಂಗಕ್ಕೆ ಕಾಲಿಟ್ಟರು. ಮಹಿಳೆಯರು ಮನೆಯ ಹೊರಗೆ ಭಾಗವಹಿಸುವುದೇ ಕಷ್ಟವಾಗಿದ್ದ ಕಾಲದಲ್ಲಿ ಮಹಿಳೆಯರು ಪತ್ರಿಕೋದ್ಯಮದಂಥ ಸಾರ್ವಜನಿಕ ರಂಗದಲ್ಲಿ ಕಾಲಿಟ್ಟಿದ್ದು, ಇಪ್ಪತ್ತನೇ ಶತಮಾನದಲ್ಲಿ ಮಹತ್ತರ ಬದಲಾವಣೆಯಾಗಿ ಕಂಡುಬಂದಿತು. ಮಹಿಳೆಯರ ಸಮಸ್ಯೆಗಳನ್ನು ತಿಳಿಸುವ ಉದ್ದೇಶದಿಂದ ಮಹಿಳಾ ವಿಮೋಚನೆಯನ್ನು ಗುರಿಯಾಗಿಸಿಕೊಂಡ ಮಹಿಳಾ ಪತ್ರಿಕೋದ್ಯಮವು ಪತ್ರಿಕೋದ್ಯಮ ಇತಿಹಾಸದಲ್ಲಿ ಒಂದು ಮೈಲಿಗಲ್ಲಾಗಿದೆ. ಮಹಿಳೆಯರೇ ಮಹಿಳೆಯರಿಗಾಗಿ ನಡೆಸಿದ ಪತ್ರಿಕೆಗಳು ಕಾಲಕ್ರಮೇಣ ಮಹಿಳೆಯರ ಸಮಸ್ಯೆಗಳ ನಿವಾರಣೆಯಿಂದ ಸಮಾಜದ ಸಾಂಸ್ಕೃತಿಕ ಬದಲಾವಣೆ ಸಾಧ್ಯ ಎಂಬುದನ್ನು ಕಂಡುಕೊಂಡಿತು. ಪತ್ರಿಕೆಗಳ ಮೂಲಕ ಸ್ತ್ರೀ ಶಿಕ್ಷಣ, ಸ್ತ್ರೀಯರ ಕರ್ತವ್ಯ, ಸ್ತ್ರೀಯರ ದೇಶಸೇವೆ, ಆರ್ಥಿಕ ಸ್ವಾತಂತ್ರ್ಯ, ಸಮಾನತೆ ಉದ್ಯೋಗದ ಮೂಲಕ ಸ್ತ್ರೀ ಸ್ವಾತಂತ್ರ್ಯ ಮತ್ತು ಸ್ವಾವಲಂಬನೆಯ ಬದುಕು, ಮಹಿಳೆಯರ ಸಮಸ್ಯೆಗಳ ನಿವಾರಣೆಯಲ್ಲಿ ಸ್ತ್ರೀ-ಪುರುಷರ ಪಾತ್ರ ಮುಂತಾದ ಅಂಶಗಳನ್ನು ಸಮಾಜಕ್ಕೆ ತಿಳಿಸಿ ಮಹಿಳಾ ಚಳವಳಿಗೆ ಕಾರಣವಾದ ಮಹಿಳಾ ಪತ್ರಿಕೋದ್ಯಮ ದೇಶದ ಸಾಂಸ್ಕೃತಿಕ ಬದಲಾವಣೆಯಲ್ಲಿ ಮಹತ್ತರ ಪಾತ್ರವನ್ನು ವಹಿಸಿದವು. ಈ ಸಂದರ್ಭದಲ್ಲಿ ಪತ್ರಿಕೋದ್ಯಮದಲ್ಲಿ ತೊಡಗಿಸಿಕೊಂಡ ಲಕ್ಷಮ್ಮ ೧೯೫೦ರ ಜನವರಿ ೨೬ರಂದು ತಮ್ಮ 'ಸೋದರಿ' ಪತ್ರಿಕೆಯನ್ನು ಪ್ರಾರಂಭಿಸಿದರು.

'ಸೋದರಿ' ಪತ್ರಿಕೆಯು ಮಹಿಳೆಯರ ಏಳಿಗೆಗಾಗಿ ಇದ್ದ ಪತ್ರಿಕೆಯಾಗಿದ್ದು, ವೈವಿಧ್ಯಮಯ ಲೇಖನಗಳನ್ನು, ಕಥೆಗಳನ್ನು ಮತ್ತು ಕವನಗಳನ್ನು ಒಳಗೊಂಡಿತ್ತು. 'ಸೋದರಿ' ಪತ್ರಿಕೆಯು ಅಂದಿನ ಕಾಲದಲ್ಲಿ ಮೂರರಿಂದ ನಾಲ್ಕು ಸಾವಿರ ಪ್ರತಿಗಳು ಮಾರಾಟವಾಗುತ್ತಿದ್ದು, ಕರ್ನಾಟಕದ ಹೊರ ರಾಜ್ಯಗಳಿಗೂ ಪತ್ರಿಕೆ ರವಾನೆಯಾಗುತ್ತಿತ್ತು. ಮಹಿಳೆಯರ ಹಕ್ಕು ಬಾಧ್ಯತೆಗಳನ್ನು ವಿವರಿಸಲೂ ರಚನಾತ್ಮಕ ದೃಷ್ಟಿಯಿಂದ ಅದನ್ನು ಸಾಧಿಸುವುದಕ್ಕಾಗಿಯೂ ನಮ್ಮ ಭಾವನೆಯನ್ನು ಭಾಷೆಯ ರೂಪದಲ್ಲಿ ಹೊರಗೆಡವಿ ಜಗತ್ತಿನ ಮುಂದಿರಿಸುವುದಕ್ಕಾಗಿಯೇ 'ಸೋದರಿ' ಶ್ರಮಿಸುತ್ತಿದೆ ಎಂಬ ಪ್ರಕಟಣೆಯೊಂದಿಗೆ 'ಸೋದರಿ' ತನ್ನ ಗಮನವನ್ನು ಸೆಳೆಯುತ್ತಿತ್ತು.

ದೇಶದ ನಾಡಿನ ಸಾಮಾಜಿಕ ರಾಜಕೀಯ ಪ್ರಸಕ್ತ ಪರಿಸ್ಥಿತಿಗಳ ಬಗ್ಗೆ ಅವುಗಳ ಸುಧಾರಣೆ ಬಗ್ಗೆ ಚಿಂತಿಸುತ್ತಿದ್ದ ಲಕ್ಷಮ್ಮನವರು ತಮ್ಮ ಲೇಖನಗಳಲ್ಲಿ ವ್ಯಕ್ತಪಡಿಸುತ್ತಿದ್ದರು. ಅವರು ಸಮಾಜಸೇವೆ, ರಾಜಕೀಯ ಕ್ಷೇತ್ರಗಳಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದರೂ ಸೋದರಿಯನ್ನು ಅಚ್ಚುಕಟ್ಟಾಗಿ ರೂಪಿಸುವಲ್ಲಿ ಮತ್ತು ನಿರ್ವಹಿಸುವಲ್ಲಿ ಆಸಕ್ತಿ ಕಡಿಮೆಯಾಗಲಿಲ್ಲ. ಆದರೆ ಬಿಡುವಿಲ್ಲದ ಕೆಲಸಗಳ ಮಧ್ಯೆ ಲೇಖನಗಳ ಸಂಗ್ರಹಣೆ,

ಜಾಹೀರಾತು ಸಂಪಾದನೆ, ಹಣ ಹೊಂದಿಸಿಕೊಳ್ಳುವುದು ಎಲ್ಲವೂ ಕಷ್ಟವಾಗುತ್ತಿತ್ತು. ಒಂದು ಆದರ್ಶವನ್ನಿಟ್ಟುಕೊಂಡು ಪ್ರಾರಂಭವಾಗಿದ್ದ ಈ ಪತ್ರಿಕೆ ಆರ್ಥಿಕ ಲಾಭದ ಉದ್ದೇಶದಿಂದ ಕೂಡಿರಲಿಲ್ಲ. ೬ ವರ್ಷಗಳ ಕಾಲ 'ಸೋದರಿ' ಪ್ರಾಮಾಣಿಕವಾಗಿ ತನ್ನ ಕೆಲಸವನ್ನು ನಿರ್ವಹಿಸಿತು. ನಂತರ ಕಾರ್ಯಭಾರದ ಒತ್ತಡದಿಂದ ೧೯೫೬ರಲ್ಲಿ 'ಸೋದರಿ'ಯನ್ನು ಮಾಸಪತ್ರಿಕೆಯಾಗಿ ಬದಲಾಯಿಸಲಾಯಿತು. ಕೇಂದ್ರೀಯ ಸಮಾಜಕಲ್ಯಾಣ ಮಂಡಲಿಯ ಚಟುವಟಿಕೆಗಳನ್ನು ಕನ್ನಡದಲ್ಲಿ ಪ್ರಕಟಿಸಲು ಅಧಿಕಾರ ಪಡೆದಿದ್ದ ಸೋದರಿ ಮಹಿಳೆಯರ ಸರ್ವತೋಮುಖ ಅಭಿವೃದ್ಧಿಗೆ ಬಹಳಷ್ಟು ಶ್ರಮಿಸುತ್ತಿತ್ತು. ನಂತರ ನಿರ್ವಹಣೆ ಮತ್ತು ಕಾರ್ಯಭಾರದ ಒತ್ತಡದಿಂದ ಪತ್ರಿಕೆಯನ್ನು ನಿಲ್ಲಿಸಲಾಯಿತು. ಪತ್ರಿಕೆಯನ್ನು ನಿಲ್ಲಿಸಿದರೂ ಲಕ್ಷಮ್ಮನವರ ಸಾಹಿತ್ಯಾಸಕ್ತಿ ಕಡಿಮೆಯಾಗಲಿಲ್ಲ. ಇತರ ಪತ್ರಿಕೆಗಳಿಗೆ ಲೇಖನಗಳನ್ನು, ಸಣ್ಣ ಕತೆಗಳನ್ನು ಅಲ್ಲದೇ ನಾಟಕಗಳನ್ನೂ ಬರೆಯುತ್ತಿದ್ದರು. ಆರು ದಶಕಗಳ ಹಿಂದೆ ಪುರುಷ ಪ್ರಧಾನವಾಗಿದ್ದ ಸಮಾಜದಲ್ಲಿ ಪುರುಷರಿಗೂ ಕೂಡ ನಿರ್ವಹಿಸಲು ಕಷ್ಟಕರವಾದ ಪತ್ರಿಕೋದ್ಯಮ ಕ್ಷೇತ್ರದಲ್ಲಿ ಕಾಲಿಟ್ಟು 'ಸೋದರಿ'ಯನ್ನು ಯಶಸ್ವಿಯಾಗಿ ನಡೆಸಿದ ಎಂ.ಆರ್. ಲಕ್ಷಮ್ಮ ಸಮಾಜಮುಖಿ ಚಿಂತನೆ ಉಳ್ಳವರಾಗಿದ್ದರೆಂದು ಸಾಬೀತುಪಡಿಸಿದ್ದಾರೆ.

ಲಕ್ಷಮ್ಮನವರು ಮೂಲತಃ ಸಮಾಜಸೇವಕಿಯಾಗಿದ್ದು ಹಲವಾರು ಮಹಿಳಾ ಮಂಡಲಿಗಳನ್ನು ಸ್ಥಾಪಿಸಿ ಮಹಿಳೆಯರ ಸರ್ವತೋಮುಖ ಅಭಿವೃದ್ಧಿಗಾಗಿ ಶ್ರಮಿಸಿದರು. ೧೯೫೪ ರಲ್ಲಿ **'ಮೈಸೂರು ರಾಜ್ಯದ ಸಮಾಜ ಕಲ್ಯಾಣ ಮಂಡಲಿ'**ಯ ಪ್ರಥಮ ಅಧ್ಯಕ್ಷೆಯಾಗಿ ಸೇವೆ ಸಲ್ಲಿಸಿದರು. ಮೈಸೂರು ರಾಜ್ಯದಲ್ಲಿ ೧೯೫೪ ಅಕ್ಟೋಬರ್ ೨೧ರಂದು ರಚನೆಯಾದ ರಾಜ್ಯ ಸಮಾಜಕಲ್ಯಾಣ ಮಂಡಲಿಯು ಡಿಸೆಂಬರ್‌ನಲ್ಲಿ ತನ್ನ ಕಾರ್ಯಾರಂಭ ಮಾಡಿತು. ಅದರ ಪ್ರಥಮ ಅಧ್ಯಕ್ಷೆಯಾಗಿ ಲಕ್ಷಮ್ಮನವರು ಅನೇಕ ಕಾರ್ಯಕ್ರಮಗಳನ್ನು ಕೈಗೊಂಡರು. ಸಮಾಜಸೇವಾಕಾರ್ಯದಲ್ಲಿ ನಿರತರಾಗಿರುವ ಸ್ವಯಂಪ್ರೇರಿತ ಕಲ್ಯಾಣ ಸಂಸ್ಥೆಗಳ ಕಾರ್ಯಕ್ರಮವನ್ನು ರೂಪಿಸುವುದು, ಅವುಗಳಿಗೆ ಅಗತ್ಯವಾದ ಎಲ್ಲ ರೀತಿಯ ಸಹಾಯ ಮಾಡುವುದು, ಅವುಗಳನ್ನು ಪರಿಶೀಲನೆ ಮಾಡುವುದು ಇತ್ಯಾದಿ ಜವಾಬ್ದಾರಿಗಳನ್ನು ಹೊತ್ತುಕೊಂಡ ಲಕ್ಷಮ್ಮನವರು ಸಮಾಜಸೇವೆಯಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡರು. ಲಕ್ಷಮ್ಮನವರು ಇತರ ಹಲವಾರು ಸಂಘಟನೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ರಚನಾತ್ಮಕ ಕಾರ್ಯಕಲಾಪಗಳಲ್ಲಿ ಭಾಗವಹಿಸಿ ಸದಾ ಕ್ರಿಯಾಶೀಲರಾಗಿದ್ದರು. ಗ್ರಾಹಕರ ವೇದಿಕೆಯ ಕಾರ್ಯಾಧ್ಯಕ್ಷೆಯಾಗಿ ನಾಗರಿಕ ಸೇವೆಗಳ ಬಗ್ಗೆ ಕಳಕಳಿಯನ್ನು ಹೊಂದಿದ್ದರು.

ಗ್ರಾಹಕರಿಗೆ ಜಾಗೃತಿ ಮೂಡಿಸುವ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದು ಮಹಿಳಾಮಂಡಲಿಗಳಲ್ಲಿ ಶಾಲಾಕಾಲೇಜುಗಳಲ್ಲಿ ಉಪನ್ಯಾಸವನ್ನು ನೀಡಿ ಪ್ರಾತ್ಯಕ್ಷಿಕೆಯನ್ನು

ವಸ್ತುಪ್ರದರ್ಶನವನ್ನು ಏರ್ಪಡಿಸುತ್ತಿದ್ದರು. 'ಕರ್ನಾಟಕ ಪಾನಸಂಯಮ ಮಂಡಳಿಯ' ಪ್ರಥಮ ಅಧ್ಯಕ್ಷೆಯಾಗಿ ಪಾನವ್ಯಸನಗಳಿಂದ ಆಗುವ ಅನಾಹುತಗಳ ಬಗ್ಗೆ ಜನರಿಗೆ ಅರಿವು ಮೂಡಿಸುವ ಕಾರ್ಯವನ್ನು ಕೈಗೊಂಡರು. ಮೈಸೂರು ಸಂಸ್ಥಾನದ ಮಕ್ಕಳ ಅಭಿವೃದ್ಧಿ ಸಮಿತಿಯ ಸ್ಥಾಪಕ ಸದಸ್ಯರಲ್ಲಿ ಒಬ್ಬರಾಗಿದ್ದರು. ಮಹಿಳಾ ಖಾದಿ ಸಹಕಾರ ಸಂಘದ ಅಧ್ಯಕ್ಷರಾಗಿ ಮೂರು ವರ್ಷಗಳ ಕಾಲ ಕಾರ್ಯ ನಿರ್ವಹಿಸಿದ ಅವರು ಕೇಂದ್ರ ಹೆಣ್ಣುಮಕ್ಕಳ ಶಿಕ್ಷಣ ಮಂಡಳಿಯಲ್ಲಿ ಸದಸ್ಯೆಯಾಗಿ ೨ ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಲಕ್ಷಮ್ಮನವರು ವಿವಿಧ ಸಂಘಸಂಸ್ಥೆಗಳ ಸದಸ್ಯೆಯಾಗಿದ್ದು, ಜನಸಾಮಾನ್ಯರಿಗೆ ನ್ಯಾಯಯುತವಾದ ಹಕ್ಕುಗಳನ್ನು ಒದಗಿಸಿಕೊಡಲು ಸಾಕಷ್ಟು ಶ್ರಮಿಸಿದ ಅವರ ಸಾಮಾಜಿಕ ಕಳಕಳಿ, ನಾಗರಿಕಪ್ರಜ್ಞೆ, ಸಮಾಜಮುಖಿ ಚಿಂತನೆಗಳು ಸಮಾಜದ ಸರ್ವತೋಮುಖ ಅಭಿವೃದ್ಧಿಗೆ ಕಾರಣವಾಗಿದೆ.

ಹೀಗೆ ಜೀವನದ ಉದ್ದಕ್ಕೂ ಕ್ರಿಯಾಶೀಲರಾಗಿ ಸಾಮಾಜಿಕ ಚಟುವಟಿಕೆಗಳಲ್ಲಿ ತೊಡಗಿಕೊಂಡ ಲಕ್ಷಮ್ಮನವರು ೧೯೮೮ಳ ಜೂನ್ ೭ ರಂದು ಇಹಲೋಕ ತ್ಯಜಿಸಿದರು.

### ಅಧ್ಯಯನದ ಫಲಿತಗಳು

ಪ್ರಸ್ತುತ ಅಧ್ಯಯನದಿಂದ ಹಲವು ಅಂಶಗಳನ್ನು ಕಂಡುಕೊಂಡಿದ್ದು ಅವುಗಳೆಂದರೆ:

- ಈ ಸಂಶೋಧನಾ ಪ್ರಬಂಧದಲ್ಲಿ ವ್ಯಕ್ತಿಚರಿತ್ರೆಯನ್ನು ದಾಖಲಿಸುವ ನೆಲೆಯಲ್ಲಿ ಎಂ.ಆರ್. ಲಕ್ಷಮ್ಮನವರ ಜೀವನ ಮತ್ತು ಸಾಧನೆಗಳ ಬಗ್ಗೆ ಅಧ್ಯಯನವನ್ನು ಮಾಡಲಾಗಿದೆ.

- ಕೆಳಸ್ತರದ ಅಧ್ಯಯನದಲ್ಲಿ ಸ್ತ್ರೀವಾದಿ ಇತಿಹಾಸದ ಅಧ್ಯಯನ ಒಂದು ಶಿಸ್ತಾಗಿದ್ದು, ಸ್ಥಳೀಯ ಚರಿತ್ರೆಯ ನೆಲೆಯಲ್ಲಿ ಈ ಅಧ್ಯಯನವನ್ನು ಅನಾವರಣಗೊಳಿಸಲಾಗಿದೆ. ಎಂಬತ್ತರ ದಶಕದಲ್ಲಿ ಭಾರತಕ್ಕೆ ಸ್ತ್ರೀವಾದದ ಆಗಮನವಾಗಿದ್ದರೂ, ಸ್ತ್ರೀವಾದ ಸ್ವಾತಂತ್ರ್ಯಪೂರ್ವದಲ್ಲಿಯೇ ಅಸ್ತಿತ್ವದಲ್ಲಿತ್ತು. ಅನೇಕ ಸ್ತ್ರೀವಾದಿಗಳು ಸ್ತ್ರೀಪರ ಹೋರಾಟಗಳನ್ನು ಮಾಡಿದ್ದರು. ಅಂತಹ ಸ್ತ್ರೀವಾದಿಗಳಲ್ಲಿ ಲಕ್ಷಮ್ಮನವರು ಒಬ್ಬರಾಗಿದ್ದು, ಅವರನ್ನು ಸ್ತ್ರೀವಾದಿ ನೆಲೆಯಲ್ಲಿ ಗುರುತಿಸುವ ಕಾರ್ಯವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

- ಸ್ತ್ರೀವಾದದಲ್ಲಿ ವಿವಿಧ ಆಯಾಮಗಳಿದ್ದು ಉದಾರವಾದಿ ಸ್ತ್ರೀವಾದ, ಮಾರ್ಕ್ಸ್‌ವಾದಿ ಸ್ತ್ರೀವಾದ, ತೀವ್ರಗಾಮಿ ಸ್ತ್ರೀವಾದ, ಮನೋವಿಶ್ಲೇಷಣಾತ್ಮಕ ಸ್ತ್ರೀವಾದ, ಕಪ್ಪು ಸ್ತ್ರೀವಾದ, ಸಾಂಸ್ಕೃತಿಕ ಸ್ತ್ರೀವಾದ, ಆಧುನಿಕೋತ್ತರ ಸ್ತ್ರೀವಾದ, ಪರಿಸರ ಸ್ತ್ರೀವಾದ ಮುಂತಾದ ಅಧ್ಯಯನದ ನೆಲೆಗಟ್ಟಿನಲ್ಲಿ ಅಮೆರಿಕಾದ ಬೆಟ್ಟಿ ಫ್ರೀಡನ್‌ಳ ಉದಾರವಾದಿ ಸ್ತ್ರೀವಾದದ ಚಿಂತನೆಗಳು ವಿಚಾರಧಾರೆಗಳು ಬಹುತೇಕ ಭಾರತೀಯ ಸ್ತ್ರೀವಾದಿಗಳಿಗೆ ಅನ್ವಯಿಸುತ್ತದೆ. ಬೆಟ್ಟಿ ಫ್ರೀಡನ್‌ಳ ಪ್ರಕಾರ ಲೈಂಗಿಕ ತಾರತಮ್ಯ ನಶಿಸಬೇಕಾದರೆ ಶಿಕ್ಷಣ, ಉದ್ಯೋಗ, ಆರ್ಥಿಕ

ಸುಧಾರಣೆ, ರಾಜಕೀಯದಲ್ಲಿ ಸ್ತ್ರೀಯರ ಪ್ರವೇಶ, ಧಾರ್ಮಿಕ ಸ್ವಾತಂತ್ರ್ಯ, ಕುಟುಂಬ, ಧರ್ಮ ಈ ಏಳು ಕ್ಷೇತ್ರಗಳಲ್ಲಿ ಸಾಮಾಜಿಕ ಬದಲಾವಣೆ ಅನಿವಾರ್ಯ ಎಂದು ನಂಬಿದ್ದಳು. ಗಂಡಿನ ಪ್ರೀತಿ, ಮಕ್ಕಳ ಮಮತೆ ವಾತ್ಸಲ್ಯಗಳು ವಿವಾಹ ತಾಯ್ತನಗಳು ಹೆಣ್ಣಿಗೆ ಮುಖ್ಯ ಮತ್ತು ವ್ಯಕ್ತಿತ್ವ ವಿಕಾಸಕ್ಕೆ ವೃತ್ತಿ ಬದುಕು ಮುಖ್ಯ. ಮಹಿಳೆಯ ಕ್ರಿಯಾಶೀಲ ವ್ಯಕ್ತಿತ್ವ ಜಾಗೃತವಾಗಬೇಕಾದರೆ ಮನೆಯ ಒಳಗೆ ತಾಯಿ, ಹೆಂಡತಿಯಾಗಿ ತನ್ನ ಪಾತ್ರ ನಿರ್ವಹಿಸಿ ಹೊರಗೆ ದುಡಿದು ತನ್ನ ಬದುಕು ಮತ್ತು ವ್ಯಕ್ತಿತ್ವಗಳನ್ನು ಸಾರ್ಥಕಗೊಳಿಸಿಕೊಳ್ಳಬೇಕೆಂಬ ಬೆಟ್ಟಿ ಫ್ರೀಡನ್‌ಳ ಉದಾರವಾದಿ ಸ್ತ್ರೀವಾದದ ನೆಲೆಯಲ್ಲಿ ಎಂ.ಆರ್. ಲಕ್ಷಮ್ಮನವರನ್ನು ಗುರುತಿಸಿ ಅವರನ್ನು ಉದಾರವಾದಿ ಸ್ತ್ರೀವಾದಿಯೆಂದು ಈ ಅಧ್ಯಯನದಿಂದ ಸ್ಪಷ್ಟಪಡಿಸಲಾಗಿದೆ.

- ಕರ್ನಾಟಕದ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದಲಾವಣೆಯಲ್ಲಿ ಎಂ.ಆರ್. ಲಕ್ಷಮ್ಮನವರು ಮಹತ್ತರ ಪಾತ್ರ ವಹಿಸಿದ್ದಾರೆ. ಅನೇಕ ಮಹಿಳಾ ಮಂಡಲಿಗಳನ್ನು ಸ್ಥಾಪಿಸಿದರು. ಮಹಿಳೆಯರ ಸುಧಾರಣೆಗೆ ಶಿಕ್ಷಣ ಮತ್ತು ಆರ್ಥಿಕ ಸ್ವಾವಲಂಬನೆ ಅಗತ್ಯವೆಂದು ತಿಳಿದು ಶಿಕ್ಷಣ ಮತ್ತು ಕೈಕಸುಬು ತರಗತಿಗಳನ್ನು ನಡೆಸುತ್ತಿದ್ದರು. ಮೈಸೂರು ರಾಜ್ಯದ ಮಹಿಳಾ ಕಲ್ಯಾಣ ಇಲಾಖೆಯ ಪ್ರಥಮ ಅಧ್ಯಕ್ಷೆಯಾಗಿ ಸಮಾಜ ಸುಧಾರಣೆಯಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡ ಎಂ.ಆರ್. ಲಕ್ಷಮ್ಮನವರನ್ನು ಸಮಾಜ ಸುಧಾರಕಿಯಾಗಿದ್ದರೆಂದು ಈ ಅಧ್ಯಯನದಿಂದ ಖಚಿತಪಡಿಸಲಾಗಿದೆ.

- ಎಂ.ಆರ್. ಲಕ್ಷಮ್ಮನವರು ಸ್ತ್ರೀಯರಿಗೆ ಶಿಕ್ಷಣದ ಅವಶ್ಯಕತೆ, ಸ್ತ್ರೀಯರ ಆಸ್ತಿ ಹಕ್ಕು, ಸ್ತ್ರೀಯರಿಗೆ ರಾಜಕೀಯ ಸಂಸ್ಥೆಗಳಲ್ಲಿ ಪ್ರಾತಿನಿಧ್ಯ ಮುಂತಾದವುಗಳ ಬಗ್ಗೆ ವಯಸ್ಕರ ಶಿಕ್ಷಣ ಸಮಿತಿಯ ಪತ್ರಿಕೆ 'ಬೆಳಕು'ವಿನಲ್ಲಿ ಅನೇಕ ಲೇಖನಗಳನ್ನು ಮತ್ತು ಸೋದರಿ ಪತ್ರಿಕೆಯಲ್ಲಿ ತಮ್ಮ ವಿಚಾರಧಾರೆಗಳನ್ನು ಪ್ರಕಟಿಸಿದ್ದು, ವಿಧಾನಪರಿಷತ್ತಿನ ಸದನದ ಭಾಷಣಗಳಲ್ಲಿ, ಚರ್ಚೆಗಳಲ್ಲಿ ಕೂಡ ಮಹಿಳಾಪರವಾದ ನಿಲುವುಗಳನ್ನು ವ್ಯಕ್ತಪಡಿಸಿದ್ದು, ಕರ್ನಾಟಕದ ಮಹಿಳಾ ಚಳವಳಿಯ ಇತಿಹಾಸದಲ್ಲಿ ಲಕ್ಷಮ್ಮನವರ ಪಾತ್ರವನ್ನು ಗುರುತಿಸಿ ಮಹಿಳಾ ಚಳವಳಿಗಾರ್ತಿಯೆಂದು ಈ ಅಧ್ಯಯನದಿಂದ ನಿರೂಪಿಸಲಾಗಿದೆ.

- ಕನ್ನಡ ಪತ್ರಿಕೋದ್ಯಮ ಮತ್ತು ಮಹಿಳಾ ಪತ್ರಿಕೋದ್ಯಮದ ಇತಿಹಾಸದಲ್ಲಿ ಲಕ್ಷಮ್ಮನವರ ಹೆಸರು ಮಹತ್ತರವಾದುದು. ಪತ್ರಿಕೋದ್ಯಮ ಇತಿಹಾಸದಲ್ಲಿ ಮಹಿಳೆ ಮತ್ತು ಸಾಂಸ್ಕೃತಿಕ ಹಾಗೂ ಸಾಮಾಜಿಕ ಅಭಿವೃದ್ಧಿಯ ಧ್ಯೇಯದೊಂದಿಗೆ ಆರಂಭವಾದ 'ಸೋದರಿ' ಪತ್ರಿಕೆಯ ಸಂಪಾದಕಿಯಾಗಿ, ಮುದ್ರಕಿಯಾಗಿ, ಪ್ರಕಾಶಕಿಯಾಗಿ, ಪತ್ರಕರ್ತೆಯಾಗಿ ಕಾರ್ಯ ನಿರ್ವಹಿಸಿದರು. ದೇಶದ ಆಗು–ಹೋಗುಗಳ ಬಗ್ಗೆ, ರಾಷ್ಟ್ರದ ಐಕ್ಯತೆಯ ಬಗ್ಗೆ, ಕರ್ನಾಟಕ ಏಕೀಕರಣದ ಬಗೆಗಿನ ಕಾಳಜಿ ನಾಡು–ನುಡಿಯ ಅಭಿಮಾನ, ಮಹಿಳೆಯರ ಆರ್ಥಿಕ ಸ್ವಾತಂತ್ರ್ಯ, ಆರ್ಥಿಕ ಪ್ರಗತಿ ಮತ್ತು ಸುಧಾರಣೆಯಲ್ಲಿ ಮಹಿಳೆಯರ ಪಾತ್ರ,

ಗ್ರಾಮೀಣಾಭಿವೃದ್ಧಿ ಮುಂತಾದ ಅನೇಕ ವಿಷಯಗಳ ಕುರಿತು ಲೇಖನಗಳು ಪ್ರಕಟವಾಗಿವೆ. ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯ ಪತ್ರಿಕೆಯ ಏಕೈಕ ಮಹಿಳಾ ಸಂಪಾದಕಿಯಾಗಿ ಕಾರ್ಯ ನಿರ್ವಹಿಸಿದ ಕೀರ್ತಿಗೆ ಭಾಜನರಾಗಿದ್ದು, ಅವರನ್ನು ದಿಟ್ಟ ಪತ್ರಿಕೋದ್ಯಮಿಯೆಂದು ಈ ಅಧ್ಯಯನದಲ್ಲಿ ಸ್ಪಷ್ಟಪಡಿಸಲಾಗಿದೆ.

- ಎಂ.ಆರ್. ಲಕ್ಷ್ಮಮ್ಮನವರು ಹದಿನೆಂಟು ವರ್ಷಗಳ ಕಾಲ ವಿಧಾನಪರಿಷತ್ತಿನ ಸದಸ್ಯರಾಗಿದ್ದರು. ಅಧಿಕಾರ, ಹಣಕ್ಕೆ ಆಸೆಪಡದೆ, ಗಾಂಧೀಜಿಯವರ ಸ್ಫೂರ್ತಿಯಿಂದ ಸರಳತೆ, ಸಹಕಾರ ಮನೋಭಾವ, ಸರ್ವೋದಯ ತತ್ವಗಳನ್ನು ಅಳವಡಿಸಿಕೊಂಡು ಕೊನೆಯವರೆವಿಗೂ ಸಮಾಜ ಸುಧಾರಣೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು.
- ಎಂ.ಆರ್. ಲಕ್ಷ್ಮಮ್ಮ ಅವರು ರಾಜಕೀಯ ಜೀವನದಲ್ಲಿ ಸರಳ, ಸಜ್ಜನ, ಸಮಾಜಮುಖಿ ಚಿಂತನೆಗಳನ್ನೊಳಗೊಂಡ ರಾಜಕಾರಣಿಯಾಗಿದ್ದಾರೆ. ನ್ಯಾಯವಿಧಾಯಕ ಸಭೆಯಲ್ಲಿ ಹಾಗೂ ಹದಿನೆಂಟು ವರ್ಷಗಳ ಕಾಲ ವಿಧಾನಪರಿಷತ್ತಿನ ಸದಸ್ಯರಾಗಿ, ಅವರ ಚರ್ಚೆಗಳು ಮತ್ತು ಭಾಷಣಗಳನ್ನು ಗಮನಿಸಿದಾಗ ಅವರೊಬ್ಬ ಅತ್ಯುತ್ತಮ ಪ್ರಜಾಪ್ರತಿನಿಧಿಯಾಗಿ, ಹಲವಾರು ವಿಚಾರಗಳನ್ನು ಅರಿತುಕೊಂಡ ಜ್ಞಾನಿಯಾಗಿ, ಉತ್ತಮ ವಾಕ್ಪಟುತ್ವವನ್ನು ಹೊಂದಿದ ರಾಜಕಾರಣಿಯೆಂದು ಈ ಅಧ್ಯಯನದಿಂದ ತೀರ್ಮಾನಿಸಬಹುದು.
- ಸ್ವಾತಂತ್ರ್ಯ ಹೋರಾಟ ಹಾಗೂ ಏಕೀಕರಣ ಚಳವಳಿಯಲ್ಲಿ ಎಂ.ಆರ್. ಲಕ್ಷ್ಮಮ್ಮ ಅವರು ಚಳವಳಿಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು ದೇಶಸೇವೆಗೆ ತಮ್ಮನ್ನು ಅರ್ಪಿಸಿಕೊಂಡರಲ್ಲದೆ, ಮೈಸೂರು ಸಂಸ್ಥಾನದ ಜನರನ್ನು ಸ್ವಾತಂತ್ರ್ಯ ಚಳವಳಿಯಲ್ಲಿ ದುಮುಕುವಂತೆ ಪ್ರೇರೇಪಿಸಿದರು.
- ಸ್ವಾತಂತ್ರ್ಯ ಹೋರಾಟದಲ್ಲಿ ಸೆರೆಮನೆವಾಸ ಅನುಭವಿಸಿ ಸೆರೆಮನೆಯಲ್ಲಿ ಅವರ ದಾಖಲಿಸಿದ **'ತುರಂಗವಾಸ ಅನುಭವ'** ಎಂಬ ಸೆರೆಮನೆ ದಿನಚರಿಯು ಅಂದಿನ ಸ್ವಾತಂತ್ರ್ಯ ಚಳವಳಿಯ ನೈಜ ಚಿತ್ರಣಗಳ ಬಗ್ಗೆ ಮಾಹಿತಿಯನ್ನು ಒಳಗೊಂಡಿದ್ದು, ಇದು ಮಹತ್ವದ ದಾಖಲೆಯಾಗಿದ್ದು ಸಂಶೋಧನೆಯಲ್ಲಿ ಇದನ್ನು ಆಧರಿಸಿ ಲಕ್ಷ್ಮಮ್ಮ ಅವರ ಹೋರಾಟದ ಬದುಕಿನ ವಿವಿಧ ಆಯಾಮಗಳನ್ನು ಅನಾವರಣಗೊಳಿಸಿದೆ.
- ಇವರು ಮಹಾತ್ಮ ಗಾಂಧೀಜಿಯವರ ಅನುಯಾಯಿಯಾಗಿದ್ದು, ಗಾಂಧಿವಾದದಲ್ಲಿ ಪ್ರಬಲ ನಂಬುಗೆಯನ್ನಿಟ್ಟಿದ್ದರು. ಗಾಂಧಿತತ್ವಗಳನ್ನು ಸಾಕಾರಗೊಳಿಸಲು **'ಕರ್ನಾಟಕ ಮದ್ಯಪಾನ ಮಂಡಲಿ'**ಯ ಪ್ರಥಮ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ್ದು ಶ್ಲಾಘನೀಯವಾಗಿದ್ದು, ಪ್ರಸ್ತುತ ಅಧ್ಯಯನದಲ್ಲಿ ಅದನ್ನು ಗುರುತಿಸಲಾಗಿದೆ.

* ಮೇರು ವ್ಯಕ್ತಿತ್ವ ಹೊಂದಿರುವ ಎಂ.ಆರ್. ಲಕ್ಷಮ್ಮನವರ ಬದುಕು ಮತ್ತು ಸಾಧನೆಗಳು ಪ್ರಶಂಸನಾರ್ಹವೆಂಬ ಸಂಗತಿಯನ್ನು ಮುಂದೆ ಬಂದ ಕೆಲವು ಮಹಿಳಾ ಬರಹಗಾರರು ಉಲ್ಲೇಖಿಸಿರುವುದು ಇಲ್ಲಿ ಸ್ಮರಣೀಯ.

ಒಂದು ಉತ್ತಮ ರಾಷ್ಟ್ರದ ಮತ್ತು ಸಮಾಜದ ನಿರ್ಮಾಣಕಾರ್ಯದಲ್ಲಿ ಭಾಗಿಯಾದ ಮಹಿಳಾ ಚಿಂತಕಿಯ ಬಗ್ಗೆ ಇತಿಹಾಸದಲ್ಲಿ ದಾಖಲಿಸುವ ದೃಷ್ಟಿಯಿಂದ ಈ ಅಧ್ಯಯನವು ಮಹತ್ವಪೂರ್ಣವಾಗಿದೆ. ಒಬ್ಬ ಮಹಿಳೆ ಎಲ್ಲಾ ಕ್ಷೇತ್ರಗಳಲ್ಲಿಯೂ ಸಾಧನೆ ಮಾಡಲು ಸಾಧ್ಯವೆಂದು ತೋರಿಸಿಕೊಟ್ಟ ದಿಟ್ಟ ಮಹಿಳೆ ಎಂ.ಆರ್. ಲಕ್ಷಮ್ಮ. ಕೇವಲ ಮೇಲ್ವರ್ಗ ಹಾಗೂ ಅಗ್ರಪಂಕ್ತಿಯ ನಾಯಕರ ಹೋರಾಟಗಳನ್ನೇ ದಾಖಲಿಸಿರುವುದು ನಮ್ಮ ಚರಿತ್ರೆಯ ಅಧ್ಯಯನದಿಂದ ತಿಳಿದುಬರುತ್ತದೆ. ಸರಳವಾದ ಜೀವನವನ್ನು ನಡೆಸಿದ ಲಕ್ಷಮ್ಮ ಅವರ ಆದರ್ಶ, ನಮಗೆ ಮಾರ್ಗದರ್ಶಕವೂ ಅನುಕರಣೀಯವೂ ಆಗಿದೆ. ಇಂತಹ ಆದರ್ಶಮಯ ಬದುಕನ್ನು ನಡೆಸಿದ ಲಕ್ಷಮ್ಮನವರು ಇತಿಹಾಸದಲ್ಲಿ ದಾಖಲಾಗದಿರುವುದು ದುರದೃಷ್ಟಕರ. ಅಲಕ್ಷಿತ ಸಮುದಾಯವೆಂದೇ ಪರಿಗಣಿಸಲ್ಪಟ್ಟ ಸ್ತ್ರೀಯರ ಬದುಕು, ಹೋರಾಟಗಳನ್ನು ದಾಖಲಿಸುವ ಅಗತ್ಯತೆ ಪ್ರಸುತ ಅಧ್ಯಯನದಲ್ಲಿ ಕಂಡುಬರುತ್ತದೆ. ದೇಶಸೇವೆಗೆ ಮತ್ತು ಸಮಾಜಸೇವೆಗೆ ತಮ್ಮ ಬದುಕನ್ನು ಮೀಸಲಿಟ್ಟು ಯಾವುದೇ ಅಧಿಕಾರ, ಬಿರುದು, ಸನ್ಮಾನಗಳನ್ನು ಬಯಸದೇ ಬದುಕನ್ನು ಸವೆಸಿದ್ದಾರೆ. ಪ್ರಸ್ತುತ ಸ್ತ್ರೀವಾದಿ ಚಿಂತನೆಯಲ್ಲಿ ಇವರ ಜೀವನದ ಘಟನೆಗಳನ್ನು ಮುಂದಿನ ಪೀಳಿಗೆಗೆ ತಿಳಿಸುವುದು ನಾಗರಿಕ ಸಮಾಜದ ಆದ್ಯ ಕರ್ತವ್ಯವಾಗಿದೆ. ಆ ಮೂಲಕ ಚರಿತ್ರೆಗೆ ಹೊಸ ದೃಷ್ಟಿಕೋನ ನೀಡಬೇಕಾಗಿದೆ. ಚರಿತ್ರೆಯನ್ನು ವಿವಿಧ ಆಯಾಮಗಳ ಮೂಲಕ ಅಧ್ಯಯನ ಮಾಡಬೇಕಾಗಿದ್ದು ಆ ದೃಷ್ಟಿಯಿಂದ ಪ್ರಸ್ತುತ ಸಂಶೋಧನೆ ಅಗತ್ಯವೆನಿಸಿದೆ. ಲಕ್ಷಮ್ಮನವರಂತಹ ಅನೇಕ ಸಮಾಜಮುಖಿ ಚಿಂತಕರ, ಸ್ತ್ರೀವಾದಿಗಳ, ಚಳವಳಿಗಾರರ ಬಗ್ಗೆ ಚರಿತ್ರೆಯಲ್ಲಿ ದಾಖಲಿಸುವುದು ಅವಶ್ಯಕ ಹಾಗೂ ಅನುಕರಣೀಯವು ಆಗಿದೆ. ಇವರ ಮಹಿಳಾಪರ ಚಿಂತನೆ, ಸರಳ ವ್ಯಕ್ತಿತ್ವ, ಮಹಿಳಾ ಚಳವಳಿಗಾರರಿಗೆ ಸ್ಫೂರ್ತಿ ನೀಡುವಂತಹದ್ದು, ಸಾಮಾಜಿಕ ಪರಿವರ್ತನೆ, ಸಮಾಜಸೇವೆ, ತತ್ವನಿಷ್ಠ ರಾಜಕಾರಣ, ಪತ್ರಿಕೋದ್ಯಮ, ರಚನಾತ್ಮಕ ಕಾರ್ಯಗಳಲ್ಲಿ ತೊಡಗಿಕೊಳ್ಳುವ ಎಲ್ಲರಿಗೂ ಇವರ ಜೀವನ ಮತ್ತು ಸಾಧನೆ ಆದರ್ಶಪ್ರಾಯವಾಗಿದೆ.

# ಆಕರಗಳು

**I. ಪ್ರಾಥಮಿಕ ಆಕರಗಳು**


೧) ಲಕ್ಷಮ್ಮ. ಎಂ.ಆರ್. ಸ್ವವಿವರ, ವಿಭಾಗೀಯ ಪತ್ರಾಗಾರ ಕಛೇರಿ, ಮೈಸೂರು.

೨) ಲಕ್ಷಮ್ಮ ಎಂ.ಆರ್. ತುರಂಗವಾಸ ಅನುಭವ (ಸೆರೆಮನೆ ದಿನಚರಿ), ವಿಭಾಗೀಯ ಪತ್ರಾಗಾರ ಕಛೇರಿ, ಮೈಸೂರು (ಅಪ್ರಕಟಿತ).

೩) ಲಕ್ಷಮ್ಮ ಎಂ.ಆರ್. ಸ್ವವಿವರ, ವಿಭಾಗೀಯ ಪತ್ರಾಗಾರ ಕಛೇರಿ, ಮೈಸೂರು.

೪) ಲಕ್ಷಮ್ಮ ಎಂ.ಆರ್., (೧೯೪೩), *ಕುಂತಿದೇವಿ*, ಮೈಸೂರು, ಮೈಸೂರು ಸಂಸ್ಥಾನದ ಅಕ್ಷರ ಪ್ರಚಾರ ಸಮಿತಿ.

೫) ಲಕ್ಷಮ್ಮ ಎಂ.ಆರ್., (೧೯೪೪), *ಮಾರುತಿ*, ಮೈಸೂರು, ಮೈಸೂರು ಸಂಸ್ಥಾನದ ಅಕ್ಷರ ಪ್ರಚಾರ ಸಮಿತಿ.

೬) ಲಕ್ಷಮ್ಮ ಎಂ.ಆರ್. (೧೯೪೫–೪೭), 'ಬೆಳಕು' ಪತ್ರಿಕೆ, ಮೈಸೂರು, ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ.

೭) ಲಕ್ಷಮ್ಮ ಎಂ.ಆರ್. (೧೯೫೦–೫೭), ಸೋದರಿ' ಪತ್ರಿಕೆ, ಬೆಂಗಳೂರು, ಸೋದರಿ ಕಾರ್ಯಾಲಯ.

೮) ಬಿ.ಎನ್. ಗುಪ್ತಾ, (೧೯೭೪), 'ಬಳಕೆದಾರ', ಬೆಂಗಳೂರು, ಗ್ರಾಹಕರ ವೇದಿಕೆ.

೯) ದಿ ಅಡ್ಮಿನಿಸ್ಟ್ರೇಷನ್ ರಿಪೋರ್ಟ್ ಆನ್ ಪಬ್ಲಿಕ್ ಇನ್‌ಸ್ಟ್ರಕ್ಷನ್ಸ್, ೧೮೮೯–೯೦ ಟು ೧೯೨೮–೨೯.

೧೦) ದಿ ಪ್ರೊಸೀಡಿಂಗ್ಸ್ ಆಫ್ ದಿ ಗವರ್ನಮೆಂಟ್ ಆಫ್ ಇಸ್ ಹೈನೆಸ್ ಆಫ್ ದಿ ಮಹಾರಾಜ ಆಫ್ ಮೈಸೂರ್, ೧೯೧೭ ಅಂಡ್ ೧೨೯೦.

೧೧) ದಿ ಮೈಸೂರ್ ಅಡ್ಮಿನಿಸ್ಟ್ರೇಟಿವ್ ರಿಪೋರ್ಟ್, ೧೯೦೨ ಟು ೧೯೪೭.

೧೨) ದಿ ಮೈಸೂರ್ ಲೆಜಿಸ್ಲೇಟಿವ್ ಕೌನ್ಸಿಲ್ ಡಿಬೇಟ್ಸ್, ೧೯೪೫ ಟು ೧೯೪೭.

೧೩) ದಿ ಮೈಸೂರ್ ಲೆಜಿಸ್ಲೇಟಿವ್ ಕೌನ್ಸಿಲ್ ಡಿಬೇಟ್ಸ್, ೧೯೫೨–೧೯೫೮.

೧೪) ದಿ ಮೈಸೂರ್ ಲೆಜಿಸ್ಲೇಟಿವ್ ಕೌನ್ಸಿಲ್ ಡಿಬೇಟ್ಸ್, ೧೯೫೮–೧೯೬೪.

೧೫) ದಿ ಮೈಸೂರ್ ಲೆಜಿಸ್ಲೇಟಿವ್ ಕೌನ್ಸಿಲ್ ಡಿಬೇಟ್ಸ್, ೧೯೬೪–೧೯೭೦.

## II. ಆನುಷಂಗಿಕ ಆಕರಗಳು


೧. ಅನಿತಾ. ಎಂ.ಎಸ್., (೨೦೧೬), *ಆಧುನಿಕ ಮೈಸೂರಿನ ಇತಿಹಾಸದಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ್* (ಪರಿವರ್ತನಾಶೀಲ, ಸಂಪ್ರದಾಯಬದ್ಧ ಸಮಾಜದ ಮೇಲೆ ಪಾಶ್ಚಿಮಾತ್ಯ ಪ್ರಭಾವ ಒಂದು ಸಮಗ್ರ ಅಧ್ಯಯನ, (೧೮೮೪-೧೯೪೦), ಮೈಸೂರು, ಪ್ರಿಯದರ್ಶಿನಿ ಪ್ರಕಾಶನ.

೨. ಅರ್ಜುನಪುರಿ ಅಪ್ಪಾಜಿಗೌಡ., (೧೯೯೫), *ನಂಜನಗೂಡು ತಿರುಮಲಾಂಬ - ಒಂದು ಅಧ್ಯಯನ*, ಮೈಸೂರು, ಪ್ರಸಾರಾಂಗ, ಮಾನಸಗಂಗೋತ್ರಿ.

೩. ಅಶ್ವತ್ಥನಾರಾಯಣ., (೨೦೦೮), *ಮೈಸೂರು ಸಂಸ್ಥಾನದಲ್ಲಿನ ರಾಷ್ಟ್ರೀಯ ಚಳವಳಿಯ ಒಳನೋಟಗಳು, (೧೮೭೦-೧೯೪೦)*, ಮೈಸೂರು, ಮಾದರದೂಳಯ್ಯ ಪ್ರಕಾಶನ.

೪. ಉಮಾಪತಿ ಕೆ.ಎಸ್., (೧೯೯೮), ಬೆಂಗಳೂರು, *ಮೈಸೂರು ಚಲೋ* (ಸತ್ಯಾಗ್ರಹ ಪತ್ರಗಳು) ಅಂಕಿತ ಪುಸ್ತಕ ಪ್ರಕಾಶನ.

೫. ಕಾಮಾಕ್ಷಮ್ಮ ಬಿ., (೧೯೮೦), *ಯಶೋಧರಮ್ಮ ದಾಸಪ್ಪ*, ಬೆಂಗಳೂರು, ಐ.ಬಿ.ಎಚ್. ಪ್ರಕಾಶನ.

೬. ಗೋಪಾಲರಾವ್ ಹೆಚ್.ಎಸ್., (೧೯೯೬), *ಕರ್ನಾಟಕ ಏಕೀಕರಣ ಇತಿಹಾಸ*, ಬೆಂಗಳೂರು, ನವಕರ್ನಾಟಕ ಪ್ರಕಾಶನ.

೭. ಗೋವಿಂದರಾಜು ಸಿ.ಆರ್., (೧೯೯೫), *ಕರ್ನಾಟಕ ಏಕೀಕರಣ ಮತ್ತು ಕನ್ನಡ ಸಾಹಿತ್ಯ ಪರಿಷತ್ತು*, ಬೆಂಗಳೂರು, ಕನ್ನಡ ಸಾಹಿತ್ಯ ಪರಿಷತ್ತು.

೮. ಗೋವಿಂದರಾಜು. ಸಿ.ಆರ್., (೨೦೦೫), ಬೆಂಗಳೂರು, *ಕರ್ನಾಟಕ ಏಕೀಕರಣ ಮತ್ತು ನಾಮಕರಣ*, ವಿಧಾನಸಭೆ ಸಚಿವಾಲಯ.

೯. ಗೋವಿಂದರಾಜು ಸಿ.ಆರ್., (೨೦೦೬), *ಕರ್ನಾಟಕ ಏಕೀಕರಣ ಚಳವಳಿ ಮತ್ತು ಕನ್ನಡ ಸಾಹಿತ್ಯ*, ಬೆಂಗಳೂರು. ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

೧೦. ಗೋವಿಂದರಾಜು ಸಿ.ಆರ್., (ಸಂ) (೨೦೧೧), *ಚಾರಿತ್ರಿಕ ಕರ್ನಾಟಕ*, ಬೆಂಗಳೂರು, ಗ್ರಂಥಾಲಯ ಸಮಿತಿ, ವಿಧಾನಸೌಧ.

೧೧. ಚಂದ್ರಶೇಖರ್ ಎಸ್., (೧೯೮೩), *ಸಾಮಾಜಿಕ ಹಿನ್ನೆಲೆಯಲ್ಲಿ ಮೈಸೂರು ರಾಜಕೀಯ - ಕೆಲವು ಒಳನೋಟಗಳು*, (೧೮೮೧-೧೯೪೦), ಬೆಂಗಳೂರು, ಅಂಕಣ ಪ್ರಕಾಶನ.

೧೨. ಚಂದ್ರಶೇಖರ್ ಎಸ್., (೨೦೦೬), *ವಸಾಹತುಕಾಲೀನ ಕರ್ನಾಟಕ*, ಬೆಂಗಳೂರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

೧೩. ಚಿನ್ನಸ್ವಾಮಿ ಸೋಸಲೆ ಎನ್., (೨೦೧೦), *ವಸಾಹತು ಕಾಲಘಟ್ಟದ ಮೈಸೂರು ಸಂಸ್ಥಾನ*, ಹಂಪಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

೧೪. ಚಿನ್ನಸ್ವಾಮಿ ಸೋಸಲೆ ಎನ್., (ಸಂ), (೨೦೧೨), *ದಿವಾನ್ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಕಾಲದ ಮೈಸೂರು ಸಂಸ್ಥಾನ*, ಹಂಪಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

೧೫. ಜಮುನಾ ಎಂ., (೧೯೯೯), *ಸ್ವಾತಂತ್ರ್ಯ ಚಳವಳಿಯಲ್ಲಿ ಮಹಿಳೆಯರು*, ಬೆಂಗಳೂರು, ಹೆಚ್.ಬಿ. ಪ್ರಕಾಶನ, ಚರಿತ್ರೆ ಸಂಪುಟ ೭.

೧೬. ಜವರೇಗೌಡ ದೇ., (ಸಂ), (೨೦೧೨), *ಶ್ರೀಮತಿ ಯಶೋಧರ ದಾಸಪ್ಪ ಜನ್ಮ ಶತಮಾನೋತ್ಸವ, ಯಶೋಧರಾ ಗಾಥೆ ಮತ್ತು ಕರ್ನಾಟಕದ ಸಾಧಕಿಯರು*, ಬೆಂಗಳೂರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

೧೭. ಜೋಯಿಸ್ ಎಂ.ಎನ್., (ಸಂ), (೧೯೭೪), *ಕರ್ಮಯೋಗಿ* ಮೈಸೂರು, ತಗಡೂರು ರಾಮಚಂದ್ರರಾಯರ ಆತ್ಮಕಥನ ಮತ್ತು ಅಭಿನಂದನ ಗ್ರಂಥ.

೧೮. ತಿರುಮಲೆ ಶ್ರೀರಂಗಾಚಾರ್ಯ, ಎಂ. ಕುಮಾರಸ್ವಾಮಿ (ಸಂ)., (೨೦೦೬), *ಮೈಸೂರು ಸಂಸ್ಥಾನದ ವೃತ್ತಪತ್ರಿಕಾ ಇತಿಹಾಸ – ಲೇಖನಗಳ ಸಂಕಲನ*, ಬೆಂಗಳೂರು, ನವನೀತ ಪ್ರಕಾಶನ.

೧೯. ತಿರುಮಲೆ ತಾತಾಚಾರ್ಯ ಶರ್ಮ, (೧೯೫೬), *ಮೈಸೂರು ಸಂಸ್ಥಾನದ ಸಂಗ್ರಾಮೇತಿಹಾಸ ಸಂಗ್ರಹ*, ಬೆಂಗಳೂರು, ಮೈಸೂರು ಸರ್ಕಾರದ ಮುದ್ರಣಾಲಯ.

೨೦. ತುಕಾರಾಮ್ ಎಸ್. (ಸಂ)., (೨೦೦೦), *ಸಾಕ್ಷರ ದಾರಿಯ ಸಾವಿರ ಹೆಜ್ಜೆ*, ಮೈಸೂರು, ಕರ್ನಾಟಕ ರಾಜ್ಯ ಸಾಕ್ಷರತಾ ಆಂದೋಲನದ ದಶಕದ ಸಾಧನೆಗಳು, ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ,

೨೧. ದಿವಾಕರ್ ಆರ್.ಆರ್., (೧೯೫೬), *ಕರ್ನಾಟಕ ಏಕೀಕರಣದ ಕಥೆ*, ಹುಬ್ಬಳ್ಳಿ, ಲೋಕ ಶಿಕ್ಷಣ ಟ್ರಸ್ಟ್

೨೨. ದೊರೆಸ್ವಾಮಿ ಹೆಚ್.ಎಸ್., (೨೦೦೬), *ಹೋರಾಟದ ದಿಟ್ಟ ಹೆಜ್ಜೆಗಳು*, ಬೆಂಗಳೂರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

೨೩. ನಾಗಲಕ್ಷ್ಮಿ ನಂ., (೨೦೦೦), *ಕನ್ನಡ ಪತ್ರಿಕಾಲೋಕದ ಧೀಮಂತರು, ಭಾಗ – ೮*, ಬೆಂಗಳೂರು, ಕರ್ನಾಟಕ ಪತ್ರಿಕಾ ಅಕಾಡೆಮಿ.

೨೪. ನಾರಾಯಣ ಹೆಚ್. ಜಿ., (೨೦೧೨), *ಮೈಸೂರು ಮತ್ತು ಏಕೀಕರಣ*, ಬೆಂಗಳೂರು, ಅನ್ನಪೂರ್ಣ ಪ್ರಕಾಶನ.

೨೫. ಪ್ರಮೀಳಾದೇವಿ ಬಿ.ಕೆ., (೨೦೧೦), *ಮೈಸೂರು ಸಂಸ್ಥಾನದಲ್ಲಿ ಹಿಂದುಳಿದ ವರ್ಗಗಳ ಚಳವಳಿ ಹಾಗೂ ರಾಜಕೀಯ ಜಾಗೃತಿ – ಒಂದು ಒಳನೋಟ, ೧೮೮೧ – ೧೯೩೮*, ಮೈಸೂರು, ರೂಪ ಪ್ರಕಾಶನ.

೨೬. ಪ್ರಾಣೇಶ್‌ರಾವ್ ಬಿ.ಆರ್., (೧೯೯೭), *ಯಶೋಧರಾ ದಾಸಪ್ಪ ಮತ್ತು ಹೆಚ್.ಸಿ. ದಾಸಪ್ಪ ಜೀವನ ಮತ್ತು ಸಾಧನೆ*, ಮೈಸೂರು, ಭಾರತೀ ಪ್ರಕಾಶನ.

೨೭. ಪ್ರೇಮಲತಾ ಸುಂದರೇಶನ್, (೧೯೯೧), *ಸ್ವಾತಂತ್ರ್ಯದೆಡೆಗೆ* ಮೈಸೂರು, (ಎಂ.ಎನ್. ಜೋಯಿಸ್ ಅಭಿನಂದನಾ ಗ್ರಂಥ) ಡಿ.ವಿ.ಕೆ. ಮೂರ್ತಿ ಪ್ರಕಾಶನ.

೨೮. ಪ್ರೇಮಲತಾ ಸುಂದರೇಶನ್, (೧೯೯೪), *ಮೈಸೂರು ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು*, ಮೈಸೂರು, ಮೈಸೂರು ನಗರ ಮತ್ತು ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರ ಸಂಘ.

೨೯. ಮಾಧವ ಎನ್ ಕಟ್ಟಿ (ಸಂ)., (೨೦೦೧) *ನಮ್ಮ ಮೈಸೂರು*, ಮೈಸೂರು, ಭಾರತೀಯ ಇತಿಹಾಸ ಸಂಕಲನ ಸಮಿತಿ.

೩೦. ಮುಖ್ಯಮಂತ್ರಿ ಚಂದ್ರು (ಪ್ರ.ಸಂ), ಗೋಪಾಲರಾವ್ ಎಚ್.ಎಸ್. (ಸಂ)., (೨೦೧೨), *ಕರ್ನಾಟಕ ಏಕೀಕರಣಕ್ಕೆ ದುಡಿದ ಮಹನೀಯರು*, ಬೆಂಗಳೂರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ.

೩೧. ರಾಕೇಶ್ ಹೆಚ್.ಎಸ್., (೨೦೧೧), *ಮೈಸೂರು ಚಲೋ ಚಳವಳಿ*, ಮೈಸೂರು, ರೂಪ ಪ್ರಕಾಶನ.

೩೨. ರವಿ ಎಂ. ಆರ್., (೨೦೧೪), *ಆಧುನಿಕ ಶಿಕ್ಷಣ ಮತ್ತು ಸಾಮಾಜಿಕ ಬದಲಾವಣೆ (೧೮೮೧–೧೯೪೭)*, ಮೈಸೂರು, ರಾಜೇಂದ್ರ ಪ್ರಿಂಟರ್ಸ್

೩೩. ಲಲಿತ ಎನ್ ಜಿ., (೧೯೭೮), *ಎಚ್.ಸಿ. ದಾಸಪ್ಪ*, ಬೆಂಗಳೂರು, ಐ.ಬಿ.ಹೆಚ್. ಪ್ರಕಾಶನ.

೩೪. ಲಿಂಗಯ್ಯ ಡಿ., (೧೯೯೮), *ಸತ್ಯಾಗ್ರಹಿಗಳ ಸಂದರ್ಶನ*, ಬೆಂಗಳೂರು, ದಿನಕರ ಪ್ರಕಾಶನ.

೩೫. ವಾಸುದೇವಮೂರ್ತಿ ಆರ್., (ಸಂ) (೧೯೯೬), *ಗಾಂಧೀ ಚಿಂತನ ಪ್ರೊ. ಬಿ.ಆರ್.ಪಿ.*, ಮೈಸೂರು, ಬಿ.ಆರ್. ಪ್ರಾಣೇಶರಾವ್ ಸನ್ಮಾನ ಸಮಿತಿ.

೩೬. ವೀರತ್ತಪ್ಪ ಕೆ., (೧೯೭೭), *ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳವಳಿ*, ಬೆಂಗಳೂರು, ವಿಜಯರವಿ ಪ್ರಕಾಶನ.

೩೭. ವೆಂಕಟೇಶ ಟಿ. (೨೦೦೯), *ಕನ್ನಡದಲ್ಲಿ ನವಸಾಕ್ಷರ ಸಾಹಿತ್ಯ ಒಂದು ಅಧ್ಯಯನ*, ಮೈಸೂರು ವಿಹಂಗಮ ಪ್ರಕಾಶನ.

೩೮. ಷೇಕ್ ಆಲಿ ಬಿ. (ಪ್ರ.ಸಂ.) (೧೯೯೭) *ಕರ್ನಾಟಕ ಚರಿತ್ರೆ, ಸಂಪುಟ ೭, (ಕ್ರಿ.ಶ. ೧೯೦೦-೧೯೫೬)* ಹಂಪಿ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ.

೩೯. ಶಶಿಕಲಾ ಎಸ್. ಡಿ. (೨೦೦೧), *ಕನ್ನಡ ಪತ್ರಿಕೋದ್ಯಮ ಕಂಡ ಮಹಿಳೆ ಆರ್. ಕಲ್ಯಾಣಮ್ಮ*, ಮೈಸೂರು, ರವಿ ಪಬ್ಲಿಕೇಷನ್ಸ್.

೪೦. ಶಶಿಕಲಾ ಎಸ್. ಡಿ. (೨೦೧೦), *ಆರ್. ಕಲ್ಯಾಣಮ್ಮ ಬದುಕು ಬರಹ*, ಮೈಸೂರು, ಜ್ಯೋತಿ ಪ್ರಕಾಶನ.

೪೧. ಸರಸ್ವತಿ ಎನ್., (೨೦೦೮), *ಸ್ವಾತಂತ್ರ್ಯ ಹೋರಾಟದಲ್ಲಿ ಮೈಸೂರು ಸಂಸ್ಥಾನದ ಮಹಿಳೆಯರ ಪಾತ್ರ*, ಮೈಸೂರು, ರಾಸಿ ಪುಸ್ತಕ ಪ್ರಕಾಶನ.

೪೨. ಸುಂದರರಾವ್ ಬ.ನ., (೧೯೮೧), *ಚಲೋ ಮೈಸೂರು*, ಬೆಂಗಳೂರು, ವನವಿಹಾರಿ ಪ್ರಕಾಶನ.

೪೩. ಸುರೇಶ್ ಎ.ಎನ್., (೨೦೧೧), *ಮೈಸೂರು ಸಂಸ್ಥಾನದಲ್ಲಿ ರಚನಾತ್ಮಕ ಕಾರ್ಯಕ್ರಮಗಳು, ಮೈಸೂರು* ರಚನಾ ಪ್ರಕಾಶನ,

೪೪. ಸುರೇಶ್ ಮೂನ, (೨೦೧೨), *ಬೆಂಗಳೂರು ನಗರ ನಿರ್ಮಾಪಕರು, ಭಾಗ-೨*, ಬೆಂಗಳೂರು, ಸಮೃದ್ಧ ಸಾಹಿತ್ಯ

೪೫. ಸೂರ್ಯನಾಥ ಕಾಮತ್ (ಸಂ)., (೧೯೭೭), *ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು*, ಮೈಸೂರು, ಸಂಪುಟ ೧, ೨, ೩, ಮೈಸೂರು, ಗೀತಾ ಬುಕ್ ಹೌಸ್.

೪೬. ಸೂರ್ಯನಾಥ ಕಾಮತ್ (ಸಂ)., (೧೯೮೪), *ಕರ್ನಾಟಕ ರಾಜ್ಯ ಗ್ಯಾಸೆಟಿಯರ್*, ಬೆಂಗಳೂರು, ಸಂಪುಟ ೧ ಮತ್ತು ೨, ಬೆಂಗಳೂರು, ಕರ್ನಾಟಕ ಸರ್ಕಾರ.

## III. ಪೂರಕ ಸಾಹಿತ್ಯಾಧಾರಗಳು


೧. ಅನುಪಮ ಹೆಚ್.ಎಸ್., (೨೦೧೨), *ಮಹಿಳೆ–ದಲಿತತ್ವ ಮತ್ತು ರಾಜಕೀಯಪ್ರಜ್ಞೆ,* ಗದಗ, ಲಡಾಯಿ ಪ್ರಕಾಶನ.

೨. ಆಶಾದೇವಿ ಎಂ.ಎಸ್., (೨೦೧೬), *ನಾರೀಕೇಳಾ,* ಬೆಂಗಳೂರು, ಪ್ರಜಾವಾಣಿ ಪ್ರಕಾಶನ.

೩. ಇಂದಿರಾ ಆರ್. (೨೦೦೨), *ಮಹಿಳೆ ಸಮಾಜ ಮತ್ತು ಸಂಸ್ಕೃತಿ,* ಹಂಪಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ.

೪. ಗಾಯತ್ರಿ ನಾವಡ, (೧೯೯೪), *ಸ್ತ್ರೀವಾದದ ಸಾಂಸ್ಕೃತಿಕ ನೆಲೆಗಳು,* ಧಾರವಾಡ, ಧಾರವಾಡ ಸಾಹಿತ್ಯ ಪ್ರಕಾಶನ.

೫. ಗಾಯತ್ರಿ ಮೂರ್ತಿ, (೨೦೧೪), *ಉದ್ಯೋಗಸ್ಥ ಮಹಿಳೆ ಮತ್ತು ವ್ಯಕ್ತಿತ್ವ ವಿಕಸನ,* ಬೆಂಗಳೂರು, ನವಕರ್ನಾಟಕ ಪ್ರಕಾಶನ.

೬. ಗೀತಾ ಕೃಷ್ಣಮೂರ್ತಿ, (೨೦೦೭), *ಮಹಿಳೆ ಸಮಾಜ ಕಾನೂನು,* ಬೆಂಗಳೂರು, ನವಕರ್ನಾಟಕ ಪ್ರಕಾಶನ.

೭. ಗೀತಾ ಕೃಷ್ಣಮೂರ್ತಿ, (೨೦೦೯), *ಮಹಿಳಾ ಹಕ್ಕುಗಳು ಮಾನವ ಹಕ್ಕುಗಳ ನೆಲೆಯಲ್ಲಿ,* ಹಂಪಿ, ಕನ್ನಡ ವಿಶ್ವವಿದ್ಯಾನಿಲಯ.

೮. ಜ್ಯೋತಿ ಎ., (ಅನು), ಮೂಲ– ವಿಮಲಾ ಫರೂಕಿ, (೨೦೧೭), *ಭಾರತದ ಮಹಿಳಾ ಚಳವಳಿಯ ಸಂಕ್ಷಿಪ್ತ ಚರಿತ್ರೆ,* ಬೆಂಗಳೂರು, ನವಕರ್ನಾಟಕ ಪ್ರಕಾಶನ.

೯. ಕುಮಾರಪ್ಪ ಜಿ., (ಅನು), ಮೂಲ– ದೇವಿಪ್ರಸಾದ್ ಚಟ್ಟೋಪಾಧ್ಯಾಯ (೧೯೯೭), *ಮಾತೆಯರು ಮಾನ್ಯರಾಗಿದ್ದಾಗ,* ಬೆಂಗಳೂರು, ನವಕರ್ನಾಟಕ ಪ್ರಕಾಶನ.

೧೦. ನೇಮಿಚಂದ್ರ (೨೦೦೧), *ಮಹಿಳಾ ಅಧ್ಯಯನ,* ಬೆಂಗಳೂರು, ಅಂಕಿತ ಪುಸ್ತಕ ಪ್ರಕಾಶನ.

೧೧. ನೇಮಿಚಂದ್ರ, (೨೦೧೦), *ಹೋರಾಟದ ಹಾದಿಯಲ್ಲಿ ಧೀಮಂತ ಮಹಿಳೆಯರು,* ಬೆಂಗಳೂರು, ನವಕರ್ನಾಟಕ ಪ್ರಕಾಶನ.

೧೨. ಪವಿತ್ರ ಕೆ.ಎಸ್., (೨೦೧೪), *ಮಹಿಳಾ ಮನೋಧರ್ಮ,* ಮೈಸೂರು, ವಿಸ್ಮಯ ಪ್ರಕಾಶನ.

೧೩. ಮಹೇಶ್‌ಚಂದ್ರಗುರು ಬಿ.ಪಿ., (೨೦೧೩), *ಸಾಹಿತ್ಯ, ಮಹಿಳೆ ಮತ್ತು ಸಬಲೀಕರಣ*, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೪. ಮಂಗಳಾ ಪ್ರಿಯದರ್ಶಿನಿ ಡಿ., (೨೦೦೭), **ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ**, ಹಂಪಿ, ಮಹಿಳಾ ಅಧ್ಯಯನ ಕೇಂದ್ರ ಕನ್ನಡ ವಿಶ್ವವಿದ್ಯಾಲಯ.

೧೫. ಡಿ. ಯಶೋಧಾ (ಸಂ), (೨೦೧೬), *ರೆಕ್ಕೆ ಬಿಚ್ಚಿ ಹಾರೋಣ, ಮಹಿಳಾ ಅಸ್ಮಿತೆಯ ಅರಿವು*, ಸದರ್ನ್ ಎಕಾನಮಿಸ್ಟ್ ಪಬ್ಲಿಕೇಷನ್.

೧೬. ಸರಸ್ವತಿ ದು (ಸಂ), (೨೦೧೭), *ಜೊತೆಗೂಡಿ ನಡೆಯೋಣ, ಅಂತಾರಾಷ್ಟ್ರೀಯ ಮಹಿಳಾ ದಿನಾಚರಣೆ ೨೦೧೬*, ಕವಲಕ್ಕಿ, ವಿಜಯಪುರ, ಕವಿ ಪ್ರಕಾಶನ.

೧೭. ಸರಸ್ವತಿ ದು (ಸಂ), (೨೦೧೪), *ನೀರದಾರಿ-ದಲಿತ ಮಹಿಳಾ ಪ್ರಜ್ಞೆ ವಿಭಿನ್ನ ನೆಲೆಗಳಿಂದ*, ಕವಲಕ್ಕಿ, ಕವಿ ಪ್ರಕಾಶನ.

೧೮. ಶ್ರೀಮತಿ ಹೆಚ್.ಎಸ್., (ಅನು), ಮೂಲ - ಸಿಮೋನ್‌ದ ಬೋವಾ (,೨೦೦೭), *ದ ಸೆಕೆಂಡ್ ಸೆಕ್ಸ್*, ಬೆಂಗಳೂರು, ಕೆ.ಬಿ., ಪ್ರಗತಿ ಬರಹ, ಪಬ್ಲಿಷಿಂಗ್ ಹೌಸ್.

೧೯. ಸುಜ್ಞಾನಮೂರ್ತಿ ಬಿ., (ಅನು) (೨೦೧೮), *ಮನೆ ಕೆಲಸ ಮತ್ತು ಹೊರಗಿನ ಕೆಲಸ*, ಗದಗ, ಲಡಾಯಿ ಪ್ರಕಾಶನ.

೨೦. ಸುಜ್ಞಾನಮೂರ್ತಿ ಬಿ., (ಅನು), (೨೦೧೦), *ಕುಟುಂಬ ವ್ಯವಸ್ಥೆ, ಮಾರ್ಕ್ಸ್‌ವಾದ - ಸ್ತ್ರೀವಾದ*, ಗದಗ, ಲಡಾಯಿ ಪ್ರಕಾಶನ.

೨೧. ಸುನಂದಮ್ಮ ಆರ್., (೨೦೧೭), *ಸಂಗಾತಿ ರೂಪ್ಪ ಬರಸೇನಾ (ಹೆಣ್ಣು ಕಣ್ಣೋಟದ ವಿಮರ್ಶಾ ಲೇಖನಗಳು)*, ಕವಲಕ್ಕಿ, ಕವಿ ಪ್ರಕಾಶನ.

೨೨. ಸುಮಿತ್ರಾಬಾಯಿ ಬಿ.ಎನ್., (೧೯೯೯), *ಸ್ತ್ರೀವಾದ - ಒಂದು ಅವಲೋಕನ*, ಶಿವಮೊಗ್ಗ, ಅಹರ್ನಿಶಿ ಪ್ರಕಾಶನ.

೨೩. ಹಾಲತಿ ಸೋಮಶೇಖರ್., (೨೦೧೬), *ಮಹಿಳಾ ಹಕ್ಕುಗಳು*, ಮೈಸೂರು, ವಿಸ್ಮಯ ಪ್ರಕಾಶನ.

೨೪. ಹೇಮಲತಾ ಎಚ್.ಎಂ., (೨೦೦೪), *ರಾಜಕೀಯ ಪ್ರಕ್ರಿಯೆಗಳಲ್ಲಿ ಮಹಿಳೆಯರು, ಅಭಿವೃದ್ಧಿ ಪ್ರಕ್ರಿಯೆಗಳಲ್ಲಿ ಮಹಿಳೆಯರು, ಕೃಷಿ ಮಹಿಳೆಯರ ದುಡಿಮೆಯ ವಿಶ್ಲೇಷಣೆ*, ಮೈಸೂರು, ಡಿ.ವಿ.ಕೆ. ಮೂರ್ತಿ ಪ್ರಕಾಶನ.

೨೫. ಹೇಮಲತಾ ಎಚ್.ಎಂ., (೨೦೦೬), *ಮಹಿಳೆ ಮತ್ತು ದುಡಿಮೆ, ಮಹಿಳಾಭಿವೃದ್ಧಿ ಕಾರ್ಯನೀತಿ, ಯೋಜನೆಗಳು*, ಮೈಸೂರು, ಡಿ.ವಿ.ಕೆ. ಮೂರ್ತಿ ಪ್ರಕಾಶನ.

೨೬. ಹೇಮಲತಾ ಎಚ್.ಎಂ., (೨೦೦೮), *ತೀವ್ರಗಾಮಿ ಸ್ತ್ರೀವಾದಿ ಚಿಂತಕಿಯರು, ಮಹಿಳಾ ವಿಷಯಗಳು, ಸ್ತ್ರೀವಾದ, ಮಹಿಳೆ ಚಳವಳಿ ಮತ್ತು ಮಹಿಳಾ ಅಧ್ಯಯನಗಳ ಪರಸ್ಪರ ಸಂಬಂಧ*, ಮೈಸೂರು, ಡಿ.ವಿ.ಕೆ. ಮೂರ್ತಿ ಪ್ರಕಾಶನ.

೨೭. ಹೇಮಲತಾ ಎಚ್.ಎಂ., (೨೦೦೯), *ಮಹಿಳಾ ಶಿಕ್ಷಣದ ಮಹತ್ವ, ಬೆಳವಣಿಗೆ ಹಾಗೂ ಸಶಕ್ತೀಕರಣ*, ಮೈಸೂರು, ಡಿ.ವಿ.ಕೆ. ಮೂರ್ತಿ ಪ್ರಕಾಶನ.

೨೮. ಹೇಮಲತಾ ಎಚ್.ಎಂ., (೨೦೧೦), *ಸಿಮನ್‌ದ ಬೊವಾ ಅವರ ಸೆಕೆಂಡ್ ಸೆಕ್ಸ್, ಒಂದು ಸಂಕ್ಷಿಪ್ತ ಪರಿಚಯ*, ಮೈಸೂರು, ಡಿ.ವಿ.ಕೆ. ಮೂರ್ತಿ ಪ್ರಕಾಶನ.

೨೯. ಹೇಮಲತಾ ಎಚ್.ಎಂ., (೨೦೧೧), *ಹಂಗೇರಿಯಲ್ಲಿ ಹೇಮ ಶೈಕ್ಷಣಿಕ ಪ್ರವಾಸ ಕಥನ (ಜಂಡರ್ ಸ್ಟಡೀಸ್ ಶಿಸ್ತಿನ ಸ್ವರೂಪ ಮತ್ತು ಪಠ್ಯಕ್ರಮ, ಹಂಗೇರಿ ಮತ್ತು ಭಾರತದ ಮಹಿಳೆಯರ ಸ್ಥಾನ ಕುರಿತು ತುಲನಾತ್ಮಕ ಅಧ್ಯಯನ*, ಮೈಸೂರು, ಡಿ.ವಿ.ಕೆ. ಮೂರ್ತಿ ಪ್ರಕಾಶನ.

೩೦. ಹೇಮಲತಾ ಎಚ್.ಎಂ., (೨೦೧೪), *ಧರ್ಮ ಮತ್ತು ಮಹಿಳೆಯರು ಮಹಿಳಾ ಆರೋಗ್ಯ, ಜನಸಂಖ್ಯಾ ನೀತಿ, ಆಧ್ಯಾತ್ಮಿಕತೆ ಮತ್ತು ಮಹಿಳಾ ಸಶಕ್ತೀಕರಣ, ಮಹಿಳಾ ಅಧ್ಯಯನ ಕೇಂದ್ರಗಳು*, ಮೈಸೂರು, ಡಿ.ವಿ.ಕೆ. ಮೂರ್ತಿ ಪ್ರಕಾಶನ.

## IV. ಅಪ್ರಕಟಿತ ಆಕರಗಳು

### ಎ) ಎಂ.ಫಿಲ್ ನಿಬಂಧ

ಮಂಜುಳ ಎ.ಸಿ., (೨೦೧೩), *ಸ್ವಾತಂತ್ರ್ಯ ಹೋರಾಟಗಾರ್ತಿ ಎಂ.ಆರ್. ಲಕ್ಷಮ್ಮನವರ ಜೀವನ ಮತ್ತು ಸಾಧನೆ*, ಹಂಪಿ, ಅಪ್ರಕಟಿತ ಎಂ.ಫಿಲ್ ನಿಬಂಧ, ಕನ್ನಡ ವಿಶ್ವವಿದ್ಯಾಲಯ.

### ಬಿ) ಪಿಎಚ್.ಡಿ. ಪ್ರಬಂಧಗಳು

೧. ನಾರಾಯಣ ಎಚ್.ಜಿ., (೨೦೧೧) *ಕರ್ನಾಟಕ ಏಕೀಕರಣ – ಒಂದು ಅಧ್ಯಯನ*, ಬೆಂಗಳೂರು, ಅಪ್ರಕಟಿತ ಪಿಹೆಚ್.ಡಿ. ಪ್ರಬಂಧ, ಬೆಂಗಳೂರು ವಿಶ್ವವಿದ್ಯಾಲಯ.

೨. ಪ್ರಕಾಶ್ ಕೆ., (೨೦೦೨), *ಎಸ್. ನಿಜಲಿಂಗಪ್ಪನವರ ಜೀವನ ಮತ್ತು ಸಾಧನೆ ಒಂದು ವಿಮರ್ಶಾತ್ಮಕ ಅಧ್ಯಯನ, (೧೯೦೨–೨೦೦೦)* ಮೈಸೂರು, ಅಪ್ರಕಟಿತ ಪಿಹೆಚ್.ಡಿ. ಪ್ರಬಂಧ, ಮೈಸೂರು ವಿಶ್ವವಿದ್ಯಾಲಯ.

೩. ಪ್ರಮೀಳಾದೇವಿ ಬಿ.ಕೆ., (೨೦೦೫), ಆ್ಯನ್ ಅಸೆಸ್‌ಮೆಂಟ್ ಆಫ್ ಹೆಚ್.ಸಿ. ದಾಸಪ್ಪ ಆ್ಯಸ್ ಸೋಷಿಯಲ್ ಆಕ್ಟಿವಿಸ್ಟ್, ಫ್ರೀಡಂ ಫೈಟರ್ ಅಂಡ್ ಎ ಪೊಲಿಟಿಕಲ್ ಲೀಡರ್, ಮೈಸೂರು, ಅಪ್ರಕಟಿತ ಪಿಹೆಚ್.ಡಿ. ಪ್ರಬಂಧ, ಮೈಸೂರು ವಿಶ್ವವಿದ್ಯಾಲಯ.

೪. ರಮೇಶ ಸಿ., (೨೦೧೪), *ಗಾಂಧೀಜಿಯವರ ಪ್ರಭಾವದ ಚಾರಿತ್ರಿಕ ಹಿನ್ನೆಲೆಯಲ್ಲಿ ಆಧುನಿಕ ಮೈಸೂರು ಸಂಸ್ಥಾನದ ಸಾಮಾಜಿಕ ಮತ್ತು ಆರ್ಥಿಕ ಸುಧಾರಣೆಗಳು (೧೯೨೫-೧೯೪೭),* ಮೈಸೂರು, ಅಪ್ರಕಟಿತ ಪಿಹೆಚ್.ಡಿ. ಪ್ರಬಂಧ, ಮೈಸೂರು ವಿಶ್ವವಿದ್ಯಾಲಯ.

೫. ಸೋಮಶೇಖರ ಹೆಚ್.ಬಿ., (೨೦೧೧), *ಸ್ವಾತಂತ್ರ್ಯ ಹೋರಾಟ ಮತ್ತು ರಚನಾತ್ಮಕ ಕಾರ್ಯಕ್ರಮಗಳಲ್ಲಿ ತಗಡೂರು ರಾಮಚಂದ್ರ ರಾಯರ ಪಾತ್ರ : ಒಂದು ಅಧ್ಯಯನ,* ಮೈಸೂರು, ಅಪ್ರಕಟಿತ ಪಿಹೆಚ್.ಡಿ. ಪ್ರಬಂಧ, ಮೈಸೂರು ವಿಶ್ವವಿದ್ಯಾಲಯ.

೬. ಸುಶೀಲಮ್ಮ ಸಿ., (೧೯೯೫), *ಮೈಸೂರು ರಾಜ್ಯದಲ್ಲಿ ಮಹಿಳಾ ಕಲ್ಯಾಣದ ಒಂದು ಅಧ್ಯಯನ (೧೮೮೧-೧೯೫೬),* ಮೈಸೂರು ವಿಶ್ವವಿದ್ಯಾಲಯ.

## V. ಸ್ಮರಣ ಸಂಚಿಕೆಗಳು

೧. ಅಗರಂ ರಂಗಯ್ಯ (ಸಂ)., (೧೯೬೨), *ಸಾಧ್ವಿ ರಜತ ಮಹೋತ್ಸವ,* ಸ್ಮರಣ ಸಂಚಿಕೆ, (೧೯೩೬-೧೯೬೨), ಮೈಸೂರು.

೨. ಜವರೇಗೌಡ ದೇ. (ಸಂ)., (೨೦೦೦), *ಪುಸ್ತಕ ಪ್ರಪಂಚ,* ಮೈಸೂರು, ಸುವರ್ಣ ಸಂಚಿಕೆ, ಸೆಪ್ಟೆಂಬರ್ – ಅಕ್ಟೋಬರ್, ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ.

೩. ಸುರೇಶ್‌ಕುಮಾರ್ ಎಸ್. (ಸಂ)., (೨೦೧೨) *ಕರ್ನಾಟಕ ವಿಧಾನಸಭೆ (೧೯೫೨-೨೦೧೨),* ಬೆಂಗಳೂರು, ೬೦ನೇ ವಿಧಾನಸಭೆ ಕಾರ್ಯಾಲಯ.

## VI. ಪತ್ರಿಕೆಗಳು

೧. ಸಾಧ್ವಿ ಪತ್ರಿಕೆಯ ಸಂಚಿಕೆಗಳು (೧೯೪೫ ರಿಂದ ೧೯೪೭)

೨. ಸತ್ಯವಾದಿ ಪತ್ರಿಕೆಯ ಸಂಚಿಕೆಗಳು

## WORKS IN ENGLISH


1. Agrawal C.M., (2000), ***NARI (Facts of Indian Womanhood)*** Delhi, Indian Publishers Distributores.
2. Bell Hooks, (2000), ***Feminist Thoery from Margin to Centre,*** Newyork, South End Press.
3. Cherrie Moraga Gloria Anzaldua (Ed) 1983, ***This Bridge called my black writings by Radical Women of Color,*** Newyork, Kitchen Table – Women of Color Press.
4. Gayathri M.B., 1997, ***Development of Mysore State,*** Prasaranga, Mysore University, Mysore.
5. Hemalatha H.M., Rameshwari Varma, (2005), ***Empowerment of rural women in India – A Critical Analysis of A micro level government programme***, Mysore.Hema Prakashana.
6. Kamala Bhasin, (2004), ***What is patriarchy,*** women unlimited, New Delhi.
7. Ketu H. Katrak, (2006) ***Politics of the female Body (Post colonial women writers of the Third World)*** New Brunswick, New Jersey and London Rutgers University Press.
8. Krishna Rao M.V. (Ed), 1962, ***History of Freedom Movement in Karnataka,*** Vol. I, Bangalore. Govt. of Mysore.
9. Munegowda K.S., (1988), ***Development of Karnataka Legislature,*** University of Mysore, Prasaranga.
10. Neeru Tandon, (2012), ***Feminism A paradigm Shift,*** New Delhi, Atlantic Publishers and Distributors (P) Ltd.
11. Niroj Sinha, (1989), ***Women and Violence,*** New Delhi, Vikas Publishing House.

12. Robyn R. Warhol and Diane Price Herndl (1991), ***Feminisms (An anthology of literary theory and criticism),*** New Jersey, Rutgers University Press, New Brunswick.

13. Saraswathi N. (Ed), (2016) ***Indian Women through the ages,*** Mysore, Usha Prakashana.

14. Sarojini and Raghavendra Rao (1983), ***Women Freedom Fighter in Karnataka,*** Dharwad, Prasaranga, Karnataka, University.

15. Shah S.Y., (1995), ***India Adult Education A Historical perspective,*** Faridabad, Government of India, Press.

16. Shoma A Chaterji, (1988), ***The Indian Women's Search for an Indentity,*** New Delhi, Vikas Publishing House Pvt. Ltd.

17. Swarnkar G.P., (1988), ***Women participation in Rural Environment,*** Allahabad.

18. Usha Rao N.J., (1983), New Delhi, ***Women in a Developing Society,*** Ashish Publishing House.



ಶ್ರೀಮತಿ ಎಂ.ಆರ್. ಲಕ್ಷಮ್ಮ

ದಿನಾಂಕ 24.03.1913 – 01.07.1984




ಅಮೇರಿಕಾಕ್ಕೆ ತೆರಳಲು ಮುಂಬೈನ ವಿಮಾನ ನಿಲ್ದಾಣದಲ್ಲಿ ಶ್ರೀಮತಿ. ಎಂ.ಆರ್. ಲಕ್ಷಮ್ಮ



ಸಮಾಜ ಸೇವಾ ಮಂಡಳಿಯ ಕಾರ್ಯಕ್ರಮದಲ್ಲಿ ಶ್ರೀಮತಿ ಎಂ.ಆರ್. ಲಕ್ಷಮ್ಮ



ಚಿತ್ರದಲ್ಲಿ ಕಾಣುವವರು

ಮುಂದಿನ ಸಾಲು ಎಡಗಡೆಯಿಂದ—

೧. ಪತ್ರಿಕೆ ಅಚ್ಚುಮಾಡುವವರ ಪೈಕಿ ಒಬ್ಬರು
ಶ್ರೀ ಡಿ. ರಾಜರತ್ನಂ

೨. ಪ್ರಕಟನಕಾರರು

೩. ಸಂಪಾದಕಿಯರು

೪. ಸಮಾರಂಭದ ಅಧ್ಯಕ್ಷರು

೫. ಸಂಪಾದಕಮಂಡಲಿಯ ಸದಸ್ಯರಾದ
ಶ್ರೀ ನ. ಭದ್ರಯ್ಯನವರು

ಹಿಂದಿನ ಸಾಲು—

ಶ್ರೀ ಸಣ್ಣಪ್ಪ ಮತ್ತು ಕಾಳಯ್ಯ,
ಕಾರ್ಯಾಲಯದ ಉದ್ಯೋಗಿಗಳು

ಬೆಳಕು ಕಾರ್ಯಾಲಯದ ಉದ್ಘಾಟನಾ ಕಾರ್ಯಕ್ರಮದಲ್ಲಿ
ಶ್ರೀಮತಿ ಎಂ.ಆರ್. ಲಕ್ಷಮ್ಮ(13.01.1946)



ವಿದ್ಯಾರ್ಥಿ ಇಲಾಖೆಯ ಶ್ರೀ ಜೆ. ಬಿ. ಮಲ್ಲಾರಾಧ್ಯರವರು ಭಾಷಣ ಮಾಡುತ್ತಿರುವರು. ಅವರ ಬಲಗಡೆ ಶ್ರೀಮತಿ ಎಂ. ಆರ್. ಲಕ್ಷಮ್ಮ, ಶ್ರೀಮತಿ ಜಯಲಕ್ಷ್ಮಮ್ಮ ಪಿ. ಆರ್. ರಾಮಯ್ಯ, ಶ್ರೀಮತಿ ರತ್ನಮ್ಮ ಮಾಧವರಾವ್, ಎಡಗಡೆ ಶ್ರೀಮತಿ ಲಕ್ಷ್ಮೀದೇವಿ ರಾಮಣ್ಣ.

**ಬಸವನಗುಡಿಯಲ್ಲಿದ್ದ ಗಾನಮಂದಿರದ ವಾರ್ಷಿಕೋತ್ಸವದಲ್ಲಿ ಶ್ರೀಮತಿ ಎಂ.ಆರ್. ಲಕ್ಷಮ್ಮ (1954)**



ಕಾಂಗ್ರೆಸ್ ನಾಯಕ ಕೆ.ಸಿ. ರೆಡ್ಡಿಯವರೊಡನೆ ಸಮಾರಂಭದಲ್ಲಿ ಶ್ರೀಮತಿ ಎಂ.ಆರ್. ಲಕ್ಷಮ್ಮ



ಅಮೇರಿಕಾದ ಉಪಾಧ್ಯಕ್ಷರಾದ ರಿಚರ್ಡ್ ನಿಕ್ಸನ್ ರವರ ಪತ್ನಿ ಪ್ಯಾಟ್ರಿಪಿಯಾ ನಿಕ್ಸನ್‌ರೊಂದಿಗೆ ಶ್ರೀಮತಿ ಎಂ.ಆರ್. ಲಕ್ಷಮ್ಮ



ಅಂಬರ್ ಚರಖಾ ಪರಿಶ್ರಮಾಲಯವನ್ನು ಬೆಂಗಳೂರು ನಗರದಲ್ಲಿ ಕೇಂದ್ರ ಆರೋಗ್ಯ ಉಪಸಚಿವೆ ಶ್ರೀಮತಿ ಮರಕತಂ ಚಂದ್ರಶೇಖರ್‌ರವರು ತೆರೆಯುತ್ತಿರುವ ದೃಶ್ಯ.

ಎಡದಿಂದ ಬಲಕ್ಕೆ ಸಾದನ್ ಸಂಘದ ಶ್ರೀಮತಿ ಕಮಲಮ್ಮಾಳ್, ಚರಖಾ ಸಹಕಾರ ಸಂಘದ ಅಧ್ಯಕ್ಷಿಣಿ ಶ್ರೀಮತಿ ಎಂ. ಆರ್. ಲಕ್ಷಮ್ಮ, ಸಂಪಾದೀವಿಗೆ ಹತ್ತಿ ಸುತ್ತಿರುವವರು ಶ್ರೀಮತಿ ಮರಕತಂ ಚಂದ್ರಶೇಖರ್.



ಪ್ರಧಾನಿ ಜವಹರ್ ಲಾಲ್ ನೆಹರು ಮತ್ತು ಇಂದಿರಾಗಾಂಧಿಯವರೊಡನೆ ಶ್ರೀಮತಿ ಎಂ.ಆರ್. ಲಕ್ಷಮ್ಮ



ರೈಲ್ವೆ ನಿಲ್ದಾಣದಲ್ಲಿ ಶ್ರೀಮತಿ ದುರ್ಗಾಬಾಯಿಯವರನ್ನು ಸ್ವಾಗತಿಸುತ್ತಿರುವುದು. ಸಲಹಾ ಮಂಡಲದ ಅಧ್ಯಕ್ಷಿಣಿ, ಇತರ ಸದಸ್ಯೆಯರನ್ನೂ ಈ ಚಿತ್ರದಲ್ಲಿ ಕಾಣಬಹುದು.

ಪಡಿಯಚ್ಚು – "ಜನವಾಣಿ"



ಕೇಂದ್ರ ಸರಕಾರದ ಹಣಕಾಸಿನ ಸಚಿವ ಶ್ರೀ ಸಿ. ಡಿ. ದೇಶಮುಖ್ ಮತ್ತು ಶ್ರೀಮತಿ ದುರ್ಗಾಬಾಯಿ ದೇಶಮುಖ್‌ರವರಿಗೆ ಆವಲಹಳ್ಳಿಯಲ್ಲಿ [illegible]ನೇ ತಾರೀಖು ಆವಲಹಳ್ಳಿಯ ಹಾಗೂ ಸುತ್ತಮುತ್ತಲ ಹಳ್ಳಿಗಳ ಜನರು ಮಾನಪತ್ರಗಳನ್ನರ್ಪಿಸಿದಾಗ ತೆಗೆದ ಚಿತ್ರ. ಶ್ರೀಮತಿ ಎಂ.ಆರ್. ಲಕ್ಷ್ಮಮ್ಮನವರು ಭಾಷಣ ಮಾಡುತ್ತಲಿದ್ದಾರೆ.



ಮುಖ್ಯಮಂತ್ರಿ ಎಸ್. ನಿಜಲಿಂಗಪ್ಪರವರೊಂದಿಗೆ ಸಂಭಾಷಣೆಯಲ್ಲಿ ಎಂ.ಆರ್. ಲಕ್ಷಮ್ಮ



ಸ್ಕೌಟ್ಸ್ ಮತ್ತು ಗೈಡ್ ಸಂಸ್ಥೆಯ ರಾಜ್ಯ ಕಮೀಷನರ್ ಆಗಿ ಭದ್ರಾವತಿಗೆ ಭೇಟಿನೀಡಿದ ಶ್ರೀಮತಿ ಎಂ.ಆರ್. ಲಕ್ಷಮ್ಮ (26.02.1967)



ಗ್ರಾಹಕರ ವೇದಿಕೆಯ ಕಾರ್ಯಾಧ್ಯಕ್ಷೆಯಾಗಿ ಅಡುಗೆ ಅನಿಲ ಬಳಸುವ ಬಗ್ಗೆ ಗ್ರಾಹಕರಿಗೆ ಅರಿವು ಮೂಡಿಸುವ ಕಾರ್ಯದಲ್ಲಿ ಶ್ರೀಮತಿ ಎಂ.ಆರ್. ಲಕ್ಷಮ್ಮ


ಗ್ರಾಹಕರ ವೇದಿಕೆಯ ಅಧ್ಯಕ್ಷೆಯಾಗಿ ಆಹಾರ ಕಲಬೆರಕೆ ಬಗ್ಗೆ ಗ್ರಾಹಕರಿಗೆ ಮಾಹಿತಿ ನೀಡುತ್ತಿರುವ ಶ್ರೀಮತಿ ಎಂ.ಆರ್. ಲಕ್ಷಮ್ಮ (14.09.1982)

Duplicate

Certified Extract From the Convict / Detenue / Undertrial Admission Register of Central Jail Bangalore, For the Year ......1947.........

| | | |
|---|---|---|
| 1. Convict/Detenue/Undertrial No. | .... | 330 |
| 2. Name and father's or husband's name | .... | Smt M.R.Lakshamma (F) |
| 3. Date of Admission in to this jail | .... | 16-9-47 |
| 4. Admitted by direct or transfer | .... | Not recorded |
| 5. If by transfer, from which Jail and Sl. No. in that jails register, | .... | Not recorded |
| 6. Sex, Married or Single | .... | Female |
| 7. Race Religion and Cast | .... | Not recorded |
| 8. Previous Occupation | .... | Not recorded |
| 9. Educational Qualification. | .... | Not recorded |
| 10. Age on Admission. | .... | Not recorded |
| 11. Residence, Town or Village, Taluka & Dist. | .... | Mysore Dist. |
| 12. Identification marks:- 1) 2) 3) | .... | Not recorded |
| 13. Offence for which Imprisoned. | .... | Sec.3 of the M.P.S.Act 1940 |
| 14. Calander number of case and sentencing authority. | .... | G.O.No.P.1679-82/Pol 90-47-28 dt. 13.9.47 District Magistrate, Mysore Dist. |
| 15. Sentence | | 2 months |
| 16. Date of Sentence. | .... | 4.9.47 |
| 17. Date of expiry of sentence. | .... | 3.11.47 |
| 18. Disposal with date. | .... | R/2/10 |
| 19. Date of return of warrant to court. | .... | Not recorded |

Senior Superintendent,
Central Prison, Bangalore.



No. ..../Pol ..........

Office of the Senior Superintendent
Central Prison, Bangalore
Date: ..........

Forwarded to Sri Smt.M.R.Lakshamma, 40,10th Main 5th. Block Jayanagar, Bangalore-11 with reference to his application dated 2.8.1983.

Senior Superintendent
Central Prison, Bangalore.

ಶ್ರೀಮತಿ ಎಂ.ಆರ್. ಲಕ್ಷಮ್ಮರವರ ಸೆರೆಮನೆ ವಾಸದ ದೃಢೀಕರಣ ಪತ್ರ

June - 1945

(13)

# ಬೆಳಕು

ವರ್ಷ ೩, ಸಂಚಿಕೆ ೩೫ ]    ಅಕ್ಷರ ಪ್ರಚಾರ ಸಮಿತಿಯ ವಾರಪತ್ರಿಕೆ    [ ತಾ॥ 16-6-45, ಶನಿವಾರ

## ತಿಳಿದುಕೊಳ್ಳಬೇಕಾದುದು

[ಈ ಸ್ಥಳದಲ್ಲಿ ಹಿಂದೆ ಮೈಸೂರು ಮತ್ತು ಕನ್ನಡನಾಡು ವಿಷಯ ಸಂಕ್ಷೇಪವಾಗಿ ಬರೆದಿತ್ತು. ಮುಂದೆ ಈ ವಿಷಯವನ್ನು ವಿವರವಾಗಿ ವಿಶೇಷ ಸಂಚಿಕೆಯೊಂದರಲ್ಲಿ ತಿಳಿಸಲಾಗುವುದು. ಈಗ ಇಲ್ಲಿ ಬೇರೆವಿಷಯ.]

ನಾವು ತಿಳಿದುಕೊಳ್ಳಬೇಕಾದುದು ಬಹಳ ಇದೆ. ಆದರೆ ನಮಗೆ ಆಸಕ್ತಿ ಇಲ್ಲದಿದ್ದರೆ ಏನೂ ಗೊತ್ತಾಗುವುದೇ ಇಲ್ಲ. ನಾವು ಸುತ್ತಮುತ್ತಲೂ ನೋಡುತ್ತಿರುವ ಆಶ್ಚರ್ಯಕರವಾದ ವಿಷಯಗಳು ಏಕೆ, ಹೇಗೆ ಆಗುತ್ತವೆ? ಎಂಬುದನ್ನು ತಿಳಿದುಕೊಳ್ಳಲು ಪ್ರಯತ್ನಪಟ್ಟರೆ ನಮ್ಮ ಬುದ್ಧಿ ಬೆಳೆಯುತ್ತದೆ; ಜ್ಞಾನ ಹೆಚ್ಚುತ್ತದೆ.

ದಿನ ದಿನವೂ ನಮ್ಮ ಸುತ್ತಮುತ್ತಲೂ ಹಲವು ವಿಷಯಗಳು ನಡೆಯುತ್ತಿರುತ್ತವೆ. ಆದರೆ ಅವುಗಳು ಏಕೆ, ಹೇಗೆ ನಡೆಯುತ್ತವೆ ಎಂಬ ಲಕ್ಷ್ಯ ನಮಗಿಲ್ಲ. ಉದಾಹರಣೆಗೆ—ಬೆಳಗ್ಗೆ ನೋಡಿದರೆ ಮೂಡಲಲ್ಲಿ ಸೂರ್ಯ ಕೆಂಡದ ಉಂಡೆಯಂತೆ ಉರಿಯುತ್ತಿರುವುದು ಕಾಣುತ್ತೇವೆ. ಆಕಾಶಕ್ಕೆ ಏರುತ್ತ ಏರುತ್ತ ಅದೇ ಸೂರ್ಯ ಬೆಳ್ಳಗೆ ಉರಿಯುತ್ತಿರುತ್ತಾನೆ. ಸಂಜೆಗೆ ಪಡುವಲಲ್ಲಿ ಆಕಾಶ ರಕ್ತವರ್ಣದಿಂದ ತುಂಬಿರುತ್ತದೆ. ಹಾಗೆಯೇ ಪೂರ್ಣಿಮೆಯ ದಿನ ಚಂದ್ರ ಮೂಡಲಲ್ಲಿ ಹೊಂಬಣ್ಣದಿಂದ ಬಳಿದ ರಬ್ಬರು ಚೆಂಡಿನಂತೆ ನಿಧಾನವಾಗಿ ಆಕಾಶಕ್ಕೆ ಪುಟ ಏರುವುದು ನೋಡುತ್ತೇವೆ. ಚಂದ್ರನೂ ಮೇಲೇರಿದಂತೆ ಬೆಳ್ಳಗಾಗುತ್ತಾನೆ. ಸೂರ್ಯ ಕಣ್ಣಿನಿಂದ ನೋಡಲಾಗದ ಉರಿಯ ಮುದ್ದೆ. ಚಂದ್ರ ಕಣ್ಣಿಗೆ ತಂಪುಕೊಡುವ ಹಿಮದ ಮುದ್ದೆ. ಇದೆಲ್ಲ ಏಕೆ?

ಇನ್ನೊಂದು ಉದಾಹರಣೆ: ನಮ್ಮ ಮೈ ಯಾವಾಗಲೂ ಒಂದು ಪ್ರಮಾಣದ ಕಾವಿನಿಂದ ಕೂಡಿರುತ್ತದೆ. ಮೈ ತಣ್ಣಗಾಗುವುದು ಯಾವಾಗ ಎಂಬುದು ಎಲ್ಲರಿಗೂ ಗೊತ್ತು. ಹುಟ್ಟಿದಾಗಿನಿಂದ ಸಾಯುವವರೆಗೂ ಈ ಕಾವಿರುತ್ತದೆ. ಮೈಯಲ್ಲಿ ಕೆಂಪಗೆ ಕಾಯ್ದ ಕಬ್ಬಿಣದ ಕುಂಡೂ ಕೂಡ ಕೊಂಚಹೊತ್ತಿನಲ್ಲೇ ತಣ್ಣಗಾಗುವಾಗ, ಮೈಕಾವು ಆರಿಯದೆ ಒಂದೇ ಸಮನಾಗಿರುವುದು ಹೇಗೆ?

ಹೀಗೆ ನಮ್ಮ ಸುತ್ತಮುತ್ತ ನಡೆಯುತ್ತಿರುವ ವಿಷಯಗಳನ್ನು ನಿರ್ಲಕ್ಷ್ಯ ಮಾಡದೆ ತಿಳಿದುಕೊಳ್ಳಬೇಕು. ನಿಮಗೇನಾದರೂ ತಿಳಿದುಕೊಳ್ಳಬೇಕೆನಿಸಿದರೆ ಬರೆಯಿರಿ.

## ಅನುಸರಿಸಬೇಕಾದ ಕೆಲವು ವಿಷಯಗಳು

### ಊರು ಇರಬೇಕಾದ ರೀತಿ

ಊರ ಮನೆಗಳು ಚಿಕ್ಕವಾಗಿರಲಿ ದೊಡ್ಡವಾಗಿರಲಿ ಅಚ್ಚುಕಟ್ಟಾಗಿರಬೇಕು.

ಊರ ರಸ್ತೆ ಅಚ್ಚುಕಟ್ಟಾಗಿರಬೇಕು.

ಊರಿಗೊಂದು ಚಾವಡಿ ಇರಬೇಕು.

ಊರಿಗೊಂದು ಗರಡಿಮನೆ ಇರಬೇಕು.

ಬಯಲಾಟಕೊಂದು ರಂಗಸ್ಥಳ ಇರಬೇಕು.

ಊರಹಿತದಲ್ಲಿ ಒಂದು ವ್ಯಕ್ತಿ, ಅಥವಾ ಸಂಸಾರ ಸ್ವಾರ್ಥವನ್ನು ಬಿಡಬೇಕು.

ಊರಲ್ಲಿ ಒಡಕು ಬರದಂತೆ ನೋಡಿಕೊಳ್ಳಬೇಕಾದುದು ಪ್ರತಿಯೊಬ್ಬರ ಕರ್ತವ್ಯ.

ಊರಲ್ಲಿ ಒಬ್ಬರಿಗೊಬ್ಬರಿಗೆ ವೈಮನಸ್ಸು ಉಂಟಾದರೆ ಪಂಚಾಯಿತಿ ಪಕ್ಷಪಾತವಿಲ್ಲದೆ ತೀರ್ಮಾನ ಮಾಡಬೇಕು.

ಊರಲ್ಲಿ ನಡೆಯುತ್ತಿದ್ದ ಸುಗ್ಗಿಕುಣಿತ, ಬಯಲಾಟ, ಕೋಲಾಟ, ಹಳ್ಳಿಪದ, ಊರಹಬ್ಬ ಇವೆಲ್ಲವೂ ನಿಲ್ಲದೆ ನಡೆಯುವಂತೆ ಮಾಡಬೇಕು.

ಊರ ಪಂಚಾಯಿತಿ ಬಲವಾಗಿ ಊರ ಒಗ್ಗಟ್ಟು ಅಳಿಯದಂತೆ ನೋಡಿಕೊಂಡು ಊರಹಿತ ಸಾಧಿಸುವಂತಿರಬೇಕು.

ಮೇಲೆ ಒಂದು ಹಳ್ಳಿ ಅನುಸರಿಸಬೇಕಾದ ಕೆಲವು ವಿಷಯಗಳನ್ನು ಕೊಟ್ಟಿದೆ. ಹಿಂದೆ ಒಂದು ವ್ಯಕ್ತಿ ಒಂದು ಸಂಸಾರ ಅನುಸರಿಸಬೇಕಾದುದನ್ನು ಕೊಟ್ಟಿತ್ತು. ಹಾಗೆ ಮಾಡಲು ಯಾರಿಗೆ ಸಾಧ್ಯವಿಲ್ಲವೋ ಅವರು ಏಕೆ ಎಂಬುದನ್ನು ಬರೆದು ತಿಳಿಸಬೇಕಾಗಿ ಪ್ರಾರ್ಥನೆ.

## ಜಾಣರು ಯಾರು?

ಸೋಮ ಏಳು ವರುಷದ ಮಗು. ರಾಮನಿಗೆ ಆರು ವರುಷ. ಒಂದು ದಿನ ಈ ಬಾಲಕರು ಬೀದಿಯೊಳಗೆ ಆಡುತಿರುವಾಗ ರಾಮು ಒಂದು ಹಿಡಿ ದೂಳು ತೆಗೆದು ಸೋಮನ ಮೇಲೆ ಬಿಸಾಡಿದ. ಸೋಮನ ತಲೆ, ಉಡುಪು ದೂಳಾಯಿತು. ಅದ ಕಂಡು ಸೋಮನಿಗೂ ಕೋಪಬಂತು. ಒಂದು ಬೆಣಚಿ ತೆಗೆದುಕೊಂಡು ರಾಮುನಿಗೆ ಒಗೆದ. ರಾಮುನಿಗೆ ಬೆಣಚಿ ತಗುಲಿ ನೋವಾಯಿತು. ಅವನು ಜೋರಾಗಿ ಅಳಲು ಆರಂಭಿಸಿದ. ಇದು ತಿಳಿದ ಅವನ ತಾಯಿ ಮನೆಯೊಳಗಿಂದ ಹೊರಗೆ ಬಂದಳು. ಮಗ ಅಳುವುದು ಕಂಡಳು. ಕೋಪ ಏರಿತು. ಸೋಮನಿಗೆ ಒಂದು ಏಟು ಬಿಗಿದಳು. ರಾಮನ ಅಳು ನಿಂತಿತು. ಸೋಮು ಅಳಲು ಶುರುಮಾಡಿದ. ಅದು ಕೇಳಿ ಸೋಮನ ತಾಯಿ ಹೊರಗೆ ಬಂದಳು. ಮಗನು ಏಟು ತಿಂದು ಅಳುವುದು ತಿಳಿದಳು. ಅವಳಿಗೆ ಕೋಪ ಮಿತಿ ಮೀರಿತು. ಅವಳು ರಾಮನತಾಯಿ ಕುರಿತು ಏನೇನೋ ಅಂದಳು. ರಾಮನ ತಾಯಿಯೇನು ಕಡಮೆಯೆ? ಅವಳೂ ಬಾಯಿಗೆ ಬಂದಂತೆ ಅಂದಳು. ಈ ಇರ್ವರು ಹೆಂಗಸರಿಗೂ ಜಗಳ ಶುರು ಆಯಿತು. ಅವಳ ತಲೆ ಕೂದಲು ಇವಳು ಇವಳ ತಲೆಕೂದಲು ಅವಳು ಹಿಡಿದು ಎಳೆದಾಡಿದರು.

ಉಳುಮೆ ಮುಗಿಸಿ ಸೋಮನತಂದೆ ಮನೆಗೆ ಬಂದ. ಬಂದವನು ಹೆಂಡತಿಯ ಪಾಡು ನೋಡಿದ. ಅವನೂ ಕೋಪ ತಾಳಲಾರದೆ ಹೆಂಡತಿಯ ಕಡೆ ಸೇರಿದ. ರಾಮನ ತಂದೆಯೂ ಹೊಲದಿಂದ ಬಂದವನು ಕೇಡು ತೀರಿಸಲು ಹೆಂಡತಿಯ ಕಡೆ ಸೇರಿದ. ಊರವರೂ ಆಕಡೆ ಈಕಡೆ ಸೇರಿದರು. ಸರಿ, ಊರು ಎರಡು ಪಾರ್ಟಿಯಾಗಿ ಹಣಾಹಣಿ, ಕೋಲಾಕೋಲಿ ಜಗಳ ಆರಂಭವಾಯಿತು. ಇದು ನೋಡಿ ಆ ಊರ ಯಜಮಾನ ಬೋರೆಗೌಡ ಹಣೆಹಣೆ ಬಡಕೊಂಡ.

ಜಗಳ ಹೀಗೆ ನಡೆಯುತಿರಲು ಆಕಡೆ ಸೋಮು, ರಾಮು, ಈ ಬಾಲಕರು ಅವರ ಜಗಳ ಮರೆತು ಆಡಲು ಆರಂಭಿಸಿದರು.

ಇದು ನೋಡಿದ ಯಜಮಾನ ಬೋರೆಗೌಡ ಜಗಳ ಆಡುವವರ ಕೂಗಿ "ನೋಡಿ ಆ ಬಾಲಕರು ಅವರ ಜಗಳ ಮರೆತು ನಗುನಗುತ ಆಡುತಿದಾರೆ. ನೀವು ಬಾರದ ಮಾತು ತೆಗೆದುಕೊಂಡು ಕೊಲೆಗೂ ಹೇಸದೆ ಜಗಳ ಮಾಡಿ ಊರು ಹಾಳು ಮಾಡುವಿರಿ. ತಲೆ ಬಲಿತ ನಿಮಗಿಂತ ಆ ಬಾಲಕರೇ ಜಾಣರು. ಅವರಿಂದ ನೀವು ಪಾಠ ಕಲೀಬಾರದೆ?" ಎಂದು ಮೂದಲಿಸಿದನು. ಜನರು ಆಕಡೆ ನೋಡಿದರು. ಸೋಮು, ರಾಮು ಇದು ಯಾವುದೂ ಗಣನೆಗೆ ತರದೆ ಸಂತೋಷದಿಂದ ಕೂಡಿ ಆಡುವುದು ಕಂಡರು. ನಾಚಿ ತಲೆ ಬಾಗಿ ಅವರವರ ಮನೆಗೆ ಹೋದರು.

ಎಂ.ಆರ್. ಲಕ್ಷ್ಮಮ್ಮ ಸಂಪಾದಕಿಯಾದ ಸಂದರ್ಭದಲ್ಲಿ 'ಬೆಳಕು' ಪತ್ರಿಕೆಯ ಮುಖಪುಟ, ಜೂನ್ 1945

Reg. No. M—4748
Phone No. 528



Licence No. 2
Licensed to Post without Prepayment.

ವರ್ಷ ೫, ಸಂಚಿಕೆ ೪, ೧೪-೧೨-೪೬] ವಯಸ್ಕರ ಶಿಕ್ಷಣ ಸಮಿತಿಯ ವಾರಪತ್ರಿಕೆ [ಸಂಪಾದಕಿ: ಎಂ. ಆರ್. ಲಕ್ಷಮ್ಮ, ಎಂ.ಎ.

ಈ ಪತ್ರಿಕೆಯಲ್ಲಿ

- ಸಂಯುಕ್ತರಾಷ್ಟ್ರಗಳ ಮಹಾಸಭೆಯಲ್ಲಿ ಭಾರತಕ್ಕೆ ವಿಜಯ
- ಹರಿಜನ ಮಕ್ಕಳ ದತ್ತು
- ದೊರೆ—ಕುರುಬ —ವಾರದ ಕತೆ

## ಭಾರತದ ರಾಜ್ಯಾಂಗ ರಚನಾ ಸಭೆ

ಕಳೆದ ಐವತ್ತು ವರ್ಷಗಳಿಂದ ನಮ್ಮ ದೇಶಕ್ಕೆ ಸಂಪೂರ್ಣ ಸ್ವಾತಂತ್ರ್ಯ ಗಳಿಸಲು ನಡೆಸುತ್ತಿರುವ ಪ್ರಯತ್ನಗಳು ನಿಮಗೆಲ್ಲ ತಿಳಿದಿದೆ.

ಈಗ ಬ್ರಿಟಿಷ್ ಸರಕಾರದವರು "ನೀವು ಸ್ವತಂತ್ರರಾಗಲು ನಮ್ಮದೇನೂ ಅಡ್ಡಿಯಿಲ್ಲ" ಎಂದು ಹೇಳಿದ್ದಾರೆ. ಈಗ ಇರುವ ಭಾರತದ ರಾಜ್ಯಾಂಗ, ಬ್ರಿಟಿಷರು ತಮ್ಮ ಅನುಕೂಲದೃಷ್ಟಿಯಿಂದ ಮಾಡಿಕೊಂಡುದು. ಸ್ವತಂತ್ರ ಭಾರತಕ್ಕೆ ಅನುಕೂಲವಾದ ರಾಜ್ಯಾಂಗವನ್ನು ಭಾರತೀಯರೇ ನಿರ್ಮಿಸಬೇಕು ಅಲ್ಲವೆ? ಈ ಮಹಾಕಾರ್ಯಸಾಧನೆಗಾಗಿ ನಮ್ಮ ದೇಶದ ಎಲ್ಲಾ ಪ್ರಾಂತಗಳ ಪ್ರತಿನಿಧಿಗಳೂ ಈ ತಿಂಗಳು ೯ನೇ ತಾರೀಕು ದೆಹಲಿಯಲ್ಲಿ ಸೇರಿರುವರು. ಈ ಪ್ರತಿನಿಧಿಗಳು ಒಟ್ಟು ೨೯೨ ಮಂದಿ. ಮುಸ್ಲಿಂಲೀಗಿಗೆ ಸೇರಿದ ಮುಸಲ್ಮಾನ ಭಾರತೀಯರ ೮೨ ಪ್ರತಿನಿಧಿಗಳು ಮಾತ್ರ ೯ನೇ ತಾರೀಕು ಸಭೆಗೆ ಬಂದಿರಲಿಲ್ಲ. ಇದಕ್ಕೆ ಕಾಂಗ್ರೆಸ್ಸಿಗೂ ಲೀಗಿಗೂ ಇರುವ ಅಭಿಪ್ರಾಯಭೇದವೇ ಕಾರಣ. ಕ್ರಮೇಣ ಲೀಗಿನ ಸದಸ್ಯರೂ ಈ ಮಹಾಕಾರ್ಯದಲ್ಲಿ ಸಹಕರಿಸುವರೆಂಬ ಭರವಸೆ ಇದೆ.

## ಶ್ರೀರಾಮಪುರದಲ್ಲಿ ಗಾಂಧೀಜಿ

ನವೆಂಬರು ೧೬ರ ಬೆಳಕುವಿನಲ್ಲಿ ಬಂಗಾಳ ಬಿಹಾರಗಳಲ್ಲಿ ನಡೆದ ಕೋಮುವಾರು ಗಲಭೆಗಳ ವಿಷಯ ಸ್ವಲ್ಪ ತಿಳಿಸಿದೆವು. ಗಾಂಧೀಜೀಯವರು ಉಪವಾಸ ಮಾಡಬಹುದೆಂಬ ಸುದ್ದಿಯೂ ಬಂದಿತ್ತು. ಮಹಾತ್ಮರು ತಮ್ಮ ದೇಹಕ್ಕೆ ಅವಶ್ಯಕವಾದುದಕ್ಕಿಂತಲೂ ಬಹು ಕಡಿಮೆ ಆಹಾರವನ್ನು ತೆಗೆದುಕೊಳ್ಳುತ್ತಿದ್ದರೆಂದು ತಿಳಿಸಿದ್ದೆವು.

### ಕೋಮುವಾರು ಗಲಭೆ—ಗಾಂಧೀಜಿಯವರ ಉಪವಾಸ

ಕಲ್ಕತ್ತಾ ಪಟ್ಟಣದಲ್ಲಿ ಆರಂಭವಾದ ಕೋಮುವಾರು ಗಲಭೆಯ ಬೆಂಕಿಯು ಆ ಪಟ್ಟಣವನ್ನು ಸಾಕಷ್ಟು ಉರಿಸಿ, ಪೂರ್ವ ಬಂಗಾಳವನ್ನು ಸುಟ್ಟು ಬೂದಿ ಮಾಡಿ, ನೆರೆ ಪ್ರಾಂತವಾದ ಬಿಹಾರಿಗೂ ಹಬ್ಬಿತು. ಅಲ್ಲಿನ ಕಾಂಗ್ರೆಸ್ ಸರಕಾರವು ಮಾಡಿದೆ. ಕೂಡಲೇ; ನಿಲ್ಲದಿದ್ದರೆ ತಾವು ಆಮರಣಾಂತ ಉಪವಾಸ ಮಾಡುವರೆಂಬ ಭಯಂಕರ ಸಂಕಲ್ಪವೂ ಶ್ರೀ ಪಂಡಿತ ಜವಹರಲಾಲರ ಮತ್ತು ಬಾಬು ರಾಜೇಂದ್ರ ಪ್ರಸಾದರ ಪ್ರಯತ್ನಗಳೂ ಕೂಡಿ ಆ ಕಾಡ್ಗಿಚ್ಚು ನಂದಿತು. ಇನ್ನೂ ದೇಶದಲ್ಲೆಲ್ಲಾ ಪೂರ್ಣ ಶಾಂತಿ ನೆಲಸಿದೆ ಎಂದು ಹೇಳುವಂತಿಲ್ಲ.

ಬಿಹಾರಿನಲ್ಲಿ ಶಾಂತ ವಾತಾವರಣವುಂಟಾಯಿತೆಂದು ತಿಳಿದ ಮೇಲೆ ಗಾಂಧೀಜಿಯವರು ಹಿಂದಿನಂತೆಯೇ ಪೂರ್ಣ ಆಹಾರವನ್ನು ತೆಗೆದುಕೊಳ್ಳುತ್ತಿದ್ದಾರೆ.

### ಶ್ರೀರಾಮಪುರದಲ್ಲಿ ಬಿಡಾರ

ಪೂರ್ವಬಂಗಾಳದ ನವಖಾಲಿ, ತಿಪ್ಪೆರಜಿಲ್ಲೆಗಳಲ್ಲಿ ಹಳ್ಳಿ ಹಳ್ಳಿಗಳಿಗೆ ಮನೆಮನೆಗಳಿಗೆ ಹೋಗಿ ಅಲ್ಲಿ ನಡೆದಿರುವ ಘೋರ, ಅಮಾನುಷಕೃತ್ಯಗಳನ್ನು ಕಣ್ಣಾರ ನೋಡಿ ಎದೆಕರಗಿ ಮತ್ತೆ ಆ ಪ್ರಾಂತ್ಯದಲ್ಲಿ ಶಾಂತಿ ನೆಲಸುವವರೆಗೆ, ಹಿಂದೂ ಮುಸಲ್ಮಾನರು ಹಿಂದಿನಂತೆ ಸ್ನೇಹದಿಂದ ಇರುವುದನ್ನು ಪುನಃ ಕಲಿಯುವವರೆಗೆ ತಾವು ಆ ಜಿಲ್ಲೆಯಿಂದ ಕದಲುವುದಿಲ್ಲವೆಂದು ಶ್ರೀರಾಮಪುರ ಎಂಬ ಹಳ್ಳಿಯಲ್ಲಿ ನೆಲಸಿದ್ದಾರೆ.

### ಒಂಟಿಯಾಗಿ, ನಿರ್ಭಯರಾಗಿ ಇದಾರೆ

ತಮಗೆ ಸಹಾಯಕರಾಗಿದ್ದ ತಮ್ಮ ಪರಿವಾರವನ್ನೆಲ್ಲಾ ಬೇರೆ ಬೇರೆ ಹಳ್ಳಿಗಳಿಗೆ ಕಳುಹಿಸಿ ತಾವು ಒಂಟಿಯಾಗಿ, ಆ ಹಳ್ಳಿಯಲ್ಲಿದ್ದಾರೆ. ತಮ್ಮ ಕೆಲಸಗಳನ್ನೆಲ್ಲಾ ತಾವೇ ಮಾಡಿಕೊಳ್ಳುತ್ತಿದ್ದಾರೆ. ದಿನದಿನವೂ ಒಂಟಿಯಾಗಿ, ಯಾವ ರಕ್ಷಣೆಯೂ ಇಲ್ಲದೆ ಮುಸಲ್ಮಾನಸಹೋದರರ ಮನೆಗಳಿಗೆ ಹೋಗಿ ಅವರೊಡನೆ ಕಲೆತು ಅವರ ಸುಧಾರಣೆಗೂ ಶಾಂತಿ ಸ್ಥಾಪನೆಗೂ, ಎಲ್ಲವನ್ನೂ ಕಳೆದುಕೊಂಡು ಅನಾಥರಂತಿರುವ ಹಿಂದೂಗಳೆದೆಯಲ್ಲಿ ಧೈರ್ಯವನ್ನು ಬಿತ್ತುವುದಕ್ಕೂ ಗಾಂಧೀಜಿಯವರು ಪ್ರಯತ್ನಿಸುತ್ತಿದ್ದಾರೆ. ಮಹಾತ್ಮರ ಪ್ರಯತ್ನದಿಂದ ಭಯ, ದ್ವೇಷ, ಹಿಂಸೆಯ ಆವರಣವು ಬಹುಮಟ್ಟಿಗೆ ಬದಲಾಯಿಸುತ್ತದೆ.

—

## ಚಾಮರಾಜನಗರ ತಾಲ್ಲೂಕು ಮೇಲ್ವಿಚಾರಕರನ್ನು ತೆಗೆದು ಹಾಕಿದೆ

ಇದುವರೆಗೆ ಚಾಮರಾಜನಗರ ತಾಲ್ಲೂಕಿನಲ್ಲಿ, ಮೈಸೂರು ಜಿಲ್ಲಾ ವಯಸ್ಕರ ಶಿಕ್ಷಣ ಸಮಿತಿಯ ತಾಲ್ಲೂಕು ಮೇಲ್ವಿಚಾರಕರಾಗಿದ್ದ ಶ್ರೀ ಸಿ. ಶ್ರೀನಿವಾಸಯ್ಯಂಗಾರ್ ಅವರು ಈಗ ಆ ಕೆಲಸದಲ್ಲಿಲ್ಲ. ಅವರಿಗೆ ಬದಲು ಶ್ರೀ ಸಿ. ಆರ್. ಪುಟ್ಟಣ್ಣನವರು ಚಾಮರಾಜನಗರದ ತಾಲ್ಲೂಕಿನ ಮೇಲ್ವಿಚಾರಕರಾಗಿದ್ದಾರೆ. ಆದ್ದರಿಂದ ಇನ್ನುಮುಂದೆ ಯಾರೂ ವಯಸ್ಕರ ಶಿಕ್ಷಣದ ವಿಷಯದಲ್ಲಿ ಯಾವ ವ್ಯವಹಾರವನ್ನೂ ಮೇಲ್ಕಂಡ ಶ್ರೀಮಾನ್ ಸಿ. ಶ್ರೀನಿವಾಸಯ್ಯಂಗಾರ್ ಅವರೊಡನೆ ಮಾಡಬೇಕಾದ್ದಿಲ್ಲ.

ಕಾರ್ಯದರ್ಶಿ
ಜಿಲ್ಲಾ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು

**1946 ರಲ್ಲಿ ಎಂ.ಆರ್. ಲಕ್ಷಮ್ಮ ಸಂಪಾದಕತ್ವದ 'ಬೆಳಕು ಪತ್ರಿಕೆ'ಯ ಮುಖ ಪುಟ**

No. M—4670
ಗೆಲುವಿನ ಸಂಚಿಕೆ




ವಯಸ್ಕರ ಶಿಕ್ಷಣ ಸಮಿತಿಯ ವಾರಪತ್ರಿಕೆ [ಸಂಪಾದಕಿ: ಎಂ. ಆರ್. ಲಕ್ಷಮ್ಮ, ಎಂ.ಎ.

ಈ ವಾರದ ಪತ್ರಿಕೆಯಲ್ಲಿ

## ಯುದ್ಧ ನಿಂತಿತು

ಜಪಾನಿನ ಮೇಲೆ ಷರತ್ತುಗಳು

ಚಕ್ರವರ್ತಿಗಳ ಭಾಷಣ

## ಇನ್ನೊಂದು ಉಪವಾಸವೆ?

ಮಹದೇವ ದೇಶಾಯಿ ದಿನಾಚರಣೆ

ಮರಣದಂಡನೆ ವಜಾ ಆಯಿತು

ಹರಿಜನರಿಗೆ ದೇವಸ್ಥಾನಗಳನ್ನು ತೆರೆಯಿರಿ

ಹಿರೋಹಿಟೋವಿನ ಪರಿಚಯ

## ಯುದ್ಧದ ಡೈರಿ

ಶ್ರೀ ತಿಮ್ಮಾರೆಡ್ಡಿಯವರ ಬಂಧನ

ಮಹಾತ್ಮಾ ಗಾಂಧಿಯವರ ಪ್ರತಿಮೆ

ಗೆಲುವಿನಲ್ಲಿ ಈ ದೇಶದ ಭಾಗ

ಓ ಪೊಲ್ಲ ಯುದ್ಧಮೇ;
ಎಂದು ನಿಲ್ವಯ್!
ಓ ತಾಯಿ ಶಾಂತಿಯೆ
ಎಂದು ಗೆಲ್ವಯ್!

### ಜೈ! ಮೈಸೂರಿಗೆ

ಜೈ! ಮೈಸೂರಿಗೆ! ಜೈ ಎನ್ನಿರಿ!
ಕನ್ನಡನಾಡಿನ ಕಣ್ಮಣಿ, ಜೈ, ಜೈ, ಜೈ!

ಕೋಗಿಲೆ ಇಂಚರ ತುಂಬಿದ ಕಾಡು;
ಮಲ್ಲಿಗೆ ಸಂಪಿಗೆ ಅರಳಿದ ನಾಡು,
ವೀಣೆಯ ಸವಿದನಿ ಗಂಧದ ಪರಿಮಳ,
ಚಿನ್ನದ ಐಸಿರಿ ಬೀರುವ ಬೀಡು—
ಜೈ! ಮೈಸೂರಿಗೆ....

ಇಹಪರವೆರಡನು ಸಾಧಿಪ ತಪದಲಿ,
ತನುಮನಧನಗಳ ತೊರೆದಾ ಕಲಿಗಳು,
ನೇಗಿಲ ಹಿಡಿದಾ ಕರ್ಮವೀರರು,
ಶಿಲ್ಪಿಕುಶಲರು ಮೆರೆಯುವ ನಾಡು—
ಜೈ! ಮೈಸೂರಿಗೆ....

ನಡೆನುಡಿ ಎರಡನು ಎರಡಾಗಿಸದೆ,
ಬಡತನದಲ್ಲೂ ಧರ್ಮವ ಮರೆಯದೆ,
ಕಡುಗಲಿ ತಂಡವು ಬೆಳೆವಾನಾಡು,
ಹಿತಮಿತ ವಚನದಿ ಉಲಿವಾನಾಡು—
ಜೈ! ಮೈಸೂರಿಗೆ....

ಹಿಂದಿನ ಅನುಭವ, ಇಂದಿನ ವೈಭವ,
ಯಮುನಾಗಂಗೆ ಸಂಗಮವಾಗುತ,
ಅಂದೂ ಇಂದೂ ಕಲೆಗಳ ಬೀಡು,
ಇಂದೂ ನಾಳೆಯು ನಲಿಯುವ ನಾಡು—
ಜೈ! ಮೈಸೂರಿಗೆ....

—ನಾ. ಕ.

['ಬಯಲಾಟದ ಬಳಗ' ದವರು ಮೈಸೂರು ನಗರದಲ್ಲಿ ಏರ್ಪಡಿಸಿದ "ಜನತಾನಾಟಕೋತ್ಸವ" ಸಂದರ್ಭದಲ್ಲಿ ಹಾಡಿದ್ದು.]

ಎಂ.ಆರ್. ಲಕ್ಷಮ್ಮ ಸಂಪಾದಕಿಯಾದ ನಂತರ ಬದಲಾದ ಬೆಳಕು ಪತ್ರಿಕೆಯ
ಮುಖಪುಟ, ಆಗಸ್ಟ್ 1945

# ವಯಸ್ಕರ ಶಾಲೆಯ ಗೌರಮ್ಮ ಬರೆದ ಪತ್ರ

ಕ್ಷೇಮ    ಶ್ರೀ    ತಾ. 18-9-45

ಮೈಸೂರು ಡಿಸ್ಟ್ರಿಕ್ಟ ಪ್ರಚಾರ ಸಮಿತಿ ಸೆಕ್ರೆಟರಿಯವರ
ಸನ್ನಿಧಾನದಲ್ಲಿ ಗೌರಮ್ಮನು ಮಾಡುವ ನಮಸ್ಕಾರಗಳು
ಅದಾಗಿ ಈವರೆಗೆ ಉಭಯ ಕುಶಲೋಪರಿ ಸಾಂಪ್ರತ
ನಾನು ತಮ್ಮಗಳ ದಯದಿಂದ ಈ ಮಳೂರಿನಲ್ಲಿ ವಯಸ್ಕರ
ಶಾಲೆಗೆ ತಾ. 1-9-44 ನೆಯ ದಿವಸದಲ್ಲಿ ಬಂದು ಪ್ರ
ಕನ್ನಡ ಓದಲು ಸೇರಿದೆನು 2½ ತಿಂಗಳ ಪರೀಕ್ಷೆಯಲ್ಲಿ ತೇ
ರ್ಗಡೆಯಾದೆನು ಮತ್ತು 6 ತಿಂಗಳ ನಂತರ ಪರೀಕ್ಷೆಯಲ್ಲಿ
ತೇರ್ಗಡೆಯಾಗಿ ನಾನು ಸ್ವತಃ ಓದಿಕೊಳ್ಳುವಂತಾದೆ
ನು ನನ್ನ ವಿರಾಮ ಕಾಲದಲ್ಲಿ ತಮ್ಮ ದಯದಿಂದ ಯಾವು
ದಾದರು ಸಣ್ಣ ಕಥೆ ಪುಸ್ತಕ ಮತ್ತು ಹಾಡು ಪದ್ಯ ಇತ್ಯಾದಿ
ಗಳನ್ನು ಓದಿಕೊಂಡು ಆನಂದಪಡುವಾಗ ನಿಮ್ಮ ಸ್ಮರಣೆ
ಮಾಡುತ್ತಿರುತ್ತೇನೆ ಇಂತಹ ಸುಯೋಗ ಸಿಕ್ಕಿದ್ದರಿಂದ
ನ ಕೃತಜ್ಞತೆಗಾಗಿ ಸದಾ ಪ್ರಾರ್ಥಿಸುತ್ತೇನೆ. ತಮ್ಮ
ವಿಧೇಯಳು

ಆರ್. ಗೌರಮ್ಮ
ಬೆಂಗಳೂರು ಡಿಸ್ಟ್ರಿಕ್ಟ
ಚನ್ನಪಟ್ಟಣ ತಾಲ್ಲೂಕು
ಮಳೂರು.

ದಿನಾಂಕ 24.11.1945ರಲ್ಲಿ 'ಬೆಳಕು' ಪತ್ರಿಕೆಯಲ್ಲಿ ಪ್ರಕಟವಾದ ವಯಸ್ಕರ ಶಾಲೆಯಲ್ಲಿ ಕಲಿತ ಗೌರಮ್ಮ ಅವರ ಕೈಬರಹದ ಪತ್ರ

## ಚಿತ್ರದುರ್ಗ ತಾಲ್ಲೂಕು ತುರವನೂರು ಹೋಬಳಿ ಮುದ್ದಾಪುರ ಗ್ರಾಮದ ವಯಸ್ಕರ ಶಾಲೆಯ ವಿದ್ಯಾರ್ಥಿಯಾದ ಹೊನ್ನೂರು ಸಾಬಿಯವರ ಪತ್ರ.

ಸ್ವಾಮಿ ನಾ ... ನಾನು ವಯಸ್ಕರಶಾಲೆಯಲ್ಲಿ ನಾಕ ಅಕ್ಷರ ಕಲಿತ್ತೀನಿ. ನಮ್ಮ
ಶಾಲೆ ಪರೀಕ್ಷೆ ನಾದರು ಬಾಳ ಮಕ್ಕಳಿಗ ಬಂದು ತಿಂಗಳಾಗ್ಯದೆ ಅದರಾಗ ನಾನು
ಫಸ್ಟ್ ಕ್ಲಾಸು ಪತ್ತರು ನಂಬರ್ ಬಂದಾದೆ ಬಂದೀನಿ. ಅಂತ ನಾಗೆ ವಿದ್ಯಾವು
ಕಲಿತ್ಸುಂದ ಬೌದ್ರು ಹೇಳಿದರು ಬುದ್ಧಿ ನಾಂಗ ಬಾಳಾ ಸಂತೋಸ. ಆದು ನನಗೆ
ಈಗ ಬೆದಾಕ ಬರೂದಕ್ಕೆ ಬಾಳ ಬಂಬ ಬಂದೈತೆ ವತ್ತೆ ಕಟ್ಟಾದರೂ ಬರೆದ ಕಾಗದ
ನೋಡಿದರೆ ಬತ್ತಾದ ಇಲ್ಲವೆ ಅಂಗಡಿಗೆ ಹೋಗಿ ಸಾಮಾನು ಪೇಪರು ದಾಗೆ [illegible]
ಕಿತ್ತಾ [illegible] ಅದರ ಮ್ಯಾಕೆ ಶೋ ಪದಗಳನ್ನು ಓತ್ತೀನಿ ಸ್ವಾಮಿ ಈ ಪರೀಕ್ಷೆಗೆ
ನನಗೆ ನಂಬರು ಅದವಗಿ ಬಂದಿದ್ದಾಕೆ ನನ್ನನೆ ಸ್ನೇಹಿತರು ದೊಡ್ಡದವ
ರಾಡಿದಾಕೆವನೂದ್ರೆ ಮುಂದಕ್ಕೆ ಪರೀಕ್ಷೆ ನಡಿತೈತೆ ಅಲ್ಲ ಅದರಾಗ ನಂಕೆಂತ ಬನಿ
ಎಚ್ಚೆ ನಂಬ್ರು ತೆಗೆಯಬೇಕು ಅಂತ ಅಂಬರಾರೆ. ನಂಗೆ ಈಗ ಓದುಕತಿಯೋ
ದಕ್ಕೆ ಭಾಳ ಪುರಾಣಕತೆ ಗೊತ್ತುಕೊಡಿ ದಪ್ರಿ ಅಲದೆ ಬುದ್ಧಿ ಬರೋಕರೆಗಳು ನಮ್ಮ
ಮಕ್ಕಳ ಎದುರು ಹೇಳ್ತೀನಿ ಕನ್ನಡ ಭಾಳ ಸುಲಭ ಐತೆ ಬುದ್ಧಿ ನಾನು
ಪಿಂಪೆರಳು ನನಗೆ ವೇಳೆ ಎಲೆ ತೋಟ ವಿಕ್ಯಾನಯುತ್ತ ಮಾಡ್ತೀನಿ ಬನಿ
ರಾಡುಗೋಳು ಬರೋದರಿಂದ ಕಪಿಲೆ ಒಡಿಬೇಕಾದ್ರೆ ಹೇಳ್ತೀನಿ ಬಜ್ಜಾನಾಯ
ಒಡಿಬೇಕಾದ್ರೆ ನಾಗ ಹೇಳ್ತೀನಿ ಪದಗೋಳು ಪಸಂದು ಐತೆ ಸ್ವಾಮಿ ತಾಂಗೆ ನಂಗೆ
ವಿದ್ಯಾ ಕಲಿಸಿ ಕೊಟ್ಟ ಮಾಸ್ತರಿಗೂ ಸಾಕ್ಕಾರ ಮೋರಗೂ ನಮ್ಮ ಮಹಾರಾ
ಜಂಗೂ ನಮಸ್ಕಾರ ಬುದ್ಧಿ ಎಲ್ಲಾ ದೊಡ್ಡಾದೇವಾರು ಒಳ್ಳೆದು ಮಾಡಲಿ.

ಅಂತ ನನ್ನ ಪ್ರಾರ್ಥನೆ

ಕೃಷ್ಣ ನೀವಾಕ
ಹೊನ್ನೂರಸಾಬಿ
ಮುದ್ದಾಪುರ

ತಾ. 15.3.46

ಸೋದರ ಹೊನ್ನೂರು ಸಾಬಿಯವರಿಗೆ, ವಿಶ್ವಾಸಪೂರ್ವಕವಾಗಿ—

ನಿಮ್ಮ ಕಾಗದ ಓದಿ ಸಂತೋಷವಾಯಿತು. ಮುಂದಿನ ಪರೀಕ್ಷೆಯಲ್ಲಿ ಇನ್ನೂ ಹೆಚ್ಚಿನ ನಂಬರು ಪಡೆಯುತ್ತೀರಿ ಭರವಸೆ ನನಗಿದೆ. ಕನ್ನಡ ಬಹಳ ಸುಲಭ ಎಂದು ಹೇಳಿದ್ದೀರಿ. ನಿಜ.

ನಿಮಗೆ ಮುಂದೆ ಓದುವುದಕ್ಕೆ ಹೆಚ್ಚು ಪುಸ್ತಕಗಳನ್ನು ಕಳಿಸಿಕೊಡುತ್ತೇವೆ. ''ಕಪಿಲೆ ಹೊಡೆಯುವಾಗ ಹಾಡ ಹೇಳಿಕೊಳ್ಳುತ್ತೇನೆ' ಎಂದು ಬರೆದಿದ್ದೀರಿ. ಅವುಗಳನ್ನು ಬರೆದು ಕಳುಹಿಸಿ; ಆರಿಸಿ, ಅಚ್ಚು ಮಾಡೋಣ.

ನಿಮ್ಮಂತೆ ಓದು ಕಲಿತವರೆಲ್ಲರೂ ನಮಗೆ ಕಾಗದ ಬರೆಯುವುದನ್ನು ಕಲಿತರೆ ನಿಮ್ಮ ಉಪಾಧ್ಯಾಯರ ಮತ್ತು ನವ ಸಾರ್ಥಕವಾಯಿತು. —ಇತಿ ಸಂಪಾದಕ.

**ದಿನಾಂಕ 27.04.1946 ರಲ್ಲಿ 'ಬೆಳಕು' ಪತ್ರಿಕೆಯಲ್ಲಿ ಪ್ರಕಟವಾದ ವಯಸ್ಕರ ಶಾಲೆಯಲ್ಲಿ ಕಲಿತ ಹೊನ್ನೂರು ಸಾಬಿ ಅವರ ಕೈಬರಹದ ಪತ್ರ**

ಸಂಖ್ಯೆ

ಎರಡು ಆಣೆ

# ಕುಂತೀದೇವಿ







ಎಂ.ಆರ್. ಲಕ್ಷಮ್ಮರವರು ವಯಸ್ಕರ ಶಿಕ್ಷಣ ಪುಸ್ತಕ ಮಾಲೆಗೆ ರಚಿಸಿರುವ

ಕಥಾಮಾಲಿಕೆ – 'ಕುಂತೀದೇವಿ'

ಸಂ. ೩೪] [ಬೆಲೆ: ಒಂದೂವರೆ ಆಣೆ

# ಮಾರುತಿ

ಎಂ. ಆರ್. ಲಕ್ಷ್ಮಮ್ಮ, ಎಂ.ಎ.



ವಯಸ್ಕರ ಶಿಕ್ಷಣದ ಪುಸ್ತಕಮಾಲೆ

ಸಂಸ್ಥಾನದ ಅಕ್ಷರ ಪ್ರಚಾರ ಸಮಿತಿ, ಮೈಸೂರು

ಎಂ.ಆರ್. ಲಕ್ಷಮ್ಮರವರು ವಯಸ್ಕರ ಶಿಕ್ಷಣ ಪುಸ್ತಕ ಮಾಲೆಗೆ ರಚಿಸಿರುವ ಕಥಾಮಾಲಿಕೆ 'ಮಾರುತಿ'

# ಸೋದರಿ

ಕನ್ನಡ ವಾರಪತ್ರಿಕೆ

ಪುಟಗಳು ೪. ಬೆಲೆ ೦-೨-೦

ಸಂಪುಟ ೧ [illegible] ಸಂಚಿಕೆ ೧

★

ನೂತನ ರಾಷ್ಟ್ರ ನಿರ್ಬಂಧನೆ. ನೂತನ [illegible] ರಾಷ್ಟ್ರಕ್ಕೆ. ನೂತನ [illegible] ಈ ಒಂದು ಸನ್ನಿವೇಶದಲ್ಲಿ [illegible] ವರ್ಷಗಳ ಅನ್ಯದಾಸ್ಯತ್ವದ ಕಟ್ಟಕಡೆಯ ಸಂಕಲೆ ಕಳಚಿ, ಹೊಸ ಬಾಳಿನ ರಚನೆಯಲ್ಲಿ ಉದ್ಯುಕ್ತರಾಗೋಣ.

ಈ ಶುಭ ಸಮಯದಲ್ಲಿ ಭಾರತ ಜನತೆಯು ಆದರಲ್ಲೂ ಭಾರತ ಮಹಿಳೆಯರ ಬಹುಮುಖದ ಪ್ರಗತಿಗೆ ಕಾರಣಕರ್ತರಾದ ರಾಷ್ಟ್ರಪಿತ ಗಾಂಧೀಜಿ ಮತ್ತು ಸತಿ ಕಸ್ತೂರಿ ಬಾ ರವರನ್ನು ಭಕ್ತಿಯಿಂದ ಸ್ಮರಿಸೋಣ.

ಸಿರಿಗನ್ನಡಂ ಗೆಲ್ಗೆ

★

ಪ್ರಕಾಶಕರು—
ಸೋದರಿ ಕಾರ್ಯಾಲಯ,
ನರಸಿಂಹರಾಜಾ ಕಾಲೊನಿ,
ಬೆಂಗಳೂರು ೪



ಎಂ.ಆರ್. ಲಕ್ಷಮ್ಮರವರ "ಸೋದರಿ ವಾರಪತ್ರಿಕೆ"ಯ ಮೊದಲ ಸಂಚಿಕೆಯ ಮುಖಪುಟ ಜನವರಿ 26, 1950

10-12-1954 SODARI Reg NoM. 5575

# ಸೋದರಿ

ಪ್ರತಿ ಶುಕ್ರವಾರ ಬೆಂಗಳೂರಿನಿಂದ ಹೊರಡುವ ಮಹಿಳಾ ವಾರಪತ್ರಿಕೆ

ಎಲ್ಲೆಡೆಯ ಬರಹಗಾರ್ತಿಯರಿಂದ

ಕತೆ–ಕವನ–ವಿಚಾರ ಲೇಖನ–ವಿನೋದ–ಮಹಿಳಾ ಸಮಾಜದ, ಸಂಘಗಳ ಚಟುವಟಿಕೆಗಳ ವರದಿ–

ಲಘುಪ್ರಬಂಧ—ಜೀವನ ಪರಿಚಯ—ರೇಖಾಚಿತ್ರ

ಎಲ್ಲಕ್ಕೂ ಸುಸ್ವಾಗತವುಂಟು

ಸೋದರಿಯ ಮಂಡ್ಯದ ಸಲಹೆಗಾರ್ತಿ: ಶ್ರೀಮತಿ ಆರ್. ಕೆ. ಮಂಜುಳಾದೇವಿ, ಮಂಡ್ಯ.

ಸೋದರಿಯ ಬೊಂಬಾಯಿ ಸಲಹೆಗಾರ್ತಿ. ಶ್ರೀಮತಿ ಲೀಲಾವತಿ ಚಂದ್ರಶೇಖರ್, ಬೊಂಬಾಯಿ

ಸೋದರಿಯ ಬೀರೂರಿನ ಸಲಹೆಗಾರ್ತಿ: ಶ್ರೀಮತಿ ಸರೋಜ ಬಿ. ಸಿ. ಶರಣಪ್ಪ, ಬೀರೂರು

ಸೋದರಿಯ ಚಿಕ್ಕಮಗಳೂರಿನ ಸಲಹೆಗಾರ್ತಿ: ಶ್ರೀಮತಿ ಬಿ. ಎಲ್. ಸುಬ್ಬಮ್ಮ. ಚಿಕ್ಕಮಗಳೂರು

ತಿಂಗಳಿಗೆ ಎರಡು ತೆಂಗಿನಕಾಯಿಯ ಬೆಲೆಯಿಲ್ಲ. ಆದರೂ ಮನೆ ಮಡದಿ ಮಕ್ಕಳಿಗೆ ಎಷ್ಟು ಆನಂದ!

ವಾರ್ಷಿಕ ಚಂದಾ: ಸ್ಥಳೀಯರಿಗೆ ೬-೦-೦, ಪರಸ್ಥಳೀಯರಿಗೆ ೬–೧೨–೦ ಬಿಡಿ ಸಂಚಿಕೆ

ಮೈಸೂರು ಸರಕಾರದವರು ತಮ್ಮ ಟಿ. ಬಿ. ಸಿ. ೯-೪೯—೫೦ರ ಪತ್ರದ ಪ್ರಕಾರ ಹೆಣ್ಣುಮಕ್ಕಳ ಎಲ್ಲಾ ಮಾಧ್ಯಮಿಕ ಮತ್ತು ಹೈಸ್ಕೂಲುಗಳಿಗೆ ಮಂಜೂರು ಮಾಡಿರುತ್ತಾರೆ. ಮತ್ತು ತಮ್ಮ ಆರ್ ೭, ಸಿ. ೯೯೯-೫೦—೫೧ರ ಪತ್ರದ ಪ್ರಕಾರ ಹಳ್ಳಿ ಪಂಚಾಯಿತಿಯವರು ಕೊಳ್ಳಬಹುದೆಂದು ಮಂಜೂರು ಮಾಡಿರುತ್ತಾರೆ.

ಸೋದರಿ ಕಾರ್ಯಾಲಯ
ನರಸಿಂಹರಾಜ ಕಾಲೋನಿ, ಬಸವನಗುಡಿ
ಬೆಂಗಳೂರು–೪

EeditdPrinted and Published by M. R. Lakshamma M. A. at Sodari Press N. R Colony, Bangalore-4

ಸೋದರಿ ಪತ್ರಿಕೆಯನ್ನ ಮೈಸೂರು ಸರ್ಕಾರ ಹೆಣ್ಣು ಮಕ್ಕಳ ಶಾಲೆಗೆ ಮತ್ತು ಗ್ರಾಮ ಪಂಚಾಯಿತಿಗೆ ಕೊಳ್ಳಲು ಮಾಡಿರುವ ಆದೇಶ ಮತ್ತು ಲೇಖನಗಳ ಆಹ್ವಾನದ ಜಾಹಿರಾತು

Statement about ownership and other particulars about newspaper "*SODARI*" as required to be published under rule 8 of the Registration of Newspaper (Central) Rules 1956.

## FORM IV

### SODARI

| | |
|---|---|
| 1. Place of Publication | Bangalore-4. |
| 2. Periodicity of its publication | Monthly. |
| 3. Printers Name | Smt. M. R. Lakshamma. |
| Nationality | Indian. |
| Address | No. 7. N. R. Colony, Bangalore-4. |
| 4. Publishers Name | Smt. M. R. Lakshamma. |
| Nationality | Indian. |
| Address | No 7. N. R. Colony, Bangalore-4. |
| 5. Editor's Name | Smt. M. R. Lakshamma. |
| Nationality | Indian. |
| Address | No. 7. N. R. Colony, Bangalore-4. |
| 6. Names and addresses of individuals who own the newspaper and partners or shareholders holding more than one per cent of the total capital. | Smt. M. R. Lakshamma, No. 7. N. R. Colony, Bangalore-4. |

I, M. R. Lakshamma, hereby declare that the particulars given above are true to the best of my knowledge and belief.

Sd/ Smt. M. R. Lakshamma, M. A.
PROPRIETER.

Date.

*ಎಂ.ಆರ್. ಲಕ್ಷಮ್ಮರವರ "ಸೋದರಿ ವಾರಪತ್ರಿಕೆ"ಯ ಸಂಪಾದಕಿಯಾಗಿ, ಮುದ್ರಕಿಯಾಗಿ, ಪ್ರಕಾಶಕಿಯಾಗಿ ನೋಂದಣಿ ಮಾಡಿಸಿರುವ ನೋಂದಣಿ ಪತ್ರ*

# ಸೋದರಿ

ಸಂಪುಟ ೫] ೧೦ – ೧೨—೧೯೫೪ ನೇ ಶುಕ್ರವಾರ [ ಸಂಚಿಕೆ ೪೬

ಸಂಪಾದಕಿ :— ಶ್ರೀಮತಿ ಎಂ. ಆರ್. ಲಕ್ಷಮ್ಮ ಎಂ. ಎ.

ಈ ಸಂಚಿಕೆಯಲ್ಲಿ

ಸಂಪಾದಕೀಯ

ಭಾರತ ವೈಭವ

ದತ್ತ ಜಯಂತಿಗಾಗಿ 'ಸಮರ್ಪಣ'

ಶ್ರೀ ಗೀತಾಜಯಂತಿ

"ಸೋದರಿ ವಾರಪತ್ರಿಕೆ" ಬದಲಾದ ವಿನ್ಯಾಸದಲ್ಲಿನ ಮುಖಪುಟ, 1954




'ಸೋದರಿ' ಮಾಸ ಪತ್ರಿಕೆಯಾಗಿ ಬದಲಾದ ಸಂದರ್ಭದಲ್ಲಿನ ಮುಖಪುಟ, 1956



1957

SODARI

# ಸೋದರಿ

ಸಂಪಾದಕಿ: ಶ್ರೀಮತಿ ಎಂ. ಆರ್. ಲಕ್ಷ್ಮಮ್ಮ ಎಂ. ಎ.













ಶ್ರೀ ಶಕ್ತಿಗಣಪತಿಸ್ವಾಮಿ

ಬೆಲೆ: ೮ ಆ.

'ಸೋದರಿ' ಮಾಸ ಪತ್ರಿಕೆಯಾಗಿ ಬದಲಾದ ಸಂದರ್ಭದಲ್ಲಿನ ಮುಖಪುಟ, 1957

ಅಕ್ಟೋಬರ್ ೧೯೭೪ - ಸಂಚಿಕೆ ೦

# ಬಳಕೆದಾರ



# Consumer

ಕರ್ನಾಟಕ ರಾಜ್ಯ ಗ್ರಾಹಕರ ವೇದಿಕೆಯ ಪ್ರಕಟಣೆ – ಬೆಂಗಳೂರು

## ಬೆಂಗಳೂರು ನಾಗರೀಕರಲ್ಲಿ ವಿನಂತಿ

ಎಂ. ಆರ್ .ಲಕ್ಷ್ಮಮ್ಮ ಕಾರ್ಯಾಧ್ಯಕ್ಷೆ

ಇತ್ತೀಚೆಗೆ ಬಳಕೆದಾರನ ಪರಿಸ್ಥಿತಿ ತುಂಬಾ ಘೋರವಾಗಿದೆ. ಬೆಲೆಗಳು ಈಗ ಕೆಲವು ವರ್ಷಗಳಿಂದ ದಿನೇ ದಿನೇ ಏರುತ್ತಿವೆ. ಸಾಮಾನ್ಯ ಜನತೆ ಎರಡು ಹೊತ್ತು ಊಟಕ್ಕೆ ಬೇಕಾಗುವ ಪದಾರ್ಥಗಳನ್ನು ಒದಗಿಸುವುದು ಸಹ ಅತ್ಯಂತ ಕಷ್ಟವಾಗಿದೆ. ಅಲ್ಲದೆ ರೇಷನ್ ಹಂಚಿಕೆ ವ್ಯವಸ್ಥೆ ಅನೇಕ ಕುಂದು ಕೊರತೆಗಳಿಂದ ಕೂಡಿದೆ. ಸಕಾಲಕ್ಕೆ ಸರಿಯಾಗಿ ಸಾಮಾನು ದೊರೆಕುತ್ತಿಲ್ಲ ಅಥವಾ ದೊರಕಿದರೂ ಆಹಾರ ವಸ್ತುಗಳು ಉತ್ತಮವಾಗಿರುತ್ತವೆಯೆಂದು, ಹೇಳಲಾಗುತ್ತಿಲ್ಲ. ಅನೇಕ ವೇಳೆ ಅವು ಉಪಯೋಗಿಸಲು ಬಾರದಷ್ಟು ಕೀಳುದರ್ಜೆಯದಾಗಿರುತ್ತವೆ. ಸಾಲದುದಕ್ಕೆ ಪದಾರ್ಥಗಳು ಮುಖ್ಯವಾಗಿ ಸಣ್ಣ ಪುಟ್ಟದ ಅಂಗಡಿಗಳಲ್ಲಿ ಬೆರಕೆ ಪದಾರ್ಥದಿಂದ ಕೊಟ ಮನುಷ್ಯನ ದೇಹಕ್ಕೆ ಕೆಡಕನ್ನು ಉಂಟುಮಾಡುವ ಸಂದರ್ಭಗಳಿವೆ. ಮತ್ತು ಹಲವಾರುವೇಳೆ ಪದಾರ್ಥಗಳನ್ನು ಅಳೆಯುವದರಲ್ಲಿ ಅಥವಾ ತೂಕದಲ್ಲಿ ಕಡಿಮೆ ಆಗುವುದೂ ಉಂಟು. ಬಳಕೆದಾರರೂ ಸಸ ಕಾರ್ಡಿನ ಉಪಯೋಗದಲ್ಲಿ ಕೆಲವು ಅನ್ಯಾಯವನ್ನು ಮಾಡದೇ ಇಲ್ಲ.

ಜೀವನಕ್ಕೆ ಅತ್ಯವಶ್ಯಕವಾದ ಆಹಾರ ಪದಾರ್ಥ, ಇತರ ಬಳಕೆ ವಸ್ತುಗಳು ಸಾದಾ ಬಟ್ಟೆ ಸೌದೆ, ಸೀಮೆ ಎಣ್ಣೆ ಮೊದಲಾದ ಉರವಲು, ಔಷಧಿ, ಇವೆಲ್ಲದರ ಹಂಚಿಕೆಯಲ್ಲೂ ಹಲವು ಬಗೆಯ ದೋಷಗಳು ಕಂಡುಬಂದಿವೆ. ಪ್ರಕೃತಿಯ ವಿಕೋಪ ಮತ್ತು ಪ್ರಪಂಚದ ಸ್ಥಿತಿಗತಿ ಈ ಏರು ಪೇರಿಗೆ ಒಂದು ಕಾರಣ ಎನ್ನಬಹುದಾದರೂ. ಮನುಷ್ಯರ ಪ್ರಯತ್ನದಿಂದ ಬಹುಮಟ್ಟಿಗೆ ಪರಿಸ್ಥಿತಿ ಸುಧಾರಿಸಲು ಸಾಧ್ಯವಿದೆ. ಸರಕಾರ, ಉದ್ಯಮಿ ಮೊದಲಾದವರು, ಬೆಳೆ ಬೆಳೆಯುವ ರೈತ ಜನ, ವರ್ತಕರು ದಳ್ಳಾಳಿ ವರ್ಗ ಮತ್ತು ಪತ್ರಕರ್ತರು ಮತ್ತು ವಿಶೇಷವಾಗಿ ನಾಗರೀಕರು ಅಥವಾ ಬಳಕೆದಾರರು ಮನಸ್ಸುಮಾಡಿದರೆ ನಮ್ಮನ್ನು ಎದುರಿಸುತ್ತಿರುವ, ಕಾಡುತ್ತಿರುವ ಸಮಸ್ಯೆಗಳನ್ನು ಬಲು ಮಟ್ಟಿಗೆ ಪರಿಹರಿಸಬಹುದಾಗಿದೆ.

ಈ ದೃಷ್ಟಿಯಿಂದ ಕರ್ನಾಟಕ ಗ್ರಾಹಕರ ವೇದಿಕೆ ರಚಿತವಾಗಿದೆ. ಸಾಧಾರಣ ಜನರ [illegible]ಗಳಿಗೆ ಹೋಗಿ ಅವರ ಕಷ್ಟ ನಷ್ಟಗಳನ್ನು ವಿಚಾರಿಸಿ ಪ್ರಶ್ನಾವಳಿಯ ಮೂಲಕ ಸಮಸ್ಯೆಗಳನ್ನು ನಿರೂಪಿಸಿ ಸಂಗ್ರಹಿಸಿದ ಆ ಎಲ್ಲ ವಿವರವನ್ನು ಸಂಬಂಧ ಪಟ್ಟ ಅಧಿಕಾರ ವರ್ಗಕ್ಕಾಗಲಿ ಅಥವಾ ವರ್ತಕ ವರ್ಗಕ್ಕಾಗಲಿ ಅಥವಾ ಕೃಷಿಕ ವರ್ಗಕ್ಕಾಗಲಿ ತಲುಪಿಸಿ ತನ್ಮೂಲಕ ಪರಿಹಾರ ಕಲ್ಪಿಸಲು ಸಾಧ್ಯವೇ, ಎಷ್ಟರ ಮಟ್ಟಿಗೆ ಸಾಧ್ಯ ಎಂಬುದನ್ನು ವಿವೇಚಿಸಲು ನಿರ್ಧರಿಸಿದ್ದೇವೆ. ಈ ಮಹಾ ಪ್ರಯತ್ನದಲ್ಲಿ ನಮಗೆ ಎಲ್ಲರ ನೆರವು ಮುಖ್ಯವಾಗಿ ಗೃಹಿಣಿಯರ ವಿದ್ಯಾರ್ಥಿಗಳ ನೆರವು ಅತ್ಯವಶ್ಯಕವಾಗಿದೆ.

ನಮ್ಮ ಸಂಸ್ಥೆಯಲ್ಲಿ ಯಾವುದೇ ರಾಜ[illegible] ಗೊಂದಲವಿಲ್ಲ ಪಕ್ಷ ಪಕ್ಷಗಳ ಗೋಜಿಲ್ಲ. ಜನಸಾಮಾನ್ಯರ ಸೇವೆಯನ್ನು ಯಥಾಶಕ್ತಿ ನಿರ್ವಹಿಸಲು ಬರುವವರಿಗೆಲ್ಲಾ ಸ್ವಾಗತವುಂಟು.

ಈ ಸಂಸ್ಥೆಯಲ್ಲಿ ಎರಡು ವರ್ಗದ ಸದಸ್ಯತ್ವವಿದೆ. ಮೊದಲನೆಯದು 5 ರೂಪಾಯಿ ವಾರ್ಷಿಕ ಚಂದಾಕೊಟ್ಟು ಆ ಮೂಲಕ ನಮ್ಮ ಪ್ರಕಟಣೆಗಳನ್ನು ಪಡೆಯಲು ಹಕ್ಕು ಪಡೆಯಬಹುದಾಗಿದೆ. ಎರಡನೆಯದಾಗಿ ಈ ಸಂಸ್ಥೆಗೆ ಪೋಷಕರಾಗಿ ನೂರು ರೂಪಾಯಿ ವಾರ್ಷಿಕ ಕೊಡುಗೆ ನೀಡಬಲ್ಲ ವರ್ಗ, 5 ರೂಪಾಯಿ ಕೊಡಲು ಶಕ್ಯವಿಲ್ಲದ ಪ್ರಜೆಗಳು ಸಹ ತಮ್ಮ ಸಹಕಾರದಿಂದ ಮೇಲ್ಕಂಡ ಗುರಿಯನ್ನು ಮುಟ್ಟಲು ನೆರವು ನೀಡಬಹುದಾಗಿದೆ.

ಇದೇ ಸಮಯದಲ್ಲಿ ಆಹಾರ ಮತ್ತು ಇತರ ವಸ್ತು ಬಳಕೆಯ ಉಪಯೋಗ ಎಷ್ಟರ ಮಟ್ಟಿಗೆ

(ಮುಂದಿನ ಪುಟ ನೋಡಿ)

ಗ್ರಾಹಕರ ವೇದಿಕೆಯ ಬಳಕೆದಾರ ಪತ್ರಿಕೆ ಮುಖ ಪುಟ, 1974